# ಮಾನಸ ಮಹಾಭಾರತ





ಕೋಡಿ ಕುಶಾಲಪ್ಪ ಗೌಡ



ಜಯಗೌರಿ ಪ್ರಕಾಶನ, ಸುಳ್ಯ

**Manasa Mahabharatha**
A book of Mahabharatha Epic rendered into Arebase Kannada Language by
**Kodi Kushalappa Gowda**
'Manasa'
Jattipalla, Sullia - 574 239
Tel : 08257 230672 / 9448696144

Published by
**Jayagowri Prakashana**
'Manasa'
Jattipalla, Sullia (D.K)



Paper Used : 70 gsm NS Maplitho

First Published : 2014

Pages : xii+242

Price : Rs. 225

DTP : **Vinu Enterprises**

Cover Design : **Kallur Nagesh**

Designed & Printed at : **Aakrithi Prints**
Light House Hill Road
Mangalore - 1
Phone : 0824 2443002

# ಮಾನಸ ಮಹಾಭಾರತ
# ಕವಿ–ಕಾವ್ಯ ವಿವೇಚನೆ

## ದೇಶ–ಕಾಲ–ವಂಶ

ಈ ಗ್ರಂಥದ ಕವಿಯು ಕೊಡಗು ಜಿಲ್ಲೆಯ ಮಡಿಕೇರಿ ತಾಲೂಕಿಗೆ ಸೇರಿದ ಪೆರಾಜೆ ಎಂಬ ಗ್ರಾಮದವನು ಎಂದು ತಿಳಿದುಬರುತ್ತದೆ. ಈ ಗ್ರಾಮ ಪಯಸ್ವಿನಿಯ ಬಲದಂಡೆಯಲ್ಲಿರುವ ಪುಟ್ಟ ಊರು. ಇದರ ನಿವಾಸಿಗಳೆಲ್ಲ ಗೌಡ ಕುಲದವರು. ಇತ್ತೀಚೆಗೆ ಹೊರಗಿನವರೂ ಬಂದು ನೆಲೆಸಿದ್ದಾರೆ.

ಒಂದೆರಡು ಬ್ರಾಹ್ಮಣ ಕುಟುಂಬಗಳು, ಕೆಲವು ಕೊಂಕಣಸ್ಥರು ಮತ್ತೆ ಬೇರೆ ಜಾತಿಯ ಜನರು ಈ ಊರಲ್ಲಿದ್ದಾರೆ. ಪಯಸ್ವಿನೀ ನದಿಯ ಉತ್ತರ ದಂಡೆಯುದ್ದಕ್ಕೂ ಮಂಗಳೂರು ಮಡಿಕೇರಿ ರಸ್ತೆಯಿದೆ. ಈ ರಸ್ತೆ 3/4 ಮೈಲಿನಷ್ಟು ಈ ಗ್ರಾಮಕ್ಕೆ ಸೇರಿದೆ. ಈ ರಸ್ತೆ ಬದಿಯಲ್ಲಿ ಹಿಂದೆ ಕುಂಬಳೆ ಸೀಮೆಯಿಂದ ಬಂದು ನೆಲೆಸಿದ ಮಾಪಿಳ್ಳೆಗಳು ಇದ್ದಾರೆ. ಪಯಸ್ವಿನಿಯನ್ನು ದಾಟಿ ಬಯಲಿಗೇರುವಲ್ಲಿ ಊರಿನ ರಕ್ಷಾಧಿದೇವತೆ ಶ್ರೀ ಶಾಸ್ತಾವು ದೇವರ ಆಲಯವೂ, ಅವನ ಸಹವರ್ತಿಗಳಾದ ನೂರ ಒಂದು ದೈವಗಳ ಚಿಕ್ಕ ಚಿಕ್ಕ ಗುಡಿಗಳೂ ಇವೆ. ಹಿಂದೆ ತುಂಬ ಜೀರ್ಣಾವಸ್ಥೆಗಿಳಿದಿದ್ದ ದೇವಸ್ಥಾನ ಮತ್ತು ಭೂತಗಳ ಗುಡಿಗಳು ಊರವರ ಉತ್ಸಾಹದಿಂದ ಜೀರ್ಣೋದ್ಧಾರಗೊಂಡು ಹೊಸ ಕಳೆಯಿಂದ ಶೋಭಿಸುತ್ತಿವೆ. ಪರ್ವದಿನಗಳಲ್ಲಿ ತುಂಬ ಜನರು ಸೇರುತ್ತಾರೆ.

ದೇವಸ್ಥಾನದಿಂದ ಪೂರ್ವಕ್ಕೆ ಹೋಗುವ ರಸ್ತೆ ತೊಡಿಕಾನಕ್ಕಾಗಿ ಭಾಗಮಂಡಲಕ್ಕೆ ನಡೆದುಕೊಂಡು ಹೋಗಲಿರುವ ದಾರಿ. ದೇವಸ್ಥಾನದಿಂದ ರಸ್ತೆಯಲ್ಲಿ ಸುಮಾರು ಒಂದು ಪರ್ಲಾಂಗಿನಷ್ಟು ದೂರ ಪೂರ್ವಕ್ಕೆ ನಡೆದಾಗ ಬಲಬದಿಗೆ ಹಿಂದೆ ವರ್ಷಕ್ಕೆ ಒಂದೇ ಬೆಳೆ ಬೆಳೆಯುವ ಗದ್ದೆಗಳು, ಗದ್ದೆಯ ಹುಣಿಗಳಲ್ಲಿ ನೆಟ್ಟ ತೆಂಗಿನ ಮರಗಳಿದ್ದುವು. ಈಗ ಎಲ್ಲ ತೆಂಗಿನ ತೋಟವಾಗಿ ರೂಪಾಂತರವಾಗಿದೆ. ಈ ಗದ್ದಗಳ ಮೇಲ್ಬದಿಗೆ ಹುಲ್ಲು

ಹೊದಿಸಿದ ಮಾಡಿನ, ಮಣ್ಣಿನ ಗೋಡೆಯ ಒಂದು ಮನೆಯಿತ್ತು. ಇಲ್ಲಿ ಈ ಕವಿಯ ತಂದೆ ತಾಯಿ ನೆಲೆಸಿದ್ದರು. ಆ ಕಾಲದಲ್ಲಿ ಅಂದರೆ 1931ನೇ ಇಸವಿ, ಮೇ ತಿಂಗಳ 30ನೇ ತಾರೀಕಿನಂದು, ಕೋಡಿ ಮನೆಯ ಕೃಷ್ಣಪ್ಪ–ಗೌರಮ್ಮ ಎಂಬ ದಂಪತಿಯ ಮೂರನೆಯ ಮಗನಾಗಿ ಕುಶಾಲಪ್ಪನೆಂಬ ನಾಮಧೇಯವನ್ನು ಪಡೆದ ನಮ್ಮ ಕವಿಯ ಜನನವಾಯ್ತು.

ಈಗ ಆ ಹಳೆಮನೆಯನ್ನು ಕೆಡವಿ ಅದೇ ಜಾಗದಲ್ಲಿ ಕೆಂಪುಕಲ್ಲಿನ ಗೋಡೆಯ ಹಂಚು ಹೊದಿಸಿದ ಮಾಡಿನ ಹೊಸ ಮನೆಯ ನಿರ್ಮಾಣವಾಗಿದೆ. ಇದರಲ್ಲಿ ಈ ಕವಿಯ ಹಿರಿಯಣ್ಣ ವಾಸವಾಗಿದ್ದರು. ಈಗ ಅವರು ತೀರಿಹೋಗಿದ್ದಾರೆ. ಅವರ ಹೆಂಡತಿ, ಇವರ ಮೂವರು ಹೆಣ್ಣುಮಕ್ಕಳು, ಒಬ್ಬ ಅಳಿಯ ಮತ್ತು ಮೂವರು ಮೊಮ್ಮಕ್ಕಳು ಅಲ್ಲಿ ವಾಸಿಸುತ್ತಾರೆ. ಈ ಮನೆಯನ್ನು ಕಟ್ಟಿಸಲು ನಮ್ಮ ಕವಿಯೇ ತುಂಬ ಶ್ರಮಿಸಿದ್ದನಂತೆ. ಈ ಮನೆಗಿಂತ ತೆಂಕು ದಿಕ್ಕಿನಲ್ಲಿ ಸುಮಾರು ನೂರು ಗಜಗಳ ದೂರದಲ್ಲಿ ಇವರ ದೊಡ್ಡಪ್ಪ ಕಟ್ಟಿಸಿದ ಮನೆಯಿದೆ. ಅದರಲ್ಲಿ ಮಕ್ಕಳಿಲ್ಲದ ದೊಡ್ಡಪ್ಪನವರು ತೀರಿಹೋದ ಮೇಲೆ ಅವರ ಇಬ್ಬರು ಹೆಂಡತಿಯರ–ದೊಡ್ಡಮ್ಮಂದಿರ ಸಹಾಯಕನಾಗಿ, ಈತನ ಎರಡನೆ ಅಣ್ಣ ಅಲ್ಲಿ ನೆಲೆಸಿದ್ದರು. ಅವರೂ ತೀರಿಹೋದ ಮೇಲೆ ಈಗ ಅವರ–ಇವನ ಅಣ್ಣನ–ಗಂಡುಮಕ್ಕಳು ಅಲ್ಲಿ ವಾಸವಾಗಿದ್ದಾರೆ. ಹಿರಿಯರ ಕಾಲದಿಂದ ಬಂದ ಆಸ್ತಿಯನ್ನು ಪಾಲು ಮಾಡಿಕೊಂಡಿದ್ದಾರೆ.

ಈ ಕವಿಯ ಒಟ್ಟು ಕುಟುಂಬದಲ್ಲಿ ಎಲ್ಲೂ ಕಾಣಲಾಗದ ಭ್ರಾತೃ ವಾತ್ಸಲ್ಯ ಮತ್ತು ಬಂಧು ಪ್ರೇಮದ ವಾತಾವರಣವಿದ್ದುದು ಸ್ಮರಣೀಯ. ಇವರನ್ನು ಅಪೂರ್ವ ಸಹೋದರರು ಎಂದು ಊರಿನ ಹಿರಿಯರೊಬ್ಬರು ಹಾಸ್ಯದಿಂದ ಕರೆಯುತ್ತಿದ್ದರು. ಈ ಕವಿ ಮದರಾಸಿನಲ್ಲಿ ಪ್ರೌಢಶಿಕ್ಷಣ ಪಡೆಯಲು ಈತನ ಅಣ್ಣಂದಿರೇ ಕಾರಣ. ಆರ್ಥಿಕ ಪರಿಸ್ಥಿತಿ ತೀರ ಕಠಿಣವಾಗಿದ್ದರೂ ಧೃತಿಗೆಡದೆ, ನೆರೆಕರೆಯ ಸಜ್ಜನ ಮಹನೀಯರಿಂದ ತಾತ್ಕಾಲಿಕ ಸಾಲ ಪಡೆಯುವುದು, ಮತ್ತೆ ಮರುಪಾವತಿ ಮಾಡುವುದು, ಈ ರೀತಿ ಮೂರು ವರ್ಷ ಸಾಹಸಪಟ್ಟು, ತನ್ನ ತಮ್ಮನನ್ನು ಎಂ.ಎ. ಪದವೀಧರರನನ್ನಾಗಿ ಮಾಡಿದರು. ಮುಂದೆ ಆತ ಉದ್ಯೋಗಿ ಯಾದ ಅಣ್ಣಾಮಲೈ ವಿಶ್ವವಿದ್ಯಾಲಯದಿಂದ ಎಂ.ಲಿಟ್. ಮತ್ತು ಪಿಎಚ್.ಡಿ.ಯೆಂಬ ಎರಡು ಸಂಶೋಧನಾ ಪದವಿಗಳನ್ನೂ ಪಡೆದ. ಸ್ಥಾನದಲ್ಲಿ ಭಡ್ತಿ ಇಪಡೆದು, ಮದರಾಸು ವಿ.ವಿದಲ್ಲಿ ತನ್ನ ಗುರುಗಳ ನಿವೃತ್ತಿಯ ನಂತರ ಅದೇ ಸ್ಥಾನದಲ್ಲಿ ಪ್ರಾಧ್ಯಾಪಕ ಹುದ್ದೆಯನ್ನೂ ಪಡೆದ.

ತನ್ನ ಅಧಿಕಾರ ವಲಯದಲ್ಲಿ ದಕ್ಷ ಆಡಳಿತಗಾರನೂ, ದಕ್ಷ ಅಧ್ಯಾಪಕನಾಗಿಯೂ, ತನ್ನ ಸಹೋದ್ಯೋಗಿಗಳ ಪ್ರೀತಿಪಾತ್ರನೂ ಆಗಿ ಭಾರತದಲ್ಲೇ ಪ್ರಥಮ ವಿಶ್ವವಿದ್ಯಾಲಯಗಳಲ್ಲಿ ಒಂದಾದ ವಿಶ್ವವಿದ್ಯಾಲಯದಲ್ಲಿದ್ದ ಮೊತ್ತ ಮೊದಲನೆಯದೆಂದು ಹೆಸರು ಪಡೆದ ಕನ್ನಡ ವಿಭಾಗದ ವ್ಯಾಪಕ ಅಭಿವೃದ್ಧಿಗೆ, ತನ್ನ ಗುರುಗಳಂತೆ ಸತತ ಶ್ರಮಿಸಿ ಹೆಸರು ಪಡೆದಾತ ಈ ನಮ್ಮ ಕವಿ. ಈತನು ಈ ವಿಭಾಗದ ಮುಖ್ಯಸ್ಥನಾಗಿದ್ದ

ಕಾಲವನ್ನು ಬಲ್ಲವರು, ವಿಜಯನಗರ ಸಾಮ್ರಾಜ್ಯ ಕೃಷ್ಣದೇವರಾಯನ ಆಡಳಿತದಲ್ಲಿ ಇದ್ದಂತೆ ಎಂಬುದಕ್ಕೆ ಹೋಲಿಸುವುದುಂಟು. ಈ ಮಾತು ಅತಿಯೆಂದು ತೋರಬಹುದು. ಆದರೂ ಈ ಮಾತಿನಲ್ಲಿ ಸತ್ಯಾಂಶವುಂಟು ಎಂಬುದಕ್ಕೆ ನಿದರ್ಶನ, ಹೇಗೆ ವಿಜಯನಗರ ಕೃಷ್ಣದೇವರಾಯನ ಅನಂತರ ಕುಸಿಯಿತೋ, ಹಾಗೆಯೇ ಇವನ ನಿವೃತ್ತಿಯ ನಂತರ ಈ ವಿಭಾಗವೂ ತೀವ್ರ ಶೋಚನೀಯಾವಸ್ಥೆಗಿಳಿಯಿತು. ಇದಕ್ಕೆ ಮುಖ್ಯ ಕಾರಣ ವಿಶ್ವವಿದ್ಯಾಲಯದ ಹಿರಿಯ ಅಧಿಕಾರಿಗಳ ಸಂಕುಚಿತ ದೃಷ್ಟಿ ಆ ಕಾರಣವಾಗಿ ವಿದ್ಯಾರ್ಥಿಗಳ ಸಂಖ್ಯೆ ಕಡಿಮೆಯೆಂದು, ಖಾಲಿಯಾದ ಹುದ್ದೆಗಳಿಗೆ ಯೋಗ್ಯರಾದವರನ್ನು ನೇಮಿಸದೆ, ಯಾವ ಚಟುವಟಿಕೆಯೂ ನಡೆಯದಂತೆ ಮಾಡಿದ್ದು, ಅಲ್ಲದೆ ಅನನುಭವಿಯಾದ, ನೈತಿಕ ಧೈರ್ಯವಿಲ್ಲದ, ರಾಜಕೀಯ ಬೆಂಬಲವಿರುವ ಕಾರಣದಿಂದ ಮಾತ್ರ ಆಯ್ಕೆಗೊಂಡ ವ್ಯಕ್ತಿಯ ಕೈಯಲ್ಲಿ ಅಧಿಕಾರ ಕೊಟ್ಟಿರುವುದು.

ಈ ಕವಿಯ ಪರಿಚಯ ನನಗಾದುದು ಆಕಸ್ಮಾತ್ತಾಗಿ. ಒಮ್ಮೆ ರೈಲಿನಲ್ಲಿ ಪ್ರಯಾಣ ಮಾಡುತ್ತಿರುವಾಗ. ಮಿತ ಮಾತಿನ ವ್ಯಕ್ತಿ, ವಾಚಾಳಿಯಲ್ಲ. ತನ್ನ ಬಗ್ಗೆ, ತನ್ನ ಸಾಧನೆಯ ಬಗ್ಗೆ ಹೇಳಿಕೊಳ್ಳಲು ಬಹಳ ಸಂಕೋಚಪಟ್ಟುಕೊಳ್ಳುತ್ತಿದ್ದುದನ್ನು ಗಮನಿಸಿದೆ. ಈತ ಅಣ್ಣಾಮಲೈ ವಿ.ವಿ.ದಲ್ಲಿರುವಾಗ ಭಾಷಾವಿಜ್ಞಾನ ಇವನ ಕಾರ್ಯಕ್ಷೇತ್ರವಾಗಿತ್ತು. ಹೀಗೆ ಈತನ ಮೊದಲ ಸಾಹಿತ್ಯ ಕೃಷಿ ಶಾಸ್ತ್ರ ವಿಷಯದಲ್ಲಿಯೇ ಆಯ್ತು. ನಾಲ್ಕು ಆಂಗ್ಲಭಾಷೆಯ ಪುಸ್ತಕಗಳು ಸೇರಿ ಈವರೆಗೆ ಈತನಿಂದ ಇಪ್ಪತ್ತೊಂದು ಗ್ರಂಥಗಳು ಪ್ರಕಟವಾಗಿವೆ. ಸೃಜನಾತ್ಮಕ ಕೃತಿಗಳಲ್ಲಿ ಮುಖ್ಯವಾಗಿ ಗಮನಿಸಬೇಕಾದುದು ಸಂಸ್ಕೃತದಲ್ಲಿ ವಿಜಯನಗರದ ಗಂಗಾದೇವಿ ರಚಿಸಿದ ಮಧುರಾ ವಿಜಯ ಕಾವ್ಯವನ್ನು ಸರಳ ಸುಂದರ ಪದ್ಯರೂಪದಲ್ಲಿ ಕನ್ನಡದಲ್ಲಿ ಅನುವಾದ ಮಾಡಿರುವುದು. ಪ್ರತಿ ಪದ್ಯವೂ ಅನುವಾದವೆಂದು ಭಾಸವಾಗದೆ ಸಹಜತೆಯಿಂದ ಸೊಗಸುತ್ತದೆ. ಮತ್ತೆ ಈತ ಪ್ರಕಟಿಸಿದ ಲಲಿತ ಪ್ರಬಂಧಗಳು, ಹೃದ್ಯವಾದ ಗದ್ಯದಲ್ಲಿ ಹಾಸ್ಯಸ್ಥಾಯಿಯಾಗಿದ್ದು, ಪದ್ಯದ ಸೊಗಡನ್ನು ಬೀರುತ್ತವೆ. 'ರಸಮೇಕೋ ಕರುಣಮೇವ' ರಸವೆಂದರೆ 'ಕರುಣ ರಸವೊಂದೇ' ಎಂದು ಕವಿ ಭವಭೂತಿ ಹೇಳಿದ್ದಾನೆ. ಈತ ತನ್ನನ್ನು ಅಗಲಿ ಹೋದ ಪ್ರಿಯ ಪತ್ನಿಗೆ ಅರ್ಪಿಸಿದ ಕೃತಿ 'ಕಮಲ ನಿಮೀಲನ'ವನ್ನು ಓದಿದಾಗ ಈ ಭವಭೂತಿಯ ಮಾತು ಸತ್ಯವೆಂದು ನಮ್ಮ ಅನುಭವಕ್ಕೆ ಬರುತ್ತದೆ. ಈತ ಓದುಗರನ್ನು ನಗಿಸಲೂ, ಅಳಿಸಲೂ ಸಮರ್ಥನಾದ ರಸಜ್ಞನಾದ ಬರಹಗಾರ. ತಾನು ಭಾಷಾತಜ್ಞನಾದ ಕಾರಣ ಪದಪ್ರಯೋಗದಲ್ಲಿ ಇವನ ಜಾಣ್ಮೆ ಎದ್ದು ಕಾಣುತ್ತದೆ. ಗದ್ಯದ ಸರಸ ಶೈಲಿ ಮನಮೋಹಿಸುತ್ತದೆ.

ಕರ್ನಾಟಕ ಸರಕಾರದ ರಾಜ್ಯಪ್ರಶಸ್ತಿ, ಕನ್ನಡ ಸಾಹಿತ್ಯ ಅಕಾಡೆಮಿಯಿಂದ ಗೌರವ ಪ್ರಶಸ್ತಿ ಹಾಗೂ ಇನ್ನಿತರ ಸಂಸ್ಥೆಗಳಿಂದ ಬೇರೆ ಬೇರೆ ಪ್ರಶಸ್ತಿಗಳ ಗೌರವಕ್ಕೆ ಭಾಜನನಾಗಿದ್ದಾನೆ. 'ಕವಿ ಹೃದಯದ ವಿದ್ವಾಂಸ'ನೆಂದು ಕೆಲವರು ಪ್ರಶಂಸಿಸಿದರೂ, ಒಟ್ಟಿನಲ್ಲಿ ನಮ್ಮ ಜನ ಸರಿಯಾಗಿ ಈತನನ್ನು ತಿಳಿಯದೆ ಅವಜ್ಞೆ ಮಾಡಿದ್ದಾರೆಂದೇ ಕಾಣುತ್ತಿದೆ. ತನ್ನಿಚ್ಛೆಗೆ ತಾನು ಇದ್ದುಕೊಂಡು, ಜೇನು ನೊಣದಂತೆ ತನ್ನ ಕೆಲಸದಲ್ಲಿ

ತಾನು ಮಗ್ನನಾಗಿರುವುದು ಈತನ ಸ್ವಭಾವ. ಮುಖ್ಯಸ್ಥಾನದಲ್ಲಿರುವ ಅಧಿಕಾರಿವರ್ಗದ ಕೃಪಾಕಟಾಕ್ಷ ಗಳಿಸುವ ಕಾಂಕ್ಷೆ ಇವನದಲ್ಲ. ತನಗೆ ಹೆಸರು, ಪದವಿ ಸಿಗಬೇಕೆಂದು ಪ್ರಭಾವಿ ವ್ಯಕ್ತಿಗಳೆದುರು ಎಂದೂ ಹಲ್ಲು ಗಿಂಜಿದವನಲ್ಲ. ಈ ಕಾರಣದಿಂದಲೇ ಈತನಿಗೆ ಪ್ರತಿಷ್ಠಿತ ಪಂಪ ಪ್ರಶಸ್ತಿಯಾಗಲೀ, ಕೇಂದ್ರ ಸಾಹಿತ್ಯ ಅಕಾಡೆಮಿಯ ಪ್ರಶಸ್ತಿಯಾಗಲೀ ಬರಲಿಲ್ಲ. ಈ ಬಗ್ಗೆ ಇವನಿಗೆ ಯಾವ ಚಿಂತೆಯೂ ಇಲ್ಲ.

ತಮ್ಮ ಎಂಬತ್ತೂರನೆಯ ವಯಸ್ಸಿನಲ್ಲಿ, ಸಾಹಸಪಟ್ಟು 'ಮಾನಸ ಮಹಾಭಾರತ'ವೆಂಬ ಹೆಸರಿನಲ್ಲಿ ಮಹಾಭಾರತದ ಕತೆಯನ್ನು ತಮ್ಮ ಮಾತೃಭಾಷೆಯಾದ 'ಅರೆಬಾಸೆ' ಎಂಬ ಕನ್ನಡದ ಉಪಭಾಷೆಯಲ್ಲಿ ಗದ್ಯರೂಪದಲ್ಲಿ ಬರೆದಿದ್ದಾರೆ. ಕುರುಕುಲದ ಮೂಲಪುರುಷರಿಂದಾರಂಭಿಸಿ, ಪಾಂಡವರು ದ್ರೌಪದೀ ಸಮೇತರಾಗಿ ಮಹಾಪ್ರಸ್ಥಾನಕ್ಕೆ ಹೊರಟು ಸ್ವರ್ಗಾರೋಹಣ ಮಾಡುವತನಕ ಕತೆಯ ಹರವಿದೆ. ನನಗೆ ಈ ಉಪಭಾಷೆಯ ಪರಿಚಯವಿಲ್ಲದಿದ್ದರೂ ಕುತೂಹಲದಿಂದ ಪ್ರಯತ್ನಪಟ್ಟು ಇವರ ಈ ಕಾವ್ಯದ ಹಸ್ತಪ್ರತಿಯನ್ನು ಓದಿದೆ. ಕತೆಯ ಸನ್ನಿವೇಶ, ಪ್ರಕೃತಿವರ್ಣನೆ, ಪಾತ್ರರಚನೆ ಹಾಗೂ ಅವರ ಸ್ವಾಭಾವಿಕ ಲಲಿತ ಸುಂದರಶೈಲಿ ಎಲ್ಲವೂ ಮೋಹಕವಾಗಿದೆ. ಪ್ರತಿ ಮಾತುಗಳಲ್ಲಿಯೂ ಅವರ ಕವಿಹೃದಯ ಪುಟಿಯುತ್ತದೆ. ಅವರ ಕೈಯಲ್ಲಿ ಸಿಕ್ಕಿದರೆ ಶಾಸ್ತ್ರ ವಿಷಯವೂ ನೀರಸವಾಗದೆ ರಂಜಿಸುತ್ತದೆ. ಕೇಶಿರಾಜನ ಶಬ್ದಮಣಿ ದರ್ಪಣದ ಸೂತ್ರಗಳನ್ನು ಬೋಧಿಸುವಾಗ, ಕಾಳಿದಾಸನ ಕಾವ್ಯವನ್ನು ಪಾಠ ಮಾಡುತ್ತಿದ್ದಾರೋ ಎಂಬಂತೆ ಸ್ವಾರಸ್ಯವಾಗಿ ಬೋಧಿಸುತ್ತಿದ್ದರು ಎಂದು ಅವರ ವಿದ್ಯಾರ್ಥಿಗಳೇ ಅವರ ಗೌರವ ಗ್ರಂಥ (ನುಡಿ ಒಸಗೆ)ಯಲ್ಲಿ ಬರೆದಿದ್ದಾರೆ.

ಮೊದಲು ಪರಿಚಯವಾದ ಮೇಲೆ ನಮ್ಮಲ್ಲಿ ಸ್ನೇಹವುದಯಿಸಿತು. ಆಗಾಗ ಪರಸ್ಪರ ನೋಡುವುದು, ಹರಟುತ್ತ ಕಾಲ ಕಳೆಯುವುದು ಆರಂಭವಾಯ್ತು. ನಾವು ಮಾತನಾಡದ ವಿಷಯವೇ ಪ್ರಪಂಚದಲ್ಲಿದ್ದಿರಲಾರದು. ಹೆಚ್ಚಿನ ಮಾತು ನನ್ನಿಂದಲೇ. ಅವರು ಇಲ್ಲೊಂದು–ಅಲ್ಲೊಂದು, ಕಾಮೆಂಟರಿ ಕೊಟ್ಟು, ಮಾತಿಗೆ ಪ್ರಚೋದನೆ ಕೊಟ್ಟು, ಆಲಿಸುತ್ತ ಕುಳಿತಿದ್ದುದು ಅವರ ಸ್ವಭಾವ. ಅವರ ಬರಹಗಳ ಬಗ್ಗೆ ಒಮ್ಮೆ ವಿಚಾರಿಸಿದೆ. "ನಿಮ್ಮ ವಿದ್ವತ್ತನ್ನು ಪರಿಗಣಿಸಿದರೆ ನೀವು ಬರೆದ ಪುಸ್ತಕಗಳು ಕಡಿಮೆಯೇ ಎಂದು ವಿದ್ವಾಂಸರು ಹೇಳಿದ್ದಾರೆ. ಇದಕ್ಕೆ ಕಾರಣವೇನು?" "ಕಾರಣವೇನಿಲ್ಲ. ಮುಖ್ಯವಾಗಿ ಸೋಮಾರಿತನ". "ಇದನ್ನು ನಾನು ಒಪ್ಪುವುದಿಲ್ಲ" ಎಂದೆ. "ನಾನು ಅಣ್ಣಾಮಲೈ ಯೂನಿವರ್ಸಿಟಿಯಲ್ಲಿದ್ದಾಗ, ಅಲ್ಲಿ ಕನ್ನಡ ವಾತಾವರಣವಿರಲಿಲ್ಲ. ಅಲ್ಲದೆ ಓದುವುದು, ಹೊಸ ವಿಷಯದಲ್ಲಿ ತಿಳುವಳಿಕೆ ಸಂಗ್ರಹಿಸುವುದು, ವಿದ್ಯಾರ್ಥಿಗಳಿಗೆ ಬೋಧಿಸುವುದು ಇದೇ ಮುಖ್ಯವಾಗಿತ್ತು. ಹಾಗಾಗಿ ಬರಹದ ಕಡೆಗೆ ಗಮನ ಹರಿಸಲು ಸಾಧ್ಯವಾಗಲಿಲ್ಲ. ಆದರೂ ಕೆಲವು ಸಂಶೋಧನ ಲೇಖನಗಳನ್ನು ಕನ್ನಡದಲ್ಲಿ ಪ್ರಕಟಿಸುತ್ತಿದ್ದೆ. ಮದ್ರಾಸು ಯೂನಿವರ್ಸಿಟಿಗೆ ಸೇರಿದ ಮೇಲೆ ಕನ್ನಡದಲ್ಲಿ ಪುಸ್ತಕಗಳನ್ನು ಬರೆಯಲು ಆರಂಭಿಸಿದೆ. ಶಾಸ್ತ್ರ ಮತ್ತು ಸೃಜನಾತ್ಮಕ, ಹೀಗೆ ಎರಡು ಕವಲುಗಳಲ್ಲೂ ನನ್ನ ಬರಹದ ಕೆಲಸ ಹರಿಯಿತು. ನನ್ನ ಅಧಿಕಾರ ಕ್ಷೇತ್ರದ

ಕೆಲಸಗಳೆಡೆಯಲ್ಲಿ ಬರೆಯಲು ಸಮಯದ ಅಭಾವವಿತ್ತು. ಇನ್ನು ಕೆಲವೇ ವರ್ಷದಲ್ಲಿ ನಿವೃತ್ತಿಯಾಗುತ್ತದೆ. ಮತ್ತೆ ತುಂಬ ಬರೆಯಬೇಕೆಂಬ ಆಸೆಯಿಟ್ಟುಕೊಂಡು ನಿವೃತ್ತಿಯ ದಿನವನ್ನು ಆತುರದಿಂದ ಎದುರುನೋಡುತ್ತಿದ್ದೆ. ಆದರೆ 'ನಿನಗೆ ಇಷ್ಟೇ ಸಾಕು' – ಎಂದು ವಿಧಿ ನನ್ನ ಆಸೆಗೆ ಕಲ್ಲುಹಾಕಿತು! ಅಂದರೆ, ನಿವೃತ್ತಿಯಾಗಲು ಒಂದೆರಡು ತಿಂಗಳು ಇರುವಾಗಲೇ ನನ್ನ ಮೋಹದ ಮಡದಿಯನ್ನು ನನ್ನಿಂದ ಕಸಿದುಕೊಂಡಿತು. ಅವಳಿಂದ ದೂರವಾಗಿ ಒಂದು ನಿಮಿಷವೂ ಇರಲಾರದ ನಾನು ಚಿರಂತನವಾಗಿ ಅವಳನ್ನು ಅಗಲಿರಬೇಕಾದ ಶೂನ್ಯತೆ ನನಗೊದಗಿತು. ನನ್ನ ಜೀವನದ ಎಲ್ಲ ಕನಸುಗಳೂ ನುಚ್ಚುನೂರಾದುವು. ನನಗೆ ಯಾವುದೂ ಬೇಡವಾಯ್ತು. ಬರೆಯುವುದೂ ಸ್ತಬ್ಧವಾಯ್ತು. "ಇದೇ ನನ್ನ ಪ್ರಕಟಣೆಗಳ ಸಂಖ್ಯೆಗಳು ಕಡಿಮೆಯಾಗಲು ಕಾರಣ" ಎಂದರು. "ಇದು ಎರಡು ರೀತಿಯಿಂದಲೂ ಶೋಚನೀಯ. ಮೊದಲನೆಯದಾಗಿ ನಿಮಗೆ ವೈಯಕ್ತಿಕವಾಗಿ ಆದ ಆಘಾತ. ಎರಡನೆಯದಾಗಿ ನೀವು ಕನ್ನಡಕ್ಕೆ ಸಲ್ಲಿಸಬಹುದಾದ ಸೇವೆ ಸ್ತಬ್ಧಗೊಂಡುದು" ಎಂದು ಹೇಳಿದೆ. "ಈ ಸಂಕಟದೆಡೆಯಲ್ಲೂ ಒಂದೆರಡು ಕಿರಿಗಾತ್ರದ ಪುಸ್ತಕ ಪ್ರಕಟಿಸಿದೆ. ನನ್ನ ಮಡದಿ ಅಗಲಿ ಹೋದ ಕೆಲವೇ ಸಮಯದಲ್ಲಿ ಅವಳ ಸ್ಮಾರಕವಾಗಿ 'ಕಮಲ ನಿಮೀಲನ'ವೆಂಬ ಕಿರುಹೊತ್ತಗೆಯನ್ನು ಪ್ರಕಟಿಸಿದೆ. ಅದು ಹಲವರನ್ನು ಆಕರ್ಷಿಸಿದೆ" ಎಂದರು. "ನನ್ನ ದುರ್ದೈವ. ನನಗೆ ಎಲ್ಲಿ ಕೇಳಿದರೂ ಆ ಪುಸ್ತಕ ಸಿಗಲಿಲ್ಲ" ಎಂದೆ. "ನನ್ನಲ್ಲಿ ಒಂದೇ ಪ್ರತಿ ಉಳಿದಿದೆ. ನೀವು ಓದಿ ಹಿಂದೆ ಕೊಡುವುದಾದರೆ, ಓದಿ ಕೊಡಿ" ಎಂದರು. "ಆಗಲಿ" ಎಂದೆ ನಾನು.

"ನೀವೀಗ 'ಅರೆಬಾಸೆ'ಯಲ್ಲಿ 'ಮಾನಸ ಮಹಾಭಾರತ' ಎಂಬ ಹೆಸರಿಂದ ಮಹಾಭಾರತದ ಕತೆಯನ್ನು, ಇಷ್ಟು ಶ್ರಮಪಟ್ಟು ಬರೆಯಲು ಪ್ರೇರಣೆ ಹೇಗೆ ಬಂತು?"

"ಅರೆಬಾಸೆ ಕನ್ನಡದ ಒಂದು ಪ್ರಭೇದ, ತುಂಬ ಹಳಮೆಯನ್ನು ಪ್ರದರ್ಶಿಸುತ್ತದೆ. ಕೆಲವು ಹಳೆಯ ರೂಪದ ಪದಗಳು ಇನ್ನೂ ಸಚೇತನವಾಗಿ ಉಸಿರಾಡುತ್ತಿವೆ. ಪ್ರಾದೇಶಿಕವಾಗಿ, ಗೌಡ ಸಮುದಾಯಕ್ಕೆ ಸೇರಿದವರ ತಾಯ್ನುಡಿಯಾಗಿದೆ ಇದು. ಒಂದೆರಡು ಹಿಂದಿನ ತಲೆವಾರಿಗೆ ಸೇರಿದ ಅಜ್ಜ–ಅಜ್ಜಿಯರು, ಇದನ್ನು ಮಾತಾಡುತ್ತಿದ್ದವರಿಗೆ ಶಿಷ್ಟ ಕನ್ನಡದಲ್ಲಿ ಮಾತಾಡಲು ತಿಳಿಯುತ್ತಿರಲಿಲ್ಲ. ಈ ಕಾರಣದಿಂದ ಇದಕ್ಕೆ ಒಂದು ಸ್ವತಂತ್ರ ಭಾಷೆಯಷ್ಟೇ ಮಹತ್ವವಿದೆ. ಇಷ್ಟಿದ್ದರೂ ಇದರಲ್ಲಿ ಸಾಹಿತ್ಯ ರಚನೆಯಾಗಲಿಲ್ಲ. ಕಾರಣ ಬಹುಕಾಲ ಅರೆಭಾಷಿಕರಲ್ಲಿ ವಿದ್ಯಾವಂತರೇ ಇರಲಿಲ್ಲ. ಇದ್ದರೂ ಅತ್ಯಲ್ಪ ಮಂದಿ ಮಾತ್ರ. ಸುಲಭವಾಗಿ ಮಾರುಕಟ್ಟೆಯಲ್ಲಿ ನಮಗೆ ಬೇಕಾದ ತರಕಾರಿ–ಹಣ್ಣು ಹಂಪಲು ದೊರೆಯುವಾಗ ಅದನ್ನು ತಾವೇ ಬೆಳೆಸುವ ಶ್ರಮ ಏಕೆ ಪಡಬೇಕು? ಎಂಬಂತೆ ತಮ್ಮ ಸಾಂಸ್ಕೃತಿಕ ಅಗತ್ಯಕ್ಕೆ ಬೇಕಾದುದನ್ನು ಶಿಷ್ಟ ಕನ್ನಡದಿಂದ ಸಂಪೂರ್ಣವಾಗಿ ಎರವಲು ಪಡೆಯುತ್ತಿದ್ದರು. ಉದಾಹರಣೆಗೆ ಮದುವೆಯ ಸೋಬಾನೆ ಹಾಡುಗಳೆಲ್ಲ ಕನ್ನಡದವೇ. ಮದುಮಕ್ಕಳು, ರಾಮ–ಸೀತೆ, ಕೃಷ್ಣ–ರುಕ್ಮಿಣಿ ಎಂಬ ಪೌರಾಣಿಕ ವ್ಯಕ್ತಿಗಳೇ. ಕನ್ನಡ ಮಾತಾಡಲು ತಿಳಿಯದ ಅಜ್ಜಿಗಳ ಬಾಯಲ್ಲಿ ಈ ಕನ್ನಡ ಎಡವಿ ಬಿದ್ದು ಕೈಕಾಲುಗಳಿಗೆ

ತರಚು ಗಾಯಗಳಂತಾಗಿ ಹೊರಬರುವಂತಾಗುವುದನ್ನು ಕೇಳಿ, ನವವಿದ್ಯಾವಂತರು ನಗುತ್ತಿದ್ದರು!"

"ಈ ಅರೆಬಾಸೆಯನ್ನು ಗೌಡ ಕನ್ನಡವೆಂದು ಕರೆದು ನಾನು ಆಧುನಿಕ ಭಾಷಾ ವಿಜ್ಞಾನದ ತತ್ವಗಳಿಗನುಸರಿಸಿ, ಇಂಗ್ಲಿಷಿನಲ್ಲಿ ಒಂದು ವ್ಯಾಕರಣವನ್ನು ಬರೆದು 1970ರಲ್ಲಿ ಅಣ್ಣಾಮಲೈ ವಿಶ್ವವಿದ್ಯಾಲಯದಿಂದ ಪ್ರಕಟಿಸಿದೆ. ಇದು ಈ ಭಾಷೆಯ ಬಗೆಗಿನ ಒಂದೇ ಒಂದು ಪ್ರಕಟಿತ ಗ್ರಂಥ. ಕೆಲವೇ ಕೆಲವು ಯುವಕರು ಕೆಲವು ಪದ್ಯಗಳನ್ನು ರಚಿಸಿ ಕಿರು ಹೊತ್ತಗೆಗಳನ್ನು ಪ್ರಕಟಿಸಿದ್ದಾರೆ. ಹೀಗೆ, ಒಟ್ಟಿನಲ್ಲಿ ಇದರಲ್ಲಿ ಸಾಹಿತ್ಯ ಚಟುವಟಿಕೆ ಇಲ್ಲವೇ ಇಲ್ಲವೆಂಬಷ್ಟು ಕಡಿಮೆ. ಹೀಗಿರುವಾಗ ವ್ಯಾಕರಣ ಕ್ಷೇತ್ರದಲ್ಲಿ ನನ್ನದು ಮೊದಲ ಕೊಡುಗೆಯಾದಂತೆ ಸಾಹಿತ್ಯಕ್ಷೇತ್ರಕ್ಕೂ ಇದು ಮೊದಲ ಕೊಡುಗೆಯಾಗಿರಲೆಂಬ ಹಂಬಲದಿಂದ ಇದನ್ನು ಬರೆದೆ" – ಎಂದರು.

ನನ್ನ ಮಿತ್ರರು ಬರೆದ ಈ 'ಮಾನಸ ಮಹಾಭಾರತ' ಯಾವ ಭಾಷೆಗಾದರೂ ಒಂದು ಭೂಷಣವೇ. ಪೂರ್ವಗ್ರಹವಿಲ್ಲದ ಯಾವ ಓದುಗನೂ ಇದನ್ನು ಮೆಚ್ಚದಿರಲು ಸಾಧ್ಯವಿಲ್ಲ. ಓದುಬಲ್ಲ ಸಹೃದಯರು ಇದನ್ನು ಓದಿ ಆನಂದಿಸಲಿ. ಪ್ರಿಯ ಕುಶಾಲಪ್ಪ ಗೌಡರು ಬರೆದಿರುವ ಈ ಕೃತಿ ಪ್ರಖ್ಯಾತವಾಗಲಿ. ಸಾಹಿತ್ಯಕ್ಷೇತ್ರದಲ್ಲಿ ಅವರ ಹೆಸರು ಶಾಶ್ವತವಾಗಿ ಉಳಿಯಲಿ ಎಂದು ಹಾರೈಸುತ್ತಾ, ಅವರನ್ನು ತುಂಬುಹೃದಯದಿಂದ ಅಭಿನಂದಿಸುತ್ತೇನೆ. ನಾಡಿನ ಪುಣ್ಯದಿಂದ ಕವಿಯೊಬ್ಬನುದಿಸುತ್ತಾನೆ. ಅರೆಭಾಷಿಕರು ಇಂತಹ ಕವಿಯೊಬ್ಬನನ್ನು ಪಡೆದರೆಂದು ಅವರು ಹೆಮ್ಮೆಪಡಲಿ ಎಂದು ಹಾರೈಸಿ ಅವರನ್ನೂ ಅಭಿನಂದಿಸುತ್ತೇನೆ.

3 ಜೂನ್ 2014

'ವೈನತೇಯ'

# ಬರ್ದಂವನ ಎರ್ಡ್ ಮಾತ್

ದಕ್ಷಿಣ ಕನ್ನಡ ಮತ್ತೆ ಕೊಡ್ಗ್ ಜಿಲ್ಲೆಗಳ ಕೆಲವು ಪ್ರದೇಶಲಿ ನೆಲ್ಸಿರುವ, ಗೌಡ ಕುಲಕ್ಕೆ ಸೇರ್ದ ಜೆನಂಗ ತಮ್ಮ ಸಮಾಜದವರೊಟ್ಟಿಗೆ ಮಾತಾಡುವ ಮಾತ್‌ನ 'ಅರೆಬಾಸೆ'ಂತ ಗುರ್ತುಸುವ ವಾಡಿಕೆ ಹಿಂದೆಂದಳೇ ಬಂದುಟು. ಇದ್ ಕನ್ನಡದ್ದೇ ಒಂದು ಪ್ರಭೇದ. ಪೂರ್ವಂದಳೇ ನಮ್ಮ ಕನ್ನಡ ಬಾಸೆಲಿ ಬೇರೆ ಬೇರೆ ತರದ ಪ್ರಭೇದಗ ಇದ್ದೊ. ಸಾವಿರ ವೊರ್ಸಂದಳೂ ಹಿಂದೆನ ಕಾಲದ 'ಕವಿರಾಜ ಮಾರ್ಗ' ಗ್ರಂಥಲಿ, ಹೇಳ್ದ ಈ ಪ್ರಭೇದಗಳ ನೋಡಿರೆ, ಸಾವಿರ ತಲೆಗ ಇರುವ 'ವಾಸುಕಿ' (ಆದಿಶೇಷ)ಗೂ ತಲೆಬೇನೆ ಉಂಟಾದುಂತ ಬರ್ದುಟು. ಜಾತಿಗೊಂದು, ಊರಿಗೊಂದು ಬಾಸೆಂತಿರುವ ಈ ಕಾಲದ ಪರಿಸ್ಥಿತಿನೂ ಹಿಂದೆನದ್‌ಕ್ಕಿಂತ ಬದ್‌ಲಾತ್‌ಲೆ. ಪ್ರಾಕ್‌ನ ಪಂಡಿತರ್ ನಮ್ಮ ದೇಸಲಿದ್ದ ಬಾಸೆಗಳ ಹೇಳ್‌ಕನ, ಸಂಸ್ಕೃತ, ಪ್ರಾಕೃತ, ಪಾಳಿ ಮತ್ತೆ ಪೈಶಾಚಿಕಂತೇಳ್ತ ಮೂರವರೆ ಬಾಸೆಗಂತ ಹೇಳಿಯೊಳ್ಳೊ. ಮೂರು ಮುಖ್ಯ ಬಾಸೆಗಳೊಟ್ಟಿಗೆ 'ವೈಶಾಚಿಕ'ಂತ ಹೇಳುದ್ರೆಕೆ ಅಡ್ಡಪಂಕ್ತಿ, ಹಾಕಿ, ಅದರ ಅರ್ಧಂತ ಕರ್ದೊಳೊ, ಒಂದು ಬಾಸೆನ, ಅರೆ, ಅಥವಾ ಅರ್ದಂತ ಕರಿದು ಒಂದು ತರದ ಸಸಾರಂದ, ಅಥವಾ ಕುಚೋದ್ಯಂದಂತ ಕಂಡದೆ. ಒಟ್ಟಾರೆ, ಅದೊಂದು ಅಪ್ರಧಾನವಾದ, ಶಿಷ್ಟವರ್ಗಕ್ಕೆ ಸೇರದ, ನಮ್ಮ ಈಗನ ಪರಿಭಾಷೆಲಿ ಹೇಳುದಾದರೆ ಉಪಭಾಷೆ (dialect) ಅಂತ ಹೇಳಲೆಕ್.

ಈ ಬಾಸೆ ಮಾತಾಡುವವರ್ಲಿ ಹಿಂದೆ ಆಧುನಿಕ ವಿದ್ಯಾಭ್ಯಾಸ ಪಡ್ದೊವು ಇಲ್ಲೇ ಇಲ್ಲೆಂತ್ರೇಳುವಷ್ಟ್ ವಿರಳ. ಮೊದಲ ಸ್ವಾತಂತ್ರ ಹೋರಾಟಕ್ಕಿಂತ ಮುಂದೆನೇ ಇಲ್ಲಿನ ಗೌಡ ಮುಂದಾಳುಗ ಜೆನರ ಸಂಘಟನೆ ಮಾಡಿ, ಬ್ರಿಟಿಷ್ ಆಳ್ವಿಕೆನ ವಿರುದ್ಧ ದಂಗೆಯದ್ದ್,

ಒಂದು ಸಣ್ಣ ಸೈನ್ಯನ ಸೇರ್ಸಿ, ಮಂಗ್ಳೂರಿಗೆ ದëಂಡ್ ತಕëಂಡ್ ಹೋಗಿ ಬ್ರಿಟಿಷರ, ಮಂಗ್ಳೂರುಂದ ಓಡ್ಸಿ ಒಂದು ವಾರ ಕಾಲ ಬಾವಟೆ ಗುಡ್ಡೆಂದ ರಾಜ್ಯಭಾರ ಮಾಡಿರುವ ಶೂರëರ್. ಮತ್ತೆ ಬ್ರಿಟಿಷರ ದೊಡ್ಡ ಸೈನ್ಯ ಬಂದ್, ಇವರ ಸೋಲ್ಸಿ, ಸೆರೆ ಹಿಡ್ದ್, ಗಲ್ಲಿಗೇರ್ಸಿ, ದಬ್ಬಾಳಿಕೆ ಮಾಡ್ದೊ. ಈ ಗೌಡ ಜೆನಂಗ ಒಟ್ಟಿಗಿದ್ದರೆ ಅವರ್‌ಂಡ ನಾಪ್ಗೆ ಮುಂದೆಗೂ ಏನಾರ್ ತೊಂದರೆ ತೊಪ್ಪಿಕಿಲೆಂದ್. ಸುಳ್ಯಂದ ಪುತ್ತೂರುವರೆಗೆ ಕೊಡ್ಗ್‌ಗೆ ಸೇರ್ದ ಭಾಗನ ಬೇರೆ ಮಾಡಿ, ಅದರ ದಕ್ಷಿಣ ಕನ್ನಡದ ಪುತ್ತೂರು ತಾಲೂಕಿಗೆ ಸೇರ್ಸಿ ಪ್ರತ್ಯೇಕ ಮಾಡ್ದೊ. ಕೊಡ್ಗ್‌ಲಿದ್ದ ಕೊಡ್ಗëರೆಲ್ಲ, ಬ್ರಿಟಿಷರ ಜಿಳಿಚೆರ್ಮಕೆ ಮನಸೋತ್, ಅವರಾಂಗೆ ಬಟ್ಟೆಬರೆ ಹಾಕುದು, ಮಾತಾಡುದು, ಆಚಾರ ವಿಚಾರಗಳ್ಲಿ ಅವರ ಅನುಕರಣೆ ಮಾಡಿ, ಅವ್ಕೆ ಬೇಕಾದ ಎಲ್ಲ ರೀತಿನ ಸೌಕರ್ಯಗಳ್ನೂ ಒದ್‌ಗಿಸಿ ಕೊಟ್ಟ್, ಅವರ ಸಂತೃಪ್ತಿ ಪಡ್ಸಿ ತಮ್ಮ ಲಾಭ ಪಡ್ಕಂಡೊ. ಸರ್ಕಾರದ ಎಲ್ಲಿ ದೊಡ್ಡ ಹುದ್ದೆಗëಳೂ, ಬೇರೆ ಚಾಕ್ರಿಗëಳೂ ಅವರ ಪಾಲಿಗೇ. ಯಾವ ಸವಲತ್ತೂ ಇಲ್ಲದ ಗೌಡ್ರ ಮೇಲೆ ದಬ್ಬಾಳಿಕೆ ಮಾಡುವ ಅವಕಾಶ ಸಿಕ್ಕಿರೆ ಅವೂ ಬುಡ್‌ತಿತ್ತ್‌ಲೆ.

ಮತ್ತೆ ದಕ್ಷಿಣ ಕನ್ನಡ ಜಿಲ್ಲೆಗೆ ಸೇರ್ದ ವಿಭಾಗದ ಗೌಡëರಿಗೆ ಬೇರೆ ಜಾತಿಯವರ ತಾತ್ಸಾರ ಮತ್ತೆ ದಬ್ಬಾಳಿಕೆಗಳ ಎದ್‌ರ್ಲಿ ಬೊದ್ಕಿಕೆ ತುಂಬ ಕಷ್ಟ ಆತ್. ಅಗ ಈಗ ಇರುವಷ್ಟ್ ಸಾಲೆಗ, ಕಾಲೇಜ್‌ಗ ಇತ್ತ್‌ಲೆ. ಮಕ್ಕëಳಿಗೆ ವಿದ್ಯಾಭ್ಯಾಸ ಮಾಡ್ಸಿಕೆ ಅನಿಕೂಲ ಇತ್ಲೆ. ಐದನೇ ಕ್ಲಾಸ್‌ಂದ ಮುಂದೆ ಹೋವೇ ಇಲ್ಲೆ. ಸ್ವಾತಂತ್ರ ಸಿಕ್ಕಿದ ಮೇಲೆ ಪರಿಸ್ಥಿತಿ ಬದ್‌ಲಾತ್. ಸುಳ್ಯವೇ ಒಂದು ದೊಡ್ಡ ವಿದ್ಯಾಕೇಂದ್ರ ಆಗಿ ಬೆಳ್ದ್ ಬಾತ್. ಇದ್‌ಕೆ ಕಾರಣ ಕರ್ತರಾದೊವ್ರು ಕುರುಂಜಿ ವೆಂಕಟ್ರಮಣ ಗೌಡ್ರ್. ಈಗ ಸಾಮಾನ್ಯ ಪದವಿ ಪಡಿಯದ ಯುವಕ ಯುವತಿಯëರೇ ಇಲ್ಲೆ. ಎಷ್ಟೋ ಜೆನ ಡಾಕ್ಟ್ರ್‌ಗ, ಇಂಜಿನಿಯರ್‌ಗ, ಆಗಿ ದೊಡ್ಡ ಉದ್ಯೋಗ ಪಡ್ದ್ ಪರದೇಶಕ್ಕೂ ಹೋಗಿ ನೆಲ್ಸಿದ ಗೌಡ ಮಕ್ಕ ಒಳೊಂತೇಳ್ದು ತುಂಬ ಸಂತೋಸು ಕೊಡುವ ವಿಸಯ.

ಈಗ ಕರ್ನಾಟಕ ಸರ್ಕಾರ ಗೌಡರ ಅರೆಬಾಸೆ ಮತ್ತು ಸಂಸ್ಕೃತಿನ ಅಭಿವೃದ್ಧಿಗೆಂತ ಒಂದು ಎಕಾಡೆಮಿನೂ ಕೊಟ್ಟುಟು. ಈ ಬಾಸೆಲಿ ಸಾಹಿತ್ಯ ರಚನೆ ಇಲ್ಲೇ ಇಲ್ಲಂತೇಳುವಷ್ಟ್ ವಿರಳ. ಸುಮಾರ್ ನಲುಪತ್ತ್ ವೊರ್ಸದ ಒಂದೆ ನನ್ನ ಪೆರಾಜೆ ಗ್ರಾಮಕ್ಕೆ ಸೇರ್ದ, ಹೊದ್ದೆಟ್ಟಿ ಭವಾನಿ ಶಂಕರಂತೇಳೊವ್ರು ಈ ಅರೆಬಾಸೆಲಿ ಕೆಲೊವ್ರು ಕವಿತೆಗಳ ಬರ್ದ್ ಪ್ರಕಟಿಸಿದ್ದೊ. ಮದೆನಾಡ್‌ನ ಬಾರಿಯಂಡ ಜೋಯಪ್ಪಂತೇಳೊವ್ರು 'ಚಾಂಪ'ಂತೇಳುವ ಸಣ್ಣ ಕತೆಗಳ ಒಂದು ಸಂಕಲನ ಪ್ರಕಟ ಮಾಡ್ದೊ. ಬಾರಿ ಸ್ವಾರಸ್ಯವಾದ ಬರಹ ಇದ್. ಅಮೇಲೆ ಏನಾರ್ ಬರ್ದೊಳೊಸೊಂತ ಗೊತ್ತಾತ್‌ಲೆ. ಯಶವಂತ ಕುಡಕಲ್ಲಂತೇಳುವ ತರುಣ ಕವಿ ಎರ್ಡ್ ಕವನ ಸಂಕಲನ ಪ್ರಕಟ ಮಾಡಿ ಜನಪ್ರಿಯತೆ ಪಡ್ದೊಳೊ. ಮೊನ್ನೆ ಮೊನ್ನೆ ನಿಡಿಂಜಿ ಕರುಣಾಕರ ಒಂದು ಒಳ್ಳೆ ಜೆನ ಮೆಚ್ಚುವಂತ ಕವನ ಸಂಕಲನ ಪ್ರಕಟ ಮಾಡ್ದ್ ಮೆಚ್ಚೊಕಾದ ವಿಷಯ. ಇದ್‌ವರೆಗಿದ್ದ, ಒಂದೇ ಒಂದು ಪ್ರಕಟಿತ ಪ್ರೌಢ ಗ್ರಂಥಂತ ಹೇಳಿರೆ, ಆಧುನಿಕ ಭಾಷಾ ವಿಜ್ಞಾನದ ತತ್ವನ ಅನುಸರ್ಸಿ, ನಾ ಇಂಗ್ಲಿಷ್‌ಲಿ ಬರ್ದ್ ಅಣ್ಣಾಮಲೈ

ಯೂನಿವರ್ಸಿಟಿಂದ 1970ರ್ಲಿ ಪ್ರಕಟಿಸಿದ ವ್ಯಾಕರಣ ಪುಸ್ತಕ.

ನಮ್ಮೊವು ಇದರ ಓದಿದೊವು ಇಲ್ಲೆಂತೇ ಹೇಳೆಕ್. ದ್ರಾವಿಡ ಬಾಸೆಗಳ ಅಧ್ಯಯನ ಮಾಡೊವ್ಕೆ ಇದ್ ಉಪಯೋಗಕ್ಕೆ ಬಂದದೆ. ಹಾಂಗೆ ಬೇರೆವು ಇದರ ಓದಿದೊ. ಚರ್ಚಿಸಿದೊ. ನಮ್ಮ ದೇಸೆಲಿ ಮಾತ್ರ ಅಲ್ಲ. ಕೆಣ್ಣ್ ಕಾಣದ ದೇಸ, ಅಮೇರಿಕಾ, ಇಂಗ್ಲೆಂಡ್‌ನಂತ ದೇಸಗಳ್ಲಿಯೂ ದ್ರಾವಿಡ ಬಾಸೆಗಳ್ಲಿ ಆಸಕ್ತಿ ಇರುವ ವಿದ್ವಾಂಸರೂ ಒಳೊ. ಹಾಂಗೆ ಈ ಪುಸ್ತಕಕ್ಕೆ ಅವರ ಲೈಬ್ರೆರಿಗಳ್ಲಿಯೂ ಪ್ರವೇಶ ದೆಕ್ಕಿತ್.

**ಈ ಪುಸ್ತಕದ ವಿವರ ಹೀಂಗುಟ್ಟು :**

**GOWDA KANNADA**

By

Dr. K. Kushalappa Gowda

Annamali University, Annamalainagar, 1970.

ಇದ್ ಅರೆಬಾಸೆಗೆ ನನ್ನಂದ ಸಂದ ಸುರುನ ಕಾಣಿಕೆ. ಸೃಜನ ಸಾಹಿತ್ಯೆಲಿಯೂ 'ಮಾನಸ ಮಹಾಭಾರತ' ನನ್ನ ಸುರೂನ ಕಾಣಿಕೆಯಾಗಿಲ್ಲಿಂತ ನನ್ನ ಹಾರೈಕೆ. ಕತೆ ಎಲ್ಲೊವ್ಕೆ ಗೊತ್ತಿದ್ದೆದೇ ಆದರೂ ಹೇಳ್ದ ರೀತಿ ನವನವೀನ. ಹಾಂಗೇ ಸಹೃದಯ ಓದುಗೆರ್ ಇದರ ಮೆಚ್ಚುವೊಂತ ನಂಗೆ ಭರವಸೆ ಉಟ್ಟು ಓದಿ. ನಿಮ್ಮ ಅಭಿಪ್ರಾಯ ಹೇಳಿ.

**ಕೃತಜ್ಞತೆಗ :**

1. ನಾ ಬರ್ಕೆಂಡ್ ಇರ್ಕನ ಆಗಾಗ ಬಂದ್ "ಎಲ್ಲಿವರೆಗೆ ಬಾತ್ ತಾತಾ? ಯಾಗ ಪುಸ್ತಕ ಬಾದು? ನಮ್ಮ ಟೀಚರಿಗೆ ಒಂದು ಕಾಪಿ ಕೊಡೊಕುಂತ ಕೇಳ್‌ತಿದ್ದ ನನ್ನ ಪಿಳ್ಳಿ, ನಾಲ್ಕನೇ ಕ್ಲಾಸ್‌ಲಿದ್ದ (ಈಗ ಐದ್) ವಿಕ್ರಂ ಚಂದ್ರಂಗೆ.–
2. ಕಾಗದೆಲಿ ಆಗಾಗ ಪ್ರಸ್ತಾಪ ಮಾಡಿ ಉತ್ಸಾಹ ತುಂಬುತ್ತಿದ್ದ, ಆತ್ಮೀಯ ಮಿತ್ರ ಅಮೃತ ಸೋಮೇಶ್ವರ ಅವ್ಕೆ.–
3. ಡಿಟಿಪಿ ಮಾಡಿಕೊಟ್ಟ ವಿನೂ ಎಂಟರ್‌ಪ್ರೈಸಸ್, ಸುಳ್ಯ ಅವ್ಕೆ.–
4. ಈ ಪುಸ್ತಕನ ತುಂಬ ಸುಂದರವಾಗಿ ಅಚ್ಚುಮಾಡಿ ಕೊಟ್ಟ ಆಕೃತಿ ಪ್ರಿಂಟ್ಸ್‌ನ ಮಾಲಕರ್ ಶ್ರೀ ಕಲ್ಲೂರು ನಾಗೇಶ ಮತ್ತೆ ಅವರ ಸಿಬ್ಬಂದಿಗಳಿಗೆ.–
5. ಈ ಕಾವ್ಯದ ಕವಿ–ಕಾವ್ಯ ವಿವೇಚನೆ ಬರ್ದ ಪ್ರಿಯಮಿತ್ರ ವೈನತೇಯರಿಗೆ–

**ಕೆ. ಕುಶಾಲಪ್ಪ ಗೌಡ**

'ಮಾನಸ'
ಜಟ್ಟಿಪಳ್ಳ, ಸುಳ್ಯ
3 ಜೂನ್ 2014

# ಮಾನಸ ಮಹಾಭಾರತ

ನಾರಾಯಣಂ ನಮಸ್ಕೃತ್ಯ ನರಂ ಚೈವ ನರೋತ್ತಮಮ್ ।
ದೇವೀಂ ಸರಸ್ವತೀಂ ಚೈವ ತತೋ ಜಯಮುದೀರಯೇತ್ ॥

ಮಕ್ಕಳೇ ಮಾಬಾರತ ಯುದ್ಧ ಯಾರ್‍ಯಾರಿಗೆ ನಡ್‌ತ್‌ಂತ ನೀವ್ಗೆ ಗೊತ್ತುಟ್ಟೋ?
"ಕೌರವರಿಗೂ ಪಾಂಡವರಿಗೆ ನಡ್ದೇದೋ"
"ಸಈರಿ" ಇನ್ನ್ ಮುಂದೆ ಅವರ ವಂಸದ ಚರಿತ್ರೆ ತಿಳಿಯೋಕು – ಅಲ್ಲ?
ಈಗ ಅದರ ಹೇಳಿನೆ, ಕೇಳಿ.

**ಈ** ಪ್ರಪಂಚಕ್ಕೆಲ್ಲ ಮೂಲ ಪುರುಷ ಆದಿ ನಾರಾಯಣ. ಅವನ ಹೊಕ್ಕುಳುಲಿ ತಾವರೆ ಹುಟ್ಟಿತ್. ಆ ತಾವರೆಂದ ಹಿರಣ್ಯಗರ್ಭ ಬ್ರಹ್ಮ ಹುಟ್ಟಿತ್. ಎರ್ಡನೇ ಸಾಲ್‌ಲಿ, ಸೃಷ್ಟಿಗೆ ಇಂವ ಮೂಲ ಆದ. ಇಂವಂಗೆ ಪುಲಹ ಮರೀಚಿ, ಅಂಗೀರಸ, ಪರ್ಣಸ್ಕೃತು ಎಂಬೊವು ಮಕ್ಕ ಆದವೆ. ಇವರ್‍ಲಿ ಮರೀಚಿಗೆ ಕಶ್ಯಪಂತೇಳಂವ ಮಜ್ಜ ಆದ. ಇಂವಂಗೆ ಸೂರ್ಯ ಮಜ್ಜ. ಇಂವಂದ ಹುಟ್ಟಿ ಮುಂದೆ ಬಂದೊವು ಎಲ್ಲ ಸೂರ್ಯವಂಶಕ್ಕೆ ಸೇರ್ದೊವುಂತ ಹೆಸ್‌ರ್ ಪಡ್ದವೆ.

ಅತ್ರಿಂತೇಳಂವನ ಹಿರಿಯ ಮಜ್ಜ ಸೋಮ. ಇಂವನ ಮೂಲಂದ ಹುಟ್ಟಿದೊವ್ಕೆಲ್ಲ ಚಂದ್ರ (ಸೋಮ) ವಂಶಕ್ಕೆ ಸೇರ್ದೊವುಂತ ಹೆಸ್‌ರ್ ಬಂದದೆ. ಇದರ್‍ಲಿ ಹಲಈವು ಪ್ರಖ್ಯಾತ ರಾಜೆರ್‍ಗ ಆಗಿ ಹೋದ ಮೇಲೆ, ದುಷ್ಯಂತ ರಾಜನ ಮಜ್ಜ– ಅವನ ದೌಷ್ಯಂತೀಂತಳೂ, ಭರತಾಂತಳೂ ಹೇಳುವೆ, ಇಂವ ತುಂಬ ಯಜ್ಞ, ಯಾಗಾದಿಗಳ ಮಾಡಿ, ಬಾರಿ ಪ್ರಸಿದ್ಧಿಗೆ ಬಾತ್. ಅಂವಂದ ಮೇಲೆ ಸುಮಾರ್ ರಾಜೆರ್ಗ ಆಗಿ ಹೋದ್ರೊ. ಆ ಸಾಲ್‌ಲಿ, ಪ್ರತಿಮಾಂತೇಳ್ವ ರಾಜ ಎದ್ದ್ ಕಂಡದೆ. ಅಂವಂಗೆ ಶಂತನು, ದೇವಾಪಿ ಎಂಬ ಇಬ್ಬೊರು ಮಕ್ಕ ಹುಟ್ಟುವೆ. ಇವು ಇಬ್ಬೊರ್‍ಲಿ ದೇವಾಪಿಗೆ ಎಳೆ ಪ್ರಾಯಲೇ ವೈರಾಗ್ಯ ಬಂದ್, ಸೊಂಸಾರನ ಬುಟ್ಟ್ ತಪಸ್ಸಿಗೆ ಹೋತು.

**ಮಕ್ಕ :**
ಎಂತಈದ್ ತಾತಾ, ಇವನ ಮಜ್ಜ ಅಂವ ಅವನ ಮಜ್ಜ ಇಂವಂತ ಹೇಳಿಕಈಂಡೇ ಹೋದರೆ ಬೋರ್ ಹೊಡಿದುಲೆನೋ?

**ತಾತ :**
ಒಂದು ವಿಸಯನ ಪೂರ್ತಿ ಮಾಡುವ ದೃಷ್ಟಿಂದ ಇದರೆಲ್ಲ ಹೇಳದೆ ಇರಿಕೆ ಆದುಲೆ

ಮಕ್ಕಳೇ. ಇಷ್ಟ್ ಸಣ್ಣ ಸಂಗ್ತಿನ ತಪ್ಪಂಬಕೆ ಆದುಲೇಂತೇಳಿರೆ, ಮುಂದೆ ನಿಮ್ಮಂದ ಎಂತ ಕೆಲ್ಸ ಮಾಡಿಕೆ ಆದು? ನೀವ್ಗ 'ಜರೀ ಬೂಸು'ಗಂತ ಹೆಸ್ರ್ ಪಡಿಯೊಕುಂತ ಉಟ್ಟೋ? ಒಂದು ವಿಸಯ ಎಷ್ಟೇ ಸಣ್ಣೞವಾಗಿದ್ದರೂ, ಅದರ ಎಲೆ, ಬೇರ್ ಎಲ್ಲ ತಿಳ್ಕಣೋಕೂಂತ ಮನ್ಸ್ ಇರೊಕು. ಕೇಳಿ: ಈಗ ನಾವ್ಗ–ಎದ್‌ರಾಗುವ ರಾಜ ಶಂತನು. ಅಂವ ಸುಂದರ ಪುರುಷ. ಪರಾಕ್ರಮಿ. ಮನ್‌ಸ್ ಮಾತ್ರ ಹಜ್ಜಿ ಚಂಚಲ–ಅದೂ ಪೊಲ್ರ್ನನ ಗೂಡೆಗಳ ಕಂಡರೆ ಬಾಂಯ್ ಬುಡುತಿತ್ತ್. ಈ ವಿಚಾರೞಲಿ ಕೆಲೊವುಗೂಡೆಗೞೂ ಕೞಮ್ಮಿಲ್ಲೆ! ಹೀಂಗೆ ಶಂತನು ಒಮ್ಮೆ ಗಂಗಾನದೀ ತೀರೞಲಿ ತಿರ್‌ಗಾಡಿಕೞಂಡ್ ಇರ್‌ಕನ ಗಂಗಾದೇವಿ ಪೊಲ್ರ್ನನ ಹೆಣ್ಣ್‌ರೂಪತಾಳಿ ಆ ಹಳ್ಳಂದ ಎದ್ದ್ ಬಾದೞದೞರ ಕಂಡೞತ್. ಅಚ್ಚಬೆಳ್ಳಂಗೆನ ಸೀರೆ, ರವುಕೆ (ಈಗ ನಾವು Tide ಸಾಬೂನು ಹೊಡಿನ ಪ್ರಕಟಣೆನ ಟಿ.ವಿ.ಲಿ ನೋಡುವಲೆ ಹಾಂಗಿದ್ದೞದ್) ಅಚ್ಚಮಲ್ಲಿಗೆನ ಹೂಮಾಲೆ, ನೀಳ ಜೆಡೆ, ಹಿಂಗೆ ಯಾರಾರ್ ನೋಡ್‌ದ ಕೂಡ್ಲೆ ಮೋಹದ ಬಲೆಗೆ ಬೀಳುವ್ರೋ. ಅದೂ ಯಾರೋ ದೇವತೆಗಳ ಸಾಪಕ್ಕೊಳಗಾಗಿ ನರಜೆನ್ಮ ತಾಳಿ ಬರೊಕಾತ್. ಸೞಿಸೞಿನೀಂತ ಶಂತನು ಅದರ ನೋಡ್‌ತ್. ಅದಿಕೆ ಮರುಳಾತ್. ಅಂವನೂ ಜವ್ವನ; ರೂಪವಂತ. "ನೀ ನನ್ನ ಮೊದ್‌ವೆ ಆದಿಯನೋಂತ ಕೇಳ್ತ್. ನನ್ನೞದೊಂದು ಶರ್ತ ಉಟ್ಟು. ಅದಿಕೆ ಒಪ್ಪಿಕೞಂಡರೆ ಮೊದುವೆ ಆಸೇಂತ ಹೇಳ್ತ್. ಆ ರೂಪರಾಸಿನ ನೋಡ್‌ಕನ ಎಂತ ಶರ್ತವಾದರೂ ಶಂತನು ಸೞಯ್ಯಂತ ಹೇಳಿಕೆ ತಯಾರಿತ್ತ್. ಮತ್ತೆ ನೀವಾದರೆ ಏನ್ ಬುಡುವೊರ್‍ಯೋ ಮಕ್ಕಳೆ?

**ಮಕ್ಕ :**

ತಾತ! ಗಂಗೆದ್ ಎಂತ ಶರ್ತಂತ ಹೇಳಿರೆಯೋ?

**ತಾತ :**

ಹೇಳಿನೆ ದೇವಲೋಕೞಲಿ ಅಷ್ಟವಸುಗಂತೇಳಿ ಇದ್ದೊ. ಅವು ದೇವಋಷಿ ವಸಿಷ್ಠನ ಕೞರ್ ಬುಡುವ ಹಸ್‌ನೇನೋ ಕೞದ್ದೊಗಡ. ಹಾಂಗೆ ರುಸಿಗೆ ಕೋಪ ಬಂದ್ ನೀವು ಭೂಲೋಕೞಲಿ ಮೊಂಯಿಸೞರಾಗಿ ಹುಟ್ಟೀಂತ ಸಾಪಕೊಟ್ಟೞತ್ ಗಡ. ವಸುಗ ಎಂಟ್ ಜನ ಇದ್ದೊವು ಗಂಗಮ್ಮನ ನೋಡಿ, ನೀ ನಾವುಗೆ ಎರ್‌ಡ್ ವರ ಕೊಡೊಕು ಅವ್ವಾ! ಒಂದು, ನಾವು ನಿನ್ನ ಹೊಟ್ಟೆಲಿ ಹುಟ್ಟೊಕು, ಎರ್ಡ್ ಹಾಂಗೆ ಹುಟ್ಟಿದ ಕೂಡ್ಲೆ ನೀ ನಮ್ಮ ನೀರ್‌ಲಿ ಕೞಂತ್‌ಸಿ ಕೊಲ್ಲೊಕು. ಹಾಂಗೆ ನಾವ್ಗ ಬೇಗ ಸಾಪದ ದೋಸ ಹೋಗಿ ನಾವು ನಮ್ಮ ಮುಂದೆನ ಸ್ಥಾನಕ್ಕೆ ಬಾಪಾಂಗೆ ನೀ ಉಪಕಾರ ಮಾಡೊಕುಂತೇಳಿ ಅದರ ಕಾಲಿಗೆ ಅಡ್ಡ ಬಿದ್ದ್ ಬೇಡಿಕೞಂಡೊ. ಗಂಗೆ ಒಪ್ಪಿತ್.

ಶಂತನು ಗಂಗೆನ ಶರ್ತಕ್ಕೆ ಒಪ್ಪಿತ್‌ಂತ ಮುಂದೆನೇ ಹೇಳ್ದೆ ಅಲ್ಲ? ಅದರ ಶರ್ತ ಹೀಂಗೆ. "ನಾ ದೇವಲೋಕಕ್ಕೆ ಸೇರ್ದಂವ. ಆದರೆ ನೀ ಭೂಲೋಕದ ಮೊಂಯಿಸ. ನಾ ಏನ್ ಮಾಡಿರೂ ನೀ ಅದಿಕೆ ಅಡ್ಡಿ ಮಾಡಿ ವಿರೋಧ ಮಾಡಿಕೆ ಆಗಞೆದ್. ಹಾಂಗ ನೀ ವಿರೋಧ ಮಾಡ್ದ ಕೂಡ್ಲೆ ನಾ ನಿನ್ನ ಬುಟ್ಟ್ ಹೋವೆ ಹೇಂಗೆ? ಇದಿಕೆ

ಒಪ್ಪಿಕೆಂಡಿಯನೋಂತ ಕೇಳ್ತ್. ರಾಜ ಹಾಂಗೇ ಆಗಲೀಂತ ಹೇಳ್ತ್. ಅಂತ ಹೆಣ್ಣ್ ಸಿಕ್ಕದೇಂತಾದರೆ ನೀವು ಕೂಡಾ ಹಾಂಗೆ ಹೇಳೋವೇ ತಾನೆ?

ಮಕ್ಕ :

ನಮ್ಮ ಅಪ್ಪ ಅಗ್ಗದೊವುಂತ ನೀವು ತಿಳ್ಕೊಳೋರಿಯೋ ಅಜ್ಜಪ್ಪ? ಈಗ ನೀವಾದರೂ ಬುಡುವೋರಿಯೋ?

ತಾತ :

“ಸಿಕ್ಕಿದರ ಬುಟ್ಟರೆ ಕೆಲ್ಲೆಪ್ ಬುದ್ಧಿ ಅಲ್ಲಾಂತ ಒಂದು ಗಾದೆ ಮಾತ್ ಕೇಳ್ಕೊಳೆರಿಯೋ? ಅದೆಲ್ಲ ಹೋಗಲಿ. ನಾವು ಇಷ್ಟ್ ಮಾತಾಡ್‌ಕನ ಶಂತನು ಗಂಗೆನ ತೇರ್‌ಲಿ ಕುಪ್ಪ್‌ರಿಸಿ ಕೆಂಡ್, ಅರ್ಥದಾರಿಗೆ ಎತ್ತಿತ್.

ಮಕ್ಕ :

ಮತ್ತೆ ಮದುವೆ, ಜೆನ. ಗದ್ದಲಂತ ಏನೂ ಇಲ್ಲೆನೋ ತಾತ?

ತಾತ :

ಪ್ರೌಢರಾದ ಗಂಡ್, ಹೆಣ್ಣ್, ಅವವೇ ಒಪ್ಪಿಕೆಂಡ್ ಒಂದಾಗುವ ಮದುವೆನ ಗಾಂಧರ್ವ ವಿವಾಹಂತ ಹೇಳುವೆ. ಇದ್‌ಕೆ, ಮೂರ್ನೆವರ ಪ್ರವೇಶ ಆಗತ್ಯ ಇಲ್ಲೆ. ಹಿರಿಯೆವು ಇದರ ಒಪ್ಪಿಕೆಂಬತ್ತಿದ್ದೊ. ಹೀಂಗೆ ಗಾಂಧರ್ವ ರೀತಿಂದ ಆಯಿದ್ದೊರು ಗಂಡ, ಹೆಣ್ಣಾಂತ ಆದೊ. ಒಳ್ಳ ರೂಪವಂತ ಗಂಡ. ಅವನ ಮೀರ್ಸವಂತ ಹೆಣ್ಣ್. ಇದ್ದೊರಿಗೂ ತುಂಬಿದ ಯೌವನ. ಮತ್ತೆ ಕೇಳೊಕೋ? ಬಾರಿ ಸಂತೋಸಂದ ಇದ್ದೊ. ವಸುಗ ಮೊಂಯಿಸ ಜನ್ಮತಾಳಿ ಅದರ ಮುಗ್ಗಿಕೆ ಆತುರಂದ ಕಾದ್‌ಕೆಂಡೇ ಇದ್ದೊ ಅಲ್ಲ? ಹಾಂಗೆ ಗಂಗೆ ಬೇಗ ಬೊಸ್‌ರಾತ್ ಒಂಬೊತ್ತ್ ತಿಂಗ ತುಂಬಿ ಒಂದು ದಿನ ಹೆತ್ತಲೆತ್. ಕೂಸುನ ಯಾರಿಗೂ ತೋರ್ಲಿತ್ಲೆ. ಅರ್‌ವಲಿ ಅದರ ಸುತ್ತಿಕೆಂಡ್ ಬೇಗ ಬೇಗ ಹಳ್ಳದ ಕರೆಗೆ ಹೋತು. (ಅವರ ಮನೆಗೆ ಪಕ್ಕಲೇ ಗಂಗಾನದಿ ಹರಿಯುತಿತ್ತ್) ವಸುಗ ನೀರ್‌ಲಿ ಕೆಂತ್‌ಸಿ ಕೊಲ್ಲೊಕು ನಮ್ಮಂತ ಗಂಗೆನ ಕೇಳಿಕಂಬಕೆ ಕಾರ್ಣ ಏನ್‌ಂತ ಗೊತ್ತುಟೋ? ಗಂಗೆ ಪುಣ್ಯನದೀಂತ ಹೆಸ್‌ರ್ ಹೋದ ಹಳ್ಳ. ಹಿಂದೆ ಅದ್ ದೇವ ಲೋಕಲೇ ಹರ್ಕಂಡ್ ಇದ್ದುದರ ಭಗೀರಥ ಭೂಲೋಕಕ್ಕೆ ತರ್ಲಿತ್. ಅಲ್ಲಿಂದ ಪಾತಾಳಕೆ ಕರ್ಕಂಡ್ ಹೋತು. ಅಲ್ಲಿ ರುಸಿ ಸಾಪಂದ ಬೂದಿಯಾಗಿ ಅವನ ಪೂರ್ವಜರ್ 1 ಸಾವಿರ ಜನ ಮೋಕ್ಷ ಇಲ್ಲದೆ ಬಿದ್ದಿದ್ದೊ. ಅವರ ಬೂದಿರಾಸಿನ ಮೇಲೆ ಗಂಗೆನ ಹರ್ದ್ ಹೋವಾಂಗೆ ಭಗೀರಥ ಮಾಡ್ತ್. ಹಾಂಗೆ ಆ ಬೂದ್ಯೆಲ್ಲ ಅವರ ನೀರ್‌ಲಿ ಕರ್ಗಿತೊಳ್ಳ್ ಹೋತು. ಅವ್ಕೆಲ್ಲ ಮೋಕ್ಷ ಸಿಕ್ಕಿತ್. ಹೀಂಗೆ ಗಂಗೆ ಮೂರು ಲೋಕಲ್ಯೂ ಕೀರ್ತಿ ಪಡ್ದ ಹಳ್ಳ. ಈಗ ನಮ್ಮ ಜೆನಂಗ ತಮ್ಮವರ ಹೆಣಂಗಳ ಎಲ್ಲಿ ಅರ್ಧ ಸುಟ್ಟ್, ಸೊಪ್ಪಕೆರ್ಜಿ ಒಳ್ಳಿಕೆ– ಹಾಂಗೇ ತೆಗದ್ ಗಂಗೆಗೆ ಹರ್ಕಿ ಇಟ್ಟ್‌ಬುಟ್ಟವೆ. ಇನ್ನ್ ದೊಡ್ಡ ದೊಡ್ಡ ಕಾರ್ಖಾನೆವು ಅಲ್ಲಿನ ತ್ಯಾಜ್ಯ ವಸ್ತುಗಳ ಎಲ್ಲ ಇದಿಕೆ ಬುಟ್ಟವೆ. ದೊಡ್ಡ ದೊಡ್ಡ ನಗರ ಸಭೇವು ಅಲ್ಲಿನ ಕೊಳ್ಕಗಳ ಎಲ್ಲ ಇದ್ಕೇ ಬುಟ್ಟ್ ಬುಟ್ಟವೆ. ಹೀಂಗೆ ಎಲ್ಲರ್ದೂ ಸುದ್ದ ಮಾಡುವ ಈ ಪುಣ್ಯ ನದಿ ಈಗ ಹೊಲ್ಲ್ ಕೆಟ್ಟ್ ಹೋಗುಟು. ಹೀಂಗೆ

ಅದ್ಪ ಗಂಗೆ ಮಾತ್ರ ಅಲ್ಲ. ನಮ್ಮಟೆಲ್ಲಿರುವ ಎಲ್ಲ ಹಳ್ಳಂಗಳ ಗೆತಿನೂ ಇದೇ. ಹಳ್ಳಗಂತೇಳಿರೆ, ಎಲ್ಲ ಕಾಪ್ ಕೊಳ್ಕಗಳ ಹೊಲ್ಸ್‌ಗಳ ಬಿಸಾಕುವ ಚರಂಡೀಗಂತೇಳಿ ತಿಳ್ಕೊಂಡೊಳೋ ಜೆನ. ಅದರ್ಂದ ಎಷ್ಟೋ ಮೊಂಯಿಸಟೆರಿಗೆ, ಪ್ರಾಣಿ, ಪಶುಪಕ್ಷಿಗಟೆಳಿಗೆ ಉಪಯೋಗ ಉಟ್ಟುಂತೇಳ್ವೊರ ನೆನ್ಪದೇಲೆ. ಹೆಣದ ಬೂದಿಗಳ ಅಸ್ತಿ ವಿಸರ್ಜನೆಂತೇಳಿ, ಭಾಗಮಂಡಲದ ಕಾವೇರಿ, ಕನಕೆಗಳ ಸಂಗಮಟೆಲಿ, ಉಪ್ಪಿನಂಗ್‌ಡಿನ ನೇತ್ರಾವತಿ, ಕುಮಾರಧಾರೆ ಸಂಗಮಟೆಲಿ ಬುಟ್ಟವೆ. ಮೊಂಯಿಸ ಸತ್ತವನ ಸುಡಿಕಾಕನನೇ ಊರೊಟ್ಟು ಹೊಲ್ಸ್‌ನಾತ ತುಂಬಿದೆ. ಅದೂ ಸಾಲದೆ ಬೂದಿನ ಬೇರೆ ನೀರ್‌ಲಿ ಕರ್‌ಗಿಸಿ ಬುಟ್ಟವೆ. ಅದರ್ಂದ ಆಚೆಗೆ ಅದೇ ನೀರ್‌ನ ಕುಡಿಯೊವ್ರು, ಅದೇ ನೀರ್‌ಲಿ ಮಿಯೊವ್ರು, ಎಷ್ಟೋ ಜೆನ ಒಳೋ. ಅವರ ಪಾಡೇನಾಕು? ನಮ್ಮ ಬಗ್ಗೆ ಮಾತ್ರ ನಾವು ಚಿಂತೆ ಮಾಡುವೆ ಹೊರ್ತು ಬೇರೆವರ ಬಗ್ಗೆ ಯೋಚಿಸುದೇ ಇಲ್ಲೆ. ದೊಡ್ಡ ಜೆನಂಗಂತ ಹೇಳ್ಸಿಕಟೆಂಡಟೆವ್ರು ಕೂಡ ಈ ತೊಪ್ಪು ಮಾಡುವೆ. ಮಹಾತ್ಮ ಗಾಂಧಿನ ಬೊಸ್ಮನ ನಮ್ಮ ದೇಶದ ಎಲ್ಲಾ ಪ್ರಸಿದ್ಧ ಹಳ್ಳಿಂಗಟೆಳಲ್ಲಿಯೂ ಕರ್ಗ್‌ಸಿದೊ. ಜವಾಹರ್ ಲಾಲ್ ನೆಹರೂನ ಭಸ್ಮನ ಭಾರತ ದೇಶದ ಎಲ್ಲ ಕಡೇಲೂ ಹರ್ಂಡಟೆಕುಂತ. ವಿಮಾನಟೆಲಿ ಬಂದ್ ಎಲ್ಲ ಕಡೆಗೂ ಚೆಲ್ಲಿದೊ. ಕಟೆರ್ಮ ದಟೆರ್ಮ ಸಂಯೋಗಂತೇಳ್ದಂಗೆ ಆ ವ್ರೊರ್ಷ ನಮ್ಮ ದೇಶಟೆಲಿ ಮಳೆ ಇಲ್ಲದೆ ಬರಗಾಲ ಬಾತ್.

**ಮಕ್ಕ :**

ತಾತ! ನೀವು ಹೀಂಗೆ ದೊಡ್ಡಟೆವರ ಮೇಲೆ ಟೀಕೆ ಮಾಡಿರೆ ನೀವ್ರುಗೇನಾರ್ ತೊಂದರೆ ಮಾಡಿಕಿಲೊ?

**ತಾತ :**

ನಾ ಏನೂ ಕೇಡ್ಂದ, ಮತ್ಸರಂದ ಇದರ ಹೇಳ್ದ್ ಅಲ್ಲ. ಎಂಥವನೇ ಆದರೂ ಪ್ರಕೃತಿನ ಮೇಲೆ ಸವಾರಿ ಮಾಡಿಕೆ ಆಗದ್ಂತ. ಪ್ರಕೃತೀಂತೇಳಿರೆ ಪ್ರತ್ಯಕ್ಷ ದೇವ್ರ. ಅದರ ನಿರ್ಮಲ ಆಗಿ ಇರುವ್ವಾಂಗೆ ನೋಡಿಕಟೆಂಡರೆ, ಬೇರೆ ದೇವ್ರ ಪೂಜೆ ಮಾಡೊಕೂಂತೇಳಿ ಇಲ್ಲೆ.

**ಮಕ್ಕ :**

ತಾತ! River Polution ಮಾಡಿಕೆ ಸ್ವತಃ ಗಂಗಾದೇವಿನೆ ದಾರಿ ತೋರ್ಸಿದಾಂಗೆ ಆತಲ್ಲ?

**ತಾತ :**

ಆ ವಿಷಯನ ಅಲ್ಲೇ ಬುಟ್ಟ್ ಏನೇನೋ ಹೇಳ್ದೆ. ತೊಂದರಿಲ್ಲೆ. ನೀವೆಲ್ಲ ಪ್ರಕೃತಿನ ಸ್ವಚ್ಛತೆನ ಕಾಪಾಡಿಕೆ ನೋಡಿ. ಇನ್ನ್ ನಮ್ಮ ಕತೆನ ಮುಂದುವರ್ಸ್ನೆ.

**ಮಕ್ಕ :**

ಹುಟ್ಟಿದ ಕೂಸುನ ನೀರ್‌ಪಾಲ್ ಮಾಡಿಕೆ ಗಂಗೆಗೆ ಮನಸ್ ಹೇಂಗೆ ಬಾತ್ ತಾತಾ?

**ತಾತ :**

ಅದ್ ಮಾತ್ ಕೊಟ್ಟ ಮೇಲೆ ತೊಪ್ಪಿಕೆ ಆದನೋ? ಮತ್ತೆ ಅದ್‌ಕೇ ನರ ಮೊಂಯಿಸನ ಸಂಬಂಧನ ಆದಷ್ಟ್ ಬೇಗ ತೊಪ್ಸ್‌ಸಿ ಕಟೆಣಟೆಕೂಂತ ಆತುರನೂ ಇತ್ತ್. ಈಗಟೆಳೂ. ಗಂಗೆನಂಥ ಗೂಡೆಗಳ ಕತೆಗಳೂ ಕೇಳಿ ಬಂದವೆ ಅಲ್ಲ? ತನ್ನ ಕೂಸುನ ಗಂಗೆ ಮಾಯು

ಮಾಡ್ತೇಂತ ಶಂತನುಗೆ ಗೊತ್ತಾತ್. ಆದರೆ ಏನೂ ಕೇಳುವ ಹಾಂಗಿಲ್ಲೆ. ಮೂಕ ವೇದನೆ. ಗುರುಗುಂಮ್ಮುಂತೇಳದೆ ತಡ್ಕಂಡಲೆತ್. ಏನೂ ಆಗದವರ ಹಾಂಗ ಗಂಗೆ ಇತ್ತ್. ಹೀಂಗೆ ಸುರೂದ್ ಕೂಡಿ ಒಟ್ಟು ಏಳ್ ಸಲೆರ್ತಿ ಆತ್. ಎಂಟನೇ ಸಲೆರ್ತಿಗೆ ರಾಜ ಒಟ್ಟಿಗೇ ಹೋಗಿ ಆ ಕೂಸುನ ಹಳ್ಳಕೆ ಹಾಕುವರ ತಡ್ತ್. 'ನಾ ಹಿಂದೆ ನಿನ್ನೊಟ್ಟಿಗೆ ಹೇಳ್ದಾಂಗೆ ನಿನ್ನ ಬುಟ್ಟ್ ಹೋವೆ ತಿಳ್ಕ್'ಂತ ಗಂಗೆ ಹೇಳ್ತ್. 'ನಿಂಗೆ ಮನ್ಸ್ ಬಂದ್ದಾಂಗೆ ಮಾಡ್. ಆದರೆ ಈ ಕೂಸು ಒಂದಾದರೂ ನಂಗೆ ಬೇಕೂಂತ್ರೇಳ್ತ್ – ರಾಜ. ಆಗ ಗಂಗೆ 'ಇಷ್ಟ್ ಸಣ್ಣ ಮಕ್ಕಳ ನಿನ್ನಂಥ ಗಣ್ಮ್ಕಳಿಗೆ ನೋಡಿಕಂಬಕ ಆಕಿಲೆ. ಹಾಂಗೆ ಇದರ ಈಗ ನಾನೇ ಕರ್ಕಲೆಂಡ್ ಹೋನೆ. ವಿದ್ಯೆಬುದ್ಧಿ ಎಲ್ಲ ಕಲೆಲ್ಸಿದ ಮೇಲೆ ನಿನ್ನ ಸ್ವಾಧೀನಕ್ಕೆ ಕೊಟ್ಟನೆ, ಹೆದ್ರ್ಬೇಡಂತ ಹೇಳಿ ಆ ಕೂಸುನ ತಕಲೆಂಡ್, ಮಾಯ ಆಗಿ ಹೋತು. ಶಂತನು 'ಗಂಗೇ, ಗಂಗೇ!'ಂತ ಗಲೆಟ್ಟಿಯಾಗಿ ಅತ್ತ್ಕಲೆಂಡ್ ಹುಚ್ಚ್ರ್ದಾಂಗೆ ಆತ್. ಅವನ ಮಂತ್ರಿಗ ಬಂದ್ ಅವನ ಹೇಂಗಾರ್ ಸಮಾದಾನ ಮಾಡಿ ಅರಮನೆಗ ಕರ್ಕಲೆಂಡ್ ಬಂದೊ. ಎಷ್ಟೋ ದಿನ ಅಂವ ಅಂತಃಪುರಂದ ಹೊರೆಗೆ ಬಾತೇಲೆ. ಗಂಗೆನ ಒಂದು ಆಳೆತ್ತರ ಚಿತ್ರ ಬರ್ಸ್ ಅದರ ನೋಡಿಕಲೆಂಡ್, ಕಾಲ ಕಳಿಯುತ್ತಿತ್ತ್. ಅಗಲಿಕೆನ ದುಃಖಲೆಲಿ, ತನ್ನ ಹೆಣ್ಣ್‌ಂದ ದೂರ ಆದು ಉಟ್ಟೊಲೆ ಅದರಷ್ಟ್ ದೊಡ್ಡ ದುಃಖ ಬೇರೊಂದು ಇಲ್ಲೆ.

**ಮಕ್ಕ :**

ನೀವ್ಗೆ ಇದ್ ಸ್ವಂತ ಅನುಭವನೋ ತಾತ?

**ತಾತ :**

ಅದ್ ಗೊತ್ತಿದ್ದಲೆರ್ದೇ ಅಲ್ಲೋ ಮಕ್ಕಳೇ? ಅದರ ಮತ್ತೊಮ್ಮೆ ಕೇಳ್ಕೋ (ಮತ್ಸ್ಯಗಂಧಿ (ಸತ್ಯವತಿ) ಮತ್ಸ್ಯಗಂಧ ಜನ್ಮ ವೃತ್ತಾಂತ)

ಗಂಗಾದೇಸಲೆಲಿ ಉಪರಿಚರವಸುಂತೇಳ್ವ ಒಬ್ಬ ರಾಜ ಇತ್ತ್. ಒಂದು ದಿನ ಏನೋ ಕೆಲ್ಸ ಉಟ್ಟೂಂತ ಅಂವ ಇಂದ್ರನ ಲೋಕಕ್ಕೆ ಹೋತು ಗಡ. ಆ ದಿನ ಅವಂಗೆ ವಾಪಾಸ್ ಅವನ ಮನೆಗೆ ಬಾಕೆ ಆತ್‌ಲೆ. ಅಂವ ಮುಕ್ತಾವತಿ ಎಂಬ ಹಳ್ಳದ ಕರೇಲಿ ಒಂದು ದಿನ ಕೋಲಾಹಲ ಎಂಬ ಪರ್ವತನ ಮಗ ಗಿರಿಜೆನ ನೋಡಿ, ಅದರ ಮೊದುವೆ ಆತ್. ಅಂವ ಇಂದ್ರನಲೆಲ್ಲಿಗೆ ಹೋದ ದಿನ ಅದ್ ತಿಂಗಳ ಸೂತ್‌ಕದ ನಾಲ್ಕನೇ ನೀರ್ ಮೀಯುವ ದಿನ. ಅಂದ್ ಗಂಡ ಹೆಣ್ಣ್‌ನ ಸಮಾಗಮಕ್ಕೆ ಸಲೆರಿಯಾದ ದಿನ. ಒಳ್ಳೆ ಮಕ್ಕ ಹುಟ್ಟುವ್ರೋಂತ ನಂಬಿಕೆ. ಇಂದೇ ನಾ ಅದರ್‌ಂದ ದೂರ ಆಗಿ ಬುಟ್ಟೆಲೆಪ್ಪಂತ ನೆನ್ಸಿಕಲೆಂಡ್, ಇರ್‌ಕನ ಅವಂಗೆ ವೀರ್ಯಸ್ಖಲನ ಆಗಿಬುಟ್ಟಲೆತ್. ಮಕ್ಕಳ ಹುಟ್ಟಿಗೆ ಕಾರಣ ಆವ ವೀರ್ಯನ ನಷ್ಟ ಮಾಡಿಕೆ ಆಗಲೆದ್‌ಂತ ಬಲವಾಗಿ ನಂಬಿಕಲೆಂಡ್ ಇದ್ದೋ ಆಗನೊವ್ರು. ಹಾಂಗೆ ಅಂವ ಒಂದು ಚಿರಿ ಬಾಳೆಲೆಲಿ ಅದರ ಹಾಕಿ, ಮುದ್ದೆ ಮಾಡಿ ಅಂವ ಸಾಂಕಿದ್ದ ಗಿಳಿನ ಕೊಕ್ಕುಲಿ ಅದರ ಸೆಕ್ಕಿಸಿ, ಅದರ ತನ್ನ ಹೆಣ್ಣ್‌ಗೆ ಕೊಡ್ದೋಕೂಂತೇಳಿ ಅದರ ಕಲೆಳ್‌ಸಿತ್. ಆ ಗಿಳಿ ಯಮುನಾ ನದಿ ಮೇಲೆಂದ ಹಾರಿಕಲೆಂಡ್ ಬಾಕನ ಒಂದು ಗಿಡ್‌ಜ ಅದರ ಜೆರ್ಲಿಕಲೆಂಡ್ ಬಂದ್ ಅದಿಕೆ ಮೆಟ್ಟಿ ಕೊಡ್ಡಿ ಗಾಸಿ ಮಾಡ್‌ಕನ ಆ ಬಾಳೆಲೆ ಮುದ್ದೆಲಿದ್ದ ವೀರ್ಯ ಕೆಳೆಗ

ನೀರಿಗೆ ಬಿದ್ದ್ ಬುಟ್ಟೀತ್. ಅಲ್ಲಿದ್ದ ಒಂದು ಬಾಳೆ ಮೀನ್ ಅದರ ನುಂಗಿ ಬುಟ್ಟೀತ್. ಅದರ್‌ಂದ ಅದಿಕ್ಕೆ ಗರ್ಭ ಉಂಟಾತ್!

ಕಾಲಾನು ಕಾಲಲೆಲಿ ಆ ಹಳ್ಳೆಲಿ ಒಬ್ಬ ಮುಗ್ಗ ಬಲೆ ಬೀಸಿ ಮೀನ್ ಹಿಡ್‌ಕಲೆಂಡ್ ಇರ್‌ಕನ ಈ ಮೀನ್ ಅವನ ಬಲೆಗೆ ಸಿಕ್ಕಿಬೀತ್. ಮೀನ್ ತುಂಬ ತೋರ ಇತ್ತ್. ಹಾಂಗೆ ಅಂವ ಅದರ ಅವನ ರಾಜ ದಾಶರಾಜಂತೇಳೊವನಲ್ಲಿಗೆ ತಕಂಡ್ ಹೋಗಿ ಕೊಟ್ಟೀತ್. ಆ ಮೀನ್‌ನ ಹೊಟ್ಟೆನ ಬಾರಿ ನೋಡ್‌ಕನ ಅದರ್ಲ್ಲಿ ಒಂದು ಹೆಣ್ಣ್ ಮತ್ತೊಂದು ಗಂಡ್ ಕೂಸುಗಳ ಕಂಡ್ ಅಷ್ಟೆ ಕುಸಿ ಆತ್. ಹೆಣ್ಣ್ ಕೂಸಿಗೆ ಮತ್ಸ್ಯಗಂಧಿಂತ, ಗಲೆಂಡ್ ಕೂಸಿಗೆ ಮತ್ಸ್ಯಗಂಧಂತ ಹೆಸರ್ ಹಾಕಿ ಸಾಂಕಿಕ್‌ಲೆಂಡ್ ಇದ್ದೊ. ಹೆಣ್ಣ್ ಕೂಸಿಗೆ ಮೀನ್‌ನ ವಾಸನೆಂದಾಗಿ ಆ ಹೆಸ್‌ರ್ ರೂಢಿಲಿ ಇದ್ದರೂ, ಅದರ ಪೊರ್ಲುನ ನೋಡಿ "ಸತ್ಯವತಿ"ಂತ ಹೇಳುವ ಇನ್ನೊಂದು ಹೆಸ್‌ರ್ ಕೊಟ್ಟೊ.

ಕೂಸು ದಿನಂದ ದಿನಕೆ ಪೊರ್ಲು ಬೆಳ್ತ್. ಕೂಸಾಗಿದ್ದಲೆದ್ ಈಗ ಗೂಡೆ ಆತ್. ಹಳ್ಳದ ಕರೆಲಿ ಕುದ್ದ್‌ಕಲೆಂಡ್ ದಾರಿಹೋಕರ ದೋಣಿಲಿ ಇನ್ನೊಂದು ಕರೆಗೆ ದಾಟ್ಸುವ ಕೆಲ್ಸ ಮಾಡಿಕಂಡ್ ಇತ್ತ್. ಹೀಂಗೆ ಇರ್ಕನ ಜೋಲು ಗಡ್ಡದ, ಪಿಳಿ ಪಿಳಿ ಕಣ್ಣ್‌ನ ಪರಾಶರಂತೇಳ್ವ ರುಸಿ ಅಲ್ಲಿ ಬಾತ್. ಈ ಗೂಡೆನ ನೋಡಿ ನನ್ನ ದೋಣಿ ದಾಟ್ಸಂತ್ತೇಳ್ತ್. "ಸಾವಿರ ಜನ ಹತ್ತಿರೆ ಮಾತ್ರ ಈ ದೋಣಿ ನಡೀದು. ಒಬ್ಬೊಬ್ಬಂಗಾಗಿ ಹೋರ್ಡಿಕೆ ಇಲ್ಲಂತ್ತೇಳ್ತ್. ನಾವೊಬ್ಬನೇ ಅಷ್ಟು ಜನರ ದಿನ್ನಕೆ ಸಲೆರಿ ತೂಗುವೇಂತ ರುಷಿ ಹೇಳ್ತ್. ಸಲೆರಿ ಹಂಗಾರೆ, ಹತ್ತಿ ದೋಣಿಗೇಂತ ಸತ್ಯವತಿ ಹೇಳ್ತ್. ಆ ಮೇಲೆ ದೋಣಿ ನಡ್ಸಿಕೆ ಸುರುಮಾಡ್ತ್. ಈ ಪರಾಶರ ರುಸಿ ಆ ಗೂಡೆನ ಪೊರ್ಲು ನೋಡಿ, ಹುಚ್ಚಾತ್! ಅಂತಾ ತಪಸ್ವಿಗೇ ಅವನ ಮನ್‌ಸ್‌ನ ಚಾಂಚಲ್ಯನ ನಿಲ್ಸಿಕೆ ಆತ್‌ಲೆ. ಹಳ್ಳೆಲಿದ್ದ ಮಂಜುನೇ ಬೇರೆವ್ಕೆ ನೋಡಿಕಾಗದ ಹಾಂಗೆ ತೆರೆ ಕಲೆಟ್ಟಿದಾಂಗೆ ಮರೆ ಮಾಡ್ತ್. ತಡಿಯಕೆಜೊತ್ತದ ಮೀನ್‌ನ ನಾತ ಬಾರದ್ಹಾಂಗೆ, ಯೋಜನಗಂಧಿಯಾಗುವ ಹಾಂಗೆ ಒಂದು ವರ ಕೊಟ್ಟಲೆತ್. ಮತ್ತೆ ಸತ್ಯವತಿ ನೊಟ್ಟೆಗ ಸೇರ್ತ್. ಆ ಮೇಲೆ ದೋಣಿ ಆಚೆ ದಡೆ ಸೇರ್‌ತ್. ಅಷ್ಟರ್ಲ್ಲಿ ಸತ್ಯವತಿ ಬಸ್ರಾಗಿ ಒಂದು ಕಲೆರಿಕೂಸುನ ಹೆತ್ತೂ ಆತ್. ಅಂವ ಆಗಳೇ ದೊಡ್ಡಂವಾಗಿ ಗಡ್ಡ ಮೀಸೆ ಬಂದ ಜವ್ವನಾಂಗ ಆಗಿತ್ತ್. ಪರಾಶರ ರುಸಿ ಸತ್ಯವತಿಗೆ ನೀ ಮುಂದೆನಾಂಗ ಕನ್ಯೆನೇ ಆಗಿರುವ. ನಿಂಗೇನೂ ತೊಂದರ ಆಕಲೆಂತ ಹೇಳಿ–ಅವನ ಮಜ್ಜನ ಕರ್ಕಂಡ್ ಹೋತ್. ಸತ್ಯವತಿ ಮುಂದೆನ ಹಾಂಗೇ ಇತ್ತ್. ಇದರೆ ದೋಣಿ ದಾಟ್ಸುವ ಕೆಲ್ಸ ಬೇಡ. ನಾಲ್ಕ್‌ಜನ ನಡ್ಡಾಡುವ ದಾರಿಕರೆಲಿ ಕುದ್ದರೆ, ಬಾಪ್ರ ಹೋಪ್ರ ಎಲ್ಲ ಒಂದು ಕಣ್ಣ್ ಹಾಕೊವೆ. ಈ ಜೋಲು ಗಡ್ಡದ ಮುದಿಯಂಗೇ ನನ್ನ ರೂಪು ನೋಡಿ ಹೀಂಗೆ ಆಕೊಂದರೆ ಇನ್ನ್ ಜವ್ವಣಲೆರ್ ನೋಡಿರೆ ಏನ್ ಮಾಡಿಕೆ? ಹಾಂಗೆ ಈ ಕೆಲ್ಸ ಇನ್ನ್ ನಂಗೆ ಬೇಡ– ಹೀಂಗೆ ಯೋಚನೆ ಮಾಡ್ದ ಸತ್ಯವತಿ ಮತ್ತೆ ದೋಣಿ ಕೆಲ್ಸಕೆ ಹೋತ್ತ್.

**ತಾತ :**

ಮಕ್ಕಳೇ ಏನಾರ್ ಕೇಳಿಕೆ, ಹೇಳಿಕೆ ಮನಸಿ ಉಟ್ಟೋ? ಏನ್?

**ಮಕ್ಕ :**

ಅಲ್ಲ ತಾತ! ಆ ಋಷಿಮಾಡ್ದ ಅನ್ಯಾಯ! ನೋಡಿರೆ ಏನೇನೋ ಆದ. ಹೀಂಗಾಕನ ಹುಡ್ಗೀರ್‌ಗೆ ಏನಾಗ್ ಬೇಡ? ದೋಣೆಲಿ ಬೇರೆ ಯಾರೂ ಇರದ ಹಾಂಗೆ ಮುಂದೇ ಪ್ಲ್ಯಾನ್ ಮಾಡಿಟು. ಸತ್ಯವತಿಗೆ ತೊಪ್ಸ್ಲಿ ಓಡಿಕೆ ಬೊತ್ತದ ಹಾಂಗೆ ನೊಡು ಹಳ್ಕೆಲಿ ಅದರ ಮಾನ ಹಾಳ್ ಮಾಡ್ತ್. ಲೋಕಕ್ಕೆ ಆದರ್ಶ ತೋರ್ಸ್ಲೋವೇ ಹೀಂಗೆ ಮಾಡಿರೆ ಏನ್ ಒಳ್ತ್? ರುಸಿ ಗಡ ರುಸಿ! ರುಸಿ ಅಲ್ಲ ನುಸಿ!

**ತಾತ :**

ನೀಪ್ಗೆ ತುಂಬ ಕೋಪ ಬಂದದೆ ಅಲ್ಲ? ಆಗನ ಕಾಲ ಅಂತಲೆದ್. ಮೇಲ್ ಜಾತಿನೊವ್ರು ಅಂದರೆ ಅಷ್ಟ್ ಮರ್ಯಾದೆ. ಹಿಂದೆನ ಕಾಲಲೆಲಿ ಕೇರಳಲೆಲಿ ಕಳೆಗನ ಜಾತಿಯವ್ರು ಮೊದುವೆ ಆದರೆ ಮೊದೋಳಿಗೆ ಗೂಡೆನೊಟ್ಟಿಗೆ ಮೊದಲ ರಾತ್ರಿನ ಮಿಲನ ಕಡ್ಡಾಯವಾಗಿ ಒಬ್ಬ ನಂಬೂದಿರಿ ಹಾರಂವನೊಟ್ಟಿಗೆ ಆಕಲೆದ್ದ್ ಗಡ. ಹಿಂಗೆ ಮೇಲೆನವರೊಟ್ಟಿಗೆ ಸಂಬಂಧ ಬೆಳ್ಳುದುಂತೇಳಿರೆ ಅದ್ ಬಾರಿ ಗೌರವದ ಪ್ರಶ್ನೆ ಆಗಿತ್ತ್ ಗಡ. ಮೇಲೆ ಈ ರುಷಿನ ವಿಚಾರನೆಲ್ಲ ಪೊರ್ಲು ವಿವರ್ಸಿ ಹೇಳ್ವ ಕನ್ನಡದ ಕವಿ ಪಂಪ ಭಾರಿ ಭಕ್ತಿಂದ "ದಿವ್ಯ ಮುನಿಗಳ್ಗೇ ಗೆಯ್ದೊಡಂ ತೀರದೇ?"ಂತ ಹೇಳಿಟು. ಅಂದರೆ ಇದರೆಲ್ಲ ನಾವು ಟೀಕೆ ಮಾಡಿಕೆ ಬೊತ್ತ್. ಇದೆಲ್ಲ ದೊಡ್ಡವರ ವ್ಯವಹಾರ. ನಾವವರ ಕೇಳಿರೂ ನೋಡಿರೂ ಸುಮ್ನೆ ಕಣ್ಣ್ ಮುಚ್ಚಿಕಲೆಂಡ್ ತೆಲ್ಗಿ ಹೋಕೂಂತ ಬುದ್ಧಿ. ಅದ್ ಹಾಂಗೆ ಇರ್ಲಿ. ಮುಂದೆ ನೋಡೊನೊ. ಆ ಕಾಲಲೆಲಿ ಜನಸಂಖ್ಯೆ ಕಲೆಮ್ಮಿ. ಕಾಡ್ ತುಂಬ ಇತ್ತ್. ಒಂದು ಮನೆ ಇದ್ದರೆ ಅದರ ಸುತ್ತ ಕಾಡ್. ಬಿಸ್ಲ್‌ನ ತಾಪ ಇಲ್ಲದೆ ತೊಂಪು ತೊಂಪಾದ ನೆಕೊಲ್. ಮಕ್ಕಳಿಗೆ ಆಡಿಕೆ ಬಾರಿ ಒಳ್ಳೆ ಜಾಗೆ. ಕಾಡ್ ಹೂವ್ಗ ಅರ್ಳಿ ಗಮ ಗಮ ಪರಿಮಳ ಬಾದು. ಕೇಪ್ಳ ಹಣ್ಣ್, ಚೂರಿ ಹಣ್ಣ್, ಗೊಟ್ಟೆಹಣ್ಣ್ ಹೀಂಗೆ ನಾನಾ ತರದ ರುಚಿ ರುಚಿಯಾದ ಹಣ್ಣ್‌ಗ. ಮಕ್ಕ ಇದರೆಲ್ಲ ಕೊಯ್ದ್ ತಂದ್ ತಿಂಬೊ. ಕಲೆಲ್ಲಾಟ, ಅಡ್‌ಂಗುವ ಆಟ ಎಲ್ಲ ಆಡುವ್ರೊ. ಹೀಂಗೆ ಸತ್ಯವತೀನೂ ಕಾಡ್‌ನೊಳಗೆ ಹೋಗಿ ಪೊರ್ಲು ಪೊರ್ಲುನ ಹೂಗಳ ಕೊಯ್ಕಲೆಂಡ್. ಕುಶೀಲಿ ತಿರ್ಗ್ಯಂಡ್. ಕುಂಯು ಕುಂಯಿಂತೇನೂ ರಾಗ ಎಳ್ಕಲೆಂಡ್ ಇತ್ತ್. ಅದರ ಮೈನ ಪರಿಮಳ ಎಷ್ಟೋ ದೂರಕೆ ಹಬ್ಬಿತ್. ಹೆಣ್ಣ್ ಇಲ್ಲದೆ ಮನೆಲಿ ಕುದ್ದ್ ಕುದ್ದ್ ಬೇಜಾರಾದ ಶಂತನು ರಾಜ ಬೇಟೆಗಾರೂ ಹೋಯಿಂತೇಳಿ ಕಾಡಿಗೆ ಹೊರ್ಟಲೆತ್. ಹಜ್ಜ ದೂರ ಹೋಕನ ಒಳ್ಳೆದೊಂದು ಪರಿಮಳ ಅವನ ಮೂಕುಗೆ ಬೊಡ್ತ್. ಎಲ್ಲಿಂದ ಈ ಪರಿಮಳ ಬಂದದೇಂತ ಹುಡ್ಕ್ಯಂಡ್ ಹೋತು. ಆಗ ಲೋಕೋತ್ತರ ಸುಂದರಿ ಸತ್ಯವತಿ ಅವನ ಕಣ್ಣ್‌ಗೆ ಬೀತ್. ಅವಂಗೆ ಆಶ್ಚರ್ಯ ಆತ್. ಇದೇನ್ ದೇವತೆನೋ ಅಪ್ಸರೆನೋಂತ ಆಶ್ಚರ್ಯಪಟ್ಟಲೆತ್.

ಇಷ್ಟೆಲ್ಲ ನಡಿಯಕೆ ಮುಂದೆ ಗಂಗೆ ಕರ್ಕಂಡ್ ಹೋದ ಕೂಸು ಈಗ ಒಳ್ಳೆ ಜವ್ವಣಿ ಆಗಿ ಅವಂಗೆ ಸಿಕ್ಕಿತ್. ಒಂದು ದಿನ ಹಿಂದದರ ಎಲ್ಲ ನೆನ್ಸಿಕಂಡ್ ಗಂಗಾನದಿ ದಡಲಿ ನಡ್ಕಂಡ್ ಹೋಕನ ಒಬ್ಬ ಪೋರ್ಲಕಂಡೆ ಕೈದ ಬಾಣ ಬುಟ್ಟ್ ಗಂಗೆನ ಪ್ರವಾಹನ

ಹರಿಯುದ್ದಾಂಗೆ ತಡೀದು; ಮತ್ತೆ ಇನ್ನೊಂದು ಬಾಣ ಬುಟ್ಟ್ ಪ್ರವಾಹ ಹರಿಯಕೆ ಬುಡುದು ಹೀಂಗೆ ಮಾಡಿಕಎ̈ಂಡ್ ಒಂದು ಹೊಸತರದ ಆಟ ಆಡುದರ ನೋಡಿ ಆಶ್ಚರ್ಯ ಆತ್. ಅವನ ಮೇಲೆ ತುಂಬ ಪ್ರೀತಿ ಉಂಟಾತ್. ಹಾಂಗೆ ಅವನ ಹಕ್ಕಲೆ ಹೋತು. ಅವನ ಮಾತಾಡ್ಸಕುಂತ ಆಸೆ ಆತ್. ಅಷ್ಟರ‍್ಲಿ ಗಂಗೆ ಪ್ರತ್ಯಕ್ಷ ಆಗಿ ಬಾತ್. ಶಂತನು ಇದೇನ್ ಕನ್ಸೋಂತ ಕಎ̈ಣ್ಣ್ ಕಎ̈ಣ್ಣ್ ಬುಟ್ಟಎ̈ತ್. ಆಗ ಗಂಗೆ ಮಹಾರಾಜ, ಇಂವ ನಿನ್ನ ಮಜ್ಜ. ಶಸ್ತ್ರ-ಶಾಸ್ತ್ರ ವಿದ್ಯೆಗಳ ಎಲ್ಲ ಕಎ̈ಲ್ತುಟು. ಕ್ಷತ್ರಿಯ ವೈರಿಯಾಗಿದ್ದ ಪರಶುರಾಮನೇ ಇಂವಂಗೆ ಗುರು. ತನಿಗೆ ಗೊತ್ತಿದ್ದ ಎಲ್ಲ ವಿದ್ಯೆನೂ ಇಂವಂಗೆ ಕಎ̈ಲ್ಸಿ ಕೊಟ್ಟುಟು. ಶೌರ್ಯಲಿ, ಶಕ್ತಿಲಿ, ಇಂವನ ಮೀರ್ಸೊವ್ರು ನಿಮ್ಮ ಲೋಕಎ̈ಲಿ ಯಾರೂ ಇಲ್ಲೆ. ಇನ್ನ್ ಇಂವನ ನೀ ಕರ್ಕಂಡ್ ಹೋಗಿ, ನಿನ್ನ ರಾಜಕಾರ್ಯಎ̈ಲಿ ನಿಲ್ಸಿಕಂತೇಳಿ ಅವನ ಶಂತನುನ ಕೈಗೆ ಕೊಟ್ಟಎ̈ತ್. ಶಂತನುಗೆ ಒಂದು ನಿಧಿ ಸಿಕ್ಕಿದಷ್ಟ್ ಸಂತೋಸಾತ್. ಮಜ್ಜನ ಕರ್ಕಂಡ್ ಅರಮನೆಗೆ ಬಾತ್. ಅಂವಂಗೆ ಯುವರಾಜ ಪಟ್ಟಕಎ̈ಟ್ಟಿ, ರಾಜ್ಯ ಭಾರನೆಲ್ಲ ಅವಂಗೆ ಒಪ್ಪುಸಿ ಶಂತನು ಆರಾಮಎ̈ಲಿ ಕಾಲ ಕಎ̈ಳ್ತ್. ರಾಜಎ̈ರ್‌ಗಳಿಗೆ ಬೇಟೆ ಒಂದು ವಿನೋದ ಒಂದು ಹುಚ್ಚುಂತ್ತನೂ ಹೇಳಕ್. ಶಂತನು ಆಗಾಗ ಬೇಟೆಗೆ ಹೋಕೆ ಸುರು ಮಾಡ್ತ್. ಅವನ ಮಜ್ಜ ದೇವವ್ರತ ದಿಗ್ವಜಯಕ್ಕೆ ಹೋಗಿ ಎಲ್ಲ ರಾಜರ ಸೋಲ್ಸಿ ಕಪ್ಪ ಕಾಣಿಕೆಗಳ ಹೇರ್‌ಗಳ ತಂದ್ ಐಶ್ವರ್ಯದ ರಾಶಿ ಹಾಕಿತ್. ಅವರ ರಾಜಧಾನಿ ಹಸ್ತಿನಾವತಿ ಕಡೆಗೆ ತಲೆ ಹಾಕಿ ಮಲ್ಗಿಕೆ ಸಾ. ಬೇರೆ ದೇಶದ ರಾಜೆರ್‌ಗಳಿಗೆ ಧೈರ್ಯ ಇತ್ತ್‌ಲೇ. ಅಷ್ಟರ ಮಟ್ಟಿಗೆ ದೇವವ್ರತನ ಪ್ರತಾಪದ ಉರಿ ಹಬ್ಬಿತ್.

ಕಾಡ್‌ಲಿ ಹೂಕೊಯ್ಕಎ̈ಂಡ್, ಮೆಲ್ಲಂಗೆ ರಾಗ ಗುಂಯ್ ಗುಟ್ಟಿಕಎ̈ಂಡ್ ಇರುವ ಪೊರ್ಲುನ ಗೂಡೆನ ನೋಡಿ ಅದರ ಮೈಂದ ಬಾವ ಪೊರಿಮಳನ ಮೂಸಿ. ಅವನ ಮೋಹ ಇಷ್ಟೇಂತ ಹೇಳಿಕೆ ಬೊತ್ತಾತ್. ತಾನ್ ಮಾಡುದು ಸಎ̈ರಿಯೋ ತೊಪ್ಪೋಂತೇಳ್ವ ವಿವೇಕವೇ ಅವಂಗೆ ಇಲ್ಲದಾತ್. ಸೀದಾ ಹೋಗಿ ಅದರ ಕಎ̈ಯ್ ಮೇಲೆ ಹಿಡ್ಕಂಡಎ̈ತ್. "ನೀ ಬಾ. ನಾವು ಹೋಯಿಂತ" ಹೇಳ್ತ್. ಸತ್ಯವತಿಗೆ ಇಂವ ಹೀಂಗೆ ಕರೀದು ಯಾಕೇಂತ ಗೊತ್ತಾತ್. ಹಿಂದೆ ಒಬ್ಬ ಮುದಿಯ ರುಸಿ ಬಾಳೆಲೆನ ಹಾಸಿ ಉಂಡ್ ಆದ ಮೇಲೆ ಬೀಸಿ ಇಟ್ಟಾಂಗೆ ಮಾಡಿ ಹೋತು. ಈ ಗಎ̈ಂಡ್ ಜಾತೀನೆ ಹೀಂಗೆ. ತುಂಬ ಮೋಸ. ಅವ್ಕೆ ಅವರ ಕೆಲ್ಸ ಆಕು ಅಷ್ಟೆ! ಇಷ್ಟೆಲ್ಲ ಯೋಚನೆ ಅದಿಕೆ, ಕಎ̈ಣ್ಣ್ ಮುಚ್ಚಿ ಬುಡುವಷ್ಟರ‍್ಲಿ ಮಿಂಚಿತ್. ಈ ದೊಡ್ಡಮೊಂಯಿಸಂಗೆ ಮೋರೆಗೆ ಹೊಎ̈ಡ್ದಾಂಗೆ ಹೇಳಿಕೆ ಆದ್‌ಲೆ. ದೊಡ್ಡೊವ್ಕೆ ಮೆಟ್ಟ್‌ಲಿ ಹೊಎ̈ಡ್ದರೂ, ಬಟ್ಟೆ ಸುತ್ತಿ ಹೊಡ್ಯೊಕೊಡ. ಹಾಂಗೆ ಪಜ್ಜ ನಾಚಿದ್ದಾಂಗೆ ಮಾಡ್ತ್. ಆಗ ಅದರ ಮೋರೆ ಕೆಂಪು ಕೆಂಪಾತ್. ನಂಗೆ ಯೋಜನ ಗಂಧೀತನನ ಕೊಟ್ಟರೂ ಅವನ ಎದೆಮುಟ್ಟ ಬೀಳುವ ಜೋಲು ಗಡ್ಡದ ನರೆ ಬಂದ ರೋಮದ ವಿಕಾರ ಒಂದು ಕಡೆ. ಅದರ್‌ಂದ ಬಾವ ಸಿಂಡ್ವಾಸನೆನೊಟ್ಟಿಗೆ ಅವನ ಬಾಯೆನ ನಾತ ಬೇರೆ! ವ್ಯಾಕ್! ನೆಸ್ಸಿರೆ ಈಗಎ̈ಳೂ ನಂಗೆ ಕಾರಿಕೆ ಬಂದದೆ. ಏನೋ ಅಂವ ಮುದಿ ಹಾರಂವ. ಅವೆಲ್ಲಿಯಾರ್ ಸಾಪಕೊಟ್ಟರೆ ಹಾಂಗೇ ನಡ್ದದೆ ಗಡ! ಹಾಂಗೆ ಉಪಾಯ

ಇಲ್ಲದೆ ತಡ್ಕಂಡೆ. ಇಂವಾದರೆ ಪರವಾ ಇಲ್ಲೆ. ಇನ್ನೂ ಯೌವನ ಉಟ್ಟು! ಪೋರ್ಲ ಜೇರೆ. ಹಾಂಗೆ ನಾಚಿಕೆ ಬೆರ್ಸಿದ ಮೆದು ಮಾತ್‌ಲಿ ಹೇಳ್ತ್ "ಬೇಕರೆ ಅಪ್ಪನೊಟ್ಟಿಗೆ ಕೇಳೀಂತ." ಕೇಳೀಂತ ಹೇಳುದರ ಹಿಞ್ಞ ಒತ್ತಿ ಹೇಳ್ತ್–ಅಂವ ಕೇಳಿಯೇ ತೀರೊಕೂಂತ ಮನ್‌ಸ್‌ನ ಒಳ ಅಭಿಪ್ರಾಯ ಗೊತ್ತಾಗುವ ಹಾಂಗೆ. ಗೂಡೆಗಳ ಸೂಕ್ಷ್ಮ ಬುದ್ಧಿನ ಮೆಚ್ಚೊಕು! ಅಲ್ಲಾ? ಶಂತನು ಗಂಗೆ ಬಂದೆ ಹಾಂಗೆ ಇದೂ ಕರ್ದ್ ಕೂಡ್ಲೆ ಬಾದೂಂತ ಗ್ರೈಸಿತ್. ಆದರೆ ಉಪಾಯ ಇಲ್ಲ. ಅದರ ಕೈ ಬುಟ್ಟೇತ್. ಹಾಂಗೆ ಹಿಂದೆ ಬಾತ್. ಕಾಡ್ ಗೂಡೆಗ ಆದರೂ ಎಷ್ಟ್ ಜೋರೊಳೊ! ಹೀಂಗೆ ನೆನ್ಸಿಕಣಂಡ್ ಹಿಂದೆ ಬಾತ್. ಆ ಗೂಡೆನ ಅಪ್ಪ ದಾಶರಾಜ. ಅಂವ ಶಂತನುಂದ ಎಷ್ಟೊ ಕಣಿಮ್ಮೆ ಅಂತಸ್ತ್‌ನಂವ. ಹಾಂಗೆ ಜಬರ್ದಸ್ತ್ ಮಾಡಿ ಕೊಡ್ದುಲೆಂತೇಳಿರೆ ಬಲಾತ್ಕಾರಲಿ ಎಳ್ಕಣಂಡ್ ಬಂದ್ ಮೊದುವೆ ಆಕಯ್ತ್. ಅದ್ಕೆ ಶಂತನುನ ಮನ್‌ಸ್ ಒಪ್ಪಿತ್‌ಲೆ ಚಂದ್ರವಂಶದ ಪ್ರಖ್ಯಾತ ರಾಜ ಮನೆತನದಣವು ಯೋಗ್ಯ ರೀತಿಲಿ ಪ್ರಜಾಪಾಲನೆ ಮಾಡೊಕು. ಬಲಾತ್ಕಾರ ಮಾಡಿ ಹೆಣ್ಣ್‌ಗಳ ಎಳ್ಕಣಂಡ್ ಬಾದು ನೀಚಬುದ್ಧಿ. ವಂಶದ ನಡಾವಳಿಗೆ ಕಳಂಕ ತಾಕೆ ಆಗಣೆದ್ ಹೀಂಗೆ ಯೋಚನೆ ಮಾಡಿ. ಕೆಲವು ಉಡುಗರೆನೊಟ್ಟಿಗೆ ಮಂತ್ರಿಗಳ ಹೆಣ್ಣ್ ಮಾತಿಗೆ ಕಳ್ಸಿತ್. ಮಂತ್ರಿಗ ಬಂದ್ ದಾಶರಾಜಂಗೆ ಶಂತನು ಕಳ್ಸಿದ ಉಡುಗರೆಗಳ ಒಪ್ಪ್‌ಸಿ. ತಾವು ಬಂದ ವಿಸಯನ ಹೇಳಿ ಚಂದ್ರವಂಶದ ಲೋಕ ವಿಖ್ಯಾತವಾದ ರಾಜವಂಶದೊಟ್ಟಿಗೆ ಸಂಬಂಧ ಬೆಳ್ಸುವ ಭಾಗ್ಯ ಎಲ್ಲೊಷ್ಟ್ ಸಿಕ್ಕಿಕಿ? ನಮ್ಮ ಮಹಾರಾಜನ ಮೊದುವೆ ಆದರೆ ನಿನ್ನ ಮಗ ಮಹಾರಾಣಿ ಆದೆ. ನೀ ಮಹಾರಾಜನ ಮಾಂವ ಆದಿಯ. ಇಂತ ಬಾಗ್ಯಯಾರಿಗೆ ಸಿಕ್ಕುದು? ನೀ ಏನ್ ಹೇಳಿಯಾಂತ ಕೇಳ್ರೊ.

ಅದ್ಕೆ ದಾಶರಾಜ ಹೇಳ್ತ್. "ನೀವು ಹೇಳ್ದು ಸಣಿ. ಆದರೆ ನಿಮ್ಮ ರಾಜಂಗೆ ಆಳ್ ಸಣಿರಿಯಾದ, ಬಾರಿ ಸುಂದರನೂ, ಪರಾಕ್ರಮವಂತನೂ, ಯುವರಾಜನಾಗಿ, ಪಟ್ಟ ಕಟ್ಟ್‌ಸಿ ಕಂಡವನೂ ಆದ ಒಬ್ಬ ಮಜ್ಜ ಉಟ್ಟೊಲೆ."

"ಹೌದು ಉಟ್ಟು. ಆಗಳೇ ಅಂವ ದಿಗ್ವಿಜಯ ಮಾಡಿ ಬೇರೆ ರಾಜ, ಮಹಾರಾಜರ್‌ಗಳನೆಲ್ಲ ಸೋಲ್ಸಿ ಬಂದುಟು. ಅಂತ ಪರಾಕ್ರಮಿ."

"ಒಂದು ವೇಳೆ ನನ್ನ ಮಗ ಶಂತನುನ ಮೊದುವೆ ಆಗಿ ಆದಿಕೆ ಗಣಂಡ್ ಕೂಸು ಹುಟ್ಟಿರೆ ಮುಂದೆನ ರಾಜ ಪಟ್ಟ ಅವಂಗೆ ಸಿಕ್ಕುದೋ?" ದಾಶರಾಜ ಕೊಕ್ಕೆ ಹಾಕಿತ್.

ಮಂತ್ರಿಗ ಹೇಳ್ರೊ. "ತಲೆಗೆ ಪಟ್ಟ ಅಲ್ಲದೆ ಕಾಲಿಗೆ ಪಟ್ಟ ಆದೊರ ಎಲ್ಲ್ಯಾರ್ ಕೇಳ್ರೊಳಣಿರಿಯಾ? ಹಿರಿಯ ಮಜ್ಜ, ಅಂತಾ ಜಗಜಟ್ಟಿಗ ಇರ್‌ಕನ ಮತ್ತೆನವಂಗೆ ಪಟ್ಟ ಆಕೆ ಸಾದ್ಯನೆ ಇಲ್ಲೆ".

ದಾಶರಾಜ ಹೇಳ್ತ್: "ನನ್ನ ಮಗಳ ಮಜ್ಜಂಗೆ, ಆ ಮೇಲೆ ಪರಂಪರೆಂದ ಅವರ ವಂಶದಣವ್ಕೇ ಪಟ್ಟ ಸಿಕ್ಕೊಕು. ನಿಮ್ಮ ಮಹಾರಾಜಣಿರ್ ಹಾಂಗೆ ಪರ್ಮಾಣ್ ಮಾಡುವೊಂತಾದರೆ ಮಾತ್ರ ನನ್ನ ಮಗಳ್ ಅವು ಮೊದುವೆ ಆಕೆ ಒಪ್ಪಿನೆ. ಇಲ್ಲರೆ ಆದುಲೆ" ಹೀಂಗೆ ಕಣಿಡ್ಡಿ ಮುದ್ದಾಂಗೆ ಹೇಳ್ತ್. ಮತ್ತೆ ಮಂತ್ರಿಗ ಮಾತಿಲ್ಲದೆ ಹೊರ್ಟ್ ಬಂದ್ ರಾಜಂಗೆ ಎಲ್ಲ ತಿಳ್ಸಿರೊ. ರಾಜ ಮೌನ ಆತ್. ಅಂದ್‌ಂದ ಅಂವ ಮೌನ ಮುರಿಯದೆ.

ಅಂತಃಪುರದೊಳಗೇ ಬಿದ್ಕೆಂಡ್ ಇತ್ತ್. ದಿನಂದ ದಿನಕೆ ಅವನ ಶರೀರ ಕ್ಷೀಣ ಆಕೆಂಡೇ ಹೋತು. ದೇವವ್ರತಂಗೆ ರಾಜನ ಅವಸ್ಥೆ ನೋಡಿ ಬೇಜಾರ್ ಆತ್. ಇದಿಕ್ಕೆ ಕಾರಣ ಏನ್‌ಂತ ಗೊತ್ತಾತ್‌ಲೆ. ಅಂವ ಎಲ್ಲ ಮಂತ್ರಿಗಳ ಸಭೆ ಕರ್ಸಿತ್.

“ನಮ್ಮ ಮಹಾರಾಜೆರಿಗೆ ಏನೋ ಮಾನಸಿಕ ಅಥವಾ ದೈಹಿಕ ಅನಾರೋಗ್ಯ ಉಂಟಾಗುಟು. ಎಂತ ಬೆಲೆ ಕೊಟ್ಟ್‌ದಾರ್ ನಾವು ಅದಿಕೆ ಪರಿಹಾರ ಕಂಡ್ ಹಿಡಿಯೊಕು. ನೀವು ನಂಗೆ ಸಾಯಮಾಡೊಕು. ನಮ್ಮ ಏಕಾಂತದ ಕೋಣೆಗೆ ನೀವು ಒಬ್ಬೊಬ್ಬನೆ ಬಂದ್ ನಿಮ್ಮ ನಿಮ್ಮ ಅಭಿಪ್ರಾಯಗಳ ನನ್ನೊಟ್ಟಿಗೆ ಮುಚ್ಚು ಮರೆಯಿಲ್ಲದೆ ಹೇಳೊಕು. ನಾಳೆ ಬೊಳ್ಪಿಗೆ ಮತ್ತೆ ಕಾಂಬೊನೊ” ಹೀಂಗೆ ಹೇಳಿ ಸಭೆನ ಮುಗ್ಸಿತ್.

ಮೊರ್ದಿನ ಬೊಳ್ಪಿಗೆ ದೇವವ್ರತ ಏಕಾಂತದ ಕೋಣೆಲಿ ಹೋಗಿ ಕುದ್ದೆತ್. ಮಂತ್ರಿಗ ಒಬ್ಬೊಬ್ಬನೆ ಬಂದ್ ಅವನ ಕಂಡೊ. ದಾಶರಾಜ ಹೇಳ್ದ ವಿಷಯನ ಎಲ್ಲ ಅಂವ ಹೇಳ್ದಾಂಗನೆ ಹೇಳ್ದೊ. ಎಲ್ಲೊವು ಹೇಳಿ ಹೋದ ಮೇಲೆ ದೇವವ್ರತ ತಾನೆ ವಿಷಯಗಳ ವಿಮರ್ಶೆ ಮಾಡಿಕೆಂಡ್ ಕುದ್ದೆತ್ ಒಟ್ಟು ಸಾರಾಂಶ ಇಷ್ಟ್. ದಾಶರಾಜ ಹೆಣ್ಣ್ ಕೊಡಿಕೆ ಒಪ್ಪಿತ್‌ಲೆ. ಏಕೆಂದರೆ ಪಟ್ಟಾಧಿಕಾರಿಯಾಗಿ ನಾ ಇರುದು ಒಂದೇ ಕಾರಣ. ಒಬ್ಬ ಸಾಮಾನ್ಯ ಪ್ರಜೆ ರಾಜನ ಧಿಕ್ಕರ್ಸಿ ಮಾತಾಡುವಷ್ಟ್ ಧೈರ್ಯ ಮಾಡ್ತಲೆ? ಇದ್‌ಕೆ ಪ್ರತೀಕಾರವಾಗಿ ನಮ್ಮ ಬಲ ತೋರ್ಸಿ ಆ ಗೂಡೆನ ಎಳ್ಕೆಂಡ್ ಹೋಗಿ ಮದುವೆ ಮಾಡಕೆಯ್ತ್. ಆದರೆ ಅದ್ ದೊಡ್ಡಸ್ತಿಕೆಗೆ ಹೇಳ್ದಿದಲ್ಲ. ಒಟ್ಟಾರೆ ಈ ತಡೆಗೆ ನಾನೇ ಕಾರ್ಣ. ಹಸ್ತಿನಾವತಿಗೆ ಪಟ್ಟಾಧಿಕಾರಿ ನಾ ಇರುದರಿಂದಾಗಿ ದಾಶರಾಜ ನನ್ನ ಅಪ್ಪಂಗೆ ತನ್ನ ಮಗಳ ಕೊಡಿಕೆ ಒಪ್ಪಿತ್‌ಲೆ. ನಾ ಇದ್ದಾಂಗೆ ರಾಜ್ಯ ಪಟ್ಟನ ಸತ್ಯವತಿಗೆ ಹುಟ್ಟುವ ಮಕ್ಕಂಗೆ ಕೊಡಿಕೆ, ಪ್ರಜೆಗ ತನ್ನ ಮೇಲೆ ಅಪವಾದ ಹೇಳುವೊಂತ ನಾಚಿಕೆಲಿ ಅಪ್ಪ ತಡ್ಕಂಡೆತ್. ಪರಿಣಾಮ, ಕಾಮಜ್ವಾಲೆಂದ ಬೆಂದ್ ಬಾಡ್ತ್. ಹೀಂಗೆ ಮುಂದ್ವರ್ದರೆ ಅಪ್ಪ ತುಂಬ ದಿನ ಒಳಿಯಕಿಲೆ. ಆಗ ಅಪ್ಪನ ಸಾವುಗೆ ನಾನೇ ಕಾರ್ಣ ಆಗಿ ನಾ ನರ್ಕಕೇ ಹೋಕಾದು. ಇದ್‌ಕೆ ನಾನೇ ಪರಿಯಾರ ಕಂಡ್ಕಣೆ. ಇಂದೇ ಆ ಗೂಡೆನ ಗೌರವ ಪೂರ್ವಕ ತಂದ್ ಅಪ್ಪಂಗೆ ಮದುವೆ ಮಾಡಿನೇಂತೇಳಿ ದೇವವ್ರತ ರಥನ ಹತ್ತಿಕೆಂಡ್ ದಾಶರಾಜನ ಮನೆಗೆ ಹೋತು. ಓ! ರಾಜಕುಮಾರ ಬಾತ್‌ಂತ ದಾಶರಾಜ ಭಾರಿ ಮರ್ಯಾದೆ ಮಾಡ್ತ್. ಮನ್ಸ್‌ನ ಒಳಗೊಳಗೆ ಹೆದ್‌ರಿಕೆನೂ ಇತ್ತ್. ಕಡೆಗೆ “ಇಷ್ಟ್ ದೂರ ಏನ್ ಬಂದೆರಿ. ನಾ ಮಾಡುವಂತ ಕೆಲ್ಸ ಏನಾರ್ ಇದ್ದರೆ ಅಪ್ಪಣೆ ಕೊಡಿ”ಂತ ಹೇಳ್ತ್.

ಆಗ ದೇವವ್ರತ ಹೇಳ್ತ್ : “ಅಜ್ಜಾ! ಕೇಳ್. ನಾ ನನ್ನ ಅಪ್ಪಂಗೆ ನಿನ್ನ ಮಗಳ ಮದುವೆ ಮಾಡಿಕೊಡೊಕುಂತ ಕೇಳುವ ಹೆಣ್ಣ್ ಮಾತಿಗೆ ಬಂದೊಳೆ. ನಮ್ಮ ಮಂತ್ರಿಗ ಬಂದವರೊಟ್ಟಿಗೆ ನೀ ಕೆಲವು ಶರ್ತಗಳ ಹಾಕಿದ ಗಡ! ಅವ್ಕೆ ಉತ್ತರ ಹೇಳಕಾಗವೆ ಹಿಂದೆ ಬಂದೋ. ಈಗ ನಾ ಬಂದೊಳೆ. ನಿಂಗೆ ಬೇಕಾದ ಉತ್ತರ ನಾ ಕೊಟ್ಟನೆ. ಒಂದನೆದಾಗಿ ನನ್ನ ಅಪ್ಪಂಗೆ ನಿನ್ನ ಮಗಳಿಂದ ಹುಟ್ಟುವ ಮಕ್ಕಂಗೆ ಹಸ್ತಿನಾವತಿನ ಪಟ್ಟಕ್ಕೆ ಅಧಿಕಾರ ಸಿಕ್ಕುದು. ನಂಗೆ ರಾಜ ಪಟ್ಟ ಖಂಡಿತವಾಗಿ ಬೇಡ”.

ಅದಿಕೆ ದಾಶರಾಜ ಹೇಳ್ತ್: "ನೀ ನಿಂಗೆ ರಾಜಪಟ್ಟ ಬೇಡಾಂತ್ಹೇಳಿ ಬುಟ್ಟು ಕೊಡುವಂತೇಳಿ ನಂಬೊನೊ. ಆದರೆ ನಿನ್ನ ಮಕ್ಕಳೋ ಮಕ್ಕಳ ಮಕ್ಕೊಳೋ ಮುಂದೆ ರಾಜಪಟ್ಟಕ್ಕೆ ನಾವು ಹಕ್ಕುದಾರ್ರು. ಅದ್ ನಾವ್ಗೇ ಸಿಕ್ಕೊಕುಂತ ಜಗಳಕೆ ಬಂದರೇನ್ ಗತಿ?"

ಇದರ ಕೇಳಿ ದೇವವ್ರತ ಹೇಳ್ತ್ "ಸೂರ್ಯ ಚಂದ್ರರ ಆಣೆ. ಎಂಟ್ ದಿಕ್ಕ್‌ನ ಆಳುವ ದಿಕ್ಪಾಲಕರ ಆಣೆ. ಬ್ರಹ್ಮ ವಿಷ್ಣು ರುದ್ರರ ಆಣೆ. ನಂಗೆ ಹಸ್ತಿನಾವತಿನ ಸಿಂಹಾಸನ ಬೇಡ. ಇಂದ್‌ಂದ ಮೇಲೆ ನಂಗೆ ಯಾವ ಹೆಣ್ಣ್ ಸೊಟ್ಟಿಗೆನೂ ದೈಹಿಕ ಸಂಪರ್ಕ ಆಕಿಲೆ ನಾ ಅಖಂಡ ಬ್ರಹ್ಮಚರ್ಯ ಪಾಲನೆ ಮಾಡುವೆ. ಅದ್ದರ್‌ಂದ ನಿನ್ನ ಮನಸ್‌ಲಿ ಯಾವ ಚಂಚಲನೂ ಇಲ್ಲದೆ ನಿನ್ನ ಮಗಳ ನನ್ನ ಅಪ್ಪಂಗೆ ಮದುವೆ ಮಾಡಿಕೊಡೊಕುಂತ ಹೇಳ್ತ್. ದಾಶರಾಜನೂ ಸಂತೋಸಂದ ಒಪ್ಪಿತ್. ಆಗ ದೇವವ್ರತ ಸತ್ಯವತಿನ ನೋಡಿ, "ಅಮ್ಮ! ಇಂದ್‌ಂದ ಮೇಲೆ ನೀ ನಂಗೆ ಮಾತೆ. ನಾ ನಿಂಗೆ ಮಜ್ಜ. ಅದ್ದರ್‌ಂದ ನೀ ದೆರ್ಯವಾಗಿ ರಥನ ಹತ್ತಿ ಕುದ್ದ್‌ರು. ನಾ ನಿನ್ನ ಹಸ್ತಿನಾವತಿಗೆ ಕರ್ಕೊಂಡ್ ಹೋನೆ. ಹೊರ್‌ಡ್. ಹೀಂಗೆ ಹೇಳ್‌ಕನ ಸತ್ಯವತಿ ಅದರ ಅಪ್ಪನ ಅಪ್ಪಣೆ ಪಡ್‌ದ್ ದೇವವ್ರತನ ರಥಲಿ ಹತ್ತಿ ಕುದ್ದೊತ್. ದೇವವ್ರತ ರಥಕ್ಕೆ ಒಂದು ಸುತ್ತ್ ಬಂದ್, ಕೈ ಮುಗ್‌ದ್ ಹತ್ತಿ ಕುದ್ದ್ ಕುದ್‌ರೆಗಳೊಳಗೆ ಚಾಟಿ ಮುಟ್ಟ್‌ಸಿ. ವೇಗವಾಗಿ ಹಸ್ತಿನಾವತಿ ಕಡೆಗೆ ಓಡ್‌ಸಿತ್. ದೇವವ್ರತನ ಶಪಥದ ಬಗ್ಗೆ ಕೇಳ್ದೊವೆಲ್ಲ" ಇದೆಂತಾ ಭೀಷ್ಮ ಶಪಥ!"ಂತ ಹೇಳಿಕೊಂಡ್ ಅವನ ಕೊಂಡಾಡಿಕೆ ಸುರುಮಾಡ್ದೊ. ಅಂದ್‌ಂದ ಅಂವಂಗೆ 'ಭೀಷ್ಮ'ಂತೇ ಹೆಸ್‌ರಾತ್.

ದೇವವ್ರತ ಸತ್ಯವತಿನ ಕರ್ಕೊಂಡ್ ಹೋಗಿ ಶಂತನು ರಾಜಂಗೆ ಒಪ್ಪುಸಿತ್. ಸತ್ಯವತಿನ ನೋಡ್‌ಕನ ಶಂತನುನ ಮೋರೆಲಿ ನಗೆ ಮಿಂಚಿತ್. ಮತ್ತೆ ಮಜ್ಜನೊಟ್ಟಿಗೆ ಕೇಳ್ತ್. "ನೀ ಹೇಂಗೆ ಇದರ ಅಪ್ಪನ ಒಪ್ಪ್‌ಸಿದ ಮಜ್ಜಂತ?" ದೇವವ್ರತ ಹೇಳ್ತ್. "ಅಪ್ಪ ನಂಗೆ ಇರುವ ಪಟ್ಟದ ಅಧಿಕಾರನ ಇನ್ನ್ ಈ ಚಿಕವನ ಹೊಟ್ಟೆಲಿ ಹುಟ್ಟುವ ಮಜ್ಜಂಗೆ ಬುಟ್ಟುಕೊಟ್ಟನೆ. ಆ ಮೇಲೆನೂ ಯಾವ ತೊಂದರೆ ಬಾರದ್ದಾಂಗಿರಿಕೆ ನಾ ಮದುವನೇ ಆಗದೆ ಹೆಣ್ಣ್‌ನ ಸಂಗ ಮಾಡದ ಅಖಂಡ ಬ್ರಹ್ಮಚಾರಿಯಾಗಿದ್ದನೇಂತ ಮಾತ್ ಕೊಟ್ಟ್ ಒಪ್ಪ್‌ಸಿದೇಪ್ಪ"ಂತ ಹೇಳ್ತ್. ಇದರ ಕೇಳಿ ಶಂತನುಗೆ ಭಾರಿ ದುಃಖ ಆತ್. "ಅಯ್ಯೋ ಮಜ್ಜ! ಎಂಥ ಕೆಲ್ಸ ಮಾಡಿ ಬುಟ್ಟೆ? ನನ್ನ ಸುಖಕ್ಕೆ ಬೇಕಾಗಿ ನಿನ್ನ ಜೀವನನೇ ಬೊಲಿಕೊಟ್ಟಾಂಗಾತಲೆ! ನಂಗೆ ಈ ಹೆಣ್ಣ್ ಬೇಡ. ನೀ ಅದರ ಹಿಂದಕೆ ಕರ್ಕೊಂಡ್ ಹೋಗಿ ಅದರ ಅಪ್ಪಂಗೇ ಒಪ್ಪ್‌ಸಿ ಬುಡು".

"ಅದ್ ಆಕಿಲೆ ಅಪ್ಪ, ಸರ್ವ ದೇವರ ಸಾಕ್ಷಿಯಾಗಿ ನಾ ಮಾಡ್ದ ಪ್ರತಿಜ್ಞೆ. ಇಂದ್ ಇದ್ ನಂಗೆ ಚಿಕವಂತಾದರೂ ನಂಗೆ ನನ್ನ ಹೆತ್ತವ್ವ ಗಂಗೆನ ಹಾಂಗೆ ಅಪ್ಪನೇಂತ ಹೇಳಿ ಸತ್ಯವತಿನ ಕರ್ದ್ ಶಂತನುನ ಹಕ್ಕಲೆ ನಿಲ್ಸಿ ಕುಲ ದೇವ್ರಿಗೆ ಕೈ ಮುಗ್‌ದ್, ಅದರ ಕೈನ ಶಂತನುನ ಕೈ ಮೇಲೆ ಇಸಿ, ಅವರಿಬ್ಬರ ಕಾಲಿಗೆ ಅಡ್ಡ ಬಿದ್ದ್ ಎದ್ದ್ ನಿತ್ತೊತ್. ಆಗ ಶಂತನು "ಮಜ್ಜ! ನಿಂಗೆ ನಾ ವರ ಕೊಟ್ಟನೆ ನೀ ಬಯ್ಸದೆ, ಮರಣ ನಿನ್ನ ಹಕ್ಕಲೆ ಬಾಕಿಲೆ.

ನೀ ಇಚ್ಛಾಮರಣಿಯಾಗಿರ್!"

ನೀ ಕೊಟ್ಟ ವರನ ಸಂತೋಸುಂದ ಸ್ವೀಕರಿಸಿನೆ ಅಪ್ಪಂತೇಳಿ ದೇವವ್ರತ ಅಲ್ಲಿಂದ ಹೋತು.

**ಮಕ್ಕ :**

"ತಾತ ! ಇದೆಂತ ವಿಚಿತ್ರ? ಅಪ್ಪ ಹೆಣ್ಣ್ ತಂದ್ ತನ್ನ ಮಕ್ಕಳಿಗೆ ಮೊದುವೆ ಮಾಡ್ಸುದು ಲೋಕಲಿ ಉಟ್ಟು. ಇದ್ ಮಜ್ಜ ಅಪ್ಪಂಗೆ ಮೊದುವೆ ಮಾಡ್ಸುದು ನಿಜವಾಗಿ ವಿಚಿತ್ರನೇ ಅಲ್ಲಾ?".

**ತಾತ :**

"ವಿಚಿತ್ರಂತ ಅಲ್ಲದಿದ್ದರೆ ಕತೆ ಹೇಂಗಾದೆ? ಭೀಷ್ಮ (ಇನ್ನ್ ಮುಂದೆ ಇದೇ ಹೆಸ್ರ್‌ಂದ ನಾವು ಅವನ ಕರಿಯೊನೊ) ಅಂಥ ಸತ್ವಶಾಲಿ."

**ಮಕ್ಕ :**

"ಮತ್ತೆ ಶಂತನು ಹೇಂಗಿತ್ತ್? ಕಾಮ ಪರವಶನಾದ ಅಂವ ಭಾರಿ ದುರ್ಬಲಂತ ಕಾಡದೆ ಅಲ್ಲ?

**ತಾತ :**

"ಕಾಮಂದಾಗಿ ದುರ್ಬಲರಾದೊವು ಈ ಮಹಾಭಾರತಲಿ ತುಂಬ ಜೆನ ಇದ್ದಾಂಗ ಕಂಡವೆ. ಉಪರಿಚರವಸುಂತೇಳವನ ಕತೆನ ಮುಂದೆನೆ ಕೇಳ್ಯೊಳಿ. ತನ್ನ ಹೆಣ್ಣ್‌ನ ನೆನ್ಪಿದ ಕೂಡ್ಲೆ ಅಂವಗೆ ವೀರ್ಯ ಸ್ಖಲನ ಆದು, ಅಂವ ಅದರ ಬಾಳೆಲಿ ಮುದ್ದೆ ಮಾಡಿ ಗಿಣಿನ ಕೈಲಿ ತನ್ನ ಹೆಣ್ಣ್‌ನಲ್ಲಿಗೆ ಕಳ್ಸುದು, ಅದರ ಗಿಡ್‌ಜ ಮೆಟ್ಟಿ ವೀರ್ಯ ಯಮುನಾ ನದಿಗೆ ಬೀಳುದು, ಅಲ್ಲಿ ಬಾಳೆಮೀನ್ ಅದರ ನುಂಗಿ ಅದ್ ಬೂಸ್‌ರಾದು, ಇದೆಲ್ಲ ಏನ್ ನಂಬುವಂತದೊ? ಇನ್ನೂ ಇಂತ ಸುಮಾರ್ ಕತೆಗ ಒಳೊ. ಭರದ್ವಾಜ ರುಷಿ ಹಳ್ಳದ ಕರೆಲಿ ಒಂದು ಅಪ್ಸರೆನ ನೋಡಿ ಆ ರುಷಿಗೂ ವೀರ್ಯಸ್ಖಲನೆ ಆದು ಅದರ ಕೈಲಿದ್ದ ಕಮಂಡಲುಲಿ ಸಂಗ್ರಹ ಮಾಡಿ ಇಸುದು, ಅದರ್‌ಂದ ಕೂಸು ಹುಟ್ಟುದು, ಆ ಕೂಸಿಗೆ ದ್ರೋಣ–ಕಮಂಡಲುಲಿ ಹುಟ್ಟಿದರ್‌ಂದಾಗಿ, ದ್ರೋಣಂತ ಹೆಸರ್ ಇಸುದು, ಹೀಂಗೇ ಇನ್ನ್ ಕೆಲೊವು ಕತೆಗ ಬಂದವೆ. ಇವೆಲ್ಲ ಈಗನ ವೈಜ್ಞಾನಿಕ ದೃಷ್ಟಿಂದ ನಂಬಿಕೆಬಾರದಂತ ವಿಷಯಗ. ಏಕೆಂತೇಳಿರೆ ಒಂದು ಜೀವೋತ್ಪತ್ತಿಯಾಕೊರೆ ಗಂಡ್‌ನ ವೀರ್ಯಾಣು ಹೆಣ್ಣ್‌ನ ಅಂಡ (ಮೊಟ್ಟೆ) ಇದರೊಟ್ಟಿಗೆ ಸಂಯೋಗ ಆಗಿಯೇ ತೀರೊಕು. ಈಗ ಬೆಂಕಿಪೆಟ್ಟಿಗೆನ ಕಡ್ಡಿನ ಆ ಪೆಟ್ಟಿಗೆನ ಕರೆಲಿ ಮೊದ್ದ್ ಇರುವಲ್ಲಿಗೆ ಗೀರಿರೆ ಬೆಂಕಿ ಎದ್ದದೆ ಹೌದೊ? ಇಂಗ್ಲೆಂಡ್ ಹಾಂಗೂ ಬೇರೆ ಯೂರೋಪುನ ರಾಜ್ಯಗಳಲಿ ಆ ಬೆರೀ ಕಡ್ಡಿನ ಬೇರೆ ಯಾದಾರ್ ವಸ್ತುಗೆ, ಉದಾಹರಣೆಗೆ ಬೂಟ್ಸ್‌ನ ಚರ್ಮದ ಭಾಗಕ್ಕೆ ಗೀರಿದೂ ಕಿಚ್ಚಿ ಹೊತ್ತಿಕಂಡದೆ. ಹಾಂಗೆ ಆ ಕಾಲಲಿ ಬೆರೀ ಗಂಡ್‌ನ ವೀರ್ಯಂದಲೇ ಮಕ್ಕ ಆತಿದ್ದೊನೋ ಏನೋ? ಯಾದಾರ್ ಜೀವಿ ಆ ವೀರ್ಯನ ನುಂಗಿದ ಮಾತ್ರಕ್ಕೆ ಗರ್ಭ ನಿತ್ತದಂತ ಹೇಳ್ದು ಶತ ಸುಳ್ಳು. ಗರ್ಭನಿಲ್ಲಿಕೆ ಅಂಡಾಶಯಾಂತ ಬೇರೇನೇ ಬೇಕ್ತ

ಸೃಷ್ಟಿ ಮಾಡಿಟು. ನೂಂಗುವ ವಸ್ತ್ ಜೀರ್ಣಾಂಗಕ್ಕೆ ಹೋಗಿ ಜೀರ್ಣ ಆಗುವಂತೆದ್. ಇನ್ನ್ ತುಂಬಾ ವಿವರ ಬೇಡಾಂತ ಕಂಡದೆ ಮಕ್ಕಳೆ. ಕೌರವರ ಹುಟ್ಟ್ನ ವಿಷಯ ಮುಂದೆ ಬಾಕೆ ಉಟ್ಟು. ಆಗ ಇನ್ನೂ ಹಜ್ಜ್ ವಿವರಗಳ ನೋಡೆಕ್."

**ಮಕ್ಕ :**

"ಮುಂದೆ ಶಂತನು ಹೇಂಗೆಲ್ಲ ಇತ್ತ್ಂತ ಹೇಳಿ ತಾತ !"

**ತಾತ :**

"ಅಂವ ಹೊಸ ಮೊದ್‌ಮಜನ ಹಾಂಗೆ ಕುಶೀಲೇ ಇತ್ತ್. ಎರ್ಡನೇ ಮೊದುವೆ ಆದೆಪ್ರಕೆಲ್ಲ ಎರ್ಡನೇ ಹೆಣ್ಣ್ನ ಮೇಲೆ ಬಾರಿ ಮೋಹ. ಹಾಂಗೆ ಇಂವನೂ ಇತ್ತ್."

"ಕಾಲಕ್ರಮೆಲಿ ಅವ್ರಕೆ ಚಿತ್ರಾಂಗದ, ವಿಚಿತ್ರವೀರ್ಯಂತೇಳ್ವ ಇಬ್ಬೂರು ಮಕ್ಕ ಹುಟ್ಟಿದೊ. ಬೆಳ್ದ್ ದೊಡ್ಡೊವಾದೊ. ಬಲ ಪರಾಕ್ರಮಲಿ ಗೆಟ್ಟಿಗರಾದೊ. ಈ ಸಮಿಯೆಲಿ ಶಂತನು ರಾಜ ಪರಲೋಕಕ್ಕೆ ಹೋತು. ಭೀಷ್ಮ ತಾನ್ ಹಿಂದೆ ಮಾಡ್ದ ಪ್ರತಿಜ್ಞೆಗನುಸಾರವಾಗಿ ಚಿತ್ರಾಂಗದ ಹಿರಿಯಂವ ಆದರ್‌ಂದ ಅಂವಂಗೆ ಪಟ್ಟಾಭಿಷೇಕ ಮಾಡಿ ರಾಜ್ಯಬಾರ ಮಾಡ್ಸಿತ್. ಭೀಷ್ಮನ ಬೆಂಬಲ ಅಂವಂಗಿದ್ದೆರ್‌ಂದ ಯಾವ ಬೇರೆ ರಾಜೆರಿಗೂ ಅಂವನೊಟ್ಟಿಗೆ ತಂಟೆ ತಕ್‌ರಾರ್ ಮಾಡಿಕೆ ಧೈರ್ಯ ಇಲ್ಲೆ. ಆದರೆ ಒಬ್ಬ ಗಂಧರ್ವ ಇತ್ತ್. ಅಂವನ ಹೆಸ್‌ರೂ ಚಿತ್ರಾಂಗದಂತ. ಅಂವ ದೇವ ಪಂಕ್ತಿಗೆ ಸೇರ್ದಂವ. ಈ ರಾಜಂಗೂ ಸನ್ನೆದೇ ಹೆಸ್‌ರುಟ್ಟೊಲೇಂತೇಳಿ ಅಂವಂಗ ಮತ್ಸರ ಆತ್. ಇಂವನ ಇರಿಕೆ ಬುಡಿಕೆ ಬೊತ್ತ್ಂತ ಅಂವಂಗ ಹುರುಡು. ಇಂವನ ಹೇಂಗಾರ್ ಮುಗ್ಸೊಕುಂತೇಳಿ ನೀ ಅಂತ ಶೂರ ಆದರೆ ನನ್ನೊಟ್ಟಿಗೆ ದ್ವಂದ್ವ ಯುದ್ಧಕ್ಕೆ ಬಾ. ನಿನ್ನ ಪೌರುಷನ ಅಲ್ಲಿ ತೋರ್ಸುಂತ ಪಂಥ ಹೂಡ್ತ್. ದ್ವಂದ್ವ ಯುದ್ಧಂತೇಳಿರೆ ಇಬ್ಬೊರೇ ಕಾದಾಡುದು. ಅಲ್ಲಿ ಮೂರ್ನೆವಂಗೆ ಪ್ರವೇಶ ಇಲ್ಲೆ. ಬೇರೆ ತರದ ಯುದ್ಧ ಆಗಿದ್ದರೆ ಭೀಷ್ಮನ ಬೆಂಬಲಂದಾಗಿ ಆ ಗಂಧರ್ವ ಕಚ್ಚೆ ಕೆಟ್ಟಿಕೆಂಡ್ ಓಡಕಾಯ್ತ್. ಈ ವಿಷಯನ ಈ ಚಿತ್ರಾಂಗದ, ಅಣ್ಣ ಭೀಷ್ಮನೊಟ್ಟಿಗೆ ಹೇಳದೇ ಗೆರ್ವಂದ ಹೋತು. ಹೋರಾಟೆಲಿ ಆ ಗಂಧರ್ವ ಏನೋ ಕುತಂತ್ರ ಮಾಡಿ ಇಂವನ ಕೊಂದ್ ಬುಟ್ಟೆತ್. ಇವ್ಕೆ ತುಂಬ ದುಃಖ ಆತ್ ಆದರೆ ಮಾಡುದೇನ್? ವಿಷಯ ಕೈ ಮೀರಿ ಹೋತು. ಹಾಂಗೆ ಇನ್ನೊಬ್ಬ ತಮ್ಮ ವಿಚಿತ್ರವೀರ್ಯಂಗೆ ಭೀಷ್ಮ ಪಟ್ಟ ಕೆಟ್ಟಿ, ರಾಜ್ಯಾಡಳಿತ ಮಾಡ್ಸಿತ್. ಹಜ್ಜ್ ಸಮಿಯ ಹೀಂಗೇ ಹೋತು. ಇಂವಂಗೆ ಯೌವನ ತುಂಬಿತ್. "ನಿನ್ನ ತಮ್ಮಂಗೆ ಮೊದುವೆ ಮಾಡ್ಸೊಕೋಲೇ ಭೀಷ್ಮಾಂತ" ಸತ್ಯವತಿ ಕೇಳ್ತ್. "ನಾನೂ ಅದನ್ನೇ ಆಲೋಚನೆ ಮಾಡಿಕೆಂಡೊಳೇ ಅಮ್ಮಾ. ಯಾದಾರ್ ರಾಜೆರ್ಗ ಅವರ ಮಕ್ಕೆಳಿಗೆ ಸ್ವಯಂವರನೇನಾರ್ ಏರ್ಪಾಡ್ ಮಾಡುವೆನೋಂತ ಕಾಯ್ತಾ ಒಳೆ. ನೋಡೊನೊ"ಂತ ಭೀಷ್ಮ ಉತ್ತರ ಕೊಟ್ಟೆತ್.

ಕೆಲೆವ್ರು ಸಮಿಯ ಕಳೆಳಿಯಕನ ಕಾಶಿರಾಜನ ಕನ್ಯೆಗೆಳಿಗೆ ಸ್ವಯಂವರ ನಡ್ದೇಂತ ಸುದ್ದಿಬಾತ್. ಆದರೆ ಹಸ್ತಿನಾವತಿಗೆ ಕಾಶಿರಾಜ ಆಮಂತ್ರಣ ಕೆಳ್ಸಿತ್‌ಲೆ. ಇದ್ ಅವಮಾನಾಂತ ಭೀಷ್ಮನ ಮನ್ಸಿಗಾತ್. ಸತ್ಯವತಿನ ಅಪ್ಪಣೆ ಕೇಳಿ ಭೀಷ್ಮ ಕಾಶಿಗೆ ಹೊಟರ್ತ್. ದೇಶದ

ಎಲ್ಲಾಕಡೇಂದೊಳೂ ತುಂಬ ರಾಜ ಕುಮಾರಠರ್ ಬಂದಿದ್ದೋ. ಮೂರು ಕನ್ಯೆಗ ಅಂಬೆ, ಅಂಬಿಕೆ, ಅಂಬಾಲಿಕೆಂತ ಅವರ ಹೆಸರ್. ಕೈಲಿ ಹೂ ಮಾಲೆ ಹಿಡ್ಕಠಂಡ್ ನಿತ್ಕಠಂಡ್ ಇದ್ದೊ. ಭೀಷ್ಮ ಒಳ್ಳೆ ಹೊಂತಕಾರಿ ಹುಡುಗ ಪರಾಕ್ರಮಿ. ಬಿಲ್ಲ್, ಬಾಣ ಹಿಡ್ಕಠಂಡ್ ಸಭಾಂಗಣದೊಳಗೆ ಬಾಕನ ಅಲ್ಲಿದ್ದವರ ಪರಿಜೀವ ರಠಟ್ಟತ್. ಭೀಷ್ಮ ಹೇಳ್ತ್, 'ನಾ ಈಗ ಕಾಶಿರಾಜನ ಕನ್ಯೆಯರ ನನ್ನ ರಥಠಲಿ ಕುದ್ದ್‌ರ್ಲಿಕಠಂಡ್ ಹಸ್ತಿನಾವತಿಗೆ ಹೋನೆ. ತಡಿವ ಶಕ್ತಿ ಇದ್ದಂತ ರಾಜಠರ್ ನನ್ನ ತಡಿಯಠಕ್‌ಂತ ಸಭೆಗೆ ಹೇಳಿ ಸ್ವಯಂವರದ ಕನ್ಯೆಯರ ನನ್ನ ರಥಠಲಿ ಹತ್ತಿ ಕುದ್ದ್‌ರೀಂತ ಹೇಳ್ತ್. ಹಾಂಗೆ ಅವು ಹತ್ತಿ ಕುದ್ದೊ. ಆಗ ಸಾಲ್ವಂತೇಳ್ವ ಒಬ್ಬ ರಾಜ ಅಂಬೆನ ಪ್ರೀತಿಸಿದಂವ ಭೀಷ್ಮನ ಎದ್‌ರ್ಲಿಕೆ ಬಾತ್. ಆದರೆ ಬೀಷ್ಮ ಅವನ ಒಂದೇ ಬಾಣಠಲಿ ಸೋಲ್ಸಿತ್. ಮತ್ತೆ ರಥಕ್ಕೆ ಹತ್ತಿ ಹಸ್ತಿನಾಪುರದತ್ತ ಹೊರ್ಟಠತ್.

ಹಸ್ತಿನಾವತಿಗೆ ಬಂದ್ ಅರಮನೆಗೆ ಸೇರಿ ಈ ಮೂರು ಹೆಣ್ಣ್ ಮಕ್ಕಳ ಸತ್ಯವತಿನ ವಶಕ್ಕೆ ಕೊಟ್ಟಠತ್. ಮತ್ತೆ ಎರ್ಡ್ ದಿನ ಕಠಳ್ದ್ ಒಂದು ಒಳ್ಳೆ ಮುಹೂರ್ತ ಇರುವ ದಿನ ನೋಡಿ ಆ ಮೂರು ಕನ್ಯೆಯರ್ನೂ ವಿಚಿತ್ರ ವೀರ್ಯಂಗೆ ಮೊದುವೆ ಮಾಡಿಕೆ ತಯಾರ್ ಮಾಡ್ತ್.

ಆಗ ಅಂಬೆ ಹೇಳ್ತ್. ನಾ ನಿನ್ನ ಅಲ್ಲದೆ ಬೇರೆ ಯಾರ್ನೂ ಮೊದುವೆ ಆಕಲ್ಲೆ. ಇಲ್ಲಿ ನೀ ಒಬ್ಬನೇ ನಿಜ ಕ್ಷತ್ರಿಯ. ವಿಚಿತ್ರವೀರ್ಯ ಮುಗ್ಧತಿನ ಮಜ್ಜ. ಅಂವ ಕ್ಷತ್ರಿಯ ಅಲ್ಲ. ಕ್ಷತ್ರಿಯ ಕನ್ಯೆಯಾವ ನಾ, ನಿನ್ನ ಅಲ್ಲದೆ ಅವನ ಖಂಡಿತ ಮೊದುವೆ ಆಕಿಲ್ಲೆ. ಸ್ವಯಂವರಠಲಿ ಎಲ್ಲರ ಸೋಲ್ಸಿ ನಮ್ಮ ತಂದಂವ ನೀನೆ ಅಲ್ಲೊಂತ ಹೇಳಿ ವಿಚಿತ್ರವೀರ್ಯನ ಮೊದುವೆ ಆಕೆ ಒಪ್ಪಿತೇಲೆ. ಆಗ ಒಳ್ಳೆ ಇಬ್ಬರ ವಿಚಿತ್ರವೀರ್ಯಂಗೆ ಮೊದುವೆ ಮಾಡ್ತಿ ಅಂಬೆಗೆ ಹೇಳ್ತ್, "ನೋಡು ಹೆಣ್ಣೆ! ನಾ ಸರ್ವ ದೇವ್ರ ಸಾಕ್ಷಿಲಿ ಜೀವನ ಇಡೀ ಬ್ರಹ್ಮಚಾರಿಯಾಗಿದ್ದನೇಂತ ಶಪಥಮಾಡಿಯೊಳೆ. ಬೇಕರೆ ನಮ್ಮಮ್ಮ ಸತ್ಯವತಿನ ಕೇಳಿ ನೋಡು. ಎಲ್ಲ ಹೆಣ್ಣ್‌ಗಠೂ ನಂಗೆ ನನ್ನ ಅಪ್ಪಂಗೆ ಸಮಾನ. ನಿನ್ನ ನಾ 'ಅಮ್ಮ'ಂತ ಕರಿಯಠಕ್; ಅತ್ತಿಗೆಂತ ಕರಿಯಠಕ್. ಅಲ್ಲದೆ 'ಏನ್‌ನೇ'ಂತ ಹೇಳಿಕೆ ಆಕಿಲ್ಲೆ, ನೀ ಸುಮ್ಮನೆ ಒತ್ತಾಯ ಮಾಡ್‌ಬೇಡ"ಂತ ಭೀಷ್ಮ ಹೇಳ್ತ್. "ಹಾಂಗಿದ್ದರೆ ನನ್ನ ಬುಟ್ಟ್ ಬರಕಠಯ್ತ್ ಅಗ ನಾ ಮೆಚ್ಚಿದ್ದ ರಾಜಂಗೆ ಮಾಲೆ ಹಾಕಿ ಮೊದುವೆ ಆತಿದ್ದೆ. ಅದರ್ನೂ ತಪ್ಸ್ಟ್. ಇಲ್ಲಿಗೆ ಕರ್ಕಠಂಡ್ ಬಂದ್, ಹೀಂಗೆ ನೋಡು ನೀರ್ಲಿ ಕೈ ಬುಟ್ಟರೆ ನಾ ಏನ್ ಮಾಡ್ದೊಂತ" ಅಂಬೆ ಅಳಿಕೆ ಸುರು ಮಾಡ್ತ್. ಆಗ ಭೀಷ್ಮ ಹೇಳ್ತ್: "ನೀ ಮೆಚ್ಚಿದ್ದ ರಾಜಯಾರ್? ಹೇಳ್. ಅಂವಂಗೆ ಸಕಲ ಮೊರ್ಯಾದೆಲಿ ನಿನ್ನ ಮೊದುವೆ ಮಾಡ್ಸಿನೆ ಹೇಳ್ ಯಾರದ್"?

ಅಂಬೆ : ಅಂವನೆ ಸಾಲ್ವರಾಜ ಸ್ವಯಂವರದಠಂದ್ ನಿನ್ನ ಎದ್‌ರ್ಲಿದಂವ.

ಭೀಷ್ಮ : ನೀ ಅಂದೇ ಹೇಳಿದ್ದರೆ ನಿನ್ನ ಅಲ್ಲಿಯೇ ಬುಟ್ಟಿದ್ದೆ. ಈಗಠೂ ದಾಸ ದಾಸಿಯರ ಸಮೇತ ಪೆಟ್ಟಿಗೆ ತುಂಬ ಚಿನ್ನ ವಸ್ತ್ರಾಭರಣಗಳ ಬಳುವಳಿ ಸಮೇತ ಕಳ್ಸಿ ಕೊಟ್ಟನೆ ಅಂವನ ಮೊದುವೆ ಆಗಿ ಸುಖಠಲಿ ಇರ್.

ಇಷ್ಟ್ ಹೇಳಿ ಭೀಷ್ಮ ನಾನಾ ತರದ ಚಿನ್ನ, ವಜ್ರ ವೈಡೂರ್ಯಗಳ ಜೊತೆ ಬಾಳುವ

ಆಭರಣಗಳ ಪೆಟ್ಟಿಗೆ ಪಟ್ಟೆ ಪೀತಾಂಬರಗ ತುಂಬಿದ ಇನ್ನೊಂದು ಪೆಟ್ಟಿಗೆ ಅಂಬೆನ ಮರ್ಯಾದೆಲಿ ಕರ್ಕೆಂಡ್ ಹೋಕೆ ಪಾಲಕಿ ಸಮೇತ ಕಳ್ಸಿ ಕೊಟ್ಟೆತ್.

ಅಂಬೆ ಸಾಲ್ವನೆಲ್ಲಿಗೆ ತುಂಬ ಆಸೆಂದ ಬಾತ್. ಆದರೆ ಸಾಲ್ವ ಅವರ ನಿರಾಕರ್ಸಿತ್ ನೀ ಈಗ ನಾಯಿ ಮುಟ್ಟಿದ ಮಡಿಕೆನಾಂಗೆ. ಭೀಷ್ಮನ ಅರಮನೆಲಿ ಕೆಲೆವು ದಿನ ಇದ್ದಂವ ಹಿಂದೆನೊವು ಹೇಳ್ದ ಮಾತೊಂದುಟ್ಟು.

ಪುಸ್ತಕಂ ವನಿತಾ ವಿತ್ತಂ ಪರಹಸ್ತಂ ಗತಂ ಗತಃ

ಅಥವಾ ಪುನರಾಯತಂ ಜೀರ್ಣ ಭ್ರಷ್ಟಾಚ ಖಂಡಶಃ

ಇವಲ್ಲವೆ. ಅಂದ್‌ನ ಯುದ್ಧೆಲಿ ಭೀಷ್ಮ ನನ್ನ ಓಡ್ಸಿತ್. ನಾನೂ ಹೆಣ್ಣಾವೆ. ಹೆಣ್ಣ ಇನ್ನೊಂದು ಹೆಣ್ಣ್‌ನೊಟ್ಟಿಗೆ ಹೇಂಗೆ ಬೆರೀದು?" ಒಮ್ಮೆ ಹೇಳ್. ನೀ ಬೇಕಾದಲ್ಲಿಗೆ ಹೋಗಿ ಹೇಂಗೆ ಬೇಕಾದರೂ ಇದ್ದ್‌ಕ. ನನ್ನ ಸುದ್ದಿಗೆ ಮಾತ್ರ ಬರ್ಬೇಡ" ಹೀಂಗೆ ಸಾಲ್ವ ಹೇಳ್ದರ ಕೇಳಿ ಅಂಬೆಗೆ ಭಾರಿ ದುಃಖ ಆತ್. ಸುಕ ಸುಮ್ಮನೆ ಅಬಲೆ ಆಗಿರುವ ನನ್ನ ಜೀವನೆಲಿ ಭೀಷ್ಮ ಆಟ ಆಡ್ತ್. ನಂಗೆ ಜೊದ್ಕೆ ಇಲ್ಲದ್ದಾಂಗೆ ಮಾಡ್ತ್. ಗಣ್ಮಕ್ಕಂತೇಳುವ ಅವರ ಬಲ ತೋರ್ಸುದು ನಮ್ಮಂತವರ ಮೇಲೆ. ಇಂತವರ ಸುಮ್ಮನೆ ಬುಡಿಕೆ ಆಗೆದ್ ಇಪ್ಪತ್ತೊಂದು ಸರ್ತಿ ಬೂಪ್ರದಕ್ಷಿಣೆ ಮಾಡಿ ಕ್ಷತ್ರಿಯರ ಕುಲನ ನಾಶಮಾಡಿಕೆ ಪರಶುರಾಮ ಮಾಡ್ದ ಪ್ರಯತ್ನೆನೂ ಫಲ ಕೊಟ್ಟೆತ್‌ಲೆ. ಇಂವ ಅಂವಂಗೆ ಶಿಷ್ಯ ಆಗಿ ಬಿಲ್ಲ್ ವಿದ್ಯೆ ಕೆಲ್ತಂವ ಗಡ. ಅಂವಂಗೇ ದೂರು ಕೊಟ್ಟರೆ ಅಂವ ಇಂವಂಗೆ ಬುದ್ಧಿ ಹೇಳುದು. ಇಲ್ಲದಿದ್ದರೆ ಯುದ್ಧ ಮಾಡಿ ಬುದ್ಧಿ ಕಲ್ಸುದು. ಹಾಂಗೆ ಅಂವನ ಆಶ್ರಮಕ್ಕೇ ಈಗ ಹೋನೆ. ಹೀಂಗೆ ನಿಶ್ಚಯ ಮಾಡಿ ಅಂಬೆ ಸೀದಾ ಪರುಶುರಾಮನ ಆಶ್ರಮಕೆ ಹೋತು. ಆಗ ಪರಶುರಾಮ ಯಜ್ಞ ಶಾಲೆಲಿ ಯಜ್ಞ ಕಾರ್ಯೆಲಿ ಇತ್ತ್. ಅವನ ಶಿಷ್ಯೆರ್ ಏನ್ ಬಂದದ್‌ಂತ ವಿಚಾರ್ಸಿದೊ. "ನಿಮ್ಮ ಗುರುಗಳೊಟ್ಟಿಗೆ ಒಂದು ಬಾರೀ ಅಗತ್ಯದ ವಿಚಾರನ ಮಾತಾಡಿಕೆ ಉಟ್ಟು. ಅದಿಕೆ ಅವರ ಕಾಣೊಕುಂತ" ಅಂಬೆ ಹೇಳ್ತ್. "ಹಾಂಗಾದರೆ ನೀವು ಈ ಗುಡಿಸಲ್‌ನೊಳಗೆ ಕುದ್ದ್‌ಕಣಿ ಅವು ಪೂಜೆಂದ ಎದ್ದ ಕೂಡ್ಲೆ ನಾವು ಅವ್ಕೆ ತಿಳ್ಸುವೆ. ಆಗ ನೀವ್ಗೆ ಅವರ ನೊಡದಿಕ್. ಈಗ ಈ ತಿಂಡಿ, ತೀರ್ಥನ ತಕಣಿ. ದೂರಂದ ನಡ್ಕೆಂಡ್ ಬೊಚ್ಚಿ ಬಂದೊಳೆರಿ"ಂತ ಶಿಷ್ಯೆರ್ ಉಪಚಾರ ಮಡ್ದೊ. ಅಂಬೆಗೆ ಕುಶಿ ಆತ್. ಗುರುಗಳ ಪೂಜಾಕಾರ್ಯ ಮುಗಿಯಕಾಕನ ಶಿಷ್ಯೆರ್ ಹೋಗಿ "ನಿಮ್ಮೊಟ್ಟಿಗೆ ಮಾತಾಡೊಕುಂತೇಳಿ ಒಂದು ಗೂಡೆ ಬಂದುಟುಂತ" ಹೇಳ್ದೊ. "ಅದರ ಒಳೆಗೆ ಕಳ್ಸಿ. ಆ ಮೇಲೆ ಮದ್ಯೆಲಿ ಯಾರಾದ್ ಬಂದ್ ತೊಂದರೆ ಕೊಡಿಕೆ ಆಗೆದ್‌ಂತ" ಅಪ್ಪಣೆ ಕೊಟ್ಟೊ.

ಅಂಬೆ ಒಳೆಗೆ ಬಂದದ್ ರುಷಿಗೆ ಸಾಷ್ಟಾಂಗ ನಮಸ್ಕಾರ ಮಾಡ್ತ್. "ಸೌಭಾಗ್ಯವತೀ ಭವ"ಂತ ರುಷಿ ಆಶೀರ್ವಾದ ಮಾಡ್ತ್. "ನಿಮ್ಮ ಮಾತ್ ಸುಳ್ಳಾವ ಕಾಲ ಬಂದುಟು ಆಚಾರ್ಯರೇಂತ ಅಂಬೆ ಹೇಳ್ತ್. "ಏನ್ ನಿನ್ನ ಮಾತ್‌ನ ಅರ್ಥ?" ಪರಶುರಾಮಂಗೆ ಪಜ್ಜ ಕೋಪಬಾತ್. "ನಾ ಕಾಶಿರಾಜನ ಸುರೂನ ಮಗ. ನಂಗೆ ಇಬ್ಬೊರು ತಂಗೆಕ". ನಮ್ಮ ಅಪ್ಪ ಸ್ವಯಂವರ ಏರ್ಪಾಡ್ ಮಾಡ್ದೊ ಎಲ್ಲ ರಾಜಕುಮಾರರ ಕರ್ಸಿರೂ ಹಸ್ತಿನಾವತಿಗೆ

ಆಮಂತ್ರಣ ಕಳ್ಸಿತ್‌ಲೇ. ಕಾರಣ ಅಲ್ಲಿ ಶುದ್ಧ ಕ್ಷತ್ರಿಯರಾಗಿ ಹುಟ್ಟಿದ ರಾಜಕುಮಾರರ್ ಇಲ್ಲೆ. ಇದ್ದವನೂ ಸತ್ತು ಹೋದ ಅವನ ಅಣ್ಣ ಇಬ್ರೊರೋ ಮುಗ್ಯತಿಗೆ ಹುಟ್ಟಿದ ಮಕ್ಕ. ಅವರ ಅಯ್ಯಿಗೂ, ಮೊದುವೆಗೆ ಮುಂದೆನೇ ಒಂದು ಕೂಸು ಆಗುಟು ಗಡ. ಹೀಂಗಿರ್‌ಕನ ಭೀಷ್ಮ, ಕರಿಯದಿದ್ದರೂ ಜಿಲ್ಲೆ ಬಾಣಗಳ ಹಿಡ್‌ಕಂಡ್ ಸ್ವಯಂವರ ಮಂಟಪದೊಳಗೆ ಬಂದ್ ಅಲ್ಲಿದ್ದ ರಾಜಕುಮಾರರ ಎಲ್ಲ ಹೆದ್‌ರ್ಸಿ, ನಮ್ಮ ರಥಲಿ ಕುದ್ದ್‌ರಿಕೆ ಹೇಳ್ತ್, ನಾವು ಹೆದ್‌ರಿ ಹತ್ತಿ ಕುದ್ದೊ ನನ್ನ ಮನ್ಸಲಿ ಇಂವನೇ ನಮ್ಮ ಮೊದುವೆ ಆದೋಂತ ಇತ್ತ್. ಆಗ ನನ್ನ ಹಿಂದೆನೇ ಪ್ರೀತಿ ಮಾಡ್ದ ಸಾಲ್ವರಾಜ ಭೀಷ್ಮಂಗೆ ಎದ್‌ರಾತ್. ಪಾಪ! ಅಂವಂಗ ಭೀಷ್ಮನ ಗೆಲ್ಲಿಕೆ ಆಗದೆ ಸೋತಲತ್. ಭೀಷ್ಮ ನಮ್ಮ ಹಸ್ತನಾವತಿಗೆ ಕರ್ಕಂಡ್ ಬಾತ್. ಅಂವನ ಚಿಕವನ ಹಕ್ಕಲೆ ನಮ್ಮ ಬುಟ್ಟಲತ್. ಮತ್ತೆರ್ಡ್ ದಿನ ಕಳ್ದ್ ಜೋಯಿಸರ ಕರ್ಸಿ ಮೊದುವೆಗೆ ಏರ್ಪಾಡು ಮಾಡಿಕಂಡ್ ಇತ್ತ್. ಇಂವನೇ ಮೊದುವೆ ಆದೆ ಏನೋಂತ ನಾ ನೆನ್ಸಿ ಕಂಡ್ ಇದ್ದೆ. ಆದರೆ ಅಂವ ಮೊದುವೆ ಮಾಡಿಕೆ ಹೊರ್ಟದ್. ಅವನ ಒಣ್ಕಲ ತಮ್ಮ ವಿಚಿತ್ರವೀರ್ಯನಂಗೆ. ನನ್ನ ನೀನೇ ಮೊದುವೆ ಆಕೂಂತ ನಾ ಹಟ ಹಿಡ್ದೆ. ಅದ್ಕೆ ಅಂವ ಉದ್ದುದ್ದ ಮಾತಾಡ್ತ್. 'ನಾ ಅಖಂಡ ಬ್ರಹ್ಮಚಾರಿ ಸರ್ವದೇವ್ರ ಸಾಕ್ಷಿಲಿ ನಾ ಪ್ರತಿಜ್ಞೆ ಮಾಡಿಯೊಳೆ' ಹಾಂಗೆ ಹೀಂಗೇಂತ ನನ್ನ ಬಾಯಿ ಮುಚ್ಚಿಸಿತ್. ನನ್ನ ಹಿಂದೆ ಪ್ರೀತಿ ಮಾಡಿ ನಂಗೆ ಉಂಗಿಲ ಹಾಕಿದ್ದ ಸಾಲ್ವನಲ್ಲಿಗೆ ಹೋಗಿ ನನ್ನ ಮೊದುವೆ ಆಕುಂತೇಳಿರೆ "ಭೀಷ್ಮಂದ ನಾ ಸೋತದರ್‌ಂದ ನಾನೂ ಹೆಣ್ಣ್‌ನ ಹಾಂಗೇ ಆದೆ. ಆದ್ದರ್‌ಂದ ಒಂದು ಹೆಣ್ಣ್ ಇನ್ನೊಂದು ಹೆಣ್ಣ್‌ನ ಮೊದುವೆ ಆದು ಎಲ್ಲ್ಯಾರ್ ಉಟ್ಟೊ? ಹಾಂಗೆ ನೀ ಎಲ್ಲಿಗಾರ್ ಹೋಗು ಏನ್ ಬೇಕಾರೂ ಮಾಡ್ ನನ್ನ ಬುಟ್ಟು ಬುಡುಂತ" ಹೇಳ್ತ್. ಹೀಂಗೆ ಈ ಭೀಷ್ಮಂದಾಗಿ ನನ್ನ ಬಾಳ್ ಹಾಳಾತ್. ಅಂವ ನಿಮ್ಮ ಶಿಷ್ಯ ಗಡ! ನಿಮ್ಮ ಮಾತ್‌ನ ಅಂವ ಮೀರಿಕಿಲ್ಲೆಂತ ನಂಬಿ ನಿಮ್ಮ ಹಕ್ಕಲೆ ಬಂದೊಳೆ. ನೀವೇ ಅವನೊಟ್ಟಿಗೆ ನನ್ನ ಮೊದುವೆ ಮಾಡ್ಸೊಕು. ನೀವು ದೊಡ್ಡೊವು. ಅಲ್ಲದಿದ್ದರೆ ಹಣ್ಣ್ ಕಿಚ್ಚಿನ ತೆಗ್‌ದ್ ಕೊಟ್ಟರೆ ನನ್ನ ಬಾಳ್‌ನ ಮುಗ್ಸಿಕಣೆ. ಎಲ್ಲ ನೀವ್ಗೇ ಸೇರ್ದ್‌ಂತ ಬಳಬಳ ಕಣ್ಣೀರ್ ಹಾಕಿ ಅತ್ತಲತ್.

ಅವರ ಅಳ್ಗಲ್ ನೋಡಿ ಪರಶುರಾಮಂಗೆ ತುಂಬ ಬೇಜರಾತ್ ನೀ ಅಳ್ಬೆಡ ಮಗಳೆ! ನಾ ಅವನೊಟ್ಟಿಗೆ ಹೇಳ್ವೆ. ಹಸುರು ಚಪ್ಪರ. ತೋರಣ ಕಟ್ಟಿ ಅಂಬೆನ ಮೊದುವೆ ಆಗ್. ಅದಿಕೆ ಒಪ್ಪದಿದ್ದರೆ, ಯುದ್ಧ ಕಳಕ್ಕೆ ಬಂದ್ ನನ್ನೊಟ್ಟಿಗೆ ಹೋರಾಡೊಕು. ಈ ಎರಡ್ರಲ್ಲಿ ಒಂದು ದಾರಿ ಅಲ್ಲದೆ ಬೇರೆ ಅವಂಗಿಲ್ಲೆ ದಾರಿ. ಬಾ ರಥಲಿ ನಾವು ಹೋಯಿ ಹಸ್ತಿನಾವತಿಗೆ ಇಂದೇ. ಹೀಂಗೆ ಹೇಳಿ ಪರಶುರಾಮ ರಥಕೆ ಹತ್ತಿ ಅಂಬೆನ ಬಾ ಹತ್ತಿಕ ರಥಕೇಂತ ಹೇಳ್ತ್. ಅಂಬೆನೂ ಬಂದ್ ಕುದ್ದಲತ್.

ಹಸ್ತಿನಾವತಿಗೆ ಹಕ್ಕಲೆ ಬಾಕನ "ತನ್ನ ಗುರುಗ ಬಂದವೇಂತ ಭೀಷ್ಮಂಗೆ ಗೊತ್ತಾತ್. ಭಾರಿ ಸಂಭ್ರಮಂದ, ಎದ್‌ರ್ ಬಂದ್, ಚಿನ್ನದ ಗಿಂಡಿಲಿ ಅವರ ಕೈ ಮೋರೆ ತೊಳಿಯಿಕೆ ನೀರ್ ಕೊಟ್ಟಲತ್. ಚೆಕ್ಕೀ ಚೊಂಬುನ ನೀರ್‌ಂದ ತಾನೇ ಅವರ ಪಾದ ತೊಳ್ತ್.

"ಗುರುಗಳೇ! ನೀವು ಬಂದದ್ ನಂಗೆ ತುಂಬ ಸಂತೋಷಾತ್. ನಂಗೆ ಏನ್

ಅಪ್ಪಣೆ ಕೊಟ್ಟರೆ?" ಭೀಷ್ಮ ಕೇಳ್ತ್.

"ನಾ ಕೊಡುವ ಅಪ್ಪಣೆ ಎರ್ಡ್ ಉಟ್ಟು. ಒಂದು ಈ ನನ್ನ ಮಗಳಾಂಗಿರುವ ಈ ಗೂಡೆನ ಚಪ್ಪರ ಪಚ್ಚೆ ತೋರಣ ಎಲ್ಲ ಕಟ್ಟಿ ನೀ ಮೊದುವೆ ಆಕು. ಅದಲ್ಲದಿದ್ದರೆ ಎರ್ಡನೆದಾಗಿ ಇವು ನಂಗೆ ವಿದ್ಯೆ ಕಲ್ಸಿವ ಗುರುಗಂತೇಳ್ಳ ದಾಕ್ಷಿಣ್ಯ ಇಲ್ಲದೆ ಬಿಲ್ಲ್-ಬಾಣ ಹಿಡ್ದ್ ಯುದ್ಧ ಮಾಡೊಕು. ಯಾದ್ ನಿಂಗೆ ಇಷ್ಟ ಆದೆ. ಅದರ ನೀನೆ ಆರ್ಸಿಕ".

"ಇದೇನ್ ಗುರುಗಳೇ! ನಾ ಆಜೀವ ಬ್ರಹ್ಮಚಾರಿಯಾಗಿದ್ದನೆಂತ ಸರ್ವ ದೇವ್ರುಗಳ ಸಾಕ್ಷಿಲಿ ಪ್ರತಿಜ್ಞೆ ಮಾಡ್ಯೊಳೆಂತ ಮೂರು ಲೋಕಕೂ ಗೊತ್ತುಟು. ಹೀಂಗೆ ಎಲ್ಲ ಗೊತ್ತಿದ್ದ ಹಿರಿಯೊವು ನೀವು ಆಗದ ಕಾರ್ಯಕೆ ನಂಗೆ ಪ್ರೇರಣೆ ಕೊಡುದು ಎಷ್ಟ್ ಸರಿ ತಿಳ್ದೊವೆ ನನ್ನ ಪಾಪಕಾರ್ಯಕೆ ದೂಡಕೆ?" ಭೀಷ್ಮ ಕೇಳ್ತ್.

"ನಾ ಹೇಳ್ದ ಆ ಎರ್ಡ್ ವಿಷಯಗ ಅಲ್ಲದೆ ಬೇರೆ ಮಾತಿಲ್ಲೆ. ನಿಂಗೆ ನಿನ್ನ ಪ್ರತಿಜ್ಞೆನ ಮೇಲ್ಂತಾದರೆ, ನನ್ನೊಟ್ಟಿಗೆ ಯುದ್ಧ ಮಾಡ್." ಪರಶುರಾಮನ ದೃಢಮಾತ್.

"ಹಾಂಗಾದರೆ ಇದೇ ಗುರುಗಳ ಅಪ್ಪಣೆಂತೇಳಿ ಯುದ್ಧಕ್ಕೆ ತಯಾರಾನೆ. ಆ ಗುರುಗಳ ಆಶೀರ್ವಾದಂದ ನಂಗೆ ಜಯ ಆಗಲಿ" ಎಲ್ಲಿ ಯುದ್ಧ ಮಾಡ್ದೊಂದ್ ತಿಳ್ಸಿಂತೇಳಿ" ಭೀಷ್ಮ ಗುರುಗೆ ಕೈ ಮುಗ್ತ್!

"ಕುರುಕ್ಷೇತ್ರಲಿ ಯುದ್ಧ. ಅಲ್ಲಿಗೆ ಬಂದ್ ತಯಾರಾಗ್" ಗುರು ಹೇಳ್ತ್.

ನಿಶ್ಚಿತ ಸಮಿಯಲಿ ಇಬ್ರೂರೂ ಯುದ್ಧರಂಗ ಸೇರ್ದೊ. ಅಂಬೆನೂ ಒಂದು ಎತ್ತರದ ಜಾಗೆಲಿ ನಿತ್ತ್‌ಕಂಡ್ ನೋಡ್ತಿತ್. ಭೀಷ್ಮ ಗುರುಗೆ ನೆಲಮುಟ್ಟ ನಮಸ್ಕಾರ ಮಾಡಿ ಮುರ್ ಬಾಣಗಳ ಬಿಲ್ಲಿಗೆ ಹೂಡಿ ಅವು ಸರಿಯಾಗಿ ಪರಶುರಾಮನ ಪಾದಕೆ ಮೆತ್ತಂಗೆ ಮುಟ್ಟುವ ಹಾಂಗೆ ಪ್ರಯೋಗ ಮಾಡ್ತ್. ಗುರುಗೆ ಮೆಚ್ಚಿಕೆ ಆತ್. ಅದಿಕೆ ಸರಿಯಾಗಿ ಅಂವನೂ ಮೂರು ಬಾಣಂಗಳ ಭೀಷ್ಮನ ತಲೆಂದ ಮೇಲೆ ಹಾರಿ ಹೋವಾಂಗೆ ಪ್ರಯೋಗ ಮಾಡ್ತ್. ಹಿಂದೆನ ಕಾಲಲಿ ಗುರು-ಶಿಷ್ಯರ ಸಂಬಂಧ ಸೂಕ್ಷ್ಮವಾಗಿತ್. ಗುರುನೊಟ್ಟಿಗೆ ಯುದ್ಧ ಮಾಡುವ ಸಂದರ್ಭ ಬಾತಿತ್. ಅದ್‌ಕೆ ಮುಂದೆನೇ ಗುರುಗ ಶಿಷ್ಯರಿಗೆ ಹೇಳ್‌ತಿದ್ದೊ. ಒಂದು ವೇಳೆ ನಾವು ನಾವೇ ಯುದ್ಧ ಮಾಡುವ ಸಂದರ್ಭ ಬಂದರೇ ನೀ ನಿನ್ನ ಸರ್ವ ಶಕ್ತಿನ ಉಪಯೋಗ್ಸಿ ಯುದ್ಧ ಮಾಡೊಕು ಹೊರ್ತು ನಾ ಗುರುಂತೇಳಿ ಹಗ್‌ರ ಯುದ್ಧ ಮಾಡಿಕೆ ಆಗಲ್ದ್‌ಂತ. ಆದರೆ ಯುದ್ಧ ಸುರು ಮಾಡುವ ಕಾಲಲಿ, ಶಿಷ್ಯ ಆದಂವ ಗುರುಗೆ ವಿನಯ ತೋರ್ಸುದು, ಗುರು ಶಿಷ್ಯ ಆದಂವಂಗೆ ವಾತ್ಸಲ್ಯ ತೋರ್ಸುದು ನಡಿಯತಿತ್. ಇಲ್ಲಿ ನಡ್ದದೂ ಅದೇ.

ಸುರು ಸುರುಗೆ ಸಾಧಾರ್ಣ ಬಾಣಂಗಳ ಉಪಯೋಗ ಮಾಡ್ದೊ. ಒಬ್ಬ ಬುಟ್ಟ ಬಾಣನ ಇನ್ನೊಬ್ಬ ನಡು ದಾರಿಲೆ ಅದರ ಚಟಲ್-ಪಿಟಲ್‌ಂತ್ ತುಂಡು ಮಾಡ್ದೊ. ಅವೆಲ್ಲ ಮುಗ್‌ದ ಮೇಲೆ ದೊಡ್ಡ ದೊಡ್ಡ ಮಂತ್ರಾಸ್ತ್ರಗಳ ಬುಡಿಕೆ ಸುರುಮಾಡ್ದೊ. ಒಬ್ಬರ ಗುಟ್ಟು ಒಬ್ಬಂಗೆ ಗೊತ್ತುಟ್ಟು. ಹಾಂಗಾಗಿ ಸೋಲುಗೆಲು ಯಾರಿಗೂ ಕಂಡತ್‌ಲೆ. ಭೀಷ್ಮ ಹೇಂಗೂ ಹುಡ್ಗ, ಬಲಶಾಲಿ. ಎಂತ ಶ್ರಮನ್ನೂ ತಾಂಗಿ ಕಂಬ ತ್ರಾಣ ಇದ್ದಂವ.

ಪರಶುರಾಮ ತ್ರಾಣ ಕುಂದಿದಂಪ. ಅಜ್ಜ, ಆದರೂ ಬುಟ್ಟೇತ್‌ಲೆ. ಹೀಂಗೆ ಇವರ ಹೋರಾಟ ಏಳ್ ದಿನಗಳವರೆಗೆ ನಡ್ತ್. ಪರಶುರಾಮಂಗೆ ಉಸುರು ಕಟ್ಟಿಕಣಂಡ್ ಬಾಕ ಸುರಾತ್. ಬಿಲ್ಲ್‌ನ ಎತ್ತಿ ಹಿಡಿಯಕೂ ತ್ರಾಣ ಇಲ್ಲದೆ ಕುಸ್ದ್ ಬೀತ್. ಇಷ್ಟಾಕನ ಭೀಷ್ಮ ತನ್ನ ಬಿಲ್ಲ್ ಬಾಣಗಳ ಪರ್ಕೆ ಇಟ್ಟ್, ಗುರುನ ಪಕ್ಕಲೆ ಓಡಿ ಬಾತ್. ಸೇವಕರ ಕರ್ದ್, ತೊಂಪಾದ ನೀರ್‌ನ ಗುರುಗೆ ಕುಡ್ಸಿ, ಹಣೆಗೆ ಕಣ್ಣ್‌ಗೆ ಎಲ್ಲ ನೀರ್ ಹನ್ಸಿಸಿ, ಉದ್ಸಿತ್. ಪರಶುರಾಮಂಗೆ ಮಾತಾಡಿಕೆ ಕೂಡ ಆತಿತ್ಲೆ. ಭೀಷ್ಮ ಗಾಳಿ ಬೀಸಿಕಣಂಡ್ ಕುದ್ದೇತ್. ಈ ವಿದ್ಯಮಾನನ ಅಂಬೆ ನೋಡಿಕಣಂಡ್ ಇತ್ತ್. ಈ ಅಜ್ಜ ಹಾರಂವಂದ ನನ್ನ ಕೆಲ್ಸ ಏನೂ ಆವ ಹಾಂಗೆ ಕಾಂಬೊದ್‌ಲೆಂತ ಹೇಳಿ ಭೀಷ್ಮನ ಮೇಲೆ ಭಾರಿ ಕೋಪ ಬಾತ್. ಹಾಂಗೆ ಕೋಪಲಿ, ಮುಂದೆನ ಜಲ್ಮಲಿ, ನಿನ್ನ ಕೊಲ್ಲಿಕೆ ನಾನೇ ಕಾರಣ ಆಗುವ ಹಾಂಗೆ ಆಗಲೀಂತೇಳಿ ಒಂದು ಕಿಚ್ಚಿನ ರಾಸಿ ಮಾಡಿ ಅದಿಕೆ ಹಾರಿ ಬಿದ್ದ್ ಸತ್ತೇತ್. ಅದ್ ದ್ರುಪದ ರಾಜಂಗೆ ಸುರುಗೆ ಮಗಳಾಗಿ ಹುಟ್ಟಿರೂ, ಆ ಮೇಲೆ ಒಬ್ಬ ದೇವತೆನ ಕರುಣೆಂದ ಗಣಂಡಾಗಿ ಬೆಳ್ತ್. ಅಂವಂಗೆ ಶಿಖಣಂಡಿಂತ ಹೆಸ್‌ರಾತ್.

ವಿಚಿತ್ರವೀರ್ಯ ಎರ್ಡ್ ಗೂಡೆಗಳ ಮೊದುವೆ ಆದ ಮೇಲೆ ಭಾರಿ ಕುಸಿಂದ ಇತ್ತ್. ಮಿತಿಮೀರ್ದ ಸ್ತ್ರೀ ಲೋಲುಪತೆಂದಾಗಿ ಅವನ ಆರೋಗ್ಯ ಹಾಳಾತ್. ಅಂವಂಗೆ ಮುಂದೇನೇ ಆರೋಗ್ಯ ಸರಿ ಇತ್ತ್‌ಲೆ. ಈಗ ಕೇಳುದೇ ಬೇಡ. ಜೋರಾದ ಕ್ಷಯ ರೋಗಕ್ಕೆ ಸೇರಿ, ಅಂವ ಸತ್ತ್ ಹೋತು. ಅಂವಂಗೆ ಮಕ್ಕಳೂ ಹುಟ್ಟಿತ್‌ಲೆ. ಅವನ ಅಯ್ಯನ ಅಪ್ಪ ದಾಶರಾಜ ತನ್ನ ಮಗಳ ಸಂತಾನದವ್ರುಕೇ ಹಸ್ತಿನಾವತಿನ ಪಟ್ಟ ಸಿಕ್ಕೊಕುಂತೇಳ್ದ ದುರಾಸೆಲಿ ಹಟ ಹಿಡ್ದ್ ಭೀಷ್ಮಂಗೆ ಮೊದುವೆ, ಸೊಂಸಾರಂತೇಳ್ದ ಇಲ್ಲದಾಂಗೆ ಮಾಡ್ದ ಪಾಪಂದ ಈಗ ಸಂತತಿಯೇ ಇಲ್ಲದೆ ಹೋವ ಅವಸ್ಥೆ ಬಾತ್. ಸತ್ಯವತಿ ಇದರೆಲ್ಲ ನೆನ್ಸಿ ನೋಡಿ ಬಾರಿ ಪಶ್ಚಾತ್ತಾಪ ಪಟ್ಟೇತ್ ಮಜ್ಜ ತೀರಿ ಹೋದ ಬೇಜಾರ ಒಂದು. ರಾಜ್ಯಕ್ಕೆ ಉತ್ತರಾಧಿಕಾರಿಗಳೇ ಇಲ್ಲದೆ ಆದ್ದ್ ಇನ್ನೊಂದು. ಹೀಂಗೆ ಆಕೆ. ಮೂಲಕಾರಣ ನಾನೇ! ನನ್ನಂದಾಗಿ ನನ್ನ ಅಪ್ಪ ದುರಾಸೆನ ತೋರ್ಸಿದರ್‌ಂದ, ಜಗಜಟ್ಟಿಯಾದ ಭೀಷ್ಮ, ಇದ್ದೂ ಇಲ್ಲದಾಂಗೆ ಆತ್. ಒಬ್ಬನ ಜೀವ ಇದ್ದಾಂಗೆ ಕೊಲ್ಲುವಂತ ಪಾಪ ಕಾರ್ಯ ನನ್ನ ಅಪ್ಪಂದ, ಅಥವಾ ನನ್ನಂದ ಆದಾಂಗೆ ಅದ್ರರ ಫಲನೇ ಈಗ ಹೀಂಗೆ ಆತ್. ಹೀಂಗೆ ನೆನ್ಸಿಕಣಂಡ್ ತುಂಬ ಬೇಜಾರ್ ಮಾಡಿಕಣಂಡ್ ಇತ್ತ್. ಮತ್ತೆ ಭೀಷ್ಮನೊಟ್ಟಿಗೆ ಹೇಳ್ತ್ : “ನೀ ನಿನ್ನ ತಮ್ಮಂದರ ತನ್ನ ಮಕ್ಕಳ ನೋಡಿಕಂಡ ಹಾಂಗೆ ನೋಡಿ ಅವ್ಕೆ ಪಟ್ಟ ಕಟ್ಟಿ ಒಂದಿಷ್ಟೂ ಕುಂದು ಕೊರತೆ ಇಲ್ಲದೆ ಸಾಂಕಿದಾಂತ ಹೇಳ್ದು ಇಡೀ ಲೋಕಕೇ ಗೊತ್ತಾಗುಟು. ಈಗ ನಮ್ಮ ವಂಶನ ಮುಂದುವರ್ಸಲಿಕ್ಕೆ ಯಾರೂ ಇಲ್ಲದಾತ್; ಈಗ ಇರುವ ಜೆಟ್ಟಿಗ ನೀ ಒಬ್ಬನೇ. ಈ ರೀತಿ ಹೇಳಾದ ಮೇಲೆ ಪಂಪಕವಿ ಒಂದು ಸುಂದರ ವಾಕ್ಯನ ಸತ್ಯವತಿನ ಬಾಯಿಲಿ ಹೇಂಗ ಹೇಳ್ಸಿಟೊಂತ ಕೇಳಿ, ಅದರ್ಲಿ ಒಂದು ಅಯ್ಯನ ಹೃದಯದ ಪ್ರೀತಿ ಎಲ್ಲಿ ಉಕ್ಕಿ ಬರುವ್ದಾಂಗೆ “ಮುನ್ನಿನೂರಂಟುವೇಡ, ಮಗನೇ ಕೈಕೊಳ್ ಧರಾಭಾರಮಂ” ಹೀಂಗೆ ಕವಿ ಹೇಳ್ಸಿಟು. ಸತ್ಯವತಿನ ಹೃದಯಲಿ,

ಹಿಂದೆ ಅದರ ಅಪ್ಪ ಮಾಡ್ದ ಒರ್‌ಂಟ್‌ತನ ಅದರ ಮನ್ಸ್‌ನ ಕುತ್ತಿಕಎಂಡೇ ಉಟ್ಟು. ಅದಿಕೆ ಕ್ಷಮೆ ಕೇಳುವ ಹಾಂಗೆ ಮೇಲಿನ ಮಾತ್‌ನ ಹೇಳಿಟು. ಮೊಂಯಿಸ ಆಸೆ ಪಟ್ಟರೂ ಪಡಎಕ್. ಆದರೆ ದುರಾಸೆ ಪಡಿಕೆ ಆಗಎದ್. ದುರಾಸೆ ಪಟ್ಟರೂ ಅವ್ಕೆ ಎಷ್ಟ್ ದಎಕ್ಕುವ ಯೋಗ್ಯತೆ ಎಷ್ಟು ಉಟ್ಟೊ ಅಷ್ಟೇ ದಎಕ್ಕುದುಂತೇಳ್ದು ಖಾತ್ರಿ. ಭೀಷ್ಮನ ಮದುವೆ ಆಗ್‌ಂತ ಹೇಳಿಕೆ ಅದಿಕೆ ಧೈರ್ಯ ಇತ್ಲೆ. ಮುಂದೆ ರಾಜ್ಯ ಭಾರನ ವಹಿಸಿಕಣಎಲಿ ಮದುವೆನ ಮಾತ್ ಮತ್ತೆ ತೆಗಿಯಎಕ್‌ಂತ ಅದರ ಯೋಚನೆ.

ಭೀಷ್ಮನ ಅಭಿಪ್ರಾಯಎಲಿ ಭೂಮಿ ಕೂಡ ಒಂದ್ ಹೆಣ್ಣ್. ಅದರ ಸ್ವೀಕಾರ ಮಾಡ್‌ದುಂತೇಳಿರೆ, ತನ್ನ ಪ್ರತಿಜ್ಞೆಭಂಗ ಮಾಡ್ದಾಂಗೆನೇ. ಮಾಡ್ದ ಪ್ರತಿಜ್ಞೆನ ಮೀರಿರೆ, ಭೀಷ್ಮಂತೇಳುವ ನನ್ನ ಬೆಲೆ ಏನ್ ಒಳ್ತ್. ಸಾಮಾನ್ಯ ಜನಂಗಳ ಬುಡಿ ದೇವೋತ್ತಮರಾದ ಹರಿ–ಹರ–ಬ್ರಹ್ಮರೇ ನನ್ನ ನೋಡಿ ನಗಾಡಿಕಿಲೆನೋ? ಅಂದರೆ ಅವನ ಪ್ರತಿಜ್ಞೆಗೆ ಆ ದೇವ್ರುರ್‌ಗಳೇ ಅಷ್ಟ್ ಬೆಲೆ ಕೊಟ್ಟೊಳೋಂತಾತ್. ಸತ್ಯವತಿನ ಆಸೆ ಚಿಗ್‌ರಿಕೆ ಮುಂದನೇ ಮುರುಂಟಿ ಹೋತ್. ಆಗನ ಕಾಲಎಲಿ, ವಂಶೋದ್ಧಾರಕ್ಕೆ ಮಕ್ಕ ಇಲ್ಲದೆ ಗಂಡ ತೀರಿಹೋದರೆ ಆಗ ನಿಯೋಗ ಪದ್ಧತೀಂತ ಒಂದು ಕ್ರಮ ಇತ್ತ್. ತೀರಿ ಹೋದ ಗಂಡನ ಹಕ್ಕಲೆನ ಸಂಬಂದಿಕಎರ್ಲ್ಯಾರಾದರೂ ಇದ್ದರೆ ಅಂಥವರ ಮೂಲಕ ಅಂದರೆ ಅವರ ಸಂಪರ್ಕಂದ ಮಕ್ಕಳ ಪಡೀದು. ಮಕ್ಕಎಳಿಗಾಗಿ ಮಾತ್ರ ಅನ್ಯ ಗಎಂಡ್‌ನ ಸಂಸರ್ಗ ಮಾಡೊಕು ಹೊರ್ತು ದೇಹ ಸುಖಕ್ಕಾಗಿ ಹೀಂಗೆ ಮಾಡುದು ಅಲ್ಲ. ಅದ್ದರ್‌ಂದ ಇದ್ ವ್ಯಭಿಚಾರ ಅಲ್ಲ. ಭೀಷ್ಮ ಈ ವಿಚಾರಕೆ ಅಂದರೆ ತಾನೇ ನಿಯೋಗಿ ಆಕೆ ಕಂಡಿತ ಒಪ್ಪಿಕಿಲೆಂತೇಳಿ ಸತ್ಯವತಿ ಅವನ ನಿಯೋಗ ಕಾರ್ಯ ಮಾಡೊಕುಂತ ಉಸುರೆತ್ತಿತ್‌ಲೆ.

ಹೀಂಗ ಏನ್ ಮಾಡುದೂಂತ ಇಬ್ರೊರು ತುಂಬ ಹೊತ್ತು ಯೋಚನೆ ಮಾಡ್ರೊ. ಸತ್ಯವತಿಗೆ ಒಂದು ಉಪಾಯ ಹೊಳ್ತ್. ಭೀಷ್ಮನೊಟ್ಟಿಗೆ ಅದರ ಮುಚ್ಚ್ ಮರೆ ಇಲ್ಲದೆ ಹೇಳ್ತ್. ಹಿಂದೆ ಅದ್ ಕನ್ಯೆ ಆಗಿ ಅದರ ಅಪ್ಪನ ಮನೆಲಿ ಇರ್‌ಕನ ಪರಾಶರ ಮುನಿ ಅದರೊಟ್ಟಿಗೆ ಕೂಡ್ದ್, ಆಗಳೆ ಒಬ್ಬ ಮಜ್ಜ ಹುಟ್ಟಿದ್, ಹುಟ್ಟಿದ ಕೂಡ್ಲೇ ಅಂವ ದೊಡ್ಡಂವಾಗಿ ಬೆಳ್ದಎದ್. ಅವನ ಕರ್ಕಎಂಡ್ ಆ ರುಸಿ ಹೋದ್ದ್ ಎಲ್ಲ ಸಂಗತಿನ ಹೇಳ್ತ್. ಈಗ ಅದರ ಮಜ್ಜ ಎಲ್ಲಿಯೋ ತಪಸ್ಸ್ ಮಾಡಿಕಎಂಡ್ ಇರುದು. ನಿಯೋಗಕ್ಕೆ ಅವನ ಕರ್ಸಿ ಏರ್ಪಾಡ್ ಮಾಡಿರೆ ಏನ್‌ಂತ ಸತ್ಯವತಿ ಕೇಳ್ದಯ್ಕೆ ಭೀಷ್ಮ ಸಎರಿಂತ ಒಪ್ಪಿ, 'ಅವನ ನೆನ್ಸಿ ಬರ್ಸಿ ಅಮ್ಮಾಂತ' ಹೇಳ್ತ್. ಅಂವನೇ ವೇದವ್ಯಾಸ ರುಸಿ. ಸತ್ಯವತಿನ ಚೊಚ್ಚಲ ಮಜ್ಜ. ವೇದವ್ಯಾಸನೂ ವಿಚಿತ್ರವೀರ್ಯನೂ ಸತ್ಯವತಿನ ಮಕ್ಕಳೇ. ಅದ್ದರ್‌ಂದ ಸತ್ಯವತಿನ ಸಂಬಂಧಲಿ ಅಂವ ಭೀಷ್ಮಂದೊಳು ನಿಯೋಗ ಕಾರ್ಯಕ್ಕೆ ಹಕ್ಕಲೆನಂವ ಆದ್ದೆ. ಸತ್ಯವತಿ ಅಂವನ ಧ್ಯಾನ ಮಾಡ್ತ್. ಆ ಕೂಡ್ಲೆ ಆ ರುಸಿ ಅವರೆದ್‌ರ್ ಪ್ರತ್ಯಕ್ಷ ಆತ್.

**ಮಕ್ಕ :**

ಅದ್ ಹೇಂಗೆ ತಾತ ಎಲ್ಲಿಯೋ ಇದ್ದವನ ನೆನ್ಸಿದ ಕೂಡ್ಲೆ ಅಂವಂಗೆ ಅದ್ ಗೊತ್ತಾದು. ಮತ್ತೆ ಆಗಳೇ ಅಂವ ಪ್ರತ್ಯಕ್ಷ ಆದು?

ತಾತ :

ಕೆಲಕೆಪ್ರು ವರ್ಷಗಳ ಹಿಂದೆ ಈಗ ನಿಮ್ಮ ಕೈಲಿರುವ ಮೊಬೈಲ್ ಫೋನ್‌ಂತ ಇತ್ತೋ? ಈಗ ನೀವ್ಗ ಕುದ್ದಲ್ಲಿಂದಲೇ ಎಲ್ಲಿಗೆ ಬೇಕರೂ ಮಾತಾಡಿಕೆ ಆದ್ದೆನೋ? ಹಾಂಗೇ ಆಗನ ಕಾಲಲ್ಲಿ ಒಬ್ಬ ಧ್ಯಾನ ಮಾಡ್‌ಕನ ಅವನ ಮನ್‌ಸ್‌ನ ತರಂಗಗ ಅಷ್ಟ ಪ್ರಬಲವಾಗಿ ಚಲ್ಲಿ ಯಾರ ಬಗ್ಗೆ ಧ್ಯಾನ ಮಾಡ್ದನೋ ಆ ವ್ಯಕ್ತಿನ ಮನ್ಸ್‌ಲಿನೂ ಅದೇ ತರದ ತರಂಗಗಳ ಉಂಟ್ ಮಾಡ್‌ಕನ ಅವಂಗೆ ಅರ್ಥ ಆಗ್‌ತಿತ್. ಮತ್ತೆ ತನ್ನ ಸಲೀರದ ಮಹಮ್ರಾಪನ ಸೂಕ್ಷ್ಮಾಣುರೂಪಕ್ಕೆ ಪರಿವರ್ತಿಸಿ ಬೇಕಾದಲ್ಲಿಗೆ ಹೋಗಿ ನಿಜಸ್ವರೂಪನ ಪಡಿಯಕೆ ಗೊತ್ತಿತ್. ಹಾಂಗೆ ಆ ಕಾಲಲ್ಲಿ ಈ ವಿದ್ಯಮಾನಗ ಸಾಧ್ಯ ಆತಿತ್.

ಹಾಂಗೆ ಪ್ರತ್ಯಕ್ಷ ಆದ ವೇದವ್ಯಾಸ ನನ್ನ ಏಕೆ ಕರ್ಸಿದಲಿ ನನ್ನಂದ ಏನಾಕುಂತ ಕೇಳ್. ಒಂದು ನಿಮಿಷನೂ ಹಾಳಾಕೆ ಬೊತ್‌ಂತ ಅವಸರಂದ ಅಂವ ಕೇಳ್ದ. ಅದ್‌ಕೆ ಸತ್ಯವತಿ ಹೇಳ್: "ನಮ್ಮ ವಂಶ ಮುಂದೆ ಬೆಳಿಯದೆ ನಿತ್ ಹೋದಾಂಗೆ ಆತ್. ನಿನ್ನ ತಮ್ಮ ವಿಚಿತ್ರ ವೀರ್ಯ ಮಕ್ಕ ಇಲ್ಲದೆ ತೀರಿ ಹೋದಲದ್ದರ್‌ಂದ ಅವನ ಕ್ಷೇತ್ರಲಿ ಬೀಜೋತ್ಪತ್ತಿಯಾಗಿ, ಮಕ್ಕ ಹುಟ್ಟುವ್ಹಾಂಗೆ ನೀ ಮಾಡೊಕು. ಅಂಥ ನಿಯೋಗಕ್ಕೆ ನಿನ್ನ ಕರ್ಸಿದೆ".

"ಮಾತೃ ವಚನನ ಪಾಲನೆ ಮಾಡಿದು ನನ್ನ ಕರ್ತವ್ಯ. ನಾ ಇರುವ ಏಕಾಂತ ಜಾಗೆಗೆ ಅವನ ಹೆಣ್ಮಕ ಒಬ್ಬೊಬ್ಬಾಗಿ ಬರ್ಲಿಂತ ರುಸಿ ಹೇಳ್. ಮತ್ತೆ ಏಕಾಂತ ಜಾಗಗೆ ನಡ್.

ಸತ್ಯವತಿ ಸುರೂಗೆ ಅಂಬಿಕೆನ ಶೃಂಗಾರ ಮಾಡಿ, "ನೋಡು ವೇದವ್ಯಾಸ ರುಸಿ ನಿಂಗೆ ಮಕ್ಕ ಹುಟ್ಟುವ್ಹಾಂಗ ವರ ಕೊಟ್ಟದೆ. ನೀ ಏನೂ ಅಂಜಿಕೆ ಇಲ್ಲದೆ ಅಂವ ಇರುವಲ್ಲಿಗ ಹೋಗಿ ವರ ಪಡ್ಕ ಹೋಗು ಹೀಂಗೆ ಹೇಳಿ ಅದರ ಕಳ್ಸಿತ್.

ಅದ್ ಪಾಪ್ಸ ಹೆದ್‌ರಿಕಲಂಡೇ ರುಸಿ ಇರುವಲ್ಲಿಗೆ ಹೋತು. ಮಸುಕು ಕತ್ತಲ್ಲಿ ಅದ್ಕೆ ಸುರುಗೆ ಏನೂ ಕಂಡಲತ್‌ಲೆ. ಮತ್ತೆ ಮೆಲ್ಲ ಮೆಲ್ಲ ದೃಷ್ಟಿಗೆ ವಸ್ತುಗ ಗೋಚರಾಗಿ ಕಂಡಲತ್. ನೋಡ್‌ಕನ ಕಪ್ಪಾದ ರುಸಿ ಎತ್ತಲೆ ನಿತ್‌ಕಲಂಡ್ ಇತ್. ಇದ್‌ಕೆ ಹೆದ್‌ರಿಕೆ, ನಾಚಿಕೆ ಎಲ್ಲ ಒಟ್ಟಗೆ ಆತ್. ಅಂವ ಇದರ ಮೈಮೇಲೆ ಕಯ ಹಾಕಿ ಇದರ ಎತ್ತಲೆ ಮಾಡಿಕೆ ನೋಡ್‌ಕನ ಇದ್ ಕಣ್ಣ್‌ನ ಗಟ್ಟಿ ಮುಚ್ಚಿ ಕಲಂಡಲತ್. ಪಾಪ್ಸ ಸಮಿಯ ಕಳ್ದ ರುಸಿ ಅದರ ಬುಟ್ಟಲತ್. ಇದ್‌ಕೆ ತಲೆ ಸುತ್ತಿ ಬಾವಾಂಗೆ ವಾಂತಿ ಬಾವಾಂಗೆ ಆತ್. ಅಂಜಿರ್ಕಲಿ ಸೀರೆನ ಎಳ್ದ ಕಟ್ಟಕಲಂಡ್ ತನ್ನ ಅಂತಃಪುರಕೆ ಓಡ್‌ತ್.

ಮತ್ತೆ ಸತ್ಯವತಿ ಅಂಬಾಲಿಕೆನ್ನೂ ಅಲಂಕಾರ ಮಾಡಿ ಹಿಂದೆ ಅಂಬಿಕೆಗೆ ಹೇಳ್ದಾಂಗೇ ಹೇಳಿ ಕಳ್ಸಿತ್. ಅಂಬಾಲಿಕೆ ಬಂದ್ ರುಸಿನ ನೋಡ್‌ಕನ, ಅವನ ಎತ್ತಲೆ ಮಯ ತನ್ನ ಎತ್ತಲೆ ಮಯಿಗೆ ಒತ್‌ಕನ ನಾಚಿ ನೀರಾಗಿ ಮೈಲಿದ್ದ ನೆತ್ತ್‌ರೆಲ್ಲ ಇಂಗಿ ಹೋದಾಂಗೆ ಮಯ ಬೆಳಪಾರ್ಗಿ ಹೋತು. ಮತ್ತೆ ರುಸಿ ಬುಟ್ಟ ಮೇಲೆ ಬೇಗ ಬೇಗ ತನ್ನ ಅಂತಃಪುರದ ಕೋಣೆಗೆ ಹೋಗಿ ಬಾಗಿಲ್ ಹಾಕಲಂಡಲತ್. ಸತ್ಯವತಿ ಅಂಬಿಕೆನ ಕರ್ದ್, ನೀ ಮತ್ತೊಮ್ಮೆ

ರುಸಿನಕ್ಕಲೆ ಹೋಗಿ ಇನ್ನೊಂದು ಕೂಸುನ ವರ ಪಡ್‌ಕಣ್ಂಡ್ ಬಾಂತ ಹೇಳ್ತ್. ಅದೇನೂ ಅತ್ತೆಗೆ ಎದ್‌ರುತ್ತರ ಕೊಟ್ಟಿಟ್ಲೆ. ತನ್ನ ಕೆಲ್ಸದ ಗೂಡೆನ ಪೂರ್ಲು ಶೃಂಗಾರ ಮಾಡಿ, ರುಸಿ ಇರುವಲ್ಲಿಗೆ ಕಳ್ಸಿತ್. ಅದ್ ಬಂದವಳ್ ಯಾವ ಅಂಜಿಕೆನೂ ಇಲ್ಲದೆ ಒಳ್ಳೆ ಉತ್ಸಾಹಂದಳೆ ರುಸಿ ಮಾಡ್‌ದವ್‌ಕೆಲ್ಲ ಸರಿಯಾಗಿ ಸ್ಪಂದಿಸಿತ್. ಮತ್ತೆ ಹೊರೆಗೆ ಬಾತ್.

ವೇದ ವ್ಯಾಸ ತನ್ನ ಅಮ್ಮನ ಮಾತ್‌ನ ನೆರವೇರ್‍ಸಿ ಬಂದಂವ ಸತ್ಯವತಿಗೆ ಹೇಳ್ತ್: ಅಮ್ಮ ವರ ಪ್ರದಾನ ಸಮಿಯಲಿ ಅಂಬಿಕೆ ಹೆದ್‌ರಿ ಕಣ್ಣ್ ಮುಚ್ಚಿಕಂಡರ್‌ಂದ ಅದ್‌ಕೆ ಹುಟ್ಟುವ ಕುರುಡ ಮಜ್ಜ ಧೃತರಾಷ್ಟ್ರ ಹೆಸರ್‌ನಂವ ಹುಟ್ಟುದು, ಇನ್ನ್ ಅಂಬಾಲಿಕೆ ಆ ಸಮಿಯಲಿ ಹೆದ್‌ರಿಕಂಡ್ ಮೆಯ್ಯನ ರಕ್ತ ಎಲ್ಲ ಇಳ್ದ್ ಹೋದಂಗೆ ಬೆಳ್ಳೆರ್‍ಸಿ ಹೋತು. ಹಾಂಗೆ ಅದ್ಕೆ ಹುಟ್ಟುವ ಮಜ್ಜ ಸುಂದರಾಂಗನಾಗಿದ್ದರೂ, ಪಾಂಡುರೋಗಂದ ಕೂಡ್ದಂವಾಗಿ ಪಾಂಡುಂತೇಳಿ ಪ್ರಸಿದ್ಧಿಗೆ ಬಾದು. ಮತ್ತೊಂದು ಗೂಡೆ ತುಂಬ ಲವಲವಿಕೆಲಿ ನನ್ನ ಎಲ್ಲ ಕಾರ್ಯಗಳಿಗೂ ಸ್ಪಂದನೆ ಕೊಟ್ಟದರ್‌ಂದಾಗಿ ಅದಿಕೆ ಸುಂದರಾಂಗನೂ ಬುದ್ಧಿವಂತನೂ ಆದ ವಿದುರಂತೇಳ್ದ ಹೆಸರ್‌ಂದ ಕೂಡ್ದ ಮಜ್ಜ ಹುಟ್ಟುದು. ನಾ ಬಂದ ಕೆಲಸ ಮುಗ್ತಲ್? ಇನ್ನ್ ನಾ ಹೋನೆ. ಹೀಂಗೆ ಹೇಳಿ ರುಸಿ ಅದೃಶ್ಯ ಆಗಿ ಹೋತು.

**ಮಕ್ಕ :**

ತಾತ! ನಾವು ಓದಿದ ಭಾರತ ಕತೇಲಿ ವೇದವ್ಯಾಸ ರುಸಿ, ಆ ಹೆಣ್ಮಕಳ ಸರೀರನೆ ಮುಟ್ಟದೆ ದೂರಂದ ದಿವ್ಯದೃಷ್ಟಿಲಿ ನೋಡ್ದ್ ಮಾತ್ರಂತ ಉಟ್ಟು. ನೀವು ಅಂವನ ದೈಹಿಕ ಕ್ರಿಯೆಂದಳೇ ಅವ್ಕೆ ಮಕ್ಕ ಆದ್ದ್ ಮತ್ತೆ ಮಿಲನದ ಕಾಲಲಿ ಅವು ಹೆದ್‌ರಿಕಣ್ಂಡ್ ನಾನಾ ವಿಕಾರ ತೋರ್‍ಸಿದ ಕಾರಣಂದ ಅವ್ಕೆ ಹುಟ್ಟುವ ಮಕ್ಕಳ ಸರ್‍ರಲಿನೂ ವಿಕಾರ ಉಂಟಾಗುವ ಹಾಂಗಾತ್‌ಂತ ಹೇಳ್ದರಿ. ಈ ರೀತಿ ಶರೀರ ಸ್ಪರ್ಶ ಮಾಡುದು ಒಂದು ಅಪಚಾರದ ಹಾಂಗಾತ್‌ಲೆನೋ?

**ತಾತ :**

ಮೂಲ ಮಹಾಭಾರತಲಿ (ಅಂದರೆ ವೇದ ವ್ಯಾಸ ಬರ್ದವ್) ಅಂಗ ಸ್ಪರ್ಶ ಆಗಿಯೇ ಧೃತರಾಷ್ಟ್ರ, ಪಾಂಡು ಮತ್ತೆ ವಿದುರ ಹುಟ್ಟಿದೊಂತ ಬಂದದೆ. ಅಂದರೆ ಆ ಕಾಲದ ಸಾಮಾಜಿಕ ನಡವಳಿಕೆಲಿ, ಇದೊಂದು ದೊಡ್ಡ ಪಾಪ ಕಾರ್ಯಂತೇನು ಜನ ತಿಳ್‌ದಿತ್ಲೆ. ಕಾಲಕ್ರಮಲಿ ಮೂಡಿವಂತಿಕೆ ಸಮಾಜಲಿ ಹೆಚ್ಚಿ ಅದ್‌ಕೆ ಬೆಲೆಬಾತ್. ಹಾಂಗೆ ದೃಷ್ಟಿಪಾತಂದಳೆ ಗರ್ಭ ಆತ್‌ಂತ ಕತೆ ಕಟ್ಟಿದೊ. ರಾಮಾಯಣಲಿ ಕೂಡ ರಾವಣ ಸೀತಾದೇವಿನ ಕೈ ಹಿಡ್ದಳ್ದ್ ಪುಷ್ಪಕ ವಿಮಾನಕ್ಕೆ ಹತ್ತಿಸಿ ಕಣ್ಂಡ್ ಹೋತುಂತ ವಾಲ್ಮೀಕಿ ಬರ್ದರೆ ಮತ್ತೆನ ಕವಿಗ ಸೀತೆ ಮಹಾಪತಿವ್ರತೆ. ಅದರ ಎಲ್ಲ್ಯಾರ್ ರಾವಣ ಮುಟ್ಟ ಬುಟ್ಟರೆ ಅಂವ ಸುಟ್ಟ್ ಭೊಸ್ಮ ಆದೊಂತ ಸೀತೆ ನಿತ್ತ ನೆಲ ಸಮೇತ ಕಿತ್ತ್ ರಥಕ್ಕೇರ್‍ಸಿ ಕಣ್ಂಡ್ ಹೋತುಂತ ಬದ್‌ಲ್ಸಿ ಬರ್ದೊ. ಸಾಮಾಜಿಕ ನೀತಿಗ ಕಾಲಂದ ಕಾಲಕ್ಕೆ ಊರ್‌ಂದ ಊರಿಗೆ ಬದ್‌ಲಾಗಿಕಣ್ಂಡ್ ಹೋದವೆ. ಈಗ ನಮ್ಮ ಸಂಪ್ರದಾಯಲಿ ಶಾಲೆ,

ಕಾಲೇಜುಗಳಲ್ಲಿ ಗೂಡೆಗಳು, ಹೈದಂಗಳೂ ದೂರ ದೂರ ಕಡ್ಡಾಯ ಆಗಿ ಇರೋಕು. ಕೆಲವು ಕಡೆ ಪರಸ್ಪರ ಮಾತಾಡಿ ಕಳೋದಿಕೂ ನಿಷೇಧ ಉಟ್ಟು. ಆದರೆ ಇಂಗ್ಲೆಂಡ್ ಅಮೇರಿಕಾದಂತ ದೇಸಗಳ್ಲಿ ಕ್ಲಾಸ್‌ಲಿ ಹೈದಂಗಳೂ ಗೂಡೆಗಳೂ ಒಟ್ಟಿಗೇ ಕುದ್ಕಂಡವೆ. ಒಮ್ಮೊಮ್ಮೆ ಮಾಸ್ಟ್ರ ಪಾಠ ಮಾಡಿಕಳೆಂಡ್ ಇರ್‌ಕನೇ ಒಬ್ಬಂದೊಬ್ಬ ಮುತ್ತು ಕೊಟ್ಟ್ ಕಳೆಂಡವೆ! ಹೀಂಗೆ ಒಂದು ಗಂಡ್ ಮತ್ತೆ ಒಂದ್ ಹೆಣ್ಣ್ ಸೇರಿದೇ ಮಕ್ಕ ಆಗುವಂತದ್ ಸೃಷ್ಟಿನ ನಿಯಮ. ಇದರ ಬದ್‌ಲ್ಲಿಕೆ ಯಾರ್‌ಂದೊಳೂ ಗೊತ್ತ್. ಈಗ ವಿಜ್ಞಾನ ಬಾರೀ ಮುಂದುವರ್ದುಟು. ಹಾಂಗೆ ಪ್ರನಾಳ ಶಿಶು ಜನನಂತೇಳುವ ವಾರ್ತೆಗ ಪತ್ರಿಕೆಗಳ್‌ಲಿ ಬಂದವೆ. ಆದರೆ ರಾಮಾಯಣ ಭಾರತಗಳ ಕಾಲಳಲಿ ಅದಿತ್ತ್‌ಲೆಂತೇಳುದರ್ಲಿ ಏನೂ ಸೊಂಸಯ ಇಲ್ಲೆ, ಆದ್ದರ್‌ಂದ ನಾನೂ ಇದ್ದಾಂಗೇ ಹೇಳಿನೆ ಅಷ್ಟೆ.

ಮತ್ತೆ ಮೇಲಿನ ಮಾತ್‌ಲಿ, ಕಾಮಶಾಸ್ತ್ರದ ಒಂದು ಮುಖ್ಯ ವಿಚಾರನೂ ಬಂದದೆ. ಅಂದರೆ ಗಂಡ್, ಹೆಣ್ಣ್‌ನ ಸಮಾಗಮದ ಉದ್ದೇಶ, ಪ್ರಜೋತ್ಪತ್ತಿ ಆಕುಂತ. ಅದೊಂದು ಪವಿತ್ರ ಕಾರ್ಯ. ಆಗ ಯಾವ ತರದ ಮನೋವಿಕಾರಂಗ ಇರಿಕೆ ಆಗದ್. ಹೆದ್‌ರಿ ಕಣ್ಣ್ ಮುಚ್ಚಿಕಂಡ್, ಸಂಭೋಗ ಕ್ರಿಯೆ ನಡ್‌ದರೆ, ಹುಟ್ಟುವ ಕೂಸಿಗೂ ಕುರುಡುತನ ಬಂದದೆ. (ಧೃತರಾಷ್ಟ್ರ). ಮೈಯಲ್ಲ ಬೆಳ್ಳಳ್ರ್ ಹೋದರೆ, ಪಾಂಡುರೋಗಂದ ಕೂಡ್ದ ಕೂಸು (ಪಾಂಡು), ಮನ್‌ಸ್‌ಲಿ–ಎಳ್ಳಷ್ಟ್ ಅಂಜಿಕೆ, ಹೇಸಿಕೆ ಇಲ್ಲದೆ, ಲವಲವಿಕೆಲಿ ಸೇರಿರೆ, ಯಾವ ನ್ಯೂನತೆನೂ ಇಲ್ಲದ, ಬುದ್ಧಿವಂತಿಕೆಂದ ಕೂಡ್ದ ಸುಂದರ ಕೂಸು (ವಿದುರ) ಹುಟ್ಟುದು. ಹೀಂಗೆ ತುಂಬ ಹಿಂದೆನ ಕಾಲಳಲಿ, ನಮ್ಮ ದೇಸಲಿ, ಸಂಭೋಗ ಕ್ರಿಯೆಂತೇಳ್ದು ಒಂದು ಪವಿತ್ರ ಕಾರ್ಯಂತ ತಿಳ್ಕಂಡದ್ದು ಹೊರ್ತು ಅದೊಂದು ವಿನೋದ ಕ್ರಿಯೆಂತ್ಳ್ ನೆಲೆಲಿ ನೋಡ್ತ್‌ಲೆ. ಪ್ರಾಣಿ ಸಮೂಹಳಲಿ ಎಲ್ಲ ಕಾಲಗಳಳಲಿಯೂ, ಯಾಗ ಬೇಕಾದರೂ ಈ ಕ್ರಿಯೆಗೆ ಆಸ್ಪದ ಇಲ್ಲೆ. ಮೊಂಯಿಸರ್ಡಾಂಗೆ ಅವ್ಕೆ ಗೌಪ್ಯವೂ ಇಲ್ಲೆ. ಈ ಕ್ರಿಯೆ ಕೇವಲ ವಿಲಾಸಕ್ಕೆ; ಮನ್‌ಸ್‌ನ ಉಲ್ಲಾಸಕ್ಕೆಂತ ಆಗಿ ಮಕ್ಕಳ ಸಂಖ್ಯೆ ಹೆಚ್ಚಿಕಂಡೇ ಹೋದರೆ ತಡಿಯಕೆ ಬರ್ತ್‌ಕಂಟ್ರೋಲ್‌ಂತೇಳ್ವ ಕಾರ್ಯಕ್ರಮ ತುಂಬ ಪ್ರಚಾರಳಲಿ ಉಟ್ಟು– ಈ ಕಾಲಳಲಿ.

ಧೃತರಾಷ್ಟ್ರ ಪಾಂಡು ವಿದುರಳರ್ ಮಕ್ಕಳಾಗಿದ್ದೊವು ಬೆಳ್ದ್ ಬಂದೊ. ಅವ್ರ್ಕೆ ಭೀಷ್ಮ ಬೇಕಾದ ವಿದ್ಯೆ ಬುದ್ಧಿಗಳ ಕಲ್ಲಿಕೆ ಏರ್ಪಾಡ್ ಮಾಡ್ತ್. ಯೌವನ ಬಾತ್. ಧೃತರಾಷ್ಟ್ರ ಹಿರಿಯಂವ ಆದರೂ ಅಂಗ ಹೀನ(ಕುರುಡ) ಆದ್ದರ್‌ಂದ ಅಂವ ರಾಜ್ಯಭಾರ ಮಾಡಿಕೆ ಯೋಗ್ಯ ಅಲ್ಲಂತ, ಪಾಂಡುಗೆ ಭೀಷ್ಮ ಹಸ್ತಿನಾವತಿನ ಪಟ್ಟ ಕಟ್ಟಿತ್. ಧೃತರಾಷ್ಟ್ರಂಗೆ ಗಾಂಧಾರ ದೇಶದ ರಾಜನ ಮಗಳ ತಂದ್ ಮದುವೆ ಮಾಡ್ತ್. ಗಾಂಧಾರ ರಾಜಕುಮಾರಿಗೆ ಗಾಂಧಾರಿಂತ ಹೆಸರ್. ಅದ್ ಎಂತಾ ಪತಿವ್ರತೆಂತೇಳಿರೆ, ಅದರ ತುಂಬಾ ಹೊಗುಳಕಾದ್. ನನ್ನ ಗಂಡಂಗೆ ಏಂತದನ್ನೂ ನೋಡಿಕೆ ಸಾಧ್ಯ ಇಲ್ಲೆಂತಾಕನ ನಂಗೆ ಮಾತ್ರ ಆ ಸೌಭಾಗ್ಯ ಏಕೆ ಬೇಕು? ನಂಗೂ ಬೇಡಂತೇಳಿ ಕಣ್ಣಿಗೆ ಬಟ್ಟೆ ಕಟ್ಟಿಕಳ್ಡೇ ಇತ್ತ್. ಈಗ ಅಂತವರ ನೆನ್ಸಿ ನೋಡಿಕಾರ್‌ತೀರ್ದೋ?

ಪಾಂಡು, ರಾಜ ಆದ ಮೇಲೆ ದೇಶ ಸಂಚಾರ ಮಾಡಿ ಬೇರೆ ದೇಶ ರಾಜರೊಟ್ಟಿಗೆ ಯುದ್ಧ ಮಾಡಿ ಅವರ ಸೋಲ್ಸಿ ಬೇಕಾದಷ್ಟು ಕಪ್ಪ ಕಾಣಿಕೆಗಳ ತಂದ್ ಹಸ್ತಿನಾವತಿನ ರಾಜಭಂಡಾರಕೆ ತುಂಬ್‌ಸಿತ್. ಭಾರಿ ವೈಭವಂದ ರಾಜ್ಯ ಭಾರ ಮಾಡ್ತ್. ಭೀಷ್ಮ ತುಂಬ ತೃಪ್ತಿಲಿ ಇತ್ತ್. ಇವಂಗೂ ಬೇಗ ಮದುವೆ ಮಾಡ್ಲೊಕುಂತ ಯೋಚನೆ ಮಾಡ್‌ತಿತ್ತ್.

ಯಾದವ ವಂಶ ಅಂದರೆ ಕೃಷ್ಣನ ಕುಲದ ಶೂರ ಸೇನಂತೇಳಂವನ ಮಗ ಪೃಥಂತ ಅದರ ಹೆಸ್‌ರ್. ಅದರ ಸೋದರ ಮಾಂವನ ಮನೆಲಿ ಬೆಳೆಯುತಿತ್ತ್. ಅವನ ಹೆಸರ್ ಕುಂತೀಭೋಜಂತ ಅವಂಗೆ ಹೆಣ್ಣ್ ಮಕ್ಕ ಇತ್ತ್‌ಲೆ. ಹಾಂಗೆ ಸೋದರ ಸೊಸೆನ ಸಣ್ಣರ್‌ಂದಳೇ ಕರ್ಕಂಡ್ ಬಂದ್ ಸಾಂಕಿಕಂಡ್ ಇತ್ತ್. ಅದ್ಕೆ ಕುಂತೀಂತಲೇ ಹೆಸರಾತ್. ಕುಂತೀ ಭೋಜನ ಅರಮನೆಗೆ ದೂರ್ವಾಸ ಮುನಿ ಬಾತ್. ಏನೋ ಒಂದು ವ್ರತ ನಡ್ಸೊಕುಂತೇಳಿ ಹಜ್ಜ ದಿನ ಅಲ್ಲೆ ನಿತ್ತಲೆತ್. ದೂರ್ವಾಸನ ಕೋಪ ಬಾರೀ ಪ್ರಸಿದ್ಧಿ. ಏನಾರ್ ಸಾಪ ಕೊಟ್ಟ್ ಬುಡುದುಂತೇಳಿ ಎಲ್ಲೊವ ಅವಂಗೆ ಹೆದ್‌ರೊವೆ, ಆಗ ಸಣ್ಣ ಗೂಡೆ ಆಗಿದ್ದ ಕುಂತಿನ ರಾಜ, ಆ ರುಷಿನ ಸೇವೆಗೆ ಮತ್ತ್ ಅವಂಗೆ ಬೇಕಾದ ಉಪಚಾರ ಮಾಡಿಕೆ ನೇಮಿಸಿತ್. ಹಾಂಗೆ ನಿತ್ಯ ಈ ಗೂಡೆ ಮಾಡುವ ಮನಃ ಪೂರ್ವಕವಾದ ಸೇವೆ, ಅದರ ನಡೆನುಡಿ, ಕೆಲ್ಸದ ಅಚ್ಚುಕಟ್ಟ್‌ತನ, ಇದರೆಲ್ಲ ನೋಡಿ ದೂರ್ವಾಸಂಗೆ ತುಂಬ ಮೆಚ್ಚಿಕೆ ಆತ್. ಹಾಂಗೆ ಒಂದು ದಿನ ಕುಂತಿನ, 'ಇಲ್ಲಿ ಬಾ ಮಗಳೇಂತ ಕರ್ದ್. 'ಇಂದ್ ನಾ ನಿಂಗೆ ಐದ್ ಮಂತ್ರಂಗಳ ಉಪದೇಶ ಮಾಡಿನೆ. ಮುಂದೆ ನಿಂಗೆ ಬೇಕಾದಾಗ ನಿನ್ನ ಮನ್‌ಸ್‌ಗೆ ಹಿಡ್ಸಿದ ದೇವತೆನ ನೆನ್ಸಿ ಈ ಒಂದು ಮಂತ್ರನ ಉಚ್ಚರ್ಸಿರೆ, ಆ ದೇವತೆ ಬಂದ್ ಅವನ ಹಾಂಗೇ ಇರುವ ಕೂಸುನ ನಿಂಗೆ ಕೊಟ್ಟ್ ಹೋದು. ಹಾಂಗೆ ನಿಂಗೆ ಐದ್ ಜನ ಲೋಕೋತ್ತರವಾದ ಮಕ್ಕ ಹುಟ್ಟುವೋಂತ ಹೇಳಿ ಅದರ ಕೆವಿಲಿ ಮಂತ್ರಗಳ ಹೇಳಿ ಕೊಟ್ಟಲೆತ್. ತನಗೆ ಮಕ್ಕ ಹುಟ್ಟುವೋಂತ ಹೇಳುವರ ಕೇಳಿ, ಸಣ್ಣ ಗೂಡೆ ಅಲ್ಲೊ, ಅದಿಕೆ ಮನ್‌ಸ್‌ನೊಳಗೆ ನಾಚಿಕೆ ಆತ್. ಹಾಂಗೆ ಕೆಲವು ದಿನ ಕಳ್ದ್, ದೂರ್ವಾಸರುಷಿ ಹೊರ್ಟ್ ಹೋತ್. ರಾಜ, ದೂರ್ವಾಸಂಗೆ ಅಸಮಾಧಾನ ಆಗದ ಹಾಂಗೆ ನೋಡಿಕಂಡದಿಕೆ ಕುಂತಿನ ಹೊಗ್‌ಳ್‌ತ್. ಕುಂತಿಗೆ ಮನ್ಸ್‌ಲಿ ಒಂದು ಕುತೂಹಲ ರುಷಿ ಹೇಳ್ದ ಮಂತ್ರಂದ ದೇವತೆ ಹೇಂಗೆ ಬಾದು? ಹೇಂಗೆ ಕೂಸುನ ಕೊಡುದುಂತ ಏನೇನೋ ಯೋಚನೆ ಮಾಡ್ತ್. ಅದ್‌ಕೆ ಏನೊಂದೂ ಗೊತ್ತಾತ್‌ಲೆ. ಮಕ್ಕಳ ಚಪಲ ಸ್ವಭಾವ. ಇದರ ಪರೀಕ್ಷೆ ಮಾಡೊಕುಂತ ಯೋಚನೆ ಮಾಡ್ತ್. ಹೊಂಬೆನ ಆಟಕೆ. ನಿಜವಾಗಿ ಒಂದು ಕೂಸೇ ಇದ್ದರೆ ಎಷ್ಟ್ ಪೊರ್ಲು ಅಲ್ಲಾ?ಂತ ನೆನ್ಸಿಕಂಡ್ ಕುಸಿಪಟ್ಟಲೆತ್. ಬುದ್ಧಿ ಬೆಳೆಯುದಲೆವುಕೆ ದೊಡ್ಡ ವಿಷಯಗಳ ತಿಳ್ಸಿರೆ ಅದು ಅನಾಹುತ. ಆಗನ ಕಾಲದ ಲೆಕ್ಕಲಿ ಇದರ್ಲಿ ದೋಸ ಏನೂ ಇಲ್ಲೆಂತ ಹೇಳಿರೂ ನಮ್ಮ ಈಗನ ನೆಲೆಂದ ವಿಮರ್ಶಿಸಿರೆ, ದೂರ್ವಾಸ ಮಾಡ್ದ್ ತಪ್ಪು ಕೆಲ್ಸ. ಇದ್ ವ್ಯಭಿಚಾರಕ್ಕೆ ದಾರಿತೋರ್ಸಿದಾಂಗೆ ಆದೇಂತ ಹೇಳಲೆಕ್.

ಕುಂತಿ ಒಂದು ದಿನ ಬೊಳ್ಪಿಗೆ ಗಂಗಾನದಿಗೆ ಹೋತು. ಅದರ್ಲಿ ಮುಳ್ಗಲೆತ್ ದಡಕ್ಕೆ

ಬಂದಾ ಸೂರ್‍ಯನ ನೋಡಿ ಮಂತ್ರನ ಜಪಿಸಿತ್. ಅದ್ ಮುಚ್ಚಿದ ಕೆಣ್ಣ್‌ನ ಬುಡುವಷ್ಟ್ರಲ್ಲಿ ಸೂರ್‍ಯ ಅದರ ಎದ್‌ರ್ ನಿತ್ತಿತ್. "ನನ್ನ ಕರ್‍ದಿದ್ ಏಕೆ?"ಂತ ಕೇಳ್ತ್.

"ನಾ ತಿಳಿಯದೆ ತೊಪ್ಪು ಮಾಡ್ಟೆ. ರುಸಿ ಕೊಟ್ಟ ಮಂತ್ರ ಹೇಂಗೆಂತ ಪರೀಕ್ಷೆ ಮಾಡ್ಟೆ. ಅಷ್ಟೆ! ನೀವಿನ್ನ್ ಹೊರ್ಡಿ"ಂತ ಕುಂತಿ ಹೇಳ್ತ್.

"ಅದಾಕಿಲೆನೆ ಗೂಡೆ. ರುಷಿನ ಅಪ್ಪಣೆನ ಮೀರಿರೆ, ನಮ್ಮ ಉಟ್ಟು ಇಲ್ಲೆಂತ ಮಾಡುದು. ಸಾಪ ಕೊಡುದು. ನಿಂಗೆ ನನ್ನನೇ ಹೋಲುವ ಒಂದು ಮಜ್ಜ ಆಗೆಲಿಂತೇಳಿ, ಸೂರ್‍ಯ ಬಾನಕೆ ಏರ್ತ್.

ಆ ಕ್ಷಣೆಲಿ ತೇಜಸ್ವಿಯಾದ, ಕವಚ, ಕುಂಡಲಗಳ ಧರಿಸಿದ್ದ ಕೂಸು ಅದರ ತೊಡೆ ಮೇಲೆ ಮಲ್ಕ್ಯೆಂಡ್, ಬೆರ್ಲ್ ಉಜ್‌ಂಬಿಕೆಂಡ್ ಬಾನನ ನೋಡಿಕೆಂಡ್ ನೆಗಾಡ್‌ತಿತ್.

ಕುಂತಿಗೆ ಆ ಕೂಸುನ ನೋಡ್‌ಕನ ಸಂತೋಸು ಆತ್. ಆದರೆ ಕೊಡದ ಗೂಡೆಗೆ ಕೂಸಾತ್‌ಂತೇಳಿರೆ ಜೆನ ಏನ್ ಮಾತಾಡಿಕಂಬೊ? ಅಪ್ಪನ ಮತ್ತೆ ಮಾವನ ಮೊರ್‍ಯಾದೆ ಎಲ್ಲಿ ಒಳ್ತ್‌ಂತ ಗಾಬ್ರಿ ಆತ್. ಹಾಂಗೆ ಒಂದು ಮರದ ಮರ್‍ಗಿಲ್‌ನಾಂಗೆ ಇದ್ದ ಪಾತ್ರಲಿ ಆ ಕೂಸುನ ಮಲ್ಗ್‌ಸಿ, ಜಲದೇವತೆಗೆಳೇ ಇದರ ಕಾಪಾಡೆಲಿಂತ ಹೇಳಿ ಗಂಗೆನ ನೀರ್‌ಲಿ ತೇಲ್‌ಸಿ ಬುಟ್ಟೆತ್. ಗಂಗೆ ಆ ಕೂಸುನ ಕೆಂತಿಕೆ ಬುಡದೆ, ತನ್ನ ತೆರೆಗಂತೇಳುವ ಕೈಗೆಳ್‌ಲಿ ತಕ್ಕಿ ಕೆಂಡೇ ಹೋತು. ಆಗ ಹಳ್ಳದ ಕರೆಗೆ ಬಂದಿದ್ದ ತೇರೋಡ್ಸುವ ಕೆಲ್ಸ ಮಾಡ್‌ತಿದ್ದ ಮುಗ್ಗರ ಜಾತಿಯಂವ ಸಿಡ್ಲೇ ಕೂಸುನ ರೂಪ ತಾಳ್ದಾಂಗಿದ್ದ ತೇಜಸ್ಸ್‌ಂದ ಕೆಣ್ಣ್‌ನ ಕುತ್ತುವ ಹಾಂಗಿದ್ದ ಕೂಸುನ ನೋಡಿ·ದುಡುಮ್ಮನೆ ಹಳ್ಳಕೆ ಹಾರಿ ಮೀಸಿ ಹೋಗಿ ಕೂಸುನ ಹಿಡ್ಕೆಂಡ್ ಬಾತ್. ಸೀದಾ ಮನೆಗೆ ಹೋಗಿ ಮಕ್ಕ ಆಗದಿದ್ದ ಅವನ ಹೆಣ್ಣ್ ರಾಧೆಂತೇಳ್ವರ ಕೈಲಿ ಕೊಟ್ಟೆತ್. ಆ ದಂಪೆತಿಗೆಳಿಗೆ ಆದ ಸಂತೋಸು ಅಷ್ಟಿಷ್ಟ್‌ಂತ ಹೇಳಿಕೆ ಬೊತ್ತ್. ಒಂದು ಕೂಸು ಹುಟ್ಟಿರೆ ಆಚರ್ಸುವ ಅಮೆ ಸುದ್ಧ, ಹದ್‌ನಾರನೇ ದಿನ ತೊಟಗಿಲ್‌ಗೆ ಹಾಕಿ ಹೆಸ್‌ರ್ ಹಾಕುವ ಶಾಸ್ತ್ರಗಳ ಎಲ್ಲ ಮಾಡ್ದೊ. ನೆಲೆಲಿ ಹೊಂಡ ತೆಗಿಯುಕನ ನಿಧಿ ಸಿಕ್ಕಿದಾಂಗೆ ಸಿಕ್ಕಿದ ಕೂಸು ಆದ ಕಾರಣ 'ವಸುಷೇಣ'ಂತ ಹೆಸ್‌ರ್ ಇಸಿದೊ. ಈ ಕೂಸುನ ಸುದ್ದಿ ಜೆನರ ಕೆಬಿಂದ ಕೆಬಿಗೆ ಹಬ್ಬಿ 'ಕರ್ಣ'ಂತೆಳೂ ಒಂದು ಹೆಸ್‌ರಾಗಿ ಅದೇ ಪ್ರಸಿದ್ಧಿಗೆ ಬಾತ್.

ದಿನಂಗ ಹೀಂಗೆ ಓಡಿಕೆಂಡ್, ವೊರ್ಸಗಳೇ ಆದೋ. ಕುಂತಿ ಸಣ್ಣ ಗೂಡೆ ಆಗಿದ್ದೆದ್ ಜವ್ವನೆ ಆತ್. ಅದ್‌ಕೆ ಮೊದುವೆ ಮಾಡೊಕುಂತೇಳಿ ಅದರ ಮಾಂವ ಅದ್ದೆ ಸ್ವಯಂವರದ ಏರ್ಪಾಡ್ ಮಾಡಿ ದೇಶದ ರಾಜಕುಮಾರರ ಎಲ್ಲ ಬಾಕೆ ಮಾಡ್ತ್. ಪಾಂಡುರಾಜನೂ ಆ ಸ್ವಯಂವರಕೆ ಹೋಗಿತ್ತ್. ಸ್ವಯಂವರ ಮಂಟಪೆಲಿ ಕುಂತಿ ಮಾಲೆ ಹಿಡ್ಕೆಂಡ್, ಸಾಲಾಗಿ ಕುದ್ದಿದ್ದ ರಾಜಕುಮಾರರ ನೋಡಿಕೆಂಡ್ ಅದರ ಸಖಿಯರೊಟ್ಟಿಗೆ ನಿಧಾನವಾಗಿ ನಡ್ಡ್ ಬಾತ್. ಅದರ ಸಖಿಗ ರಾಜಕುಮಾರರ ಪರಿಚಯ ಹೇಳಿಕೆಂಡ್ ಬಾತಿದ್ದೊ. ಕುಂತಿಗೆ ಪಾಂಡುನ ರೂಪ ಮೆಚ್ಚಿಕೆ ಆಗಿ ಅವಂಗೆ ಮಾಲೆ ಹಾಕಿತ್. ಕುಂತಿನೊಟ್ಟಿಗೆ ಮದ್ರ ದೇಶದ ಶಲ್ಯ ರಾಜನ ತಂಗೆ ಮಾದ್ರಿನ, ಆ ದೇಶದವರ

ಆಚರಣೆಗೆ ಅನುಸರಿಸಿ ಕನ್ಯಾ ಶುಲ್ಕ ಕೊಟ್ಟ್ ತಂದ್. ಒಂದೇ ಚಪ್ಪರಲಿ ಇಬ್ಬರ ಮದುವೆನ ಭೀಷ್ಮ ತುಂಬ ವೈಭವಂದ ಮಾಡ್ಸಿತ್. ಕೆಲವು ಕಾಲ ಸಂತೋಸ್ನ ಸಂಸಾರ ಜೀವನನ ಅನುಭವಿಸಿದೊ.

ಮೃಗಬೇಟೆಗೆ ಕಾಡಿಗೆ ಹೋದು ರಾಜರಿಗೊಂದು ವ್ಯಸನ. ವ್ಯಸನ ಅಂದರೆ ದುರ್ವ್ಯಸನ. ಬೇಟೆಗೆ ಹೋಗಿ ಎಂತೆಂತದೋ ತೊಂದರೆಗಳ ಮೈ ಮೇಲೆ ಬೋರ್ಲಿಕಳಂಡವು ಒಳೊ. ಹಾಂಗೆ ಪಾಂಡು ರಾಜಂಗೂ ಒಂದು ಆಪತ್ತ್ ಎದ್ರಾತ್. ಕಾಡ್‌ಲಿದ್ದ ರುಸಿ ದಂಪತಿಗ ಸಾಧಾರ್ಣವಾಗಿ, ತಪಸ್ಸ್, ಧ್ಯಾನ, ಅಧ್ಯಯನ, ಯಜ್ಞ ಯಾಗಾಂತ ಕಾಲಕಳಿಯೊವು. ಒಂದು ದಿನ ಅಂದರೆ ಸರಿ ಸರೀಂತ ಪಾಂಡುರಾಜ ಬೇಟೆಗೆ ಬಂದ ದಿನ, ಅವ್ಕೊಂದು ಪ್ರೋಕಾಲದ ಆಸೆ ಬಾತ್. ಗಂಡ್ ಹೆಣ್ಣ್ ಸೇರ್‌ದು ಯಾಗೋಳು ಗುಟ್ಟ್‌ಲಿ, ಅಂದರೆ ಏಕಾಂತಲಿ ನಡಿಯುವಂತದ್. ಪ್ರಾಣಿಗ ಮಾತ್ರ ಎಲ್ಲೊವ್ಕ ಕಾಂಬ ಹಾಂಗೆ ಈ ಕ್ರಿಯೆನ ಮಾಡುವೆ. ಈ ರುಸಿ ದಂಪತಿಗಳಿಗೆ ನಾವೂ ಮೃಗಗಳ ಹಾಂಗ ಈ ಸುಖನ ಅನುಭವ ಪಡಿಯೊನಂತೇಳ್ದ ಆಸೆ ಉಂಟಾತ್. ಹಾಂಗೆ ರುಸಿ ಅವನ ಹೆಣ್ಣ್‌ನ ಹೆಣ್ಣ್ ಸಾರಂಗದ (ಜಿಂಕೆ) ರೂಪ ಮಾಡಿ ತಾನ್ ಗಂಡ್ ರೂಪಾಗಿ ಈ ಸುಖನ ಅನುಭವಿಸಿಕೆ ಹೊರ್ಟೊ. ಬೇಟೆಗೆ ಬಂದ ರಾಜಂಗೆ ಎರ್ಡ್ ಮುರ್ಗಂಗ ಒಟ್ಟಿಗೆ ಇರುದರ ನೋಡಿ ಖುಸಿ ಆತ್. ಜಲ್ದಿಗೆ ಬಾಣನ ಜೋಡಿಸಿ ಗುರಿನೋಡಿ ಬುಟ್ಟತ್. ಕೂಡ್ಲೆ ಅವಂಗೆ ಕೇಳ್ದ್ ಒಂದು ಗಂಡ್‌ಸನ ವೇದನೆಂದ ಕೂಡ್ದ ಶಾಪದ ದನಿ "ನೀನೂ ನನ್ನ ಹಾಂಗೆ ನಿನ್ನ ಹೆಣ್ಣ್‌ನೊಟ್ಟಿಗೆ ಸೇರ್‌ಕನ ಸಾಯುವ"ಂತೇಳಿ ಮೊಂಯಿಸನ ರೂಪುಲಿ ಹೆಣ ಆಗಿ ಬಿದ್ದತ್. ಪಾಂಡುಗ ಜಪ ಹಾರ್‌ಹಾಂಗೆ ಆತ್. ಎಂತಾ ಅನ್ಯಾಯ ಆಗಿ ಹೋತು. ರುಸಿಯಾದವಂಗೆ ಈ ವಿಕಾರ ಅದ ಕಾಡ್ ಬುದ್ಧಿ ಯಾಕೆ ಬಾತ್? ಅವಂದಾದ ತಪ್ಪು ಕೆಲ್ಸಕೆ ಸರಿಯಾದ ದಂಡನೆ ಅವಂಗಾತ್. ಅದರೆಡೆಲಿ ನಂಗೆ ಅನ್ಯಾಯವಾಗಿ ಈ ಶಿಕ್ಷೆ ಬಾತ್. ಗಂಡ್‌ಗ ಒಂದು ಹೆಣ್ಣ್ ಮೈ-ಮನ್‌ಸ್‌ಗಳೆರಡ್ಲಿಯೂ ಒಂದಾಗಿ ಬದ್ಕ್ಲೀ ಜೀವನ. ಅದೇ ದಾಂಪತ್ಯದ ಸಂಸಾರ. ಆ ಹೆಣ್ಣ್‌ಂತೇಳುದರ ಕೂಟನೇ ಇಲ್ಲೇಂತೇಳಿರೆ ಮತ್ತ ಎಂತ ಸುಖ ಬಾಕ್? ರಾಜ್ಯ ಕೋಶ ಇಂತೊವೆಲ್ಲ ಇದ್ದರೂ ಏನ್ ಬಾತ್? ಒಟ್ಟಾರೆ ಒಬ್ಬ ಪಡ್ಡೆಂಡ್ ಬಂದದ್. ಎಷ್ಟುಟ್ಟೋ ಅಷ್ಟೇ ಅವಂಗೆ ದಕ್ಕುದು. ಹೀಂಗೆ ನೆನ್ಸಿಕಂಡ್ ಪಾಂಡುರಾಜ ಅರಮನೆಗೆ ಹಿಂದೆ ಬಾತ್. ಭೀಷ್ಮಂಗೆ, ಧೃತರಾಷ್ಟ್ರಂಗೆ, ವಿದುರಂಗೆ, ಅಜ್ಜಿ ಸತ್ಯವತಿಗೆ, ಅಮ್ಮೆಕಳಿಗೆ ಎಲ್ಲ ನಡ್ದ ಸಂಗತಿನ ಹೇಳ್ತ್. ನಂಗ ಇನ್ನ್ ಈ ವಿಲಾಸದ ಜೀವನ, ರಾಜಭೋಗ, ಯಾದೂ ಬೇಡ. ನಾ ಕಾಡಿಗೆ ಹೋನೆ. ಯಾರೂ ನನ್ನ ತಡಿಬೆಡಿಂತ ಹೇಳಿ ತನ್ನ ವಸ್ತು ಒಡವೆಗಳೆಲ್ಲ ಬಡೋವ್ರಕೆ ದಾನ ಮಾಡಿ, ಹೊರ್ಟತ್. ಅವನ ಬೆನ್ನ್ ಹಿಂದಂದ ಕುಂತಿನೂ ಮಾದ್ರಿನೂ ಹೋದೊ. ಪಾಂಡು 'ಶತಶೃಂಗ' ಪರ್ವತಕ್ಕೆ ಹೋತು. ಅದೊಂದು ಪವಿತ್ರ ರುಷ್ಯಾಶ್ರಮ. ಆ ರುಷಿಗಳ ತಪಸ್ಸ್‌ನ ಮಹಿಮೆಂದ ಜಾತಿವೈರಿಗಳಾಗಿದ್ದ ಮುರ್ಗಂಗಳೂ ಸ್ನೇಹಂದಳೇ ಅಲ್ಲಿ ಇದ್ದೊ.

ಮಕ್ಕ :
ಅದ್ ಹೇಂಗೆ ಸಾಧ್ಯ ತಾತಾ? ಹುಲಿಗೆ ಜಿಂಕೆ ಆಹಾರ. ಅದರ ಕೊಂದ್ ತಿನದಿದ್ದರೆ ಹುಲಿ ಸಾಯೊಕೋ? ಅದ್ಕೆ ಹುಲ್ಲ ತಿಂದ್ ಗೊತ್ತಿಲ್ಲ?

ತಾತ :
ಬಾರಿ ಜೋರುನ ಪ್ರಶ್ನೆನೆ ಕೇಳ್ಟೆರಿ. ಆಶ್ರಮಗಳ ಪವಿತ್ರತೆ ಮತ್ತೆ ಮಹಿಮೆಗಳ ವರ್ಣನೆ ಮಾಡ್‌ಕನ ಕವಿಗ ಹೀಂಗೆ ಅತಿಯೋಕ್ತಿ ಮಾಡುವೆ. ಹುಲಿ ಸಾರೆಜಗಳ ಕೊಂದ್ ತಿನದಿದ್ದರೆ ಸಾಯೊಕಾದು ನಿಜ. ಆದರೆ, ಆಶ್ರಮದ ಪರಿಸರದ ವಿಸ್ತಾರ ಎಷ್ಟಗಲಿಕ್ಕುಟ್ಟೊ ಅಷ್ಟಗಲಲೆಲಿ ಕೊಲ್ಲುವ ಹಿಂಸಾಕಾರ್ಯ ನಡೆಯಕಿಲ್ಲೆ ಅಲ್ಲಿಂದ ಹೊರೆಗೆ ಹೋಗಿ ಹುಲಿ ಬೇಟೆಯಾಡಿ ತನ್ನ ಆಹಾರನ ತಿಂದ್ ಬಾಕೆ ಅಡ್ಡಿ ಇಲ್ಲೆಲ್ಲ. ಈಗ ನಮ್ಮಲೆಲ್ಲಿ ದೇವಸ್ಥಾನಂಗಳ ಉತ್ಸವಕ್ಕೆ ಗೊನೆ ಕಟ್ಟವೆ. ಅಂದ್‌ಂದ ಮೇಲೆ, ಉತ್ಸವ ಮುಗಿಯಕನ ಮುಟ್ಟ ಆ ಊರುಲಿ ಪ್ರಾಣಿ ಹಿಂಸೆ ಮಾಡಿಕೆ ಆಗೆದ್‌ಂತೇಳ್ವ ನಿಯಮ ಕಡ್ಡಾಯ ಉಟ್ಟು. ಆಗ ಕಳೆಯದ ನಂಟ್ರ್‌ಗ ಬಂದ್ ಬುಟ್ಟರೆ ಅವ್ಕೆ ಸಮ್ಮಾನ ಮಾಡ್ದು ಹೇಂಗೆ? ನಮ್ಮ ಊರುನ ಗಡಿದಾಟಿ ಕೋಳಿನ ತಕಂಡ್ ಹೋಗಿ ಅಲ್ಲಿ ಅದರ ಕೊಂದ್, ಮಾಸಮಾಡಿ ತಂದ್ ಮನೆಲಿ ಗೈಪುಮಾಡಿ ನಂಟ್ರ್‌ಗೆ ಗಮ್ಮತ್ ಮಾಡಿಕಳ್ಳೆಕ್. ಹೀಂಗೆನೂ ಇಲ್ಲಿಯೂ ನಡಿಯುತಿದ್ದಿರ್ದು. ಅದ್ ಸಾಕ್. ಇನ್ನ್ ಮುಂದೆದರ ನೋಡೊನೊ.

ಹಿಂದೆ ನಿಲ್ಸಿದ ಕರ್ಣನ ಕತೆನ ಹಜ್ಜ ನೋಡಿಕಮೊನೊ. ಕರ್ಣ ಸೂತನ (ರಥದ ಸಾರಥಿ) ಮನೆಲಿ ಪೋರ್ಲು ಬೆಳಿಯುತಿತ್ತ್. ಪ್ರಾಥಮಿಕ ವಿದ್ಯೆ ಮತ್ತೆ ಶಸ್ತ್ರಾಭ್ಯಾಸನೆಲ್ಲ ಕಲ್ತಿತ್. ಆಗಳೆ ಅಂವ ಸೂರ್ಯ ದಿನದಂದ್ ಗಂಗೆಲಿ ಮೀಯುದು, ಸೂರ್ಯನ ಪೂಜೆ ಮಾಡುದು ಮತ್ತೆ ತನ್ನ ಹಕ್ಕಲೆ ಇರುದರ ಯಾರಾರ್ ಕೇಳಿರೆ ಕೂಡ್ಲೆ ಅವ್ಕೆ ಅದರ ದಾನ ಮಾಡ್ದು, ಇದೆಲ್ಲ ಅವನ ಅಭ್ಯಾಸ ಆಗಿತ್ತ್. ಇಂದ್ರನ ಅಂಶಲೆಲಿ ಹುಟ್ಟುವ ಅರ್ಜುನಂಗೂ ಇಂವಂಗೂ ಮುಂದೆ ಯುದ್ಧ ಆವ ಸಂಭವ ಉಟ್ಟು. ಅಂವ ಗೆಲ್ಲೊಕೂರೆ ಇಂವನ ಈಗಲೇ ಸಮ ಮಾಡೂಕೂಂತ ಇಂದ್ರ ತಂತ್ರ ಮಾಡ್ತ್. ಒಬ್ಬ ಹಾರಂವನ ವೇಸ ಹಾಕಂಡ್ ಗಂಗಾ ತೀರಕೆ ಬಂದ್ ಕರ್ಣನ ನೋಡ್ತ್. ಹಾರಂವ ಬಾದೇ ಏನಾರ್ ಬೇಡಿಕೆಂತ ಕರ್ಣಂಗೆ ಗೊತ್ತು. 'ಏನ್ ಬೇಕು ನಿಂಗೇ'ಂತ ಕೇಳ್ತ್. ನಂಗೆ ನಿನ್ನ ಕವಚ ಮತ್ತೆ ಕೆಬಿಲಿರುವ ಕುಂಡಲಗ ಬೇಕುಂತ ಹೇಳ್ತ್. "ತಕ"ಂತ ಹೇಳ್ತ್ ಕರ್ಣ, "ಬೇಡ್‌ದ ವಸ್ತುನ ಕೊಡಿಕೆ ಮುಂದೆ ಮುಟ್ಟಿಕೆ ಆಗದ್‌ಂದ್ ಇಂದ್ರ ಹೇಳ್ತ್. ಆಗ ಕರ್ಣ ಒಂದು ಬಾಣಂದ ಮೈಗೆ ಗೀರಿ, ಚೂಲಿನ ಎಳ್ಕಿಸಿದಾಂಗೆ ಕವಚನ ಪರಪರಂತ ಎಳ್ದ್, ಕುಂಡಲನ ಇದ್ದ ಕೆಬಿನ ಜಾಗೆನ ಕೊಯ್ದ್ ಅದರ್‍ನೂ ತೆಗ್‌ದ್ ಕೊಟ್ಟಿತ್. 'ಅಯ್ಯೊ ಬೇನೆ ಆದೆ. ನಿಂಗೆ ಬೇರೇನಾರ್ ಕೊಟ್ಟನೆಂತ ಹೇಳ್ತೊ? ಇಲ್ಲೆ. ಸೂರ್ಯ ಬಂದ್ 'ಮಬ್ಬ ಈ ಠಕ್ಕ ಹಾರಂವಂಗೆ ನಿನ್ನ ರಕ್ಷಣೆಗಿರುವ ಕವಚ ಕುಂಡಲಗಳ ಕೊಡ್ಬಡಂತ ಹೇಳಿರೆ ಕೇಳ್ತೊ? ಇಲ್ಲೆ. ನೆತ್ತರ್ ಸರ ಸರಂತ ಹರಿಯುತಾ ಇತ್ತ್. ಇದರ ನೋಡಿ ಇಂದ್ರನ ಕಣ್ಣಲ್ಲೂ ನೀರ್ ಬಾತ್. ಅವನ ನಿಜರೂಪನ ತೋರ್‍ಸಿ, ಅಂವಂಗೆ ಒಂದು ಶಕ್ತ್ಯಾಯುಧನ ಕೊಟ್ಟ್.

ಇದ್ ದೇವದಾನವ ಮಾನವ ಯಾರೇ ಆದರೂ ಒಬ್ಬನ ಕೊಲ್ಲುವಂತಲೆದ್ ತಕ. ಇದರ ಮೆಚ್ಚಿ ನಿಂಗೆ ಕೊಟ್ಟನೆಂತ ಹೇಳಿ ಕೊಟ್ಟ್ ಇಂದ್ರ ಮಾಯ ಆಗಿ ಹೋತು. ಕರ್ಣಂಗೆ ತುಂಬ ಬಿಲ್ಲ್ ವಿದ್ಯೆನ ಕಲೆಲಿಯೊಕುಂತ ಆಸೆ. ಅಂಥ ದೊಡ್ಡ ಗುರುಗ ಯಾರು ಸಿಕ್ಕುವ್ರೊಂತ ಯೋಜನೆ ಮಾಡಿಕಲೆಂಡ್ ಇತ್ತ್. "ಇರುವರ್ಲ್ಲಿ ಭಾರಿ ದೊಡ್ಡಂವಂದರೆ, ಪರುಶುರಾಮ ಒಬ್ಬನೇ. ಆದರೆ ಅಂವ ಕ್ಷತ್ರಿಯರ ವಿರೋಧಿ. ಇಪ್ಪತ್ತೊಂದು ಸಲೆರ್ತಿ ಭೂಪ್ರದಕ್ಷಿಣೆ ಮಾಡಿ ಕ್ಷತ್ರಿಯರ ಕೊಚ್ಚಿ ಹಾಕಿದ ಕೋಪಗಾರ. ಅಂಥವನಲೆಲ್ಲಿಯೂ ಹೆದ್‌ರದೆ ಹೋಗಿ ವಿದ್ಯಾಭ್ಯಾಸ ಮಾಡ್ದ ಕ್ಷತ್ರಿಯ ವೀರಂತೇಳಿರೆ ಭೀಷ್ಮ ಒಬ್ಬನೇ. ಇವನ ಹೇಂಗೆ ಪರಶುರಾಮ ಮೆಚ್ಚಿಕಲೆಂಡಲೆತ್? ಬಹುಶಃ ಭೀಷ್ಮ ಗಂಗಾ ದೇವಿನ ಮಜ್ಜ ಆಗಿ ಅವನ ಹಕ್ಕಲೆ ಇದ್ದ ಸತ್ವಗುಣಂಗಳ ನೋಡಿ ಮೆಚ್ಚಿರಿಕೆ ಸಾಕ್. ಆದರೆ ನಂಗೆ ಅದೇನೂ ಇಲ್ಲೆ. ನಾ ಮುಗ್ಗನ ಮಜ್ಜಂತ ಹೆಸ್‌ರ್ ಪಡ್‌ದಂವ. ನನ್ನ ಅಪ್ಪ ದೊಡ್ಡ ಮೊಂಯಿಸರ ಹಕ್ಕಲೆ ರಥ ಓಡ್ಸುವ ಕೆಲ್ಸ ಮಾಡುವ ಕೂಲಿ ಅಳ್. ಹೀಂಗೆ ಇರ್‌ಕನ ನನ್ನ ಅವನ ಹಕ್ಕಲೆ ಸೋಂಕಿಕೆ ಬುಡುಕಿಲೆ. ಇದ್‌ಕೆ ಏನ್ ಉಪಾಯ ಮಾಡುದುಂತ ತುಂಬ ಯೋಜ್‌ಸಿತ್. ವೇಷ ಬದ್‌ಲ್ಸಿ ಹೋಗಿ ಸೇರಿಕಲೆಂಡ್, ಅಂವ ಮೆಚ್ಚುವ ಹಾಂಗೆ ಅವನ ಸೇವೆ ಮಾಡಿರೆ ಅವಂಗೆ ಕರುಣೆ ಉಂಟಾಗಿ ಅಸ್ತ್ರವಿದ್ಯೆನ ಕಲೆಲ್ಸಿ ಕೊಡುದು. ದುಷ್ಟ ಕ್ಷತ್ರಿಯರ್‌ಂದ ತಮ್ಮ ರಕ್ಷಿಸಿಕಂಬಕೆ ಬ್ರಾಹ್ಮಣರೂ ಶಸ್ತ್ರ ವಿದ್ಯೆನ ತಿಕ್ಕಿರುದು ಅಗತ್ಯಂತ ಹೇಳಿ ಹಾರ್ರ. ಮಾಣಿಗಲೆಳೂ ಈ ವಿದ್ಯೆ ಕಲೆಲಿಯುವ ಅಗತ್ಯ ಉಟ್ಟುಂತ ವಾದ ಮಾಡಿರೆ ಮೆಚ್ಚಿ ಎಲ್ಲದರ್ನೂ ಹೇಳಿಕೊಡುದು. ಹಾಂಗೆ ಹಾರ್ರ ಮಾಣಿನ ವೇಷ ಹಾಕಲೆಂಡ್ ಅವನ ಒಳಗ ಹಾಕಲೆಂಬೂದೇ ದಾರಿ!" ಹೀಂಗೆ ತೀರ್ಮಾನ ಮಾಡಿ ತಡು ಮಾಡದೆ ಅವನಲ್ಲಿಗೆ ಹೋತು. ಕೆಲವೇ ದಿನಲೆಲಿ ಅವಂಗೆ ಮೆಚ್ಚಿನ ಶಿಷ್ಯ ಆತ್. ಎಂತದನ್ನೋರ್ ಒಮ್ಮೆ ಹೇಳಿ ಕೊಟ್ಟರೆ ಸಾಕ್. ಹಸಿ ಮೊಣ್ಣಿಗೆ ಕಲೆಲ್ಲ್ ಇಟ್ಟಾಂಗೆ ಅದರೆಲ್ಲ ಗಬಕ್ಕಂತ ಹಿಡ್ಕಂಬತಿತ್ತ್. ಹೀಂಗೆ ಕಲೆಲ್ತ್‌ಕಂಬ ಶಿಷ್ಯಲೆರ್ ಸಿಕ್ಕಿರೆ ಗುರುಗಲೆಳಿಗೆ ಎಲ್ಲಿಲ್ಲದ ಸಂತೋಸು. ಹಾಂಗೆ ಪರಶುರಾಮ ಅಂವಂಗೆ ಬೇಗ ಬೇಗ ಎಲ್ಲ ಮಹಾಸ್ತ್ರಗಳ ಪ್ರಯೋಗಗಳ್ನೂ ಹೇಳಿ ಕೊಟ್ಟಲೆತ್. ಒಂದು ದಿನ ಮಧ್ಯಾಹ್ನ ಹೊತ್ತು ಆಶ್ರಮದ ಜಗ್‌ಲಿಲಿ ಪರಶುರಾಮ ಪ್ರಿಯ ಶಿಷ್ಯನ ತೊಡೆ ಮೇಲೆ ತಲೆ ಇಸಿ ನಿದ್ದೆ ಮಾಡ್ತ್. ಇಂವ ಗುರುನ ತಲೆನ ಮೆಲ್ಲ ತೂರ್ಲ್ಸಿಕಲೆಂಡ್ ಕುದ್ದಲೆತ್. ಕರ್ಣನ ಇಲ್ಲಿಯೂ ಸೋಲ್ಲೊಕುಂತೇಳಿ ಇಂದ್ರ ಕುತಂತ್ರ ಮಾಡ್ತ್.

ಎರ್ಡ್ ವಜ್ರ ಕೀಟಗಳ ಕಲೆಕ್ಸಿತ್. ಅವು ಬಂದ್ ಕರ್ಣನ ತೊಡೆನ ಕೊರಿಯುಕೆ ಸುರುಮಾಡ್ವೊ. ಉಳಿನಾಂಗೆ ಇದ್ದ ಅವುಗಳ ಹಲ್ಲ್‌ಗಳ್‌ಂದ ಕರ್ಣನ ತೊಡೆನ ಮಾಸನ ಕಲೆಚ್ಚಿ ಕಲೆಚ್ಚಿ ಎಳಿಯುಕೆ ಸುರು ಮಾಡ್ವೊ. ಆ ಯಮ ಯಾತನೆನ ಗುರುನ ನಿದ್ದೆಗೆ ತೊಂದರೆ ಆಕೆ ಆಗಲೆದ್‌ಂದ್ ಹಲ್ಲ್ ಕಲೆಚ್ಚಿ ತಡ್ಕಂಡಲೆತ್. ಅಲ್ಲಿ ಎಲ್ಲ ನೆತ್ತ್‌ರ್ ಎರ್ಕಿ ನಿತ್ತಲೆತ್. ರುಸಿನ ಜೆಡೆಯೆಲ್ಲ ಚಲೆಂಡಿ ಆತ್. ಸಿನ್‌ಗ್ ಹೊಲ್ಸುವಾಸನ ತುಂಬಿತ್. ಪರಶುರಾಮಂಗೆ ಒಮ್ಮೆಂದೊಮ್ಮೆ ಎಚ್ಚರಿಕೆ ಆತ್. ನಡ್‌ದ ವಿದ್ಯಮಾನನ ನೋಡ್ತ್. ಇಂವ ಬ್ರಾಹ್ಮಣ ಆಗಿದ್ದಿದ್ದರೆ ಇಷ್ಟರವರೆಗೆ ಈ ಬೇನೆನ ತಡ್ಕಂಬಕೆ ಆಕತ್ತ್‌ಲೆ. "ಬ್ರಾಹ್ಮಣಂತ

ನನ್ನೊಟ್ಟಿಗೆ ಸುಳ್ಳು ಹೇಳಿ ವಿದ್ಯೆ ಕಲ್ತೊಳ್". ಈ ದೋಸಕ್ಕೆ ನಿಂಗೆ ಶಿಕ್ಷೆ ಬೇರೇನೂ ಇಲ್ಲೆ. ನಾ ನಿಂಗೆ ಕಲ್ಲಿಕೊಟ್ಟ ಮಹಾಸ್ತ್ರಗ ಎಲ್ಲ ನಿನ್ನ ಅವಸಾನ ಕಾಲಲಿ ನಿಂಗೆ ಕೈ ಗೂಡದೆ ಹೋಗಲಿ. ಇಂದ್‌ದ ಮೇಲೆ ನೀ ಇಲ್ಲಿ ಇರಿಕೆ ಬೊತ್ತ್. ನಡಿ ಹೊರೆಗೆ."

ಈ ಆಯುಧಗ ಪ್ರಯೋಜನಕೆ ಬಾರದೆ ಹೋದರೆ ಹೋಗಲಿ. ಇಂದ್ರ ಕೊಟ್ಟ ಶತ್ರ್ಯಾಯುಧಉಟ್ಟು. ನನ್ನ ಶತ್ರುನ (ಅಂವ ನೆನ್ನಿದ್ ಅರ್ಜುನನ!) ನಾಶಕ್ಕೆ ಅದ್ ಸಾಕ್. ಅಷ್ಟ್ ಮಾಡ್ದ ಮೇಲೆ ನಾ ಸತ್ತರೂ ತೊಂದರೆ ಇಲ್ಲೆ. ಕೃಷ್ಣನ ಉಪಾಯಂದ ಅವನ ಈ ಉದ್ದೇಶನೂ ನೆರವೇರ್‌ತ್ಲೆ. ಕರ್ಣ ಮಾಡ್ದ ಎಲ್ಲ ಪ್ರಯತ್ನನೂ ನೀರ್‌ನ ಮೇಲೆ ಹೋಮ ಇಸಿದ ಹಾಂಗೆ ಆತ್. ಮತ್ತೆ ವಾಪಾಸ್ ಹಸ್ತಿನಾವತಿನ ತನ್ನ ಮನೆಗೆ ಬಾತ್. ಆದರೆ ಅಂವಂಗೆ ಹೆಚ್ಚಿ ದಿನ ಸುಮ್ಮನೆ ಕುದ್ರಿಕೆ ಆತ್‌ಲೆ. ಅಷ್ಟರ್ಲಿ ಕುರುರಾಜಕುಮಾರರಿಗೆ ಬಿಲ್ಲ್ ವಿದ್ಯೆ ಕಲ್ಸುವ ಆಶ್ರಮನ ದ್ರೋಣಾಚಾರ್ಯರ್ ಭೀಷ್ಮರ ಒತ್ತಾಸೆಂದ ತೆರ್ದೊ. ಅದಿಕೆ, ಕುರುಕುಲದವು ಮಾತ್ರ ಅಲ್ಲ. ದ್ರೋಣನ ಕೀರ್ತಿ ತುಂಬ ದೂರ ಹಬ್ಬಿದರ್‌ಂದ ಬೇರೆ ಬೇರೆ ರಾಜ್ಯಗಳ ರಾಜಕುಮಾರರ್ ಕೂಡ ಬಂದ್ ಅದ್ಕೆ ಸೇರ್ದೊ. ಹಾಂಗೆ ಕರ್ಣನೂ ಒಂದು ಒಳ್ಳೆದಿನ ಬೊಳ್ಪಿಗೆ ಗಂಗೆಲಿ ಮಿಯ್ದ್. ಸೂರ್ಯ ದೇವ್ರ ಪೂಜೆ ಮಾಡಿ. ದ್ರೋಣರ ಆಶ್ರಮಕೆ ಬಂದ್ ಅವರ ಕಾಲಿಗೆ ನಮಸ್ಕಾರ ಮಾಡಿ, ನನ್ನ ನಿಮ್ಮ ವಿದ್ಯಾರ್ಥಿಯಾಗಿ ಸ್ವೀಕರ್ಸೊಕುಂತ ಬೇಡಿಕೆಂಡತ್. ಅವನ ಸರೀರದ ಕಾಂತಿ, ಅವನ ಮೋರೆನ ತೇಜಸ್ಸ್ ನೋಡಿ ದ್ರೋಣರಿಗೆ ಮೆಚ್ಚಿಕೆ ಆತ್. ಒಪ್ಪಿಕಂಡೊ.

**ಮಕ್ಕ :**

ತಾತ! ಪರಸುರಾಮ ಕರ್ಣ ತನಿಗೆ ಅಷ್ಟ್ ಹಿಂಸೆ ಆದರೂ ತಡ್ಕಂಡ್ ಗುರುಗೆ ನಿದ್ರಾಭಂಗ ಆಕೆ ಆಗದ್‌ಂತ ಇದ್ದದೇ ದೋಸಂತ ಪರಸುರಾಮ ಸಾಪಕೊಟ್ಟತ್. ಒಂದು ವೇಳೆ ಮುಂದೆನೆ ಅಂವ ಜೇನೆ ತಾಳದೆ ಬೊಬ್ಬೆ ಹೊಡ್ದ್ ಎದ್ದಿದ್ದರೂ. ಆ ಗುರು, ನನ್ನ ನಿದ್ರಾಭಂಗ ಮಾಡ್ದ ಪಾಪಿ!ಂತ  ಸಾಪ ಕೊಡ್‌ಕಿತ್ತ್‌ಲೆನೋ?

**ತಾತ :**

ಅದೂ ಆಗ್‌ತಿತ್ತ್. ಎರ್ಡ್ ರೀತಿಂದಲೂ ಕರ್ಣನ ತೊಂದರೆಗೆ ಸಿಕ್ಕ್‌ಸುದೇ ದೇವೇಂದ್ರನ ಹಂಚಿಕೆ. ದೇವೇಂದ್ರ ಮಹಾಖದೀಮ. ಯಾರಾದರೂ ತಪಸ್ ಮಾಡಿ ಶ್ರೇಯಸ್ ಸಂಪಾದ್ಸುವಂತಾದರೆ ಹಂಗಾರ್ ಮಾಡಿ ಅದರ ಕೆಡ್ಸುದು, ಎಲ್ಲಿಯಾರ್ ಪೊರ್ಲುನ ಹೆಣ್ಣಕಳ ನೋಡಿರೆ, ಹಂಗಾರ್ ಮಾಡಿ ಅವರ ಸೀಲ ಹಾಳ್ ಮಾಡುದು. ಇಂಥ ದುರ್ಗುಣಂಗಳ ತುಂಬಿದವನ ದೇವತೆಗಳಿಗೆ ರಾಜ ಆಗಿ ಯಾರ್ ಮಾಡ್ದೊನೋ? ರಕ್ಕಸರ್ ಬಂದ್ ಅವನ ಹೊಡ್ದೋಡ್ಸಿರೆ, ಕೈಲಾಗದಂವ ಹೋಗಿ ನಾರಾಯಣನನಾಗಲೀ ಈಶ್ವರನನಾಗಲೀ ನೋಡಿ ದಮ್ಮಯ ಹಾಕಿ, ತನ್ನ ಸ್ಥಾನನ ಹೇಂಗಾರ್ ಸಂಪಾದ್ಸಿಕೆಂಬೊದು. ಈಗನ ನಮ್ಮ ರಾಜಕೀಯಲಿ ಅಂವ ಇದ್ದಿದ್ದರೆ ಅಂವ ಭಾರಿದೊಡ್ಡ ಜೆನ ಆತಿತ್ತ್.

ಶತಶೃಂಗ ಪರ್ವತದ ಋಷಿಗಳ ಆಶ್ರಮಕೆ ಪಾಂಡುರಾಜ ಬಂದವ್. ಅಲ್ಲಿದ್ದ

ರುಷಿಗಳೆಳಿಗೆಲ್ಲ ಭಾರಿ ಸಂತೋಸಾತ್. ಆಶ್ರಮದ ರಕ್ಷಣೆಗೆ ಇಂತ ಬಲಶಾಲಿ ರಾಜ ಇದ್ದರೆ ತುಂಬ ಒಳ್ಳೆದ್. ಹಾಂಗೆ ಪಾಂಡುರಾಜ ಆ ಆಶ್ರಮದ ಅಧ್ಯಕ್ಷ ಆತ್. ಯೂನಿವರ್ಸಿಟಿಗಂತ ಒಳೊಲೆ. ಅದಿಕೆ ರಾಜ್ಯಾಡಳಿತದ ಮೇಲ್ವಿಚಾರಕನ್ನಾಂಗಿರುವ ಗವರ್ನರ್, ಛಾನ್ಸಲರ್ಂತ ಇದ್ದವೆಲೆ, ಹಾಂಗೆ. ಪಾಂಡುರಾಜ ತಪಸ್ವಿಗಳೊಟ್ಟಗೆ ಒಬ್ಬ ತಪಸ್ವಿನಾಂಗೇ ಇತ್ತ್. ಬೊಳ್ಪಿಗೆ ಬೇಗ ಎದ್ದ್, ಎಂಥ ಚಳಿ ಇದ್ದರೂ ಬೆಟ್ಟಂದ ಇಳ್ದ್ ಬಾವ ತೊರೆಲಿ ತಲೆ ಮೈ ಮಿಯ್ದ್ ಸುಮಾರ್ ಒಂದು ಗಂಟೆ, ಪ್ರಾಣಾಯಾಮ ಆಸನ, ಧ್ಯಾನಗಳ್ಲಿ ಮುಳುಗಿರ್ದು . ಮತ್ತೆ ಒಂದು ಗಂಟೆ ಕುಲ ದೇವ್ರ ಪೂಜೆ ಮಾಡಿ. ಮತ್ತೆ ಕಾಡ್ಂದ ಎಳ್ಕಕೆಂಡ್ ತಂದ ಗೆಡ್ಡೆ ಗೆಣ್ಸ್‌ಗಳ ಬೇಸಿ ಮಾಡ್ದ ಲಘೂಪಾಹಾರನ ತಿಂದ್ ಹಜ್ಜ ಸಮಿಯ ವಿಶ್ರಾಂತಿಲಿ ಕುದ್ದಕೆಂಡ್, ಕೆಲವು ಓಲೆ ಗ್ರಂಥಗಳ ಪುಟ ಮೊಗ್‌ಚಿ ನೋಡಿಕೆಂಡ್ ಇರ್ದು. ಇದಾಗಿ ಹಜ್ಜ ಹೊತ್ತುಲಿ, ರುಷಿಗಳ ಗೋಷ್ಠಿ ನಡಿವಲ್ಲಿಗೆ ಹೋಗಿ ಅವು ಚರ್ಚೆ ಮಾಡುವ ವೇದ ವೇದಾಂತ ವಿಚಾರಗಳ ಆಲ್ಸುದು. ಹೀಂಗೆ ಒಳ್ಳೆ ಸಾತ್ವಿಕ ವೃತ್ತಿಲಿ ದಿನ ಕಳೆಳಿಯುತ್ತಿತ್ತ್. ಅವನ ಎರ್ಡ್ ಹೆಣ್ಮಕಳೂ ಅವಂಗೆ ಅನುಕೂಲ ಆಗುವ ಹಾಂಗೆ ನಡ್ಕಂಡ್ ಅವಂಗೆ ಸಂತೋಸು ಉಂಟು ಮಾಡ್‌ತಿದ್ದೊಟ. ಒಂದು ನಾಲ್ಕೈದ್ ವೊರ್ಸ ಹೀಂಗೇ ಕಳ್ದ್. ಈಗ ಅವ್ಕೆ, ಅಯ್ಯೋ, ಕಾಡ್‌ಲಿ ಹಾರಾಡಿಕೆಂಡ್ ಇರುವ ಹಕ್ಕಿಗಳೆಳಿಗೆ ಓಡುವ ಪ್ರಾಣಿಗಳೆಳೀಗೂ ಮೊರಿಗ ಹುಟ್ಟುವೆ. ಆ ಮೊರಿಗಳ ಲಾಲನ ಪಾಲನ ಮಾಡಿ. ಅವರ್ಂದ ತುಂಬ ಸಂತೋಸು ಪಟ್ಟವೆ. ಮೊಂಯಿಸಳಾಗಿ ಹುಟ್ಟಿದ ನಾವ್‌ಗೆ ಈ ಗತಿ ಆತೋ ದೇವ್ರೇಂತ ತುಂಬ ವ್ಯಥೆ ಪಟ್ಟೊಟ. ಗಣ್ಮಕಂದೊಳು ಹೆಣ್ಮಕಳಿಗೆ ಮಕ್ಕಇಲ್ಲದ ಕೊರತೆ ತುಂಬ ವೇದನೆ ಕೊಡುದು. ಹಾಂಗೆ ಕುಂತಿ ಮನ್‌ಸ್‌ನೊಳಗೆ ವೇದನೆ ಪಟ್ಟದಂತ ಪಾಂಡು ರಾಜಂಗೆ ಗೊತ್ತಾತ್. ಅದೇ ಸಮಿಯಕೆ ಸರಿಯಾಗಿ ಗಾಂಧಾರಿಗೆ ವೇದ ವ್ಯಾಸ ರುಸಿ ಬಂದ್ ನೂರು ಮಕ್ಕ ಆವ ಹಾಂಗೆ ವರಕೊಟ್ಟುಟು ಗಡಂತೇಳ್ವ ಸುದ್ದಿ ಬಾತ್. ಕುರು ರಾಜ್ಯಕ್ಕೆ ಅಧಿಪತಿಯಾಗಿದ್ದಂವ ಪಾಂಡು ರಾಜ. ಅಂವ ಆವ ಮೇಲೆ ರಾಜ್ಯ ಸೇರಕಾದ್ದ್ ಪಾಂಡುನ ಹಿರಿಯ ಮಜ್ಜಂಗೆ. ರುಸಿನ ಸಾಪಂದಾಗಿ, ಪಾಂಡುರಾಜಂಗೆ ಮಕ್ಕ ಆವ ಹಾಂಗೆ ಇಲ್ಲೆ. ಈಗ ಧೃತರಾಷ್ಟ್ರನೇ ರಾಜ ಆಗಿದ್ದರ್ಂದ ಗಾಂಧಾರಿ ಮಕ್ಕಳ ಪಡ್‌ದರೆ, ರಾಜ್ಯಭಾರ ಅವರ ಮಕ್ಕಳಿಗೇ ಸೇರ್ದಂತೇಳುವ ಆತಂಕ ಕುಂತಿಗೆ ಹೆಚ್ಚಿತ್. ಆದರ ನೋಡಿ ಪಾಂಡು ಕುಂತಿಗೆ ಹೇಳ್ತ್: "ನಿಂಗೆ ಮಕ್ಕಳ ಆಸೆ ಉಂಟಾವರೆ ನೀ ಹೀಂಗಿರ್ಬಡ. ಗಂಡಂದ ಮಕ್ಕಳ ಪಡಿಯುಕೆ ಆಗದಿದ್ದರೆ ಉತ್ತಮ ಬ್ರಾಹ್ಮಣರ್ಂದ, ಇಲ್ಲರೆ ರುಷಿಗಳ್ಂದ ಪಡ್ಕಂಬೊದರ್ಲಿ ಏನೂ ದೋಸ ಇಲ್ಲೆ. ಈ ನಿಯೋಗ ಕ್ರಮ ಹಿಂದೆಂದಳೆ ನಡ್‌ದ್ ಬಂದುಟು. ಧರ್ಮಜ್ಞರಾದ ಬ್ರಾಹ್ಮಣೋತ್ತಮರ್ ಇದರ ಬೇಡಂತೇಳಿಕಿಲೆ. ಹಾಂಗೆ ನೀ ಅಂತವರ ಪೂಜಿಸಿ, ಒಲ್ಸಿ ನಿಂಗೆ ಬೇಕಾದ ಮಕ್ಕಳ ಪಡ್ಕ. ಅದರ್ಲೇನೂ ತೊಪ್ಪಿಲ್ಲೆ" ಈ ಮಾತ್‌ನ ಕೇಳಿ ಕುಂತಿಗೆ ಧೈರ್ಯ ಬಾತ್. ಸಾಮ್ರಾಜ್ಯಕ್ಕೆ ಅಧಿಪತಿಯಾಗುವ ಕುಮಾರನ ಗಾಂಧಾರೀಂದ ಮುಂದೆ ನಾನೆ ಪಡಿಯೊಕುಂತ ಸಂಕಲ್ಪ ಮಾಡ್ತ್. ಮತ್ತೆ ತಾನ್ ಕನ್ಯೆಯಾಗಿರಿಕನ ದೂರ್ವಾಸ ರುಸಿ

ಐದ್ ಮಂತ್ರಗಳ ಉಪದೇಶನ ಮಾಡ್ತು ವಿವರಗಳ ಎಲ್ಲ ಗಂಡಂಗೆ ಹೇಳ್ತ್. ಪಾಂಡುಗೆ ಖುಶಿ ಆತ್. ನಮ್ಮ ಕೈಯೊಳಗೇ ತುಪ್ಪ ಇರ್ಕನ ಇನ್ನ್ ಬೇರೆ ಕಡೆ ಏಕೆ ಹುಡ್ಕುದು? ಹಾಂಗೇ ಮಾಡ್‌ಂದ್ ಪಾಂಡು ಅಪ್ಪಣೆ ಕೊಟ್ಟೆತ್. ಹಾಂಗೆ ಕುಂತಿ ತಕ್ಕ ಆಚರಣೆ ಮಾಡಿ ಲೋಕಲಿ ಧರ್ಮನ ರಕ್ಷಣೆ ಮಾಡದಂವ ಯಮಧರ್ಮನೇಂತ ಯೋಚನೆ ಮಾಡಿ ಮಂತ್ರನ ಜಪಿಸಿ ಅವನ ಬಾಕೆ ಮಾಡ್ತ್. ಬಂದಂವ ಏನ್ ಬೇಕೂಂತ ಕೇಳ್ದ್ರೆಕೆ ನಿನ್ನಾಂಗೆ ಧರ್ಮಿಷ್ಟ ಆಗಿರುವ ಒಬ್ಬ ಮಜ್ಜನ ಕೊಡುಂತ ಕುಂತಿ ಕೇಳ್ತ್. 'ತಥಾಸ್ತು'ಂತ ಯಮ ವರ ಕೊಟ್ಟ್ ಹೋತು. ಕಾಲಾನುಕ್ರಮಲಿ ಕೂಸು ಹುಟ್ಟಿತ್. ಗಾಂಧಾರಿಗ ನೂರು ಮಕ್ಕಳ ಗರ್ಭ ಬೆಳಿಯಕೆ ಹೆಚ್ಚಿ ಸಮಯ ಬೇಕಾದ ಕಾರಣ, ಕುಂತಿನೊಟ್ಟಿಗನ ಸ್ಪರ್ಧೆಲಿ ಗೆಲ್ಲಿಕಾತ್‌ಲೆ. ನನ್ನಂದ ಮುಂದೆ ರಾಜ್ಯಕ್ಕೆ ಅಧಿಕಾರಿಯಾಗುವ ಮಜ್ಜನ ಕುಂತಿ ಪಡ್ದ್ ಬುಟ್ಟಿತಲೇಂತ ಅದ್‌ಕೆ ಕಾಲ್‌ಂದ ತಲೆಗೆ ಮುಟ್ಟ ಮತ್ಸರ ತುಂಬಿತ್. ಅದರ ಉಬ್ಬಿದ ಹೊಟ್ಟೆನ ನೋಡ್ಕನ ಅದಿಕೆ ಕೋಪ ನೆತ್ತಿಗೇರ್ತ್. ಈ ಪ್ರಯೋಜನ ಇಲ್ಲದ ಬೊಸ್‌ರ್ ಇನ್ನ್ ಇದ್ದೇನ್ ಪ್ರಯೋಜನ? ಆ ರುಷಿ ನಂಗೆ ಮೋಸ ಮಾಡ್ತ್‌ಂತ ಹೊಟ್ಟೆಗೆ ಹೊಡ್ಕಂಡ್, ಅದರ ಒಳ್ಳ ಮುಜೆಕಿತ್. ಇಷ್ಟಾಕನ ಅದರ ಹೊಟ್ಟೆಲಿದ್ದ ನೂರು ಗರ್ಭ ಪಿಂಡಗಳೂ ಜರ್ರಂತ ಹೊರೆಗೆ ಜಾರ್ದೋ. ಆಗ ಗಾಂಧಾರಿ ಕೋಪಲಿ ಅದರ ಕಲ್‌ಸದ ಗೂಡೆಗಳ ಕರ್ದ್ ಇದರೆಲ್ಲ ಕಟ್ಟ್ ತಕಂಡ್ ಹೋಗಿ ದೂರ ಇಟ್ಟೆ ಬನ್ನಿಂತ ಹೇಳ್ತ್. ಅಷ್ಟಾಕನ ಅಲ್ಲಿಗೆ ವೇದವ್ಯಾಸ ರುಷಿ ಪ್ರತ್ಯಕ್ಷ ಆತ್. ನಿಂಗೆ ಒಳ್ಳ ನೂರು ಮಕ್ಕ ಹುಟ್ಟಲಿಂತ ನಾ ಒಳ್ಳ ಉದ್ದೇಶಂದ ವರ ಕೊಟ್ಟರೆ ನೀ ಅದರ ಹಾಳ್‌ಮಾಡಿಕಂಡ ಬುದ್ಧಿ ಗೆಟ್ಟ ಹೆಣ್ಣೇಂತ ಅದಿಕೆ ಜೋರು ಮಾಡಿ, ನೂರು ಕಂದಲ್‌ಗಳ ತರ್ಸಿ ಅದರ್ಲಿ ಹೊಸ ತುಪ್ಪನ ತುಂಬ್ಸಿ ಅದರ್ಲಿ ಆ ಒಂದೊಂದು ಪಿಂಡನು ಇಸಿ, ಬಾಯಿಕಟ್ಟಿ ಒಂದು ಕಡೆ ಜೋಕೆಲಿ ಇಸಿ, ಪಿಸಿ ಪಿಸಿಂತ ನಾಲ್ಕ್ ಮಂತ್ರ ಹೇಳಿ ಅಲ್ಲಿಂದ ಹೋತು.

**ಮಕ್ಕ :**

ತಾತ! ಇದ್ ನಮ್ಮ ಈಗನ ಪ್ರಣಾಳ ಶಿಶು ಜನನಂತೇಳುವಕ್ಕೆ ಸರಿ ಕಂಡದೆ ಅಲ್ವಾ? ಅಂದರೆ ನಮ್ಮ ದೇಶ ಆಗಳೇ ಈ ವಿಜ್ಞಾನಲಿಯೂ ಅಷ್ಟ್ ಮುಂದೆ ಇತ್ತ್‌ಂತ ಹೇಳಲಕಾ?

**ತಾತ :**

ಅದ್ ನಮ್ಮನೆ ನಾವು ಅತಿಪ್ರಶಂಸೆ ಮಾಡಿಕಂಬ ಹಾಂಗೆ ಕಂಡದೆ. ಏನಿದ್ದರೂ ಅಷ್ಟ್ ಹೆಚ್ಚಿನ ಸಂಖ್ಯೆಲಿ ಮಕ್ಕ ಹುಟ್ಟೋಕುಂತ ಪ್ಲ್ಯಾನ್ ಮಾಡುದೇ ಒಂದು ದುರುದ್ದೇಶಂದ ಕೂಡ್ದ ವಿಚಾರದಾಂಗೆ ಕಂಡದೆ. ಒಂದೆರ್‌ಡಾಗಿದ್ದರೆ ಹತ್ತ್ ತಿಂಗಲ್‌ಲೇ ಸಹಜವಾಗಿ ಹುಟ್ಟ್‌ತಿತ್ತ್. ಹೀಂಗೆ ತನಗೆ ಮಕ್ಕ ಹುಟ್ಟಕೆ ತಡ ಆತ್. ಗಂಡಂದ ಬೊತ್ತ್‌ಲಿರೂ. ಕುಂತಿ ಹೇಂಗಲ್ಲ ಮಾಡಿ ನನ್ನಂದ ಮುಂದನೇ ಮಕ್ಕಳ ಹೆತ್ತ್ ರಾಜಪಟ್ಟ ತನ್ನ ಮಕ್ಕಳಿಗೇ ಸಿಕ್ಕುವಾಂಗೆ ಮಾಡಿಕಂಡತ್‌ಂತ ತುಂಬ ಕೋಪ ಮಾಡಿಕಂಡತ್ ಮತ್ಸರ ಪಟ್ಟತ್. ಮಕ್ಕ ಗರ್ಭಾವಸ್ಥೆಲಿ ಇರ್‌ಕನ ಅಯ್ಯಕಳ ಮನಃಸ್ಥಿತಿ ಹೇಂಗುಟ್ಟೋ ಅದರ ಪರಿಣಾಮ ಮಕ್ಕಳಿಗೂ ಉಂಟಾದೆ. ಹೀಂಗಾಗಿಯೇ ಆ ಕೌರವರ್ ಅಷ್ಟ್ ಕೆಟ್ಟವರಾಗಿ ಬೆಳ್ದೊ.

ಪಾಂಡವರ ಹಾಳ್ ಮಾಡೊಕುಂತೇಳ್ವ ಕಾರ್ಯಣೆಲಿ ಕಡೆಗೆ ಅವೇ ಹಾಳಾದೊ.

**ಮಕ್ಕ :**

ಬಾರಿ ಕಾರ ಇರುವ ಒಂದು ಸಣ್ಣ ಮೆಣ್ಸ್‌ಗೆ ಗಾಂಧಾರಿನ ಹೆಸ್ರ್ ಬಂದಣೆದಿಕೂ ಒಂದು ಅರ್ಥ ಉಟ್ಟುಂತ ಕಂಡದೆ. ಅಲ್ಲೊ ತಾತಾ?

**ತಾತ :**

ಜಾಣ ಮಕ್ಕ! ಬೇರ್ ನೋಡಿ ಎಲೆನ ತಿಳಿವ ಬುದ್ಧಿವಂತಿಕೆನ ಮಾತ್. ಇದ್ಕೆ ಏನೂ ಹೇಳಿಕಿಲ್ಲೆ. ತುಳು ಮಾತಾಡುವ ಬುದ್ಧಿವಂತಣೆರ್ ಬಹುಶಃ ಮೆಣ್ಸ್‌ಗೆ ಈ ಹೆಸ್ರ್ ಕೊಟ್ಟೊನೋ ಏನೋ! ಅದಿರ್ಲಿ. ಯುಧಿಷ್ಠಿರ ಸಣ್ಣರ್‌ಂದಣೆಳೆ, ಅವನ ಸಾಧು ಸ್ವಭಾವನ ತೋರ್ಸ್‌ತಿತ್ತ್. ಪಂಪ ಕವಿ ಅಂವಂಗೆ ಪಂಚ ಜಡೆಗ ಅರಳೆಲೆಂತೇಳುವ ಆಭರಣ ಎಲ್ಲ ಇತ್ತ್‌ಂತ ವರ್ಣನೆ ಮಾಡಿಟು.

ಇಷ್ಟಾಕನ, ಯಾಗೋಳು ಒಬ್ಬನೇ ಕೂಸಿದ್ದರೆ ಮುಂದೆ ಅಂವ ದೊಡ್ಡಂವಾಕನ ಅಂವಂಗೆ ಬೆಂಬಲ ಇಲ್ಲದಾಂಗೆ ಆದೆ. ಹಾಂಗೆ ಇನ್ನೊಂದು ಕೂಸು ಬೇಕೂಂತ ಕುಂತಿಗೆ ಬಯ್ಕೆ ಆತ್. ಹಾಂಗೆ ಅದ್ ವ್ರತ ನಿಯಮಗಳ ಮಾಡಿ ವಾಯುದೇವನ ಬರ್ಲಿ "ಮಹಾಬಲಶಾಲಿಯಾಗಿ ವೈರಿಭಯಂಕರನಾಗುವ ಒಬ್ಬ ಮಜ್ಜನ ಕೊಡು"ಂತ ಕೇಳ್ತ್. ವಾಯು 'ತಥಾಸ್ತು'ಂತ ಹೇಳಿ ಹೋತು. ಹಾಂಗೆ ಎರಡನೇ ಮಜ್ಜ ಹುಟ್ಟಿತ್. ಕೂಸಾಗಿರ್ಕನೇ ಇಂವ ಮೈ ಕೈ ತುಂಬಿಕಣೆಂಡ್ ಗಟ್ಟಿಮುಟ್ಟಾಗಿ ಇತ್ತ್. ಅಯ್ಯಗೆ ಕೂಸುನ ಎತ್ತಿ ಹಿಡ್ಕಂಬಕನ ಉಸುರು ಮೇಲೆ ಕೆಳೆಗೆ ಆತಿತ್ತ್.

ಒಂದು ದಿನ ಕುಂತಿ ಅಂಗಳದ ಜಿಂಟೆಲಿ ಕುದ್ದ್‌ಕಣೆಂಡ್ ಕೂಸಿಗೆ ಮೊಲೆ ಕೊಟ್ಟ್‌ಕಂಣೆಡ್ ಇತ್ತ್. ಅಂಗಳಂದ ಕೆಳೆಗ ಒಂದು ದೊಡ್ಡ ಬಂಡೆಕಣೆಲ್ಲ್ ಇತ್ತ್. ಎಂತಣೆದಿಕೋ ಕೂಸು ಅತ್ತ ಇತ್ತ ಉರ್ಡಿದಾಂಗೆ ಮಾಡ್ತ್. ಕುಂತಿಗೆ ಅವನ ಆಧರ್ಲಿ ಹಿಡ್ಕಂಬಕೆ ಆತ್‌ಲೆ. ಕೂಸು ಕಣೆಯಿಂದ ಜಾರಿ ಬೀತ್. ಕೂಸಿಗೆ ಎಲ್ಲಿ ಅಪಾಯ ಆದೆನೋಂತ ಕುಂತಿಗೆ ಹೆದ್‌ರಿ ಜಿವ ಇಲ್ಲೆ. ಅಯ್ಯೋ ಕೂಸು ಬೀತ್‌ಂತೇಳಿ ಕುಂತಿ ಬೊಬ್ಬೆ ಹೊಡ್ತ್. ಅಷ್ಟ್ ಎತ್ತರಂದ ಕಣೆಲ್ಲ್‌ನ ಮೇಲೆ ಬಿದ್ದರೆ ಕೂಸು ಬುಟ್ಟ್ ದೊಡ್ಡವೇ ಒಳಿಯಕಿಲೆ. ಹಾಂಗೆ ಅತ್ತ್‌ಕಣೆಂಡ್ ಕೆಳಗೆ ಓಡಿ ಹೋತು. ಅಕ್ಕ ಪಕ್ಕದ ರುಸಿ ಜೆನಂಗ ಎಲ್ಲ ಓಡಿ ಬಂದೊ. ನೋಡ್‌ಕನ ಕೂಸು ಬೊಕ್ಕು ಬಾಯಿ ಬುಟ್ಟ್ ಕಣೆಂಡ್ ನಗಾಡಿಕಂಡ್ ಇತ್ತ್. ಬಂಡೆ ಕಣೆಲ್ಲ್ ಪೊಡಿಪೊಡಿ ಆಗಿತ್ತ್. ಇದರ ನೋಡಿ ಆ ರುಸಿಗಲ್ಲ ಅಂವನ, 'ಇಂವ ಭೀಮನೆ'ಂತ ಕರ್ದೊ. ಅಂವಂಗೆ ಭೀಮುಂತೇಳ್ವ ಹೆಸ್ರ್ ಖಾಯಂ ಆತ್. ಅತ್ತಿತ್ತ ನಡ್‌ಕಣೆಂಡ್ ಬಾವ ಹೊತ್ತಿಗೆ ಅವನ ತುಂಟಾಟ ಜೋರು ಆತ್. ಆಶ್ರಮಣೆಲಿದ್ದ ಆನೆಮರಿಗಳ ಎಳ್ಕಣೆಂಡ್ ಬಂದ್, ಅವರ ಬೆನ್ನ್. ಮೇಲೆ ಹತ್ತುದು. ಆಗ ಅವು ಜಗ್ಗಿ ಮುಗ್ಗುರ್ಲಿ ನೆಲಕೆ ಬೀಳುವೊ ಇಂವ ಕೈ ತಟ್ಟಿಕಣೆಂಡ್, ಮಿಡಿ ಹಲ್ಲ್ ಬುಟ್ಟ್‌ಕಣೆಂಡ್ ನಗಾಡುದು. ಎರ್ಡ್ ಕುದುರೆಗ ಹಕ್ಕಲೆಕ್ಕಲೆ ಮೇದ್ ಕಣೆಂಡ್ ಇದ್ದರೆ. ಆ ಕುದುರೆಗಳ ಬೀಲದ ಕುದೊಲುಗಳ ಸೇರ್ಲಿ ಗಣೆಂಟ್ ಹಾಕಿ ಬೊಬ್ಬೆ ಹೊಡ್ಡ್ ಅವರ ಓಡ್ಸುದು. ಅವು ಬಂಗ ಬಾದೊರ ನೋಡಿ ಕೈ

ಚಪ್ಪಾಳೆ ಕುಟ್ಟಿಕಣಂಡ್ ನೆಗಾಡುದು. ಸಿಂವದ ಮೊರಿಗ ಅವರ ಅಯ್ಯೆನ ಮೊಲೆ ತಿಂದ್‌ಕಣಂಡ್ ಇದ್ದರೆ, ಅವರ ಎಳ್ಡ್ ಬಾಯಿ ಬುಡ್ಸಿ ಹಲ್ಲ್‌ಗಳ ಲೆಕ್ಕ ಮಾಡ್ತು. ಅಜ್ಜ ಗಣಂಡ್ ಸಿಂವಗಳ ಕೇಸರನ ಎಳ್ಡ್ ಹಿಡ್‌ಕಣಂಡ್ 'ಏನಜ್ಜ! ನಿಂಗೆ ಗಡ್ಡ ತೆಗಿವ ಕ್ಷೌರಿಕ ಒಬ್ಬೊನೂ ಸಿಗ್ತ್‌ಲೆನೋ? ನಾನೇ ಬೋಳ್ಸಿ ಬುಟ್ನೆ, ಬಾಂತ ಹಿಡ್ದ್ ಎಳೀದು. ಹೀಂಗೆಲ್ಲ ಉಪದ್ರ ಮಾಡುದು! ಇವನ ಸಹವಾಸನೇ ಬೇಡಪ್ಪಂತೇಳಿ ಅಲ್ಲಿದ್ದ ಮುರ್ಗಂಗ ಎಲ್ಲ ಆಶ್ರಮದ ಜಾಗೆನ ಬುಟ್ಟ್ ದೂರ ಹೋದೊ.

ಹೀಂಗೆ ಭೀಮನ ಆಟಪಾಟನ ನೋಡಿಕಣಂಡ್ ಹಜ್ಜ್ ಸಮುಯ ಕಳ್ತ್. ಕುಂತಿಗೆ ಶೌರ್ಯ ಧೈರ್ಯರ್ಲಿ ಮೆರೆವ ಶತ್ರುಗಳ ನಾಶಮಾಡುವಂತ ಇನ್ನೊಬ್ಬ ಮಜ್ಜ ಬೇಕೂಂತ ಆಸೆ ಆತ್. ಹಾಂಗೆ ಅದಿಕೆ ಬೇಕಾದ ವ್ರತಾಚರಣೆಗಳ ಮಾಡಿ ದೇವೇಂದ್ರನ ಬರ್ಸಿ, ನಿನ್ನ ಹೋಲುವ ಒಬ್ಬ ಮಜ್ಜನ ಕೊಡೋಕುಂತ ಹೇಳ್ತ್. 'ನಿನ್ನ ಆಸೆ ಫಲಿಸಲಿಂತ ಹೇಳಿ ಇಂದ್ರ ಮಾಯಾಗಿ ಹೋತು. ಹಾಂಗೆ ಹುಟ್ಟಿದ ಕೂಸುಗೆ ಅರ್ಜುನಂತ ಮುಖ್ಯ ಹೆಸರ್ ಇಸಿದೋ.

ಅಂವ ಅವ್ವೆ ತನ್ನ ಬಾಲಲೀಲೆಗಳ ತೋರ್ಸಿಕಣಂಡ್ ಸಂತೋಸು ಉಂಟು ಮಾಡಿಕಣಂಡ್ ಶುಕ್ಲ ಪಕ್ಷದ ಚಂದ್ರನ ಹಾಂಗೆ ಬೆಳ್ಕಣಂಡ್ ಇತ್ತ್. ಭೀಮ ಸಣ್ಣತಿರ್ಕನ ಮಾಡ್‌ತಿದ್ದ ತುಂಟತನ ತೋರ್ಸಿಕೆ ಆಗ ಇದ್ದ ಮುರ್ಗಂಗ ಅಲ್ಲಿ ಇತ್ತ್‌ಲೆ. ಆದರೆ ಇಂವ ಬೇರೆ ತರ ಛಲ ಮಾಡ್‌ತಿತ್ತ್. ಯಾದ್ ತನಿಗೆ ಸಿಕ್ಕದೋ ಅದೇ ಬೇಕೂಂತ ಹಟ ಹಿಡಿಯತಿತ್ತ್. ಆಗಳೇ ಬಿಲ್ಲ್, ಬಾಣಂಗಳ ಹಿಡ್ಕಣಂಡ್ ಯುದ್ಧ ಮಾಡುದರ ಅನುಕರಣೆ ಮಾಡ್ತಿತ್ತ್.

ಕುಂತಿಗೆ ಮೂರು ಮಕ್ಕ ಆಗಿ ಸಂತೋಸುಲಿ ಇತ್ತ್. ಪಾಂಡುರಾಜಣೂ ಸಂತೋಸುಲೇ ಇತ್ತ್. ಆದರೆ ಮಾದ್ರಿಗೆ ಮಕ್ಕ ಆವ ಆನಂದದ ಅನುಭವ ಆತ್‌ಲೆ. ಮನೆಲಿ ಮಕ್ಕ ಒಳೊ ಅವರ ಆಡ್ಸಿ, ನೋಡಿ ಸಂತೋಸು ಪಡಣ್. ಆದರೆ ಅದರ್ಲಿ ತನ್ಮಯತೆಂತೇಳುವ ತೃಪ್ತಿ ಇರುದ್‌ಲ್ಲೆ. ಹಾಂಗೆ ಮಾದ್ರಿ ಮುಡ್ದ್ ಹೊರೆಗೆ ಬಿಸ್‌ಲಿಗೆ ಇಟ್ಟ (ಬಿಸಾಡ್‌ದ) ಮಲ್ಲಿಗೆ ಮಾಲೆನಾಂಗೆ ಬಾಡಿಕಣಂಡ್ ಇತ್ತ್. ಅದ್‌ಕ್ಕೆ ತನ್ನ ಮಕ್ಕ ರಾಜ್ಯ ಆಳೊಕೊಂತೇಳ್ವ ಅತಿ ಆಸೆ ಗಾಂಧಾರಿಗಿದ್ದಾಂಗೇನೂ ಇತ್ತ್‌ಲೆ. ಅಸೂಯೆ, ಕೇಡ್‌ಂತಳೂ ಇತ್ತ್‌ಲೆ. ಹಾಂಗೆ ಕುಂತಿನ ಮಕ್ಕಳ್ನ ಎತ್ತಿಕಣಂಡ್ ತಿರ್ಗುದು, ಅವರ ಮೀಸುದು, ಅವ್ವೆ ಉಣ್ಸುದು ಎಲ್ಲ ಮಾಡ್‌ತಿತ್ತ್. ಹೀಂಗೆ ಮಾಡ್‌ಕನ ಅದರ ಮೊಲೆ ತುಂಬಿಕಣಂಡ ಹಾಂಗೆ ಆಗಿ ಅವ್ವೆ, ಒಳ್ಳ ಒಡ್ದ್ ಆಗಿ ತಡಿಯಕಾತಿತ್ತ್‌ಲೆ. ತನ್ನ ಮಕ್ಕ ಆಗಿದ್ದರೆ ಅವರ ಬಾಯಿಗೆ ಮೊಲೆ ಇಸಿ, ತಿನ್ಸಿ ಸುಕ ಪಡಕಯ್ತ್. ಈಗ ಅದಿಕ್ಕೆ ಉಪಾಯ ಇಲ್ಲೆ. ಇದ್ ಕುಂತಿ ಮತ್ತೆ ಪಾಂಡುನ ಗಮನಕ್ಕೆ ಬಾತ್. ಹಾಂಗೆ ಒಂದು ದಿನ ಅಮಿಪ್ಪೊರೇ ಇರ್‌ಕನ ಪಾಂಡುಗೆ ಕುಂತಿ ಹೇಳ್ತ್ 'ನೀವು ಗಮನ್ಸಿಯೊಳೊರಿಯೋ ಇಲ್ಲೆನೋ! ನಮ್ಮ ಮಾದ್ರಿ ಮುಂದೆನಾಂಗೆ ಇಲ್ಲೆ. ಬಾಡಿಕಣಂಡ್ ಉಟ್ಟು. ಎಷ್ಟಾದರೂ ಅದಿಕ್ಕೇಂತೇಳ್ನ ಮಕ್ಕ ಇಲ್ಲೆಂತೇಳುವ ಆಲೋಚನೆ ಇರುದು. ನೀವು ಒಪ್ಪಿರೆ ನಾ ಒಂದು ಮಂತ್ರನ ಅದಿಕೂ

ಉಪದೇಸ ಮಾಡಿನ ಆಗೇದೋ?'ಂತ ಕೇಳ್ತ್. ಅದ್ಕೆ ಪಾಂಡುರಾಜ ಸಂತೊಸುಂದ 'ಅಕ್ಕ ತಂಗೆಕಂತೇಳಿರೆ ಹೀಂಗಿರೋಕು. ನಂಗೆ ಬಾರಿ ಕುಸಿ ಆತ್. ನೀ ಹಾಂಗೆ ಧಾರಾಳ ಮಾಡಟೇಕ್ಂತ ಹೇಳ್ತ್. ಕುಂತಿ ಮಾದ್ರಿನ ಕರ್ದ್, ಏನೆಲ್ಲ ಮಾಡೊಕುಂತೇಳಿ ಅದಿಕೆ ಮಂತ್ರೋಪದೇಶ ಮಾಡ್ತ್. ಆ ಪ್ರಕಾರ ಮಾದ್ರಿ ಒಂದೇ ಮಂತ್ರಟೆಲಿ, ಇಜ್ಜೊರು ದೇವತೆಗಳ (ಅಶ್ವಿನಿ ದೇವತೆಗಳ) ಬರ್ಸ್ಲಿ, ಉಪಾಯಗಾರ್ತಿ, ಅವ್ರುಳಿ ಮಕ್ಕಳ ಪಡ್ತ್. ನಕುಲ ಸಹದೇವಂತ ಅವ್ಕೆ ಹೆಸ್‌ರ್ ಹಾಕಿದೊ.

ಇಲ್ಲಿ ನಾವು ಕುಂತಿನ ಜಾಣತನನ ನೋಡೊಕು. ಅದ್ ಮರ್ತಾದರೂ ತನಿಗೆ ಒಂದು ಮಂತ್ರಂದ ಮುಂದೇ ಒಂದು ಮಜ್ಜ ಆಗುಟುಂತ ಯಾರೊಟ್ಟಿಗೂ ಹೇಳ್ತೇಲೆ. ಆದರೆ ಸತ್ಯವತಿ ಅಂತ ಗುಟ್ಟು ಮಾಡ್ತ್‌ಲೆ. ಭೀಷ್ಮನೊಟ್ಟಿಗೆ ಅದ್ ಪರಾಶರ ರುಸೀಂದ ತನಿಗೊಬ್ಬ ಮಜ್ಜ ಹುಟ್ಟಿಟ್ಟುಂತ ಹೇಳ್ತ್. ಪಾಂಡುರಾಜನ ಒಪ್ಪಿಗೆ ಸಿಕ್ಕಿದ ಮೇಲೆ ಅದ್ ಒಟ್ಟು ಉಪಯೋಗ ಮಾಡ್ದ್ ನಾಲ್ಕ್ ಮಂತ್ರಂಗಳ. ಇನ್ನೊಂದು ಮಂತ್ರ ಏನಾತ್‌ಂತ ಪಾಂಡು ವಿಚಾರ್ಸ್ಲಿಕೆ ಹೋತ್‌ಲೆ. ವಿಚಾರ್ಸ್ಲಿರು ಬೇರೆ ಒಟ್ಟು ಮಕ್ಕ ಐದು ಜೆನಂತ ಇದ್ದುದರ್‌ಂದ ಕುಂತಿನ ಒಳಗುಟ್ಟು ಅವಂಗೆ ಗೊತ್ತಾಕೆ ದಾರಿ ಇಲ್ಲೆ.

ಇತ್ತ, ತುಪ್ಪ ತುಂಬ್‌ಸಿದ ಕಂದಟೆಲ್‌ಗಳ್‌ಲಿ ಇಸಿದ ಗರ್ಭ ಪಿಂಡಗ ಬೆಳೀತಾ ಬಂದೊ. ಕುಂತಿಗೆ ಭೀಮ ಹುಟ್ಟುವ ಸಮಯಕ್ಕೆ ಸಮ ಸಮ ಆಗಿ ಸುರುನ ಕಂದಟೆಲ್‌ಲಿದ್ದ ಪಿಂಡ ಸರಿಯಾಗಿ ಬೆಳ್ದ್, ಕೂಸುನ ರೂಪಾಗಿ ಕಂದಟೆಲ್‌ನ ಪಟಪಟಂತ ಒಡ್ದ್, ಹೊರೆಗೆ ಬಾತ್. ಹಾಂಗೆ ಆ ಕೂಸು ಹೊರೆಗೆ ಬಂದಾಕನ ಬಾನಟೆಲಿ ಹಗ್‌ಲೆ ಧೂಮಕೇತುಗ ಕಂಡೋ. ಮಹಲ್‌ಗಳ ಗೋಪುರದ ಕಳಸಂಗ ಕೆಳಗೆ ಬಿದ್ದೊ. ಕುಪ್ಕಂಗ ಎಲ್ಲಿಂದೊಳೊ ಕುಯ್ಯೋ, ಮುಯ್ಯೋಂತ ಅಳಿಕೆ ಸುರುಮಾಡ್ದೊ. ಹೀಂಗೆ ಲೋಕಟೆಲಿ ಉಂಟಾದ ಅಪಶಕುನಂಗಳ ನೋಡಿ ಭೀಷ್ಮ, ವಿದುರ ಎಲ್ಲ ಇದ್ಕೆಲ್ಲ ಕಾರ್ಣ, ಈಗ ಹುಟ್ಟಿದ ಕೂಸು. ಇಂವ ಕುಲನಾಶ ಮಾಡಟೆಂವ ಇವನ ಒಳ್ಳಿಕಟೆಂಬಕೆ ಆಗೇದ್ ಈಗಟೆಳೇ ಬಿಸಾಡೊಕುಂತ ಧೃತರಾಷ್ಟ್ರನೊಟ್ಟಿಗೆ ಹೇಳ್ದೋ. ಅಂವ ಒಪ್ಪಿತ್‌ಲೆ. ಇಂತ ಗಟೆಂಡ್ ಕೂಸುನ ಇಡೊಕುಂತ ಹೇಳಿರೆ ಅರ್ಥ ಉಟ್ಟೊ? ದೋಸ ಕಂಡಟೆದಿಕೆ, ಶಾಂತಿ ಹೋಮ ಕಟೆರ್ಮಗಳ ಮಾಡ್ದೊನೊ. ಅದ್ ಬುಟ್ಟ್ ಬೇರೆ ಮಾತಾಡ್ಬೆಡಿಂತ ಹೇಳಿ, ಅವರ ಬಾಯಿ ಮುಚ್ಚಿಸಿತ್.

ಕಾಲಕ್ರಮಟೆಲಿ ಎಲ್ಲ ಕಂದಟೆಲ್‌ಗಳೂ ಒಡ್ದ್, ಮೊಟ್ಟೆ ಒಡ್ದ್ ಹಾವುನ ಮರಿಗ ಹೊರೆಗೆ ಬಾವಾಂಗೆ ಬಂದೊ. ಹೀಂಗೆ ಒಟ್ಟು ನೂರು ಮಕ್ಕಂತ ಹೇಳುವೆ. ಅವರ ಹೆಸ್‌ರ್‌ಗಳ್ನೂ ವ್ಯಾಸ ಮಹರ್ಷಿ ತನ್ನ ಭಾರತಟೆಲಿ ಹೇಳಿಯೊಳೊ. ಇಲ್ಲಿ ಒಂದು ವಿಚಾರನ ಗಮನ್ಸೊಕು. ಈ ನೂರು ಜೆನ ಅಣ್ಣಂದಟೆರಿಗೆ ಒಂದು ತಂಗೆ ಉಟ್ಟು. ಅದರ ಹೆಸ್‌ರ್ ದುಃಶ್ಯಳೇಂತ. ಅದರ ಸಿಂಧೂ ದೇಶದ ಸೈಂಧವಂಗೆ ಮೊದುವೆ ಮಾಡಿ ಕೊಟ್ಟಿದ್ದೊ. ಅಂತು ಅದ್ ಈ ನೂರು ಪಿಂಡಂಗಳ ಒಟ್ಟಿಗೇ ಹುಟ್ಟಿತ್. ಈಗ ಇವರ ಒಟ್ಟು ಸಂಖ್ಯೆ ನೂರ ಒಂದು ಆದೆ.

ಇಷ್ಟಾದ ಮೇಲೆ ಇನ್ನೊಬ್ಬ ಮಜ್ಜನೂ ಉಟ್ಟು. ಅವನ ಹೆಸ್‌ರ್ ಯುಯುತ್ಸು.

ಅಂವ ಮೇಲೆ ಹೇಳ್ದ ನೂರು ಜೆನರ ಸಾಲಿಗೆ ಸೇರ್ದಂವ ಅಲ್ಲ. ಧೃತರಾಷ್ಟ್ರಂಗೆ ಅವನ ದಾಸಿಲಿ ಹುಟ್ಟಿದಂವ.

**ಮಕ್ಕ :**

ತಾತ ! ಕೆಣ್ಣ್ ಕಾಣದ ಕುರ್ಡ ಆದರೂ ಇದರ ಬುಟ್ಟೆತ್ಲೆ!

**ತಾತ :**

ಲೋಕೆಲಿ ಈ ಮಾಯೆಂದ ತೊಪ್ಪುಸಿಕಂಬೆವು ಯಾರೂ ಇಲ್ಲೆ. ಕುರುಡನೇ ಆಗೆಲಿ, ಕುಂಟನೇ ಆಗೆಲಿ. ಆದರೆ ಒಂದು ವಿಷಯ. ಇಂವ ಕರ್ಣನ ಹಾಂಗೆ, ಅವಹೇಳನಕೆ ಗುರಿಯಾಗಿ 'ದಾಸೀ ಪುತ್ರ'ಂತೇನೂ ಕರ್ಲ್ಸಿಕೆಂಡೆತ್ಲೆ. ಅಷ್ಟು ಗೆಟ್ಟಿ ಇದ್ದದರ್ಂದ ಅವನ ಗೌರವಕ್ಕೇನೂ ಕೆಮ್ಮಿ ಆತ್ಲೆ.

## ಶತಶೃಂಗ ಪರ್ವತೆಲಿ ವಸಂತಾಗಮ

ಮಾಯನ ಮರಂಗ ಮೈತುಂಬ ಹೂ ಬುಟ್ಟ್. ಕಾಮನ ತೇರ್ ಸಿಂಗಾರ ಆದಾಂಗೆ ಕಂಡೊ. ಅದರ ಹೂಗೆಳಿಗೆ ಎಲ್ಲಿಲ್ಲದ ತುಂಬಿಗ ಮುತ್ತಿಗೆ ಹಾಕಿ ಗುಂಯಿಂದ್ ಸ್ವರ ಮಾಡ್ತೊ. ಒಂದು ಹೂವುನ ಜೇಪಿನ ಅರ್ಧ ಕುಡ್ದಾಕನ ಇನ್ನೊಂದು ಹೂವಿಗೆ ಬೇರೊಂದು ತುಂಬಿ ಬಂದ್ ಕುಡ್ದ್ ಬುಟ್ಟದೆನೋಂತೇಳ್ದ ಅತಿ ಆಸೆಲಿ ಸುರುದರ ಅದರ್ಲಿ ಬುಟ್ಟ್ ಇನ್ನೊಂದು ಹೂವಿಗೆ ಬಾಯಿ ಹಾಕಿತ್. ಕಾಡ್‌ಲಿದ್ದ ಹೂಬೊಳ್ಳಿಗ ಎಲ್ಲ ಹೂಗಳ್ಂದ ತುಂಬಿ, ಹೂ ಮುಡ್ದ್ ಸಿಂಗಾರ ಮಾಡಿಕೆಂಡ ತುಂಬು ಯೌವನದ ಗೂಡೆಗಳಹಾಂಗೆ ಎಲ್ಲರ ಕೆಣ್ಣ್‌ಗಳ್ನೂ ತಮ್ಮ ಕಡೆಗೇ ಸೆಳ್‌ಕೆಂಡೊ. ತಂಗಾಳಿಯೊಂದು ಅಡ್ಂಗಿ ಅಡ್ಂಗಿ ಬಂದ್, ಗುಂಪುಲಿದ್ದ ಗೂಡೆಗಳ ಸೆರ್ಂಗನ ಎಳ್ದ್, ಅವರ ಮೊಲೆ ಮೇಲೆ ಕೈ ಆಡ್ಸಿ ನೆಗಾಡುವಾಂಗೆ ದೈಗಳ ಬೊಳ್ಳಿಗಳ ಚಿಗ್‌ರೆಲೆಗಳ ಆಡ್ಸಿತ್ತ್. ಹೂ ಬುಡದ ಮರಂಗೆಲ್ಲ ಕೆಂಪು ಕೆಂಪಾದ ಚಿಗುರೆಲೆಗಳ ಬುಟ್ಟ್, ಅವುಗಳ ಕೊಣ್ಸಿಕೆಂಡ್ ಎಲ್ಲ ಪೋರ್ಲಾತ್; ಎಲ್ಲಿ ಪೋರ್ಲಾತ್‌ಂತ ತಲೆ ಆಡ್ಸಿದ್ದೊ. ಮುರ್ಗಂಗೆಳಿಗೆ ಏನೋ ಉಲ್ಲಾಸ ಉಂಟಾಗಿ ಎರ್ಡ್ರ್ ಜೊತೆಯಾಗಿ ಚಿಗ್‌ರ್‌ಗಳ ಮೇದ್‌ಕೆಂಡ್ ಕುಸಿಪಟ್ಟೊ. ರುಸಿ ಕುಮಾರೆರ್ ಎತ್ತೆತ್ತಲೋ ಚಂಚಲವಾಗಿ ಹರಿವ ಮನ್‌ಸ್‌ನ ಹಿಡಿತೆಲಿಸಿಕೆ, ತಾವು ಹೇಳಿಕೆಂಬ ಗಾಯತ್ರಿ ಮಂತ್ರನ ಐದೈದ್ ಸೆರ್ತಿ ಹೆಚ್ಚಿ ಹೇಳಿಕೆಂಡೊ. ಹಜ್ಜಿಗೆ ಹಜ್ಜಿಗೆ ಚೋರೆ ಹಕ್ಕಿಗ 'ಕುಟುರು' 'ಕುಟುರು'ಂತ ತನ್ನ ಜತೆನ ಕರಿಯುತ್ತಿದ್ದರೆ, ಅವುಗಳೊಟ್ಟಿಗೆ ಸ್ಪರ್ಧೆ ಮಾಡುವ ಹಾಂಗೆ ಕೋಗಿಲೆಗ ಮಾಯನ ಮರದ ಕೊಡೀಲಿ ಕುದ್ದ್‌ಕೆಂಡ್ "ಕುಹೂ" ಕುಹೂ"ಂತ ಕೂಗು ಹಾಕ್‌ತಿದ್ದೊ. ಒಟ್ಟುಲಿ, ಪ್ರಕೃತಿಲಿ ಎಲ್ಲಿ ನೋಡಿರೂ ಉತ್ಸಾಹ ತುಂಬಿಕೆಂಡ್ ಇತ್ತ್. ಗೆಂಡ್ ಹೆಣ್ಣ್‌ನ ಎದೆಗಳ್ಲಿ ಎಲ್ಲಿಲ್ಲದ ಒಂದು ಮಾರ್ದವ ತುಂಬಿತ್ತ್.

ಹೀಂಗಿರುವ ಕಾಲೆಲಿ ಒಂದು ದಿನ, ಮಾದ್ರಿ, ಬೊಳ್ಸಿನ ಮನೆಕೆಲ್ಸ ಮುಗ್ಸಿ ಸುಮ್ಮನೆ ತಿಗ್ರೆರ್ಂಡ್ ಬಾಪ್ರೋನೋಂತೇಳಿ ಕಾಡ್‌ನೊಳಗ ತಿರ್ಗಿಕೆ ಹೊರ್ಟೆತ್. ಒಂದೆರ್ಡ್ ಹೆಜ್ಜೆ

ಕಾಡ್‌ನೊಳಗೆ ಐಸ್‌ಕನೇ ಬೀಸಿ ಬಂದ ಗಾಳಿ ತಂದ ಕಾಡ್ ಹೂಗಳ ಪೊರಿಮಳ ಅದರ ಮೂಕುಗೆ ಬೊಡ್ತ್. ಅರ್ಕಿ ಇದ್ದ ಪೊರ್ಲುರ್ಣ ಪೊರ್ಲುರ್ಣನ ಕಾಡು ಹೂಗಳ ಎಲ್ಲ ಕೊಯ್ದ್ ತಂದ್ ಒಂದು ಮರದ ಅಡಿಲಿ ಅದರ ಬುಡಕೆ ಕೆಟ್ಟಿದ ಕಟ್ಟೆನ ಮೇಲೆ ಕುದ್ದ್ ಕಣ್ತ್. ಜುಪ್ಪೊಳಿನ ಒಲಿನ ಕಿತ್ತ್ ಕೆತ್ತಿನ ಬಾಯಿ ನಾಂಗೆ ಇದ್ದ ಒಂದು ಕೆಲ್ಲ್‌ಂದ ಅದರ ಈಂಚಿ, ಸೂಲು ಮಾಡಿಕೆಂಡತ್. ಮತ್ತೆ ಪೊರ್ಲುರ್ಣನ ಮಾಲೆ ಕೆಟ್ಟಿತ್. ಕೈಗೆಳಿಗೆ ಬಳೆ–ಕಂಕಣಗಳ, ತೋಳುಗೆಳಿಗೆ ತೋಳುಬಂದಿ ಮಾಡ್ತ್. ಕಾಲ್‌ಗೆ ಕಾಲ್ಕಡಗ, ಗಂಟ್‌ಲಿಗೆ ಎದೆ ತುಂಬುವಂತ ಮಾಲೆಗಳ ಎಲ್ಲ ಮಾಡಿ ಹಾಕೆಂಡತ್. ಹೆಣ್ಮಕಳಿಗೆ ಶೃಂಗಾರ ಮಾಡಿಕಂಬಕೆ ಯಾಗೊಳೂ ಬಾರಿ ಆಸೆ. ಬೇರೆವು ನೋಡಿ ತಮ್ಮ ಮೆಚ್ಚೊಕುಂತ ಉದ್ದೇಶ ವ್ಯಕ್ತವಾಗಿ ಅಲ್ಲದಿದ್ದರೂ, ಅವ್ಯಕ್ತವಾಗಿಯಾದರೂ ಉಟ್ಟೇ ಉಟ್ಟು. ಹಾಂಗೆ ಮಾದ್ರಿ ಶೃಂಗಾರ ಮಾಡಿಕೆಂಡ್, ತಾನ್ ಹೇಂಗೆ ಕಂಡನೇಂತ ತಿಳಿಯಕೆ ಆಸೆ ಆತ್. ಅಲ್ಲಿ ಪಕ್ಕಲೆ ಒಂದು ತೋಡಿ ಹರಿಯತಿತ್ತ್. ಅದರ್ಲಿ ಬೊಗ್ಗಿ ತನ್ನ ರೂಪುನ ನೋಡ್ತ್. ನೋಡಿ ಮೆಚ್ಚಿಕೆಂಡತ್. ಹಾಂಗೆ ನೋಡಿ ಮೆಚ್ಚಿದ್ ಅದ್ ಮಾತ್ರ ಅಲ್ಲ. ದೂರೆಲಿ ಕಾಡ್‌ನ ಪೊರ್ಲುರ್ಣನ ನೋಡೊನೊಂತ ತಿರ್ಗ್ಯಂಡ್ ಬಂದ ಪಾಂಡುರಾಜೆನೂ ಶೃಂಗಾರ ಮುಂಗಲೆಯಾಗಿ. ಹೆಣ್ಣಾನೆನ ಹಾಂಗೆ ತೂಗಿ ತೂಗಿ ನಡ್ದ್ ಬಾವ ಮಾದ್ರಿನ ನೋಡ್‌ತಿತ್ತ್. ಅದರ ಮೋರೆಂದ ಹೊರ್ಡುವ ಪೊರಿಮಳಕ್ಕಾಗಿ ತುಂಬಿಗ ಮುತ್ತುತ್ತಿದ್ದೊ. ಕೈಲಿ ಹಿಡ್ದ ಒಂದು ಹೂಗಳ್‌ಂದ ಕೂಡ್ದ ದೆಂಟ್‌ಂದ ಬೀಸಿ ಆ ತುಂಬಿಗಳ ಓಡ್ಸ್‌ತಿತ್ತ್. ಆ ದೆಂಟ್‌ನ ಬೀಸ್‌ತ್ತಿದ್ದೆದ್ ಚಾಮರ ಬೀಸಿದಾಂಗೆ ಕಾಂಬತಿತ್ತ್. ಆ ತುಂಬಿಗಳ ಕೋಪಂದ ಕೆಣ್ಣ್ ಕೆಕ್ಕ್ರ್ಲಿ ನೋಡುದು, ಪ್ರಣಯ ಚೇಷ್ಟೆಲಿ, ಅಂಪ ಅದರ ಜಡೆನ ಎಳಿಯಕನ ಅವನ ಹಾಂಗೆ ನೋಡ್‌ತಿದ್ದೆದ್ ಅವನ ನೆಂಪುಗೆ ಬಾತ್. ಯಾರೂ ಇರದ ಏಕಾಂತ. ತೊಂಪಾಗಿ ಪೊರಿಮಳಂದ ಕೂಡ್ದ ನೆಳಲಿರುವ ಅಡಿಬುಟ್ಟ ಕಾಡ್. ಪಾಂಡುರಾಜ ಸೋತೆತ್. ಅವನ ನಿಯಮ ನಿಷ್ಟೆಗಳ ಮಾತ್ರ ಅಲ್ಲ ಅವಂಗಿದ್ದ ರುಸಿ ಕೊಟ್ಟ ಸಾಪನ್ನೂ ಮರ್ತೆತ್. ಅವನ ಏಕಾಗ್ರತೆನ ಗುರಿ ಈಗ ಒಂದೇ ಕಡೆಗೆ ಅಂದರೆ ಮಾದ್ರಿನ ಕಡೆಗೇ ಇತ್ತ್. ಅರ್ಧ ಓಟ ಅರ್ಧ ನಡಿಗೆನ ಲೆಕ್ಕೆಲಿ ಹೋದಂಪ ಹುಲಿ ಹಾರ್ದಾಂಗೆ ಹಾರಿ, "ಅಯ್ಯೋ ಬೇಡ ಬೇಡ, ಮುಟ್ಟ್‌ಬೇಡಿ ನನ್ನ"ಂತ ಹೇಳೀಕೆಂಡ್ ಇದ್ದಾಂಗೆ ಅದರ ತೊಬ್ಬಿಹಿಡ್ದ್ ಮುತ್ತು ಕೊಡುವ ಆಸೆಂದ ಅದರ ಮೋರೆ ಹಕ್ಕಲೆ ಅವನ ಮೋರೆನ ತಾತ್. ಅಷ್ಟೆ ! ಅದರ ತೊಬ್ಬಿದ ಕೈಗ ಜೋತು ಬಿದ್ದೊ. ಕಣ್ಣಾಲಿ ಮೇಲೆ ಮೊಗ್‌ಚೆನಿತ್ತೆತ್. ಹಕ್ಕಲೆ ತಂದಿದ್ದ ಮೋರೆ ಒಂದು ಕಡೆಗೆ ಮಾಲ್‌ತ್. ಕಾಮೋದ್ರೇಕಂದ ಹೆಣ್ಣ್‌ನ ಮೈಗೆ ಒತ್ತಿದ ಮೈನ ಬಿಸಿ ತಣ್ಣಂಗಾಗಿ ಹಿಮಗೆಟ್ಟಿನ ಮೈಗೆ ಹಾಕಂಡಾಂಗೆ ಮಾದ್ರಿಗೆ ಆತ್. ಮೂಕುಲಿ ಗಾಳಿ ಓಡಾಡ್ದನೋಂತ ಬೆರ್ಳ್ ಇಸಿ ನೋಡ್ತ್. ಊಹುಂ ಇಲ್ಲೆ. ಗಂಡ ಜಿವಲಿಲ್ಲೆಂತ ಗೊತ್ತಾಗಿ, "ಅಯ್ಯೋ! ಕೆಟ್ಟೆ ಈ ಇಸ ಕನ್ನೆನ ಏಕೆ ಮುಟ್ಟಿದ ನನ್ನ ರಾಜ? ನಾಪ್ಲೆ, ನಿನ್ನ ಹೆಣ್ಮಕಳಿಗೆ, ನಿನ್ನ ಸಣ್ಣ ಸಣ್ಣ ಕೂಸುಗೆಳಿಗೆ ಇನ್ನ್ ಯಾರ್ ಗತಿ! ಅಯ್ಯೋ ವಿಧಿಯೇ, ಸಿಂಪನಾಂಗೆ ಇದ್ದಂಪ, ಈ ಕಾಡ್‌ಲಿ ಹೀಂಗೆ ಬಿದ್ದ್ ಹೋಪಾಂಗೆ ಮಾಡ್ದೊನೊ? ಅವಿವೇಕಿಯಾದ

ನಂಗೆ ಸಾಪಕೊಡೊಪ್ರು ಯಾರೂ ಇಲ್ಲೆನೋ?" ಹೀಂಗೆ ಹೇಳಿಕಣಂಡ್ ಎದೆಗೆ ಹೊಡ್ಕಣಂಡ್ ಗಟ್ಟಿಯಾಗಿ ಅತ್ತಳತ್. ಮಾದ್ರಿನ ಆಳ್ಗಿಲ್ ಕುಂತಿಗೆ ಕೇಳ್ತ್. ಬಿಡಾರಲ್ಲಿ ಪಾಂಡು ರಾಜನೂ ಕಾಂಬೊದುಲೆ. ಏನೋ ಮೋಸಾತ್. ಅಯ್ಯೋ ದೇವ್ರೆ! ನಾಪ್ಗೆನ್ನ್ ಯಾರ್ ಗತಿ? ಹೀಂಗೆ ನೆನ್ಸಿಕಣಂಡ್ ಕುಂತಿ ಅತ್ತ್‌ಕಣಂಡ್ ಕಾಡ್‌ನ ಕಡೆಗೆ ಓಡ್‌ತ್. ಮಕ್ಕಳ್‌ಗೆ ಏನ್‌ಂತ ಗೊತ್ತಾಗದಿದ್ದರೂ, ದೊಡ್ಡಳವು ಅತ್ತೆವೆಂತೇಳಿ ಅವೂ ಅತ್ತಕಂಡ್ ತಲೆ ಹರ್‌ಂಡಿಣಂಡ್ ಕುಂತಿನ ಹಿಂದೆಕಣಂಡ್ ಓಡ್ದೊ.

ಕುಂತಿ ಬಂದ್ ನೋಡ್ಕನ ಪಾಂಡುನ ಸತ್ತಸಳ್ರನ ತೊಡೆ ಮೇಲೆ ಮಲ್ಗ್‌ಸಿಕಣಂಡ್, ಮಾದ್ರಿ ತಾನೂ ಸಹಗಮನ ಮಾಡಿನೆಂತೆ ನಿಶ್ಚಯ ಮಾಡಿ, ಹಲ್ಲುಜ್ಜಿಕಣಂಡ್ ಇತ್ತ್. ಕುಂತಿ ಹೇಳ್ತ್: "ಮಾದ್ರಿ! ಗಂಡನ ನಂಗೆ ಒಪ್ಪ್‌ಸಿಕೊಡು. ಮಕ್ಕಳ ರಕ್ಷಣೆಗೆ ನೀ ನಿಲ್ಲ್. ನಾ ಸಹಗಮನ ಮಾಡಿನೆ" ಅದ್ಕೆ ಮಾದ್ರಿ ಉತ್ತರ ಕೊಟ್ಟಳತ್: "ಅಕ್ಕ, ನಮ್ಮ ಗಂಡ ಇದೊಂದು ಸಂದರ್ಭನ ನಂಗೆ ಕೊಟ್ಟಳತ್. ಅವನ ಆಸೆನ ಪೂರ್ತಿ ಮಾಡಿಕೆ. ನನ್ನಂದ ಇಲ್ಲಿ ಆತ್‌ಲೆ. ಅದಿಕೆ ಅವನೊಟ್ಟಿಗೇ ಹೋಗಿ ಅಲ್ಲಿ ಅವನ ಆಸೆನ ತೀರ್ಸಿನೆ. ನನ್ನ ಮಕ್ಕಳ ನಿನ್ನ ವಶಕ್ಕೆ ಕೊಟ್ಟನೆ. ನಿನ್ನ ಮಕ್ಕಳ ಹಾಂಗೆ ನೀ ನೋಡಿಕಂಬಂತೇಳ್ಳ ನಂಬಿಕೆ ನಂಗ ಉಟ್ಟು. ಯುಧಿಷ್ಠಿರ! ನಕುಲ ಸಹದೇವರ್ನೂ, ಭೀಮಾರ್ಜುನರ್ನೂ ನೋಡಿಕಂಬ ಹಾಂಗೆ ಭೇದ ಇಲ್ಲದೆ ನೋಡಿಕ ಮಜ್ಜ. ನಾ ಇಲ್ಲೇಂತೇಳ್ಳ ನೆಂಪು ಅವ್ಕೆ ಬಾಕೇ ಬೊತ್ತ್ ಬಲೆ"

ಮತ್ತೆ ಅಲ್ಲಿನ ರುಷಿ ಜೆನಂಗ್ ಬಂದ್, ಸತ್ತವನ ಅಪರ ಕಳರ್ಮನೆಲ್ಲ ಮಾಡಿ ಅವಂಗೆ ಅಗ್ನಿ ಸಂಸ್ಕಾರ ನಡ್ಸಿದೊ. ಮಾದ್ರಿನೂ ಗಂಡನ ತಲೆನ ತನ್ನ ತೊಡೆ ಮೇಲೆ ಇಸಿಕಣಂಡ್ ಕಾಟಳಲಿ ಕುದ್ದ್‌ಕಣಂಡ್, ಕಿಚ್ಚಿಲಿ ಬೆಂದ್ ಸುಟ್ಟ್ ಬೂಸ್ಕ ಆಗಿ ಹೋತು. ಎಂಥ ಪುಣ್ಯವತೀಂತ ಎಲ್ಲೋವು ಅದರ ಹೊಗ್‌ಳ್ದೊ.

ಪಾಂಡು ರಾಜ ಇದ್ದ ಕುಟೀರ ಈಗ ಕಾಲಿ ಕಾಲಿ ಆತ್. ಪಾಂಡು ಮತ್ತೆ ಮಾದ್ರಿ ಇಬ್ಬೊರೂ ಇಲ್ಲೆ. ಹಾಂಗೆ ಕುಂತಿಗೆ ತಡಿಯಕೆ ಬೊತ್ತಾತ್. ಕಣ್ಣೀರ್ ಬುಟ್ಟ್ ಕಣಂಡ್ ಯಾಗೋಳು ಅತ್ತ್‌ಕಣಂಡೇ ಇತ್ತ್. ಅದು ಅಳುದರ ನೋಡಿ, ಮಕ್ಕಳೂ ಏಕೆಂತ ಗೊತ್ತಿಲ್ಲದೆ ಅಳ್‌ತಿದ್ದೊ. ಆಸ್ ಪಾಸ್‌ಲಿ ಇದ್ದ ರುಷಿ ಮುನಿಗ ಬಂದ್ ಅದಿಕೆ ಎಷ್ಟೋ ಸಮಾಧಾನ ಹೇಳ್ದೊ. ಶಾಸ್ತ್ರ, ಪುರಾಣಗಳ ಉದಾಹರಣೆಗಳ ಎತ್ತಿ ಹೇಳ್ದೊ. ಇವೆಲ್ಲ ಹೇಳಿಕೇನೋ ಲಾಯ್ಕ್ ಆದೆ. ಆದರೆ ದುಃಖನ ಸ್ವತಃ ಅನುಬವಿಸೊವ್ಕೆ ಅದೇ ಶಾಂತಿ ಉಂಟು ಮಾಡಿಕಿಲೆ. ಆದಿ ಕವಿ ಪಂಪ ಈ ಸಮಾಧಾನ ಹೇಳುವ ಒಂದು ಸುಂದರ ಪದ್ಯ ಬರ್ದುಟು. ಪಂಪ ಭಾರತಲಿ ಅದರ ಓದಿನೋಡಿ. ನಾ ಅದರ ಸಾರಾಂಶ ಮಾತ್ರ ಹೇಳಿನೆ:

'ಸತ್ತಳವ್ರಕೆ ಅಳುದುಂತೇಳ್ದರ ಒಪ್ಪಿಕಣಳಕ್- ಆ ಸತ್ತಳವ್ರು ಮೇಲೆ ಎದ್ದ್ ಬಂದವೆಂತಾದರೆ. ಅಥವಾ ಅಳುವ ನಾವ್ಗೂ ಸಾವುಂತೇಳ್ದು ಇಲ್ಲೇಂತಾದರೆ. ಇವ್ ಎರಡೂ ನಡಿವಂತಳದಲ್ಲ. ನಾವು ದಳರ್ಮನ ಸಂಪಾದಿಸಿಕಣಂಬೊದು ಮಾತ್ರ ಬುದ್ಧಿವಂತಿಕೆ. ನಾವು ಅದರ ಮಾಡಿಕಣೊಕು.'

ರುಷಿ ಮುಖ್ಯಸ್ತರೆಲ್ಲ ಸೇರಿ, ಕುಂತಿನೂ ಐದ್ ಜೆನ ಮಕ್ಕಳ್ನೂ ಕರ್ಕಂಡ್ ಹಸ್ತಿನಾವತಿಗೆ ಹೋಗಿ ನಡ್ಡ ಸಂಗತಿನ ಭೀಷ್ಮ, ಧೃತರಾಷ್ಟ್ರರಿಗೆ ಹೇಳಿ, ಕುಂತಿನೂ, ತಬ್ಬುರಿ ಮಕ್ಕಳನ್ನೂ, ಅವರ ಕೈಗೆ ಒಪ್ಪ್ಸಿ ಹಿಂದೆ ತಿರ್ಗ್ದಿದೊ. ಹಸ್ತಿನಾವತಿನ ಅರಮನೆ ನಗರದ ಬೀದಿಗ ಎಲ್ಲ ಪಾಂಡು ರಾಜಸತ್ತಲೆದ್, ಮಾದ್ರಿ ಸಹಗಮನ ಮಾಡ್ದರ ಕೇಳಿ ರೋದನಂದ ತುಂಬಿದೊ. ಬಂಧುಗಳ ಕಂಡಾಕನ ಬೆಂದವರ ದುಃಖ ಕೊದ್ದ್‌ಕಲೆಂಡ್ ಬಾದು. ಮತ್ತೆ ಎಣೆ ಇಲ್ಲದ ಗೋಳಾಟ ನಡಿದು ಎಲ್ಲಿ ಸಹಜ. ಅತ್ತ್ ಅತ್ತ್‌ದೇ ದುಃಖ ಕಮ್ಮಿ ಆಕು ಹೊರ್ತು ಬೇರೆ ದಾರಿ ಇಲ್ಲೆ. ಸಮಯ ಕಳ್ದಾಂಗೆ ಇದ್ ಹಜ್ಜಾಜ್ಜ್ ಕಮ್ಮಿ ಆಗಿ, ಮತ್ತೆ ಶಾಂತ ಆದ್ದಾಂಗೆ ಕಂಡದೆ. ಅದರ ಒಳಗೆನ ದುಃಖದ ಉರಿ ಹೊಗ್ಗ್‌ಕಲೆಂಡೇ ಇದ್ದದೆಂತೇಳುದು ನಿಜ. ದೊಡ್ಡವರ ಮಟ್ಟಿಗೆ ಹೀಂಗಿದ್ದರೂ ಮಕ್ಕ ಮಾತ್ರ ಬೇಗ ಇಂಥ ದುಃಖಗಳ ಮರ್ತ್ ಅವರ ಆಟಪಾಟಲಿ ಮಗ್ನರಾಗಿ ನಡ್ಕಂಡವೆ.

ಈಗ ಐದ್ ಜೆನ ಪಾಂಡುಕುಮಾರಲೆರಿಗೆ ಈ ಕೌರವರ ನೂರು ಜೆನರ ದಲೆಂಡ್‌ನ ನೋಡಿ, ಅಪರಿಚಿತ ತನದ ಒಂದು ಪ್ರತ್ಯೇಕತೆನ ಭಾವನೆ ಉಂಟಾತ್. ಆದರೆ ಅದ್ ಹಜ್ಜು ಸಮಯಕೆ ಮಾತ್ರ. ಬೇಗ ಆಟಗಳ್ಲಿ ಒಂದಾಗಿ ಸೇರಿಕಲೆಂಡೊ. ಆದರೂ ಐದ್ ಜೆನ ಒಂದು ಗುಂಪು, ನೂರು ಇನ್ನೊಂದು ಗುಂಪುಂತೇಳ್ವ ಭಾವನೆ ಇಬ್ಬರ್‌ಂದೊಳೂ ದೂರ ಆತ್‌ಲೆ. ಎಲ್ಲೊವು ಸೇರಿಕಲೆಂಡ್, ಅಂಬಾಲ್ ಚೆಂಡ್. ಮೊಟ್ಟೆ ಚೆಂಡ್, ಲಗ್ಗೆ ಚೆಂಡ್, ಕುಟ್ಟದಾಣೆ, ಅಡ್‌ಂಗಿ ಓಡಿವ ಆಟ, ಉಪ್ಪಾಟ, ಗೋಲಿ ಆಟ, ಹೀಂಗೆ ನಾನಾ ತರದ ಆಟಗಳ ಆಡ್‌ತಿದ್ದೊ. ಎಂತ ಆಟವೇ ಆಗಲೆಲಿ, ಅದರ್ಲಿ ಯಾಗೋಳು ಎಲ್ಲರ್‌ಂದ ಮೇಲ್ ಆದು ಭೀಮ ಮಾತ್ರ. ಅವನ ಓಟದ ವೇಗನ ಮಿಾರ್ಲಿಕೆ ಯಾರ್‌ಂದೊಳೂ ಬೊತ್ತ್. ಚೆಂಡಾಟಗಳ್ಲಿ ಒಮ್ಮೊಮ್ಮೆ ಚಂಡ್ ಕೈಗೆ ಸಿಕ್ಕಿದಂವ ಅಂವಂಗೆ ಹಕ್ಕಲೆ ಸಿಕ್ಕಿದವಂಗೆ ಬೀಸಿ ಚೆಂಡ್‌ಲಿ ಹೊಡಿವ ಕ್ರಮ ಉಟ್ಟು. ಅದರ್ಲಿ ಭೀಮ ಜೋರು ಓಡಿ ಚೆಂಡ್‌ನ ಹಿಡ್ಕಲೆಂಡ್, ಹಕ್ಕಲೆ ಸಿಕ್ಕಿದವನ ಬೆನ್ನ್ ನೆಟ್ಟಂಗಾವ ಹಾಂಗೆ ಬೀಸಿ ಹೊಡಿಯತ್ತಿತ್ತ್. ಎಲ್ಲೊವುಕು ಇದ್ ಸಲೆರಿಯಾಗಿ ನಡಿಯಾಕಾದ್ ಕ್ರಮ. ಆದರೆ ಯಾಗೋಳು ಇವನ ಪೆಟ್ಟ್ ತಿಂಬೊವು. ಆ ನೂರು ಜೆನರ ಪೈಕಿ ಹೊರ್ತು ಒಳ್ದ ನಾಲ್ಕ್ ಜೆನಕೇನೂ ಚಂಡ್ ತಾಂಗ್‌ತ್ತಿತ್ತ್‌ಲೆ. ಇದ್‌ಯಾಗಾರ್ ಒಮ್ಮೆ ಆದರೆ ಆಕಸ್ಮಿಕಂತ ಹೇಳಲೆಕ್ ಆದರೆ ನಿತ್ಯ ಹೀಂಗಾದರೆ ಇದ್ ಬೇಕುಂತೇಳಿಯೇ ಅವ ಏದ್ಯಮಾನಂತ ತಿಳಿಯಕಾದ್ದೆ. ಹಾಂಗೆ ಪೆಟ್ಟ್ ತಿಂದೊವು ದೊಡ್ಡವರ ಹಕ್ಕಲೆ ದೂರು ತಂದೊ. ಇದೆಲ್ಲ ಮಕ್ಕಳ ಆಟಂತೇಳಿ ಸಸಾರ ಮಾಡ್ದೊ, ಅಂತೂ ಇವರ ಆಟವ್ರೂ ನಿತ್ತಲೆತ್‌ಲೆ. ಆಟದ ಕಾಟನೂ ಕಮ್ಮಿ ಅತ್‌ಲೆ. ಮೆಲ್ಲ ಮೆಲ್ಲ ಭೀಮನ ಮೇಲೆ, ಮತ್ತೆ ಒಳ್ದ ನಾಲ್ಕು ಜನರ ಮೇಲೆನೂ ಮತ್ಸರ ಸುರಾತ್. ಕೌರವಲೆರ್ ಬೇರೆ, ಪಾಂಡವಲೆರ್ ಬೇರೆಂತೇಳುವ ಭೇದ ಭಾವನೆ ಮೊಳಿಕೆಬಾತ್. ಒಂದು ದಿನ ಬೊಯ್‌ಲಿಲಿದ್ದ ದೊಡ್ಡ ಆಲದ ಮರದ ಬುಡಲೆಲಿ, ಈ ಮಕ್ಕ ಎಲ್ಲ ಸೇರ್ದೊ. ಮರಕೋತಿಂತೇಳುವ ಒಂದು ಆಟ ಉಟ್ಟು. ಅದರ ಆಡನೋಂತ ನಿಶ್ಚಯ ಮಾಡ್ದೊ. ಹಾಂಗೆ ಒಬ್ಬನ ಕಣ್ಣ್‌ಗೆ ಬಟ್ಟೆ ಕಲೆಟ್ಟಿ ಒಳ್ದವು ಎಲ್ಲೊವು ಅಡ್‌ಂಗುದು. ಮತ್ತೆ

ಅವರ ಅಂಪ ಕಂಡ್ ಓಡಿಯೊಕು. ಹಾಂಗೆ ಭೀಮನ ಒಂದು ಕರೆಗೆ ಕಕಲೇಂಡ್ ಹೋಗಿ ಅವನ ಕಣ್ಣ್ಗೆ ಬಟ್ಟೆ ಕಟ್ಟಿ ಬುಟ್ಟೊ. ಬಾಕಿದ್ದೊವೆಲ್ಲ ಓಡಿ ಹೋಗಿ ಆ ಆಲದ ಮರನ ಪತ್ತಿ ಅಡ್ಂಗ್ಯಂಡೋ, ಭೀಮನ ಅವರ ಹುಡ್ಕಿ ಓಡಿಯಕೆ ಹೇಳ್ದೊ. ಭೀಮ ಬಂದಾ ಹುಡ್ಕಿರೆ ಒಬ್ಬೊಬ್ನೂ ಕಂಡಇತ್ಲೆ. ಮರದ ಮೇಲೆಂದ ಕುದೆಂಟಗಳ, ಮರ ಪತ್ತಿಕ ಮುಂದೆ ಆಂವಂಗೆ ಹೊಡಿಯುಕುಂತೇಳಿ ಕಇಲ್ಲ್ಗಳ ಹೆರ್ಕ್ಯಂಡ್ ಹೋದವರ ಎಲ್ಲ ಅವನ ಮೇಲೆ ಜೀಸಿ ಜೀಸಿ ಇಟ್ಟೊ. ಅಂವಂಗೆ ಕೋಪ ಬಾತ್. ಸೀವ್ಗೆ ಕಇಲ್ಲಿನೆ ಬುದ್ಧಿಂತೇಳಿ ಆ ಮರದ ಬುಡಕ್ಕೆ ಬಂದ್ ಅದರ ಹಿಡ್ಡ್ ಅಲ್ಗ್ಸಿತ್. ಮಾಯನ ಹಣ್ಣ್ನ ಸಮಿಯಇಲಿ ಗಾಳಿ ಜೀಸ್ಕನ ಮಾಯನ ಹಣ್ಣ್ಗ ಉದುರುವ ಹಾಂಗೆ ಅವೆಲ್ಲ ಬುಡು ಬುಡುಂತ ಕೆಳೆಗೆ ಬಿದ್ದೊ. ಕೆಲವರ ಮೊಣ್ಕಾಲ್ ಹೊಡಿಯಾತ್. ಕೆಲವರ ಕೈನ ಎಲು ತುಂಡಾಗಿ, ಕೈ ಸೇತಾಡಿಕಇಂಡ್ ಇತ್ತ್. ಇನ್ನ್ ಕೆಲವರ ಮೈ ತರೆ ಹೋಗಿ, ನೆತ್ತ್ರ್ ಬಿಟ್ಟಿತ್, ಇನ್ನೂ ಕೆಲಇವುಕೆ ಹಲ್ಲ್ ಮುರ್ದ್ ತುಟ ಒಡ್ದ್ ನೆತ್ತ್ರ್ ಅರ್ಕಇಂಡ್ ಇತ್ತ್. "ನಿಲ್ಲ್ ನಿಂಗೆ ಅಜ್ಜನೊಟ್ಟಿಗೆ ಹೇಳಿ ನಿನ್ನ ಬೆನ್ನ್ ಹೊಡಿ ಮಾಡ್ಸದೆ ಬುಡಿಕಿಲೆ, ಇರ್"ಂತ ಅತ್ತ್ಕಇಂಡ್ ಹೇಳ್ದೊ. ಭೀಮ ಅವರ ಕಡೆ ನೋಡಿ ಮೋರೆನ ವಕ್ರ ಮಾಡಿ, "ವೇ ವೇ"ಂತ ಒರ್ಂಗ್ಸಿ, ಅವರ್ಂದ ಮುಂದೆ ಅಲ್ಲಿಂದ ಓಡಿ ನೆಲಲಿ ಬಿದ್ದ್ ಹೊಣ್ಕ್ಯಾಡಿ, ಮೊಣ್ಣ್ ಮತ್ತಿ ಕಇಂಡ್ ಕಾಡ್ ಮುಳ್ಳ್ಗಲ್ಲಿ ಪರ್ಂಕ್ಸಿ ಕಇಂಡ್ ನೆತ್ತರ್ ಬಾವಾಂಗೆ ಮಾಡಿಕಇಡ್ ಅವೆಲ್ಲ ದೂರು ತಕಇಂಡ್ ಭೀಷ್ಮಜ್ಜನಇಲ್ಲಿಗೆ ತಲ್ಪಿಕೆ ಮುಂದೆ ತಾನೇ ಹೋಗಿ ಅಳು ಮೋರೆ ಮಾಡಿಕಇಂಡ್" ಕೌರವಇರ್ ಎಲ್ಲ ಸೇರಿ ನಂಗೆ ಹೊಡ್ದ್, ಮುಳ್ಳ್ ಬಲ್ಲೆಗೆ ನೂಕಿ ಹಾಕಿ ತುಂಬ ಬೇನೆ ಮಾಡ್ದೊ ಅಜ್ಜಪ್ಪ"ಂತ ದೂರು ಹೇಳ್ಕನ ಗಾಯು ಆಗಿದ್ದ ಕೌರವರ ದಇಂಡ್ ಬಾತ್. ಅವರ ನೋಡ್ಕನ ಭೀಮಂಗೆ ಗೊತ್ತಿಲ್ಲದೇ ನೆಗೆ ಬಂದ್ ಬುಟ್ಟಇತ್. ಆಗ ಭೀಷ್ಮಂಗೆ ಭೀಮನ ತರ್ಕ್ ಗೊತ್ತಾತ್. "ಕಳ್ಳ! ನನ್ನ ಸೋಲ್ಸಿಕೆ ನೋಡಿಯಾ. ನಿನ್ನ ಕೆಣೆ ನಂಗೆ ಗೊತ್ತಾತ್. ನಾ ಕೌರವರ ಎಲ್ಲರ್ನೂ ವಿಚಾರ್ಸಿ ಆಕನ ಮುಟ್ಟ ನೀ ಒಂಟಿಕಾಲ್ಲಿ ನಿತ್ತ್ಕಇಂಡ್ ಇರೋಕು"ಂತ ಹೇಳಿ ಕೌರವರ ಕಡೆ ತಿರ್ಗಿದೋ. ಕೌರವರ್, ಒಬ್ಬೊಬ್ನೂ ಭೀಮನ ದೂರೊವೆ. ಇದ್ದಇದ್ ಇಲ್ಲಾದ್ದ್ ಎಲ್ಲನ್ನೂ ದೂರುದೊ. ಮಕ್ಕಳ ವ್ಯಾಜ್ಯಕೆ ತೀರ್ಪು ಕೊಡಿಕೆ ಸಾಧಾರ್ಣದವರ್ಂದ ಆಕಿಲೆ. ಹಾಂಗೆ ಭೀಷ್ಮ ಅವ್ಕೆ ಹೇಳ್ತ್: "ಇನ್ನ್ ಮುಂದೆ ನೀವ್ ನೀವೇ ಆಡಿ. ಭೀಮನ ನಿಮ್ಮೊಟ್ಟಿಗೆ ಸೇರ್ಸಿ ಕಣ್ಬಡಿ. ಹೋಗಿ ನಿಮ್ಮ ಗಾಯಕ್ಕೆಲ್ಲ ಮದ್ದ್ ಮಾಡ್ಸಿಕಇಣಿ" ಹೀಂಗೆ ಹೇಳಿ ಭೀಷ್ಮರ್ ಎಲ್ಲರ್ನೂ ಕಇಳ್ಸಿದೊ. ತಬ್ಬುರಿ ಕೂಸು ಭೀಮನ ಮೇಲೆ ಅಜ್ಜಂಗೆ ಕೊಂಡಾಟ ಆಗಿ ಪ್ರೀತಿ ಉಕ್ಕಿ ಬಾತ್. "ಬಾ ಮಬ್ಬ ಇತ್ತಂತ ಹೇಳಿ ಅವನ ಕರ್ದ್ ತೊಡೆ ಮೇಲೆ ಕುದ್ರ್ಸಿಕಂಡೋ. "ನೀ ಹಿಂಗೆ ತುಂಟತನ ಮಾಟಿಕೆ ಆಗಇದ್. ಇನ್ನೊಬ್ಬಂಗೆ ಬೇನೆ ಮಾಡಿಕೆ ಆಗಇದ್"ಂತ ಬುದ್ಧಿ ಹೇಳ್ದೊ. ತಲೆ ಆಡ್ಸಿ ಒಪ್ಪಿಕಇಂಡ್ಇತ್.

ಭೀಮನ ಆಟಿಕೆ ಸೇರ್ಸಿಕಣದೆ ಹಜ್ಜಾದಿನ ಮಕ್ಕ ಬೇರೆ ಆದ್ದೊ. ಆದರೆ ಮಕ್ಕ ಅಲ್ಲೋ? ಹಜ್ಜ್ ಸಮಿಯಲೆ ಎಲ್ಲ ಮರ್ತ್ ಹಿಂದಕೆ ಒಟ್ಟಿಗೆ ಆಡಿಕೆ ಸುರು ಮಾಡ್ದೊ. ಭೀಮ

ಮುಂದೆನಾಂಗೆ ಏನಾರ್ ತುಂಟತನ ಮಾಡಿಕೆಂಡ್ ಇರ್‌ತ್ತಿತ್ತ್. ದುರ್ಯೋಧನಂಗೆ ಇವನ ಮೇಲೆ ಮಿತಿ ಇಲ್ಲದ ಕೇಡ್. ಇವನ ಕೊಲ್ಲೊಕುಂತೇಳ್ತ ಕೋಪ ಅವಂಗೆ. ಭೀಮಂಗೆ ಏನಾರ್ ತಿಂಬಕೆ ತುಂಬ ಆಸೆ. ಹಾಂಗೆ ದುರ್ಯೋಧನ ಒಮ್ಮೆ ಲಾಡ್ ಮಾಡ್ಸಿತ್. ಅದಿಕೆ ವಿಷ ಬೆರ್ಸಿತ್ತ್. ಅಂದ್ ಭೀಮನೊಟ್ಟಿಗೆ ತುಂಬ ಸ್ನೇಹತೋರ್ಸಿತ್. ನಿಂಗೆ ತಿಂಬಷ್ಟ್ ಲಾಡ್ ಕೊಟ್ಟನೆ. ನನ್ನೊಟ್ಟಿಗೆ ಬಂದಿಯನೋಂತ ಕೇಳ್ತ್, ಬನ್ನೆಂತ ಭೀಮ ಕುಶಿಲಿ ಒಪ್ಪಿಕೆಂಡ್ ಅವನ ಹೆಗಲ್ ಮೇಲೆ ಕೈ ಹಾಕೆಂಡ್ ಭಾರಿ ಸ್ನೇಹಲಿ. ಹೋತು. ಒಂದು ಏಕಾಂತದ ಜಾಗೆಲಿ ಅವನ ಕುದ್ರ್ಸಿ ಒಂದು ಬೋಗುಣಿ ತುಂಬ ಲಾಡ್ ತಂದ್ ಅವನ ಎದ್‌ರಿಗೆ ಇಸಿತ್. ಭೀಮ ಏನೂ ವಂಚನೆ ಇಲ್ಲದೆ ಅದರೆಲ್ಲ ಕುಶಿಂದ ತಿಂತ್. ಇಸದ ಪರಿಣಾಮಂದ ಅವಂಗೆ ಕೆಟ್ಟೆದೇನೂ ಆತ್‌ಲೆ. ಹಣ್ಣ್ ನಿದ್ದೆ ಬಾತ್. ಹಾಂಗೆ ಮಲ್ಗಿ ನಿದ್ದೆ ಮಾಡ್ತ್. ಇದೇ ಸಮಯಂತೇಳಿ, ದುರ್ಯೋಧನ ಹಾವುಗಳ ತಂದ್ ಭೀಮಂಗೆ ಕಚ್ಚಿಸಿತ್. ಇದರ ಪರಿಣಾಮ ಏನಾತ್‌ಂತೇಳಿರೆ ವಿಷಕ್ಕೆ ಪ್ರತಿವಿಷ ಮೊದ್ಲ್ ಕೊಡುವ್ವಾಂಗೆ ಒಂದು ಇಸ ಇನ್ನೊಂದು ಇಸನ ಶಕ್ತಿನ ತಗ್ಗ್‌ಸಿತ್. ದುರ್ಯೋಧನನ ಹಟ ಅಷ್ಟ್ಲಿಯೂ ನಿತ್ತೆತ್‌ಲೆ. ನಾಲ್ಕೈದ್ ಜನ ಸೇರಿ ಒಂದು ದೊಡ್ಡ ಕೆಲ್ಲ್‌ನ ತಂದ್ ಅವನ ಗಂಟ್‌ಲಿಗೆ ಕೆಟ್ಟಿ ಎಲ್ಲೆವು ಸೇರಿ ಗಂಗಾನದಿನ ಹೊಂಡಕ್ಕೆ ದುಡುಮ್ಮಂತ ಹಾಕಿದೊ.

ಹಿಂಬೊತ್ತಾತ್. ಆಡಿಕೆ ಹೋದ ಎಲ್ಲ ಮಕ್ಕ ಹಿಂದೆ ಬಂದೊ. ಆದರೆ ಭೀಮ ಬಾತ್‌ಲೆ. ಕುಂತಿಗೆ ನನ್ನ ಮಜ್ಜಂಗೆ ಏನಾತೋ. ದುರ್ಯೋಧನ ಎಲ್ಯಾರ್ ಅಂವನ ಕೊಂದ್ ಬುಟ್ಟೆತ್ತೋಂತ ಸೆನ್ನಿ ಅತ್ತ್‌ಕೆಂಡ್ ಕುದ್ದೆತ್. ಅಷ್ಟ್ಲಿ ಯುಧಿಷ್ಟಿರ ಓಡಿಕೆಂಡ್ ಕುಂತಿನಕ್ಕೆ ಬಂದ್, 'ಅವ್ವಾ, ಅವ್ವಾ, ಭೀಮ ಬಾತೊ? ಎಲ್ಲೆವು ಬಂದೊ ಅವನ ಕಾಂಬೊದುಲೇಂತ ಗಾಬ್‌ರಿಂದ ಹೇಳ್‌ಕನ ಕುಂತಿನ ಆತಂಕ ಇನ್ನಷ್ಟ್ ಹೆಚ್ಚಾತ್. ವಿದುರನ ಬಾಕೆ ಮಾಡಿ, ಭೀಮನ ಕಾಂಬೊದುಲೆ ದುರ್ಯೋಧನ ಎಲ್ಯಾರ್ ಅವನ ಕೊಂದ್ ಬುಟ್ಟೆತ್ತೋಂತ ನಂಗೆ ಹೆದ್‌ರಿಕೆ ಆದೆ. ಯುದಿಷ್ಟಿರನೂ ಹಾಂಗೇ ಹೇಳಿ ದುಃಖ ತೋರ್ಸಿತ್. ಅದಿಕೆ ವಿದುರ ಹೇಳ್ತ್. "ಯುಧಿಷ್ಟಿರ, ಅತ್ತಿಗ, ನೀವೇನೂ ಚಿಂತೆ ಮಾಡ್ಬೇಡಿ ವ್ಯಾಸ ರುಷಿಗೆಳೇ ಹಿಂದೆ ಹೇಳ್ದೋಳೊ ಪಾಂಡೆವೆರ್ ದೀರ್ಘಾಯುಷಿಗಾಂತ. ಅವರ ಮಾತ್ ಎಂದೂ ಸುಳ್ಳಾಕಿಲೆ. ಹಾಂಗೆ ಭೀಮಂಗೆ ಏನೂ ಆಕಿಲೆ ಅಂವ ಹಿಂದೆ ಬಾದು ಹೆದ್‌ರ್ಬೆಡಿಂತ" ಸಮಾಧಾನ ಹೇಳ್ತ್. ಆದರೂ ಅಯ್ಯನ ಮತ್ತೆ ಒಡ ಹುಟ್ಟುಗಳ ಮನ್ಸ್ ಕೇಳ್ದನೋ? ಬೇಜಾರ ಮಾಡಿಕೆಂಡೇ ಇದ್ದೋ.

ಗಂಗಾನದಿನ ಗಯೆಲಿ ಕೆಂತಿ ಹೋದ ಭೀಮಂಗೆ ಗಂಗೆನ ದಯೆಂದ ಏನೂ ಆತ್ಲೆ. ಅಂವನ ಇಸ ಎಲ್ಲ ಇಳ್ದ್ ಅಂವಂಗೆ ಎಚ್ಚರಿಕೆ ಆತ್. ಕಾಡ್ ಬೋಳಿಗಳ್‌ಂದ ಕೈ ಕಾಲ್‌ಗಳ ಕೆಟ್ಟಿದರ ನೋಡಿ, ಕೋಪಂದ ಮೈಕೈಗಳ ಅತ್ತ ಇತ್ತ ಒದ್‌ರ್ಸನ ಅವೆಲ್ಲ ಪಟಪಟಂತ ತುಂಡಾದೊ. ಮತ್ತೆ ಗಂಟ್ಲಿಗೆ ಕೆಟ್ಟಿದ ಕೆಲ್ಲ್‌ನೂ ಜಿಜ್ಜಿ ಒದ್‌ರ್‌ತ್. ಹಾಂಗೇ ಕೆಳಗೆ ಇಳ್ದ್ ಸರ್ಪಗಳ ರಾಜ್ಯ ನಾಗ ಲೋಕಕೆ ಹೋತು. ಅಲ್ಲಿನ ಸರ್ಪಂಗ ಇಂವನ ಮುತ್ತಿಕೆಂಡೊ. ಕೆಲೆವು ಅಂವಂಗೆ ಕಚ್ಚಿದೊ. ಆದರೆ ಅವುಗಳ ಹಲ್ಲ್ ಅವನ ಚೆರ್ಮಕ್ಕೆ

ನಾಟಿತ್ತ್. ಅಂವ ಕೆಲೆವು ಹಾವುಗಳ ನೇಜಿ ನೆಲಕೆ ಬೊಡ್ಡ್ ಕೊಂದ್ ಹಾಕಿತ್. ಮತ್ತೆ ಅವೆಲ್ಲ ಓಡಿಹೋಗಿ ಹಾವುಗಳ ರಾಜ ವಾಸುಕಿಗೆ ದೂರು ಹೇಳ್ದೊ. ವಾಸುಕಿ ಮತ್ತೆ ಅವನ ಪರಿವಾರದೊಪ್ಪ ಬಂದ್ ಭೀಮನ ನೋಡ್ದೊ. ಆ ಪರಿವಾರೆಲಿ ಆರ್ಯಕಂತೇಳುವ ಸರ್ಪ ರಾಜ ಇತ್ತ್. ಅಂವ ಕುಂತಿನ ಅಪ್ಪಂಗೆ ನೇರೆಲಿ ಮುತ್ತಾತ ಆಕೊಡ. ಹಾಂಗೆ ಕುಂತಿನ ಮಜ್ಜ ಭೀಮನ ನೋಡಿ ಅವಂಗೆ ಬಾರಿ ಸಂತೋಸು ಆತ್. ಅಂವ ಭೀಮನ ತೊಬ್ಬಿ ಕಂಡ್ ಆನಂದದ ಕಣ್ಣೀರ್ ಹಾಕಿತ್. ವಾಸುಕಿ ವಿಚಾರ್ಸಿ ಭೀಮಂಗೂ ಅಂವಂಗೂ ಇರುವ ಸಂಬಂಧನ ತಿಳ್ಕಂಡ್, ಭೀಮಂಗೆ ಉಪಚಾರ ಮಾಡ್ತ್. 'ನಿನ್ನ ಮೊರಿಪಿಳ್ಳೆಗೆ ಚಿನ್ನದ ಒಡವೆ ವಸ್ತುಗಳ ಕೊಟ್ಟ್ ಮನ್ನಣೆ ಮಾಡನೋಂತ' ಕೇಳ್ತ್. ಅಂವಂಗೆ ವಸ್ತ್ರ ಒಡವೆಗಳ ಕೊಡುವ ಅಗತ್ಯ ಇಲ್ಲೆ. ನಿಮ್ಮೆಲ್ಲಿ ಗುಂಬಗಳ್ಲಿ ಶೇಖರ್ಸಿ ಇಸಿದ ಅಮೃತ ಉಟ್ಟೊಲೆ ಅದರ ಕುಡಿಯಕೆ ಕೊಡಿ. ಅಂವಂಗೆ ಬಲಕೊಡುವ ಅದ್ ಅಗತ್ಯಂತ ಹೇಳ್ತ್. ಹಾಂಗೆ ವಾಸುಕಿ, ಅಮೃತ ರಸಾಯನ ತುಂಬಿದ ಎಂಟ್ ಗುಂಬಗಳ ತರ್ಸಿ ಇಸಿತ್. ಇದರ್ಲಿ ನಿಂಗೆ ಎಷ್ಟ್ ಬೇಕೋ ಅಷ್ಟರ ಕುಡಿಯೆಕ್‌ಂತ ಹೇಳ್ತ್. ಭೀಮ ಸುರುಗೆ ಒಂದು ಗುಂಬನ ಕಾಲಿ ಮಾಡ್ತ್. ಅಂವಂಗೆ ಸುಮಾರ್ ನೂರು ಆನೆಗಳ ಬಲ ಬಂದಾಂಗೆ ಆತ್. ಹಾಂಗೆ ಆ ಎಂಟ್ ಗುಂಬಗಳ ಅಮೃತನೂ ಒಂದೇ ಏಟಿಗೆ ಕುಡ್ದ್ ಕಾಲಿ ಮಾಡ್ತ್. ಆಗ ವಾಸುಕಿ ಹೇಳ್ತ್ ನಿಂಗೆ ಈಗ ಸಾವಿರ ಆನೆಗಳ ಬಲ ಉಂಟಾತ್. ನಿನ್ನ ಶತ್ರುಗಳ ಮರ್ದನಕ್ಕೆ ನೀ ತುಂಬ ಸಮರ್ಥ. ನಿಂಗೆ ಹಜ್ಜ ವಿಶ್ರಾಂತಿನ ಅಗತ್ಯ ಉಟ್ಟು. ಹಾಂಗೆ ನನ್ನ ಆಳ್‌ಗ ತಯಾರ್ ಮಾಡ್ದ ಮೆತ್ತಂಗೆನ ಹಾಸಿಗೆಲಿ ಮಲ್ಗಿ ನಿದ್ದೆ ಮಾಡ್‌ಂತ ಹೇಳ್ತ್. ಹಾಂಗೆ ಭೀಮ ಮಲ್ಗಿದಂವ ಏಳ್ ಹಗ್‌ಲ್, ಏಳ್ ಇರ್ಲ್ ನಿದ್ದೆ ಮಾಡ್ತ್.

ಇತ್ತ ಕುಂತಿ, ಮತ್ತೆ ಅದರ ಒಳ್ದ ಮಕ್ಕೆಳಿಗೆ ಭೀಮಂಗ ಏನಾತ್‌ಂತ ಗೊತ್ತಾಗದೆ ತುಂಬ ದುಃಖ ಪಟ್ಟ್‌ಕಂಡ್ ಇದ್ದೊ. ಏನ್ ಮಾಡುದು ಎಲ್ಲಿ ಹುಡ್ಕುದುಂತ ಗೋತ್ತಾಗದೆ ಪೇಚಾಡಿಕಂಡ್ ಇದ್ದೊ. ಪಾತಾಳ ಲೋಕೆಲಿ ನಿದ್ದೆಂದ ಎದ್ದ ಭೀಮಂಗೆ ಎಚ್ಚರಿಕೆ ಆದರ ನೋಡಿ, ವಾಸುಕಿ ಮತ್ತು ಆರ್ಯಕಂತೇಳೊವೆಲ್ಲ, ಭೀಮಂಗ, ನೋಡು ಮಜ್ಜ, ನೀ ಏಳ್ ದಿನ ನಿದ್ದೆ ಮಾಡ್ದ. ನಿನ್ನ ಅವ್ವ ಮತ್ತೆ ಅಣ್ಣತಮ್ಮೆಂದವೆರ್ ಎಲ್ಲ ನಿನ್ನ ನೋಡದೆ ಕಂಗಾಲ್ ಆಕಂಡ್ ಇರುವೊ. ಈಗ ನೀ ಸಾವಿರ ಆನೆಗಳ ಬಲ ಪಡ್ದೊಳ. ನೀ ಬೇಗ ಹೋಗಿ ಅವ್ವೆ ಸಂತೋಸು ಆಗುವ ಹಾಂಗೆ ಮಾಡ್‌ಂತ ಹೇಳ್ದೊ. ಹಾಂಗೆ ಭೀಮ ಅವ್ವೆ ನಮಸ್ಕಾರ ಮಾಡಿ ಆಶೀರ್ವಾದಗಳ ಪಡ್ದ್ ಹೊರ್ಟತ್. ಅವನೊಟ್ಟಿಗೆ ಕೆಲೆವು ಸರ್ಪಗೆಳೂ ಬಂದೊ. ಅಂವ ಗಂಗಾನದಿನ ದಡಕ್ಕೆ ಸೇರ್ದ ಮೇಲೆ ಅವು ಹೊರ್ಟ್ ಹೋದೊ. ಇಂವ ತಮ್ಮವರ ಕಾಂಬ ಆತುರೆಲಿ ವಾಯುವೇಗೆಲಿ ಬಂದ್ ಕುಂತಿನ 'ಅಮ್ಮಾ'ಂತ ಕರ್ಕಂಡ್ ಅದರ ಹಕ್ಕಲೆ ಹಸ್‌ನ ಹಕ್ಕಲೆ ಕರ್ ಬಾವಾಂಗೆ ಓಡಿಬಾತ್. ಕುಂತಿ ತುಂಬ ಸಂತೋಸುಲಿ ಅವನ ಬಾಚಿ ತೊಬ್ಬಿಕೆಡತ್. ಅದರ ಪ್ರೀತಿ ಎಷ್ಟ್ ಉಕ್ಕಿತ್‌ಂತೇಳರೆ, ಅದರ ಮೊಲೆಗಳ್‌ಂದ ಹಾಲ್ ಆರ್ತ್. ಯುಧಿಷ್ಠಿರ ಹಕ್ಕಲೆ ನಿತ್ತ್‌ಕಂಡ್ ಇದ್ದಂವ 'ಭೀಮ'ಂತ ಪ್ರೀತಿಂದ ಕರ್ತ್. ಭೀಮ ಕುಸಿಂದ ಅವನ ಹಕ್ಕಲೆ ಹಾರಿ ಕಜ್ಜಿ

ತೊಬ್ಬಿಕಲಂಡಾಂಗೆ ಗಟ್ಟಿಯಾಗಿ ತೊಬ್ಬಿಕಲಂಡಲೆತ್. ಯುಧಿಷ್ಠಿರನ ಕಣ್ಣ್‌ಂದ, ಆನಂದದ ಕಣ್ಣೀರ್ ಬಳ ಬಳಂತ ಭೀಮನ ತಲೆ ಮೇಲೆ ಬೀತ್. ಅಷ್ಟರ್ಲಿ ಹತ್ರ ದೂರಲಿ ಇದ್ದ ಅರ್ಜುನ, ನಕುಲ, ಸಹದೇವಲೆರ್ ಬಂದ್ ಭೀಮನ ಕಾಲಿಗೆ ಬಿದ್ದೊ, ಭೀಮ ಆ ಮೂರು ಜನ ತಮ್ಮಂದರ್‌ನ ಬಾಚಿ ಒಮ್ಮೆಗೇ ತೊಬ್ಬಿ ಹಿಡ್ಕಂಡತ್. ಅಂವ ಅವರ ಅವನ ಎದೆಗೆ ಎಷ್ಟ್ ಬಿಗಿಯಾಗಿ ತೊಬ್ಬಿತ್‌ಂತೇಳಿರೆ ಅವ್ಕೆಲ್ಲ ಉಸುರು ಕಟ್ಟುವಾಂಗೆ ಆತ್. ಮತ್ತೆ ನಾಗ ಲೋಕಲಿ ಏನೇನ್ ನಡ್ತ್‌ಂತ. ಎಲ್ಲ ವಿವರಗಳ ಹೇಳ್ತ್. ಅವ್ಕೆಲ್ಲ ಭಾರಿ ಖುಸಿ ಆತ್. ಎಲ್ಲ ಕೃಷ್ಣನ ದಯೆಂತ ಹೇಳಿ ಅವನ ನೆನ್ಸಿಕಂಡ್ ಸಂತೋಸುಲಿ ಇದ್ದೊ.

ಭೀಮ ವಾಪಾಸ್ ಬಂದಾಕನ ಅಯ್ಯಮಕ್ಕಳಿಗಾದ ಸಂತೋಸುನ ವರ್ಣಿಸಿಕೆ ಬೊತ್ತ್. ಅದರ ಹತ್ತ್ ಪಾಲ್ ಕೋಪ ಮತ್ತೆ ನಿರಾಶೆ ದುರ್ಯೋಧನಂಗಾತ್. ಏನೂ ಮಾಡುವ ಹಾಂಗಿಲ್ಲೆ. ಹಲ್ಲ್ ಕಿತ್ತ ಹಾವ್‌ನಾಂಗೆ ಮೆಲ್ಲಂಗಿತ್ತ್. ನಡ್ದ ವಿಚಾರನ ವಿದುರಂಗೆ ಮಾತ್ರ ಹೇಳ್ದೊ. ಭೀಷ್ಮಂಗಾಗಲೀ, ಧೃತರಾಷ್ಟ್ರಂಗಾಗಲೀ ಹೇಳ್ಬ್ಡ ಬೇಡಾಂತ ವಿದುರನೂ ಹೇಳ್ತ್. ಮುಂದ ಜಾಗ್ರತೆಂದ ಇರೋಕುಂತ ಎಲ್ಲಲೆವೂ ನೆನ್ಸಿಕಂಡೊ.

ಹೀಂಗೇ ಅವರವರ ಪಾಡ್‌ಗೆ ಎಲ್ಲೊವೂ ಸಂತೋಸುಲೇ ಇದ್ದೊ. ದುರ್ಯೋಧನ ಮಾತ್ರ ಟೊಳ್ಳು ಮರದೊಳಗೆ ಗಪ್ಪುಲುವ ಕಿಚ್ಚಿನಾಂಗೆ ಮತ್ಸರಲಿ ಬೇಯುತ್ತಿತ್ತ್. ಪಾಂಡವರ ಹೇಂಗೆ ಮುಗ್ಸುದೂಂತ ಉಪಾಯ ಹುಡ್ಕಿಕಲಂಡೇ ಇತ್ತ್. ಈ ಸಮಯಲಿ ದ್ರೋಣಲೆರ್. ಕೌರವ ಪಾಂಡವ ಮಕ್ಕಳ ಎಲ್ಲ ಕರ್ದಿದೊ. ಎಲ್ಲಾ ಬಂದ್ ಅವರ ಸುತ್ತ ಕುದ್ದ್‌ಕಂಡೊ. “ಏನಪ್ಪಣೆ ಗುರುಗಳೇ?”ಂತ ಕೇಳ್ದೊ. ಅದ್ಕೆ ದ್ರೋಣಲೆರ್ ಹೇಳ್ದೊ: “ಶಿಷ್ಯ ಮಕ್ಕಳೇ, ನಂಗೆ ಗೊತ್ತಿದ್ದ ವಿದ್ಯೆನ ಎಲ್ಲದನ್ನೂ ನೀವ್ಗೆ ಕಲ್ಸಿ ಕೊಟ್ಟೊಳೆ. ಈಗ ನೀವು ನಂಗೆ ಗುರುದಕ್ಷಿಣೆ ಕೊಡುದು ಮಾತ್ರ ಬಾಕಿ” ಏನ್ ಬೇಕೂಂತ ಹೇಳಿ ಗುರುಗಳೇ. ಈಗಲೇ ಅರಮನೆಗೆ ಹೋಗಿ, ಮುತ್ತು, ರತ್ನ, ವಜ್ರ, ವೈಡೂರ್ಯದ ತರತರದ ಆಭರಣಗಳ ತಂದ್ ಕೊಟ್ಟವೆ” ಅರಮನೆಂದ ಕೊಡುವಂತದರ ಎಲ್ಲ ನಿಮ್ಮ ಅಜ್ಜ ಭೀಷ್ಮಲೆರ್ ಕೊಟ್ಟೊಳೆ. ನಾ ಕೇಳ್ದು ನೀವೇ ಸಾಧ್‌ಸಿ ಕೊಡುವಂತದರ. ಅದರಿಂದ ನಾ ಮಾಡ್ದ ಪ್ರತಿಜ್ಞೆನ ಪೂರೈಸಿದೆ. ಪಾಂಚಾಲ ರಾಜ್ಯಲಿ ಪೃಷತಂತೇಳುವ ರಾಜನ ಮಗ ದ್ರುಪದಂತೇಳುವ ಈಗ ರಾಜನಾಗಿ ಉಟ್ಟು. ನೀವು ಹೋಗಿ ಅವನ ಸೆರೆಹಿಡ್ದ್ ಹಡಮುರಿ ಕಟ್ಟಿ ತಂದ ನಂಗೆ ಒಪ್ಪುಸೋಕು. ಹಾಂಗೆ ಮಾಡುವ್ರೋರಿಯೋ?”

ದ್ರೋಣಲೆರ್ ಹೀಂಗೆ ಹೇಳ್ದಲೆರ ಕೇಳಿ ಕೌರವಲೆರ್, ಪಾಂಡವರ್‌ಂದ ಮುಂದೆ ನಾವೇ ಹೋಗಿ ಈ ಕೆಲ್‌ಸ ಮಾಡೋಕು. ಒಮ್ಮೆಯಾರ್ ನಾವು ಅವರ್‌ಂದ ಮೇಲಾಕು ಹೀಂಗೆ ರಥಗಳ ಹತ್ತಿಕಲಂಡ್ ಪಾಂಚಾಲ ದೇಶಕ್ಕೆ ಹೋದೊ. ಪಾಂಡವಲೆರ್ ಹಿಂದಂದ ಹೋದೊ. ಕೌರವಲೆರ್ ಯುದ್ಧಕ್ಕೆ ಬಂದವರ ನೋಡಿ ದ್ರುಪದಂಗೆ ತುಂಬ ಕೋಪ ಬಾತ್. ದ್ರೋಣನೊಟ್ಟಿಗೆ ಒಂದೇ ಗುರುಂದ ಬಿಲ್ಲ್ ವಿದ್ಯೆ ಕಲ್ತಿಂವ. ಅವನೊಟ್ಟಿಗೆ ಹೋರಾಟ ಮಾಡಿಕೆ ಸಾಧಾರಣದಲೆವ್ಕೆ ಸಾಧ್ಯ ಇಲ್ಲೆ. ಕೌರವಲೆರ್ ಪೆಟ್ಟ್ ತಿಂದ್ ಬಿಲ್ಲಿಕೆ ಬೊತ್ತ್‌ಂತ ಓಟ ಹಿಡ್ದೊ.

ಈಗ ಅರ್ಜುನ ಯುಧಿಷ್ಠಿರ ಮತ್ತೆ ನಕುಲ ಸಹದೇವರ ಒಂದು ಕರೆಲಿ ನಿತ್ತ್ಕೆಂಡಿ ಇರೀಂತ ಹೇಳಿ ಅಂವನೂ ಭೀಮನೂ ದ್ರುಪದನ ಎದ್ರ್ಕೆ ಹೋದೊ. ಭೀಮ ಒಂದು ದೊಡ್ಡ ಮರನ ಕಿತ್ತ್ ದ್ರುಪದನ ಸೈನಿಕರ ಮೇಲೆ ಬೀಸಿ ಇಟ್ಟೆತ್. ನೂರಾರ್ ಜನ ಒಮ್ಮಗೇ ಯಮ ಲೋಕಕ್ಕೆ ಹೋದೊ. ಒಂದರ ಮೇಲೆ ಒಂದಾಗಿ ಬೀಳುವ ಅರ್ಜುನನ ಬಾಣಂಗ ಕ್ಷಣಾರ್ಧೆಲಿ ಎಷ್ಟೋ ಜನರ ಕೊಂದೊ. ಇದರ ನೋಡ್ಕನ ದ್ರುಪದಂಗೆ ಆಶ್ಚರ್ಯ ಆತ್. ಏನ್ ಮಾಡೊಕುಂತ ಗೊತ್ತಾಗದೆ ಹಾಂಗೇ ನಿತ್ತ್ಕಂಡ್ ಇತ್ತ್. ಅವನ ರಕ್ಷಣೆಗೆಂತ ಇದ್ದ ಸೈನಿಕೆರೆಲ್ಲ ಅರ್ಜುನನ ಬಾಣಗಳ ಪೆಟ್ಟ್ ತಾಳಿಕೆ ಬೊತ್ತ್ಂತ ದ್ರುಪದನ ಅಲ್ಲೆ ಬುಟ್ಟು ಓಡ್ದೊ. ದ್ರುಪದ ಆಚೀಚೆ ನೋಡಿ ತನ್ನ ಬಿಲ್ಲ್‌ನ ಎತ್ತಿ ಬಾಣ ಜೋಡ್ಸ್ಕನ ಅರ್ಜುನನ ಬಾಣ ಅವನ ಬಿಲ್ಲ್‌ನ ಎರ್ಡ್ ತುಂಡು ಮಾಡ್ತ್. ದ್ರುಪದ ತನ್ನ ಕೆತ್ತಿನ ಒರೆಂದ ಎಳ್ದ್ ಹಿರಿಯಕೆ ಮುಂದೆ ಅರ್ಜುನ ಅವನ ರಥಕ್ಕೆ ಹಾರಿ ಹತ್ತಿ ಅವನ ಕೈಗೆ ಒಂದು ಪೆಟ್ಟ್ ಕೊಟ್ಟ್ ಆ ಕೆತ್ತಿನ ಕೈಂದ ಬೀಳ್ಸಿ, ಅವನ ಎರ್ಡ್ ಕೈಗಳ್ನ ಹಿಂದೆ ತಂದ್ ಹಿಡ್ಕಂಡೆತ್. ಅಷ್ಟರ್ಲಿ ಭೀಮ ಬಂದ್ ದ್ರುಪದನ ಕೈಗಳ ಕೆಟ್ಟಿತ್. ದ್ರುಪದನ ಸೈನಿಕೆರೆಲ್ಲ ಕೆಣ್ಣ್ಲಿ ಕರೆಲಿ ಕಂಡೆತ್ಲೆ. ಮತ್ತೆ ಭೀಮ ಅವನ ಹೊತ್ತ್ ಕೆಂಡ್ ಬಂದ್ ಅರ್ಜುನನ ರಥಲಿ ಒಂದು ಕರೆಲಿ ಕುದ್ದ್ರ್ಸಿತ್. ಅಂವ ರಾಜ ಆದ್ದರ್ಂದ, ಅಂವಂಗೇನೂ ಅವಮಾನ ಮಾಡಿಕೆ ಆಗೆದ್ಂತ ಭೀಮೊನೂ ಅರ್ಜುನನೂ ಅವನ ಮರ್ಯಾದೆಲೇ ನೋಡಿಕಂಡೊ. ಸೀದಾ ಹಸ್ತಿನಾವತಿಗೆ ಬಂದೊ.

ಅರ್ಜುನ ಬಂದ್ ದ್ರುಪದನ ದ್ರೋಣಾಚಾರ್ಯೆರಿಗೆ ತೋರ್ಸಿತ್. ದ್ರೋಣೆರಿಗೆ ತುಂಬ ಕುಶಿ ಆಗಿ ಶಿಷ್ಯನ ತೊಬ್ಬಿಕೆಂಡೊ. ಅಂವನ ನನ್ನ ಮಂಚದ ಕಾಲಿಗೆ ಕೆಟ್ಟ್ಂತ ಹೇಳ್ದೊ. ದ್ರೋಣೆರ್ ದ್ರುಪದನ ನೋಡುವ ಈ ಸಂದರ್ಭ ವ್ಯಾಸ ಭಾರತಕ್ಕೂ, ಪಂಪ ಭಾರತಕ್ಕೂ ವ್ಯತ್ಯಾಸ ಉಟ್ಟು. ವ್ಯಾಸ ಭಾರತೆಲಿ ದ್ರುಪದಂಗೆ ತುಂಬ ಅವಮಾನ ಮಾಡ್ತುಲೆ. ಹಿಂದೆ ಅಂವ ಹೇಳ್ದ ಮಾತ್‌ನೇ ಅವಂಗೆ ತಿರ್ಗ್ಸಿ ಹೇಳಿ, ಸಮಾನರೊಳಗೆ ಮಾತ್ರ ಸ್ನೇಹ ಇರುದು ಹೊರ್ತು ಬಡ ಹಾರಂವಂಗೂ ಮಹಾರಾಜಂಗೂ ಹೇಂಗೆ ಸ್ನೇಹ ಆದೊಂತ ದ್ರೋಣನ ದ್ರುಪದ ಕೇಳಿತ್ತ್. ಅದಿಕೆ ಉತ್ತರವಾಗಿ ದ್ರೋಣ ಹೇಳ್ತ್. ಈಗ ನಿನ್ನ ಎಲ್ಲಾ ರಾಜ್ಯೆನೂ ನನ್ನ ಸ್ವಾಧೀನ ಆತ್. ನಮ್ಮ ಇಬ್ಬರ ಸ್ನೇಹ ಮುಂದೆಗೂ ಒಳಿಯೊಕುಂತೇಳ್ದ ಕಾರಣಂದ, ನಾ ಗದ್ದ ನಿನ್ನ ಇಡೀ ರಾಜ್ಯದ ಎರ್ಡ್ ಸಮಪಾಲ್ ಮಾಡಿ ಒಂದು ಪಾಲ್ ನಿಂಗೆ ಬುಟ್ಟನೆ. ಇನ್ನೊಂದಕ್ಕೆ ನಾ ರಾಜ ಆನೆ. ಈಗ ಸೆರಿಸಮಾನರಾದ ನಮ್ಮೊಳಗೆ ಸ್ನೇಹ ಒಳಿಯಕೆ ತೊಂದರೆ ಏನೂ ಇಲ್ಲೆಲೆ. ಬೇಜಾರು ಮಾಡದೆ, ನಿನ್ನ ರಾಜ್ಯಕೆ ಹೋಗುಂತೇಳಿ ಅವನ ಕೆಟ್ಟ್‌ನ ಬಿಚ್ಚಿ ಬುಟ್ಟೆತ್. ದ್ರುಪದನೂ ಸಂದರ್ಭಕ್ಕೆ ಸೆರಿಯಾಗಿ ನಾಕ್ ಮಾತಾಡಿ, ಆದರೆ ಮನಸ್‌ನೊಳಗೆ ತುಂಬ ಕೋಪ ಇಸಿಕೆಂಡ್ ಹೊರ್ಟ್ ಹೋತು.

ಪಂಪ ಭಾರತೆಲಿ, ದ್ರೋಣ ಹಿಂದೆ ತನಿಗೆ ಮಾಡ್ದ ಅವಮಾನಕ್ಕೆ ಪ್ರತಿಯಾಗಿ ದ್ರುಪದನ ಮಾನ ಮರ್ಯಾದೆನ ಎಲ್ಲ ಕೆಳವಷ್ಟ್ ಅಂದರೆ ಸಾವುಗಿಂತಲೂ ಹೆಚ್ಚಾಗಿ

ಅವಮಾನ ಮಾಡ್ಸ್. ಅವನ ಅರ್ಧ ರಾಜ್ಯನೇನೂ ತಕಟಂಬೊದುಲೆ. ಮಂಚದ ಮೇಲೆ ಕುದ್ಸ್ ಕಟಂಡ್ "ಆದಿ ಕ್ಷತ್ರೀಯರೇ ಈ ಬಡ ಹಾರಂವ ಯಾರ್‌ಂತಗೊತ್ತಾತ್ತೋ? ಈ ಬಡ ಹಾರಂವನ ಕಾಲ್ ನಿಮ್ಮ ನೊಡು ತಲೆನ ಒದಿಯಕೆ ತಯಾರಾಗಿ ಉಟ್ಟುಂತೇಳಿ ಭಾರಿ ಕೋಪಂದ ಹಾರಿ ಒದ್ದಟತ್. 'ನಿಂಗೆ ಇಷ್ಟ್ ಪ್ರತೀಕಾರ ಮಾಡ್ದ್ ಸಾಕ್. ಒಟ್ಟಿಗೆ ಓದಿದ ಒಂದೇ ಕಾರಣಂದ ನಿನ್ನ ಕೊಲ್ಲ್‌ದ್‌ಲೆ. ಕೊಂದರೆ ಮುಂದೆ ಬಾವ ಅಪಾಯಕ್ಕೆ ಹೆದ್‌ರಿ ಕೊಂದಟತ್‌ಂತ ಅಪವಾದ ಬಾದು. ಈಗ ಮಾಡ್ದ ಅವಮಾನ ಸಾಕ್. ಬೊದ್ಧಿಕಂತ ಹೇಳಿ ಕಟಟ್ಟ್‌ಗಳ ಎಲ್ಲ ಬಿಚ್ಚಿ ಬುಟ್ಟಿತ್. ದ್ರುಪದ ನಿನ್ನ ಕೊಲ್ಲುವಂತ ಒಬ್ಬ ಮಜ್ಜನ್ನೂ, ವೀರ ಅರ್ಜುನಂಗೆ ಹೆಣ್ಣಾಗುವಂತ ಒಬ್ಬ ಮಗಳ್ನೂ ಪಡಿಯದಿರ್ಕಲೇಂತ ಹೇಳಿ ಕಾಡಿಗೆ ಹೋತು. ಅಲ್ಲಿ ಅವನ ಆಸೆನ ನೆರವೇರ್ಸುವ ರುಸಿಗಳ ಹುಡ್ಕಿಕೆ ತುಂಬಾ ಕಷ್ಟ ಆತ್. ಕಾರ್ಣ ಕೊಲ್ಲುವಂತ ಕಾರ್ಯಕ್ಕೆ ಅನುಕೂಲ ಮಾಡಿಕೆ ಸಾಯ ಮಾಡ್ದು ಪಾಪ ಕಾರ್ಯಾಂತ, ಯಾರೂ ಒಪ್ಪಿತ್‌ಲೆ. ಕಡೆಗೆ ತುಂಬ ದಕ್ಷಿಣೆ ಕೊಟ್ಟನೇಂತ ಹೇಳಿ ಯಜ ಯಾಜಕಂತೇಳ್ವ ಇಬ್ಬೊರು ಅಣ್ಣ ತಮ್ಮಟಂದರ ಒಪ್ಪುಸಿ, ಅವರ್‌ಂದ ಯಜ್ಞ ಮಾಡ್ಸಿತ್ ಪರಮೇಶ್ವರನ ಕುರಿತಾಗಿ. ಯಜ್ಞಕುಂಡಂದ ಬಿಲ್ಲ್ ಬಾಣಗಳ ಸಮೇತ, ಪರಾಕ್ರಮವೇ ರೂಪಾದ ಒಬ್ಬ ಜವ್ವನ ಎದ್ದ್ ಬಾತ್. ಆ ಮೇಲೆ ಅತ್ಯಂತ ಸುಂದರಿಯಾದ ಒಂದು ಹುಡ್ಗಿ ಹೆಂಗ್‌ಸ್. ಅಪರೂಪದ ಅಲಂಕಾರ ಮಾಡಿಕಟಂಡ್ ಇದ್ದಟದ್ ಬಾತ್. ದ್ರುಪದನ ಆಸೆ ಪೂರೈಸಿತ್.

**ಮಕ್ಕ :**

ದ್ರುಪದಂಗೂ, ದ್ರೋಣಂಗೂ ಹಗೆತನ ಹೆಂಗಾತ್ ಅಜ್ಜಪ್ಪ?

**ತಾತ :**

ಅದ್ ಒಂದು ಸ್ವಾರಸ್ಯ ಕತೆ. ಕೇಳಿ. ಭಾರದ್ವಾಜನ ಮಜ್ಜ ದ್ರೋಣನೂ, ಪಾಂಚಾಲ ದೇಶದ ಪೃಷತಂತೇಳ್ವ ರಾಜನ ಮಜ್ಜ ದ್ರುಪದಟನೂ. ಒಂದೇ ಗುರುಕುಲಟಲಿ. ಒಂದೇ ಗುರುನ ಹಕ್ಕಲೆ ವಿದ್ಯಾಭ್ಯಾಸ ಮಾಡ್ದೊ. ವೃಷತ ರಾಜಂಗು ಭರದ್ವಾಜರಿಗೂ ತುಂಬ ಸ್ನೇಹ ಇತ್ತ್. ಹಾಂಗೆ ತಮ್ಮ ಇಬ್ಬೊರ್ ಮಕ್ಕಟಳೂ ಒಟ್ಟಿಗೆ ವಿದ್ಯೆ ಕಟಲಿಯಟಲಿಂತ ಈ ವಿರ್ಪಾಡ್ ಮಾಡ್ದೋ. ವಿದ್ಯಾಭ್ಯಾಸಂತೇಳಿರೆ ಹಾರ್‍ರ ಮಾಣಿಗಟಳಿಗೆ. ವೇದ. ವೇದಾಂಗ. ಶಾಸ್ತ್ರ ವ್ಯಾಕರಣಾಂತ ಇದುದು. ರಾಜಕುಮಾರಟರಿಗೆ. ಬಿಲ್ಲ್, ಬಾಣ, ಖಡ್ಗ ಗದೆಗಳಂತ ಆಯುಧಗಳ್‌ಂದ ಮಾಡುವ ಯುದ್ಧ ವಿದ್ಯೆನ ಕಟಲ್ಸಿದ್ದೊ. ಆದರೆ ದ್ರೋಣ ಬ್ರಾಹ್ಮಣನೇ ಆದರೂ. ಯುದ್ಧ ವಿದ್ಯೆಲೀ ವಿಶೇಷ ಪರಿಣತಿ ಪಡ್ತ್. ಜತೆಗಿದ್ದ ದ್ರುಪದ ಹೇಂಗೂ ರಾಜ ವಿದ್ಯೆ ಆದ ಬಿಲ್ಲ್ ವಿದ್ಯೆನೇ ಕಟಲಿಯಕಾದ್ ಅಗತ್ಯ ಆಗಿತ್ತ್‌ಲೆ. ಹೀಂಗೆ ಒಂದಾಗಿರ್ಕನ ಅವ್ಕೆ ತುಂಬ ಸ್ನೇಹ ಉಂಟಾತ್. ಇಬ್ಬೊರು ಯಾಗೋಳು ಒಟ್ಟಿಗೆ ಇರ್ತಿದ್ದೊ. ಹೀಂಗೆ ಅವ್ರು ಆಶ್ರಮಟಲಿ ಬೆಳ್ಕಟಂಡ್ ಬಾತಿದ್ದೊ. ಈಗ ಅವರೊಳಗೆ ಏನೇನೋ ಮಾತ್‌ಕತೆಗೆ ನಡಿಯುತಿದ್ದೊ. ತಮ್ಮ ಮುಂದೆನ ಜೀವನದ ಬಗ್ಗೆ ಏನೇನೋ ಕನ್ಸ್‌ಗ. ದ್ರುಪದ ಹೇಂಗೂ ರಾಜಕುಮಾರ. ಅಪ್ಪ ಸತ್ತ ಮೇಲೆ ಪಾಂಚಾಲ ರಾಜ್ಯಕ್ಕೆ ಅಂವನೇ ರಾಜ ಆದು ನಿಶ್ಚಯ.

ಹಾಂಗೆ ಅಂವ ನಾನಾ ತರದ ಬಣ್ಣ ಬಣ್ಣದ ಕಸ್‌ಗಳ ಅಂದರೆ ಹಗ್‌ಲ್‌ಗಸ್‌ಗಳ ಕಾಂಬತ್ತಿತ್ತ್. ಅದರೆ ದ್ರೋಣಂಗೆ ಹೇಳಿಕಣೆಂಡೂ ಇರ್‌ತಿತ್ತ್. 'ದ್ರೋಣ! ನಾ ಮುಂದೆ ರಾಜ ಆಕನ ನಿಂಗೆ ಅರ್ಧ ರಾಜ್ಯನ ಕೊಟ್ಟನೆ. ನಾಪಿಬ್ಬರೂ ರಾಜ್ಯ ಆಳಿಕಣೆಂಡ್ ಸುಕಣಿಲಿ ಇರೋನೋಂತ." ಕೆಲಣೆವು ಹರ್ಟೆ ಮಲ್ಲಣೆರ್, ನಾಲಿಕೆನ ಮೇಲೆ ಹಿಡ್ತ ಇಲ್ಲದಣೆವು, ಕೆಟ್ಟ ಮಾತಾಡಿಕಣೆಂಡ್ ಹೇಳುವೋ. ಏಯ್! ನಾ ಬೇಗ ಮೊದುವೆ ಆನೆ ಮತ್ತೆ ನನ್ನ ಹೆಣ್ಣ್‌ನ ನಿಂಗೆ ಕೊಟ್ಟನೇಂತ! ಇನ್ನ್ ಕೆಲಣೆವು ಹುಡ್ಗಣೆರ್ ಅವರ ಸ್ನೇಹಿತಂಗೆ ಒಂದು ತಂಗೆ ಉಟ್ಟುಂತಾದರೆ ಅವನ 'ಬಾವಾ'ಂತ ಕರೀದು ಇದೆಲ್ಲ ಬೆರಿ ಬಾಲಿಶ ಮಾತ್‌ಗ. ದೊಡ್ಡಿತಾಕನ ಎಲ್ಲ ಮರ್ತ್ ಬುಡುವೊ. ಹಾಂಗೆನೆ ದ್ರುಪದನ ಮಾತೂ. ದ್ರೋಣ ಅವನ ಮಾತ್‌ಗಳ ಒಂದು ಕೆಬಿಂದ ಕೇಳಿ ಒಂದು ಕೆಬಿಂದ ಬುಟ್ಟಣೆತ್. ಅಂವ ಅಂಥ ಮಾತ್‌ಗಳ್ನೇನೂ ಮಾತಾಡ್‌ತಿತ್ತ್‌ಲೆ.

ಇಬ್ಬರ ವಿದ್ಯಾಭ್ಯಾಸನೂ ಮುಗ್ತ್. ಇನ್ನ್ ಆಶ್ರಮನ ಬುಟ್ಟ್ ಅವರವರ ಮನೆಗಣೆಳಿಗೆ ಹೋಕು. ಹಾಂಗೆ ಹೊರ್ಡುವ ದಿನ ಬಂದೇ ಬುಟ್ಟಣೆತ್. ಇಬ್ರೊಬ್ರು ಸ್ನೇಹಿತಣೆರೂ ಬಳ ಬಳಾಂತ ಕಣ್ಣೀರ್ ಹಾಕಿಕೆ ಸುರು ಮಾಡ್ರೊ. ಮಾತಾಡಿಕೆ ಗಂಟ್ಲ್ ಕಣೆಟ್ಟಿದಾಂಗೆ ಆಗಿ ಮಾತ್ ಹೊರ್ಟ್‌ತಿತ್ತ್‌ಲೆ. ದ್ರುಪದ ದುಕ್ಕ್‌ಡ್ಲಿಕಣೆಂಡ್ ಕಷ್ಟಣೆಲಿ ದ್ರೋಣಂಗೆ ಹೇಳ್ತ್. "ದ್ರೋಣ ನನ್ನ ನಗರಕ್ಕೆ ನೀ ಒಮ್ಮೆ ಖಂಡಿತ ಬರೊಕು. ಮರಿಬೇಡ. ನಾ ನಿನ್ನ ಯಾಗೋಳು ನೆನ್ಸಿಕಂಣೆಡೇ ಇರುವೆ. ಮುಂದೆ ನಿಂಗೆ ಮೊದುವೆ ಆಕನ ನಂಗೆ ಹೇಳಿಕಣೆಳ್ರೊಕು. ಆಗ ನಾ ಖಂಡಿತ ಬಾವೆ. ನಂಗೆ ರಾಜ್ಯದ ಪಟ್ಟಾಭಿಷೇಕ ಆಕನ ನೀ ಬಂದೇ ತೀರೋಕು. ಮರಿಯಕೆ ಆಗಣೆದ್ ಬಲ! ನಾ ಇನ್ನ್ ಹೋಗಿ ಬನ್ನೆ ಬಲಾಂತ ಹೇಳಿ ದಿರೀಂತ ಅತ್ತಣೆತ್. ದ್ರೋಣಣೆನೂ ದುಕ್ಕಡ್ಲಿ ಕಣೆಂಡ್ ಅಂವನ ತಲೆ ಮರೆಯಾಕನ ಮುಟ್ಟ ನೋಡಿಕಣೆಂಡೇ ಇತ್ತ್. ಅಂವ ಅಂದೇ ಆಶ್ರಮಂದ ಹೊರ್ಟಣೆತ್‌ಲೆ. ಅಂವ ಬೆಳ್ಸಿದ ಹೂದ್ಬನ ಬುಡಕೆ ನೀರ್ ತಂದ್ ತಂದ್ ಹೊಯ್ತ್. ಸೊಪ್ಪ್ ಗೊಬ್ಬರಗಳ ಬುಡಕೆ ಹಾಕಿ ಮೋಣ್ಣ್ ಮುಚ್ಚಿತ್. ಅಂವ ಹುಲ್ಲ್ ತಂದ್ ತಿನ್ಸಿದ ಕಪಿಲೆ ಹಸ್‌ನ ಕಣೆರ್‌ನ ತೊಬ್ಬಿಕಣೆಂಡ್ ಅತ್ತಣೆತ್. ಆ ಮುದ್ದು ಕಣೆರ್ ಪ್ರೀತಿಂದ ಅವನ ಮೋರೆನ ನೆಕ್ಕಿತ್. ಮಾರ್ನೇ ದಿನ ಆಶ್ರಮಂದ ದ್ರೋಣ ಹೊರ್ಟ್ ಹಸ್ತಿನಾವತಿಲಿದ್ದ ಅವನ ಬಾವ ಕೃಪನ ಮನೆಗೆ ಸೇರ್ತ್. ಹತ್ತ್ ದಿನ ಕಣೆಳ್ದಾಕನ, ಕೃಪನ ತಂಗೆ ಕೃಪೆನ ಮೊದುವೆನೂ ಆತ್. ಮತ್ತೆ ಒಂಬೊತ್ತ್ ತಿಂಗ ಕಣೆಳಿಯುಕನ, ಒಬ್ಬ ಮಜ್ಜನೂ ಹುಟ್ಟಿತ್. ಬಡತನ ಅಂದರೆ ಹೇಳಿಕೆ ಜೊತ್ತದ ಬಡತನ. ಅಂವನ ಮಜ್ಜ ಹುಟ್ಟಿ ಅಳ್‌ಕನ ಅದ್ ಕುದ್‌ರೆ ಕೆನೆತದಾಂಗೆ ಕೇಳ್ತ್. ಹಾಂಗೆ ಅಂವಂಗೆ ಅಶ್ವತ್ಥಾಮಂತ ಹೆಸ್‌ರ್ ಇಸಿದೊ. ಕೂಸು ಹಾಂಗೇ ಬೆಳ್ಕಣೆಂಡ್ ಬಾತ್. ಬೇರೆ ಒಡನಾಡಿ ಮಕ್ಕ ಎಲ್ಲ ಹಾಲ್ ಕುಡಿಯುತಿದ್ರೊ. ಅಶ್ವತ್ಥಾಮ ಅದರ ನೋಡಿ. ನಂಗೂ ಹಾಲ್ ಬೇಕೂಂತ ಅಳ್‌ತಿತ್ತ್. ಅಂವಂಗೆ ಹಾಲ್ ಕೊಡಿಕೆ ಅವ್ವಗೆತಿ ಇತ್ತ್‌ಲೆ. ಅವನ ಅಳ್ಗ್‌ಲ್ ನಿಲ್ಲ್‌ತಿತ್ತ್‌ಲೆ. ಅವನ ಹಟ್ ಮಾಡಿಕೆ ಗಣೆಂಜಿನ ತೆಳಿ ಕೊಟ್ರೊ. ಬೆಳ್ಳಂಗೆ ಇದ್ದಣೆದೆಲ್ಲ ಹಾಲಲ್ಲಾಂತ ಆ ಕೂಸಿಗೇನ್ ಗೊತ್ತು? ನಂಗೆ ಹಾಲ್ ಸಿಕ್ಕಿತ್‌ಂತ ಕುಶಿಂದ ಕುದ್ತ್. ನೆಗಾಡ್ತ್. ಹೀಂಗೆ

ಬಡತನಲೇ ಆ ಕೂಸು ಬೆಳ್ದ್, ಹೃದ ಆತ್. ಅವಂಗೆ ದ್ರೋಣ ಅಕ್ಷರಾಭ್ಯಾಸ ಮಾಡ್ಸಿತ್. ಜೊತೆ ಜೊತೆಲ ಬಿಲ್ಲ್ ವಿದ್ಯೆನೂ ಕಲೆಲ್ಸಿಕೆ ಸುರುಮಾಡ್ತ್.

ದ್ರೋಣಂಗ ತನ್ನ ಬಡತನನ ಹೇಂಗೆ ಇಲ್ಲದೆ ಮಾಡ್ಲೂಂತ ತುಂಬ ಆಲೋಚನೆ ಆತ್. ಬೇಡುದಲ್ಲದೆ ಬೇರೆ ದಾರಿ ಇಲ್ಲೆ. ಹಾರೊವ್ಕೆ ಬೇಡುದ್ಯೆಕೆ ನಿಷೇಧನೂ ಇಲ್ಲೆ. ಪರುಶುರಾಮ ಕ್ಷತ್ರಿಯರ ಇಪ್ಪತ್ತೊಂದು ಸಲೆರ್ತಿ ಭೂಪ್ರದಕ್ಷಿಣೆ ಮಾಡಿ ಕೊಂದ್ ಅವರ ಸಂಪೊತ್ತ್‌ಗಳ ಎಲ್ಲ ತಂದ್ ಬ್ರಾಹ್ಮಣಲೆರಿಗೆ ದಾನ ಕೊಟ್ಟವೆಗಡ. ಹಾಂಗೆ ಅಂವನ ಹಕ್ಕಲೆ ಹೋದರೆ ನಂಗೆನೂ ಏನಾರ್ ಸಿಕ್ಕುದೂಂತ, ಅಶ್ವತ್ಥಾಮನ ಕರ್ಕಲೆಂಡ್, ಪರಶುರಾಮನ ಆಶ್ರಮಕೆ ಹೊರ್ಟಲೆತ್.

ದ್ರೋಣ ಬಂದ್ ಸೇರುವಷ್ಟರ್ಲಿ ಪರುಶುರಾಮ ತನ್ನ ಹಕ್ಕಲ ಇದ್ದದರೆಲ್ಲ ಬ್ರಾಹ್ಮಣರಿಗೆ ಕೊಟ್ಟ್ ಮುಗ್ಸಿತ್ತ್. ಮನೆಗೆ ಬಂದೊವ್ನ ಕೈಕಾಲ್ ತೊಳಿಯಕ ನೀರ್ ಕೊಡಿಕೆ ತಾಮ್ರದ, ಅತವಾ ಕಲೆಂಚಿ, ಹಿತ್ತಾಳೆನ ಚೊಂಬಿಗೂ ಗತಿ ಇತ್ತ್‌ಲೆ. ಹಾಂಗೆ ಮೊಣ್ಣ್‌ನ ಕುದ್ಟಲಿ ನೀರ್ ತಂದ್ ಕೊಟ್ಟಲೆತ್. ಈಗಲೆಳೇ ದ್ರೋಣಂಗೆ ಆತ್. ಇಲ್ಲಿ ತನಿಗೇನೂದಲೆಕ್ಕಿಕಿಲ್ಲೇಂತ.

ದ್ರೋಣ ಬಂದ ಉದ್ದೇಸ ಪರುಶರಾಮಂಗೆ ಗೊತ್ತಾಗಿ ತುಂಬ ಬೇಜಾರಾತ್. ಈ ಬ್ರಾಹ್ಮಣನ ಹೇಂಗೆ ತೃಪ್ತಿಪಡ್ಸುದು? ನನ್ನ ಹಕ್ಕಲೆ ಈಗ ಒಂದು ಅಡಿಕೆನೂ ಇಲ್ಲೆ. ಅಂಥ ಬಡಂವ ಆಗ್ಯೊಳೆ. ಈ ಅವಸ್ಥೆನ ದ್ರೋಣಂಗೂ ತಿಳ್ಸಿ, ಒಂದೆರ್ಡ್ ಬಾಣಂಗ ಒಳ್ದೊಳೊ. ಅದರ ತಕಂಡರೆನೋಂತ ಕೇಳ್ಸ್ದ್ರಕೆ, ನಂಗೆ ವಿದ್ಯೆನೇ ಸಂಪೊತ್ತ್. ಅದರ ಕೊಟ್ಟರೆ ಸಂತೋಸುಂದ ಸ್ವೀಕರ್ಸಿನಂತ ಹೇಳ್ತ್. ಪರಿಶುರಾಮಂಗೆ ಕುಸಿ ಆತ್. ಹಾಂಗೆ ಆ ಶಸ್ತ್ರಗಳ ದ್ರೋಣಂಗೆ ಅಷ್ಕೆ ಸಂಬಂಧಿಸಿದ ಮಂತ್ರಗಳ್ನೂ ಹೇಳಿಕೊಟ್ಟಲೆತ್. ದ್ರೋಣ ಸಂತೋಸುಂದ ಅಲ್ಲಿಂದ ಹೊರ್ಟಲೆತ್.

ಇನ್ನೆಲ್ಲಿಗೆ ಹೋದು, ಯಾರ ಕೇಳ್ಲೂಂತ ಯೋಚನೆ ಮಾಡ್‌ಕನ, ತನ್ನ ಬಾಲ್ಯ ಮಿತ್ರ ದ್ರುಪದನ ನೆಂಪಾತ್. ಸಲೆರಿ, ಅಲ್ಲಿಗೇ ಹೋಯೇಂತ ಮಜ್ಜನೊಟ್ಟಿಗೆ ಹೇಳಿ, ಪಾಂಚಾಲ ದೇಶದ ಕಡೆಗೆ ನಡಿಯಕೆ ಸುರುಮಾಡ್ತ್.

ದಾರಿ ನಡಿಯಕನ ಹಿಂದೆ ದ್ರುಪದಲೆನೂ ತಾನೂ ಒಟ್ಟಿಗೆ ಗುರುಕುಲಲೆಲಿ ಇದ್ದಲೆದರ ಎಲ್ಲ ಅಶ್ವತ್ಥಾಮಂಗೆ ಹೇಳ್ತ್. ಆ ಮಿತ್ರನ ಎಷ್ಟೋ ವರ್ಸಂದ ಮೇಲೆ ಈಗ ನೋಡಿಕೆ ಹೋನೇಂತ ನೆನ್ಸಿ ಅವನ ಮನ್ಸ್ ಹಿಗ್ಗಿತ್. ಆ ಉತ್ಸಾಹಲೆಲಿ, ಬೇಗ ಬೇಗ ಹಜ್ಜೆ ಹಾಕಿ ಪಾಂಚಾಲಿ ನಗರಕೆ ಬಂದ್ ಸೇರ್ತ್. ದ್ರುಪದನ ಅರಮನೆ ಎಲ್ಲಿಂತ ವಿಚಾರ್ಸುವ ಅಗತ್ಯನೇ ಇತ್ತ್‌ಲೆ. ಅವು ಹೋತಿದ್ದ ಹೆದ್ದಾರಿನ ಕಡೇಲಿದ್ದ ದೊಡ್ಡ ಮಹಲ್ ಕಂಡಲೆತ್. ಅದೇ ಅರಮನೇಂತ ತಿಳ್ಕಲೆಂಡ್ ಸೀದಾ ಅದರ ಹೆಬ್ಬಾಗ್‌ಲ್‌ನ ಎದ್‌ರ್ ಹೋಗಿ ನಿತ್ತಲೆತ್. ಬಾಗ್‌ಲ್ ಕಾಯೊಂವನ ಕರ್ದ್. "ನಿಮ್ಮ ಬಾಲ್ಯ ಮಿತ್ರ ದ್ರೋಣಂತೇಳ್ವ ಬ್ರಾಹ್ಮಣ ನಿಮ್ಮ ನೋಡೂಕುಂತೇಳಿ ಬಂದುಟುಂತ ನಿಮ್ಮ ರಾಜಂಗೆ ತಿಳ್ಸಿಂತ" ಹೇಳ್ತ್. ಹಾಂಗೆ ಬಾಗ್‌ಲ್ ಕಾಯೊಂವ ಒಳಗೆ ಹೋಗಿ ರಾಜಂಗೆ ಹೇಳ್ತ್. ದ್ರುಪದಂಗೆ ಕಂಡದಂತ ಕೋಪ ಬಾತ್. ಯಾವ ಬಡ ಹಾರಂವ ನಂಗೆ ಬಾಲ್ಯ ಮಿತ್ರ? ರಾಜಂಗೂ ಬಡ ಹಾರಂವಂಗೂ

ಎಲ್ಲಿನ ಸ್ನೇಹ? ಅಂವ ಯಾರೋ ನಂಗೆ ಗೊತ್ತಿಲ್ಲೆ. ಕಳ್ಸ್ ಅವನ ಹೊರಗೆಂತ ಕೋಪಲ್ಲಿ ಹೇಳ್ತ್. ಬಾಗ್ಲ್ ಕಾಯೊಂವ ಬಂದ್ ಅದರ ದ್ರೋಣಂಗೆ ಹೇಳ್ತ್.

ಆಗ ದ್ರೋಣ, "ನೋಡದೆ ತುಂಬ ಕಾಲ ಆತಲ್ಲೆ! ಹಾಂಗೆ ದ್ರುಪದ ಮರ್ತಿರ್ದು. ನೋಡಿರೆ ಅವಂಗೆ ಗುರ್ತ ಸಿಕ್ಕುದು" ಹೀಂಗೆ ತನ್ನಷ್ಟಕೆ ಹೇಳಿಕಂಡ್ ಬಾಗ್ಲ್ ಕಡೆಗೆ ಹೋತು. ಕಾವಲುಗಾರ ಅಡ್ಡಕಟ್ಟಿತ್. ದ್ರೋಣ ಒರೆಂದ ಕತ್ತಿನ ಎಳಿಯಕನ ಹೆದ್ರಿ ದಾರಿ ಬುಟ್ಟತ್. ದ್ರೋಣನ ನೋಡ್ಕನ, ದ್ರುಪದನ ಮೋರೆನ ಕೋಪದ ಕೆಂಪು ಇನ್ನೂ ಇಳ್ದಿತ್ತಿಲ್ಲೆ. ದ್ರೋಣ, ವಿನಯಂದಲೇ ಮಾತಾಡ್ತ್ "ಏನಣ್ಣ ನೀವೂ ನಾನೂ ಒಟ್ಟಿಗೇ ಓದಿಕಂಡಿದ್ದೊಪುಂತೇಳ್ದರ ಮರ್ತ್ ಬುಟ್ಟೊಳರಿಯಾ"ಂತ ಹೇಳ್ದರ ಕೇಳಿ ದ್ರುಪದನ ಕೋಪ, ಕಾಲ್ಂದ ನೆತ್ತಿವರೆಗೆ ಏರ್ತ್. ನನ್ನಂತ ರಾಜ ನಿನ್ನಂತ ಬಡ ಹಾರಂವನೊಟ್ಟಿಗೆ ಕಲ್ಲೀದು ಎಲ್ಲಿ ಸಾಧ್ಯ? ಆನೆಗೂ ಆಡಿಗೂ ಅಂತರ ಗೊತ್ತಿಲ್ಲದಂವ ನೀ ಎಂಥ ಬ್ರಾಹ್ಮಣ? ನಾಚಿಕೆಗೆಟ್ಟ್ ಕಂಡ್, ಏನೇನೋ ಹೇಳಿಕಂಡ್ ಬಂದೊಳ. ನಿನ್ನ ಹಾಂಗನೆ ಠಕ್ಕರ್ ಎಷ್ಟೋ ಜೆನ ಬಂದವೆ. ಮೊರ್ಯಾದೆಂದ ಬಂದ ದಾರಿ ಹಿಡಿ. ಇಲ್ಲದಿದ್ದರೆ ಗಂಟ್ಲಿಗೆ ಕೈ ಹಾಕಿ ದೂಡ್ಸಿ ಹೊರಗೆ ಹಾಕ್ಸೆಂತ ದ್ರುಪದ ಬುಸುಗುಟ್ಟಿತ್.

ದ್ರೋಣಂಗೆ ಕೋಪಲ್ಲಿ ಮೈಯೆಲ್ಲ ಜೆಗ್ರ್ತ್. ತಾನ್ ನಿರೀಕ್ಷೆ ಮಾಡ್ದ ಪ್ರೀತಿ, ವಿಶ್ವಾಸ, ಸ್ನೇಹ ಎಲ್ಲ ಧ್ವಂಸ ಆಗಿ ಹೋಗಿ ಅಪಮಾನದ ಹೊರೆ ಹೊರಿಕೆ ತೀರದಷ್ಟ್ ದ್ರುಪದ ಹೊರ್ಸಿ ಬುಟ್ಟತ್. ದ್ರೋಣ ದ್ರುಪದನ ನೋಡಿ, ಕೋಪಲ್ಲಿ ಕೆಂಡದ ಕಿಡಿಕಾರುವಾಂಗೆ, ಒಳ್ಳೆದ್. ನಿನ್ನ ಐಸಿರಿನ ಮದ ತಲೆಗೇರಿ, ನಿಂಗೆ ಹಿಂದೆದೆಲ್ಲ ಮರ್ತ್ ಹೋಗುಟು. ತೊತ್ತಿನ ಮೊಲೆಹಾಲ್ಲಿ ಬೆಳ್ದನಿಂಗೆ ಎಂತ ಬುದ್ಧಿ ಇರುದು? ನಿನ್ನ ಹಾಂಕಾರಂದ, ನಂಗೆ ಇಷ್ಟ್ ದೊಡ್ಡ ಅವಮಾನ ಮಾಡ್ದ. ಇದ್ಕೆ ಪರಿಹಾರ ಆಗಿ ಈ ಕ್ಷಣಲ್ಲಿ, ನಿನ್ನ ತಲೆನ ನೆಲಕೆ ಬೀಳುವಾಂಗೆ ಮಾಡ್‌ತಿದ್ದೆ. ಆದರೆ ನೀ ನನ್ನ ಸಹಪಾಠಿಯಾಗಿದ್ದಂವತೇಳ್ದೊರ ನಂಗೆ ಮರಿಯಕೆ ಆದುಲೆ. ನನ್ನ ಶಿಷ್ಯರ್ಂದ, ನಿನ್ನ ಹಡೆಮುರಿ ಕಟ್ಟ್‌ಸಿ, ನೀ ನಂಗೆ ಮಾಡ್ದ ಅವಮಾನದ ಎರ್ಡ್‌ಪಾಲ್ ನಿಂಗೆ ಅವಮಾನ ಮಾಡದಿದ್ದರೆ ನಾ ಮೀಸೆ ಹೊತ್ತ ಗಂಡ್‌ಸೇ ಅಲ್ಲಂತ ತಿಳ್ಕಂತೇಳಿ ದ್ರೋಣ ಅಲ್ಲಿಂದ ಬಿರುಗಾಳಿನಾಂಗೆ ಹೊರ್ಟ್ ಬಾತ್.

ಮತ್ತೆ ದ್ರೋಣ ದ್ರುಪದಂಗೆ ಅವಮಾನ ಮಾಡ್ದರ ಮುಂದೆನೆ ಹೇಳ್ದೆ ಅಲ್ಲ? ಹಾಂಗೆ ವಾಪಾಸ್ ಬಂದ ದ್ರೋಣ ಅಂವನ ಬಾವ ಕೃಪನ ಮನೇಲಿ ಇತ್ತ್. ಒಂದು ದಿನ ಹಿಂಬೊತ್ತಾಕನ, ಅಂವ ಹೊರಗೆ ತಿರ್ಗ್‌ಕಂಡ್ ಬಾಪ್ನೊಂತ ಹೇಳಿ ಹೊರ್ಟತ್. ಸೂಜಿ ನೊಟ್ಟಿಗೆ ನೂಲು ಹೋವಾಂಗೆ ಅವನ ಮಣ್ಣನೂ ಒಟ್ಟಿಗೆ ಇತ್ತ್. ಆಗ ಅಲ್ಲಿನ ಮೈದಾನಲಿ, ಪಾಂಡವ ಕೌರವ ಮಕ್ಕ ಸೇರಿಕಂಡ್, ಹುಲ್ಲುಕಂತೆಲಿ ಒಂದು ನಾರೆಜನರೂಪಮಾಡಿ ಇಸಿ ಅದರ ಗುರಿಯಾಗಿ ಇಸಿಕಂಡ್ ಒಬ್ಬೊಬ್ಬನೂ ಗುರಿಗೆ ಬಾಣ ಹೊಡ್ಕಂಡ್ ಆಡಿಕಂಡ್ ಇದ್ದೊ. ಆಗ ಆ ಹುಲ್ಲಿನ ಕಂತೆ ಅಲ್ಲಿದ್ದ ತುಂಬ ಹೊಂಡ ಇದ್ದ ಹಾಳ್ ಬಾವಿಗೆ ಬಿತ್. ಮಕ್ಕ ಎಲ್ಲ ಆ ಹಾಳ್ ಬಾವಿನ ಸುತ್ತ

ನೋಡಿಕೆಂಡ್. ಅದರ ತೆಗಿಯಕೆ ಪೊತ್ತದೆ. ಕಣ್ಣ್ ಪಿಳಿಪಿಳಿ ಬುಟ್ಟ್‌ಕೆಂಡ್ ಚಪ್ಪೆ ಆಗಿ ನಿತ್ತ್‌ಕೆಂಡ್ ಇದ್ದೊ. ದ್ರೋಣಂಗೆ ನೆಗೆ ಬಾತ್. ಏನ್ ಮಕ್ಕಳೇ, ನೀವು ಕ್ಷತ್ರಿಯ ರಾಜಕುಮಾರಿರ್. ಇಷ್ಟ್ ಜೆನ ಒಳರಿ. ಒಬ್ಬಂದೊಳು ತೆಗಿಯಕೆ ಪೊತ್ತೊ? ದ್ರುಪದನ ವಿಷಯ ಅವನ ಮನ್ಸ್‌ಂದ ಇನ್ನೂ ಹೋಗಿತ್ತ್‌ಲೆ. ಹಾಂಗೆ ಜಾತಿನ ಹೆಸ್‌ರೆತ್ತಿ ಮಕ್ಕಳ ಹಂಗ್‌ಸಿತ್. ಆ ಮೇಲೆ ಅಂಪನ ಮಜ್ಜನ ಕರ್ದ್, ನೀ ಒಮ್ಮೆ ಅದರ ತೆಗ್ದ್ ಕೊಡುಂತ ಹೇಳ್ತ್. ಆ ಹೈದ ಒಂದು ಬಾಣ ಬುಟ್ಟಿತ್. ಆ ಬಾಣನ ಮತ್ತೊಂದು ಬಾಣ ಕಚ್ಚಿಕಂಬ ಹಾಂಗೆ ಒಂದಾದ ಮೇಲೆ ಒಂದು ಬಾಣ ಬುಟ್ಟಾಕನ ಅದೊಂದು ಉದ್ದದ ಗಳೆನಾಂಗೆ ಆತ್. ಅದರ ಮೇಲೆ ಎಳ್ದ್ ನೇಜ್‌ಕನ ಆ ಹುಲ್ಲುನ ಕಂತೆ ಹೊರೆಗೆ ಬಾತ್.

ಮತ್ತೆ ದ್ರೋಣ ತನ್ನ ಬೆರ್ಲ್‌ಲಿದ್ದ ಉಂಗಿಲನ ತೆಗ್ದ್ ಬಾಮಿಗೆ ಹಾಕಿತ್. ನೋಡಿ ಮಕ್ಕಳೇ ನೀವ್ಗೆ ಯಾರಿಗಾರ್ ಆ ಉಂಗಿಲ ಕಂಡದೆನೋಂತ ಕೇಳ್ತ್. ಮಕ್ಕ ಇಲ್ಲೇಂತ ತಲೆ ಆಡ್ಸಿದೊ. ಆಗ ದ್ರೋಣ ಒಂದು ದರ್ಭೆ ಹುಲ್ಲುನ ಮಂತ್ರ್‌ಸಿ ಬಾಮಿಗೆ ಹಾಕಿತ್ ಅದ್ ಬಾಣದ ರೂಪಾಗಿ ಆ ಉಂಗಿಲನ ಕಚ್ಚಿಕಂಡತ್ ಮತ್ತೆ ಒಂದೊಂದಾಗಿ ಮುಂದೆನಾಂಗೆ ಬಾಣಗಳ ಬುಟ್ಟ್ ಆ ಉಂಗಿಲನ ಮೇಲೆ ತೆಗ್ದ್ ತೋರ್ಸ್‌ತ್. ಮಕ್ಕ ಎಲ್ಲ ಆಶ್ಚರ್ಯಂದ ಬಾಯಿ ಬುಟ್ಟೊ. ಕೊಣ್ಣಾಡ್‌ದೊ. ಅಪ್ಪೊತ್ತಿಗೆ ಕತ್ತಲೆ ಆಕಂಡ್ ಬಂದರ್‌ಂದ ಇದರ ಭೀಷ್ಮಜ್ಜಂಗೆ ಹೇಳೊಕುಂತ, ನಾ ಮುಂದೆ, ನೀ ಮುಂದೆಂತ ಮನೆಕಡೆ ಓಟ ಹಿಡ್ದೊ.

ಮಕ್ಕಳ್‌ಂದ ಎಲ್ಲ ಸಂಗ್ತಿನೂ ಕೇಳ್ದ ಭೀಷ್ಮಜ್ಜ, ಮಕ್ಕ ಹೇಳುದು ದ್ರೋಣನ ಕುರಿತಾಗಿಂತ ತಿಳ್ಕೆಂಡ್. ದ್ರೋಣ ಎಲ್ಲಿ ಉಟ್ಟುಂತ ವಿಚಾರ್ಸಿ ಅವನ ಬಾಕೆ ಮಾಡ್ದೊ. ಬಂದ ದ್ರೋಣಂಗೆ ಕೈಕಾಲ್ ತೊಳ್ಕಂಬಕೆ ನೀರ್ ಕೊಟ್ಟ್, ಮತ್ತೆ ಕುದ್‌ರ್ಸಿ, ಪಾನಕನ ಕುಡಿಯಕೆ ಕೊಟ್ಟ್ ಮತ್ತೆ ಗೌರವಂದ ಎಲೆ ಅಡಿಕೆ ಜೋಡ್ಸಿದ ಹರಿವಾಣನ ದ್ರೋಣನ ಎದ್‌ರಿಗೆ ಇಸಿ ಮಾತಿಗೆ ಸುರುಮಾಡ್ದೊ. ಅವನ ಪೂರ್ವಾಪರಗಳ ವಿಚಾರ್ಸಿದೊ. ಎಲ್ಲ ತಿಳ್ದ ಮೇಲೆ ಭೀಷ್ಮ– ಇವ ಎಷ್ಟ್ ದೊಡ್ಡ ವಿದ್ಯಾವಂತ. ಈ ಹಾರಂವಂಗೆ ಸರಿಯಾಗಿ ಮನ್ನಣೆ ಮಾಡೊಕುಂತ ಯೋಚನೆ ಮಾಡ್ದೊ. ದೊಡ್ಡ ದೊಡ್ಡ ಒಳ್ಳೊಳ್ಳೆ ಗ್ರಾಮಗಳ ಉಂಬಳಿ ಕೊಟ್ಟೊ. ಕೆಲ್ಸದ ಆಳ್‌ಗಳ ಗಣ್ಮಕ ಹೆಣ್ಮಕಳ ಕೊಟ್ಟೊ. ಕರ್ ಬುಡುವ ಹಸ್ ಕರ್‌ಗಳ, ಎತ್ತ್‌ಗಳ, ಹೋರಿಗಳ, ಕಡ್ಸ್‌ಗಳ ಹಿಂಡ್‌ನೇ ಕೊಟ್ಟೊ. ಚೆಂಬು ಪಾತ್ರಗಳ ಅಂಡೆ ಕೊಪ್ಪ್ರಾಂಗಳ ಕೊಟ್ಟೊ. ಆನೆ ಕುದುರೆಗಳ, ರಥಗಳ್ನೂ ಕೊಟ್ಟೊ. ದ್ರೋಣ ಕನ್ಸ್‌ಲಿಯೂ ಕಾಣದಷ್ಟ್ ದೊಡ್ಡ ಶ್ರೀಮಂತ ಆತ್.

ದ್ರುಪದನಂತ ರಾಜರಿರುವ ಈ ಕಾಲಲಿ, ಭೀಷ್ಮನಂತ ಉದಾರಿಗಳೂ ಒಳೊಲೇ! ಕಾಡ್‌ಲಿ ಕಾಯರ ಮರನೂ ಬೆಳ್ದದೆ. ಗಂಧದ ಮರನೂ ಬೆಳ್ದದೆ! ಹೀಂಗೆ ದ್ರೋಣ ಆಶ್ಚರ್ಯಂದ, ಮೂಕ ಆಗಿ ಹೋತು.

ಆಗ ಭೀಷ್ಮ ಪಾಂಡವ, ಕೌರವ ನೂರಜದ್ ಜೆನ ಮಕ್ಕಳ್ನೂ ಕರ್ಸಿ, ದ್ರೋಣನ ಎದ್‌ರಿಗೆ ನಿಲ್ಸಿ ಮಕ್ಕಳೇ, ಗುರುಗಳ್ಗೆ ನಮಸ್ಕಾರ ಮಾಡಿಂತ ಹೇಳ್ತ್. ನಮಸ್ಕಾರಂತೇಳಿರೆ

ಹಾಂಗೆ ನಿತ್ತಲ್ಲಿಂವಲೇ ಕೈ ಮುಗಿದಲ್ಲ. ಎಲ್ಲಲ್ಲವ್ರೂ ಅವರ ಕಾಲಿಗೆ ಅಡ್ಡಬಿದ್ ಆರ್ಶೀರ್ವಾದ ಪಡ್ಕಣೊಕುಂತ ಹೇಳ್ದೊ. ಮಕ್ಕಳೂ ಹಾಂಗೇ ಮಾಡ್ದೊ. ಆಗ ದ್ರೋಣಂಗೆ ಭೀಷ್ಮರ್ "ಆಚಾರ್ಯರೇ, ಈ ಮಕ್ಕ, ವಿದ್ಯೆ ಕಲ್ತ್ ದೊಡ್ಡವು ಆಕುಂತ ನೀವು ಬಯ್ಸುದಾದರೆ ನೀವೇ ಇವ್ಕೆ ಗುರುಗ ಆಕೂಂತ ನನ್ನ ಆಸೇ"ಂತ ಹೇಳ್ದೊ. ಅದಿಕ್ಕೆ ದ್ರೋಣ ನಂಗೆ ಅದ್ ಸಂತೋಸುನೇಂತ ಹೇಳಿ, ಮಕ್ಕಳ ಕಡೆಗೆ ತಿರ್ಗಿ ಏನ್ ಮಕ್ಕಳೇ, ನೀವು ಎಲ್ಲ ಕಲ್ತಾದ ಮೇಲೆ ನಾ ಕೇಳ್ದರ ಯಾರ್ ಕೊಡುವ್ರೋರೀಂತ ಕೇಳ್ತ್. ಎಲ್ಲೊವು ಪಿಳಿಪಿಳಿ ಕಣ್ಣ್ ಬುಟ್ಕಂಡ್ ಇರ್‌ಕನ, ಅರ್ಜುನ ಎದ್ದ್‌ನಿತ್ತ್ 'ನಾ ಕೊಟ್ಟನೆ"ಂತ ಹೇಳ್ತ್. ದ್ರೋಣಂಗೆ ತುಂಬ ಕುಸಿಆತ್. ಅವನ ಕರ್ದ್ ತೊಡೆ ಮೇಲ್ ಕುದ್ದ್‌ರ್ಸಿ ಕಂಡ್, ಮುದ್ದಾಡಿ ಭೀಷ್ಮಂಗೆ ನೋಡಿ ಇಷ್ಟೆಲ್ಲ ಮಕ್ಕಳ್ಲಿ, ಇಂವನೇ ಕೀರ್ತಿ ಶಾಲಿಯಾದ ಧರ್ನುರ್‌ವಿದ್ಯಾ ನಿಪುಣ ಆದು. ನಾ ಈಗಲೇ, ಮಕ್ಕಳೊಳೆಗೆ ಭೇದ ಸೆರ್ಸಿ ಮಾತಾಡಿನೇಂತ ನೆನ್ಸ್‌ಬೇಡಿಂತ ಭೀಷ್ಮರಿಗೆ ದ್ರೋಣ ಹೇಳ್ತ್. ಭೀಷ್ಮರ ಮೋರೆ ಸಂತೋಸುಂದ ಅರ್ಲಿತ್.

ಮತ್ತೆ ರಾಜಧಾನಿಂದ ಹೊರಮ್ಮೆಲಿ, ವಿಸ್ತಾರವಾದ ಒಂದು ಮೈದಾನ ಜಾಗಲಿ, ಆಶ್ರಮಕೆ ಬೇಕಾದ ಕಟ್ಟಡಗಳ ನಿರ್ಮಾಣ ಕಾರ್ಯ ನಡ್ತ್, ಅದಿಕ್ಕೆ ಬೇಕಾದ ಎಲ್ಲ ಸಲಕರಣೆಗಳೂ ತಯಾರಾದೊ. ಒಂದು ಶುಭ ದಿನ ಶುಭ ಮುಹೂರ್ತಲಿ ಆಚಾರ್ಯ ದ್ರೋಣರ್, ಅವರ ಧನುರ್ವಿದ್ಯಾ ಕೇಂದ್ರನ ಸುರುಮಾಡ್ದೊ. ಇದರ ಕೀರ್ತಿ ದೇಸದ ಎಲ್ಲ ಕಡೆಗೂ ಹಬ್ಬಿತ್. ಹಾಂಗೆ ಬೇರೆ ಬೇರೆ ಕಡೆಂದ ರಾಜಕುಮಾರರ್ ಬಂದ್ ಆಶ್ರಮಕೆ ಸೇರ್ದೊ.

ಪರಶುರಾಮಂದ ಪ್ರಯತ್ನ ಪಟ್ಟ್ ಪಡ್ದ ಎಲ್ಲ ವಿದ್ಯೆನೂ ಹಾಳಾಗಿ, ತನಿಗೆ ಅಂವ ಸಾಪ ಬೇರೆ ಕೊಟ್ಟಲತ್. ಇಂತ ನಿರಾಸಲಿ ಹಿಂದೆ ಬಂದ ಕರ್ಣಂಗೆ ಸುಮ್ಮಂಗೆ ಕುದ್ದ್‌ರಿಕ ಆತಿತ್ಲೆ. ದ್ರೋಣರ್ ಬಿಲ್ಲ್ ವಿದ್ಯೆಕಲ್ಸುವೆಂತ ತಿಳ್ದ್, ಅವರಲ್ಲಿಗೆ ಬಂದ್ ಸೇರ್ದ ಸಂಗತಿನ ಮುಂದನೆ ಕೇಳ್ದೊಳರಿ ಅಲ್ಲಾ? ದ್ರೋಣರ್ ಅವರ ಮಣ್ಣ ಅಶ್ವತ್ಥಾಮನ್ನೂ ಈ ಮಕ್ಕಳೊಟ್ಟಿಗೆ ಸೇರ್ಸಿಕಂಡೊ. ಸಾಮಾನ್ಯವಾಗಿ ಆ ಕಾಲಲಿ ಗುರುಗ ಬೇರೆವರ ಮಕ್ಕಳಿಗೆ ವಿದ್ಯೆ ಕಲ್ಸುದರ್ಲಿ ಲೋಕನೇ ಮರಿಯತಿದ್ದೊ. ತನ್ನ ಶಿಷ್ಯ ತನ್ನಂದ ಮೇಲಾಗಿ ತನ್ನ ಸೋಲ್ಸುವ ಮಟ್ಟಕ್ಕೆ ಮುಟ್ಟಿತ್‌ಂತಾದರೆ ತುಂಬ ಹೆಮ್ಮೆ ಪಡ್‌ತಿದ್ದೊ. ತಮ್ಮ ಮಕ್ಕಳ ಬಗ್ಗೆ ಯಾವ ಯೋಚನೆನೂ ಇತ್ಲೆ. ಅವರ ಮಕ್ಕ ದನ ಮೇಸಿಕಂಡೋ ಸೊಪ್ಪೊತ್ತ್ ತಂದ್ ಮನೆಗೆ ಹಾಕಂಡೋ ಇರ್‌ತಿದ್ದೊ. ಇದರ್‌ಂದಾಗಿಯೇ ಅಂತವರ 'ಪಂಡಿತ ಪುತ್ರ'ಂತ ಕರಿವ ಪದಪ್ರಯೋಗ ಇತ್ತ್. ಅದರ ಅರ್ಥ, 'ದಡ್ಡ', 'ಪೆದ್ದ', 'ಮೂರ್ಖ'ಂತ'. ಮೇಲ್ ಹೇಳ್ದಂತ ಗುರು ಶಿಷ್ಯರ್ ಈಗ ಎಲ್ಲಿ ಸಿಕ್ಕುವೊ. ವಿದ್ಯಾಭ್ಯಾಸ ಮುಗ್ಸಿ ಹೊದ್ದ ಮೇಲ್ ಗುರು ಎಲ್ಯೋ ಶಿಷ್ಯ ಎಲ್ಲಿಯೋ ಒಬ್ಬಂಗೊಬ್ಬಂಗೆ ಗುರ್ತ ಇಲ್ಲದವರಾಂಗೆ ಇದ್ದವೆ.

**ಮಕ್ಕ :**

ನೀವು ಹಾಂಗಿತ್ತ್‌ಲೇಂತ ಹುಡಿ ಒಸಗ ಪುಸ್ತಕಲ್ ನಾವು ಓದ್ದೊಳೊ ಅಜ್ಜಪ. ಆ ವಿಚಾರನ ತಿಳ್ಸಿರೆನೋ?

ತಾತ :
ಆತ್. ಸುಳ್ಯೆಲಿ ನಾ ಹಯರ್ ಎಲಿಮೆಂಟರಿ ಸಾಲೆಲಿ ಕಲಿಯಕನ ಶಂಕರ ನಾರಾಯಣಪ್ಪಯ್ಯಂತೇಳ್ವ ಮಾಸ್ಟ್ರ ಇದ್ದೊ. ಕನ್ನಡಲಿ ಅವ್ಕೆ ತುಂಬ ಪ್ರೀತಿ. ಅದರ ನಮ್ಮ ಮೇಲೆಸೂ ಅಭಿಪ್ರೀತ್ತಿದೊ. ಮುಂದೆ ನಾ ಮದ್ರಾಸ್‌ಲಿ, ಪ್ರೆಸಿಡೆನ್ಸಿ ಕಾಲೇಜ್‌ಲಿ ಕನ್ನಡ ಎಂ.ಎ. ಕಲಿಯಕೆ ಹೋದರ ಕೇಳಿ ಅವ್ಕೆ ತುಂಬ ಸಂತೋಸು ಆತ್ ಗಡ. ನಾವು ಕಲ್ಸಿದ ಮಕ್ಕಳ್ಲಿ ನಿಶಾನಿಗೆ ನೀರ್ ಹಾಕಿದಂವ ಇಂವ ಒಬ್ಬನೇಂತ ಹೇಳಿಕಂಡ್ ಹೆಮ್ಮೆ ಪಟ್ಟ್‌ಕಂಡೂ ಗಡ. ನಾ ಅವ್ಕೆ ಆಗಾಗ ಕಾಗದ ಬರಿಯುತ್ತಿದ್ದೆ. ರಜೆಲಿ ಬಾಕನ ಅವರ ನೋಡಿಕೆ ಹೋಗಿ ಕಾಲ್ ಮುಟ್ಟಿ ನಮಸ್ಕಾರ ಮಾಡಿ ಮಾತಾಡಿ ಬಾತಿದ್ದೆ. ಹಾಂಗೆ ಮಡಿಕೇರಿಲಿ ಕೆ. ಆರ್. ಉಡುಪಂತೇಳೊವು ಕಾಲೇಜ್‌ಲಿ ಕನ್ನಡ ಮಾಸ್ಟ್ರ ಆಗಿದ್ದೊ. ಅವ್ಕ ನನ್ನ ಮೇಲೆ ತುಂಬ ಪ್ರೀತಿ. ಅವು ರಿಟಯರ್ ಆದ ಮೇಲೆ ಮೈಸೂರ್ಲಿ ನೆಲ್ಸಿದ್ದೊ. ನಾ ಮೈಸೂರಿಗೆ ಹೋಕನೆಲ್ಲ ಅವರ ಹೋಗಿ ನೋಡಿ ಮಾತಾಡಿ ಬಾತಿದ್ದೆ. ಅವರ ಅಂತ್ಯ ಕಾಲದವರೇಗೂ ಇದ್ ನಡ್ತ್. ಮತ್ತೆ ಮದ್ರಾಸ್‌ಲಿ ಕಲಿಯಕನ ಇದ್ದ ಮಾಸ್ಟ್ರಗ ಎಲ್ಲಾವೂ ನನ್ನ ಮೇಲೆ ಪ್ರೀತಿ ತೋರ್ಸ್ದವೇ ಆಗಿದ್ದೊ. ಯೂನಿವರ್ಸಿಟಿಲಿದ್ದ ಪ್ರೊ. ಮರಿಯಪ್ಪ ಭಟ್ರ್ ಮತ್ತೆ ಗೋವಿಂದ ರಾವ್‌ರಂತ ಇದ್ದೊ. ಇದರ್ಲಿ ಗೋವಿಂದ ರಾವ್, ಬೇಗ ತೀರಿ ಹೋದೊ. ಮತ್ತೇ ಮರಿಯಪ್ಪ ಭಟ್, ನಂಗೆ ಅಣ್ಣಾ ಮಲೈ ಯುನಿವರ್ಸಿಟಿಲಿ ಕೆಲಸ ಸಿಕ್ಕಿಕೆ ತುಂಬ ಸಾಯ ಮಾಡ್ದೋ. ಬೇಗ ಪಿ.ಎಚ್ ಡಿ. ಡಿಗ್ರಿ ತಕಂತ ಆಗಾಗ ಹೇಳ್ತಿದ್ದೊ. ಅದೆಲ್ಲ ಆಗಿ ಮುಂದೆ ಅವು ರಿಟಯರ್ ಆದ ಮೇಲೆ, ಅವದ್ದ ಸ್ಥಾನಕ್ಕೆ ನನ್ನ ಆಯ್ಕೆ ಆತ್. ಅವ್ಕೆ ತುಂಬ ಸಂತೋಸು ಆತ್. ಎಲ್ಲ ತರದ ಹಿತವಾದ ಹೇಳ್ತಿದ್ದೋ. ಅವರ ಅಂತ್ಯ ಕಾಲದವರೆಗೂ ಅವು ನಂಗೆ ದೊಡ್ಡ ಆಧಾರ ಸ್ತಂಭದಾಂಗೆ ಇದ್ದೊ. ಪ್ರೆಸಿಡೆನ್ಸಿ ಕಾಲೇಜ್‌ಲಿ, ಎಂ.ಆರ್. ಶಾಸ್ತ್ರಿಗ ನಂಗೆ ಪ್ರೊಫೆಸರ್ ಆಗಿ ಇದ್ದೊ. ಇವು ಬಾರಿ ಸ್ಟ್ರಿಕ್ಟ್. ಕರ್ನಾಟಕ ಸರ್ಕಾರದ ವಿಭಾಗಕ್ಕೆ ವರ್ಗ ಆಗಿ, ಬೇರೆ ಬೇರೆ ಕಡೆ ಪ್ರಿನ್ಸಿಪಾಲ್ ಆಗಿ ಕಡೆಗೆ ರಿಟಯರ್ ಆಗಿ ಶಿವಮೊಗ್ಗಲಿ ನೆಲ್ಸಿದ್ದೊ. ಕುವೆಂಪು ವಿ.ವಿ.ಕ್ಕೆ ಕೆಲ್ಸದ ಮೇಲೆ ಆಗಾಗ ಹೋತಿದ್ದೆ. ಹಾಂಗೆ ಹೋಕನೆಲ್ಲ ಅವರ ನೋಡಿಕೆ ಹೋಗಿ ಕಾಲಿಗೆ ನಮಸ್ಕಾರ ಮಾಡಿ ಅವರ ಆಶೀರ್ವಾದ ಪಡಿಯತಿದ್ದೆ. "ಈ ಮುದುಕನನ್ನು ನೋಡಲು ಬರ್ತೀರಲ್ಲ"ಂತ ಒಮ್ಮೆ ಕಣ್ಣೀರ್ ತುಂಬಿಕಂಡ್ ಹೇಳಿದ್ದೊ ಕೂಡ. ನಂಗೆ ನನ್ನ ಶಿಷ್ಯರೆಲ್ಲ ಸೇರಿ ಒಂದು ಅಭಿನಂದನ ಗ್ರಂಥ ಸಮರ್ಪಣೆ ಮಾಡ್ದೊ. ಆದರೆ ನನ್ನ ಗುರುಗಳಿಗೆ ನನ್ನಿಂದ ಹಾಂಗೇನೂ ಮಾಡಿಕೆ ಶೀರ್ತ್‌ಲೆಲೇಂತೇಳ್ವ ಕೊರತೆ ನನ್ನ ಮನ್ಸ್‌ನ ಯಾಗೋಳೂ ಕೊರ್ದದೆ.

ನಾ ನನ್ನ ಗುರುಗಳಿಗೆ ತೋರ್ಸುವ ಗೌರವನ ನೋಡಿ ನನ್ನ ಹೆಣ್ಣ್, ಮಕ್ಕ ಎಲ್ಲ ಕೇಳಿದ್ದೊ. "ನಿವ್ಗೆ ನಿಮ್ಮ ವಿದ್ಯಾರ್ಥಿಗಳೂ, ಇಷ್ಟ್ ಭಕ್ತಿ, ಗೌರವನ ತೋರ್ಸುವನೋಂತ."

ತೋರ್ಸುವನೊ ಬುಟ್ಟವನೊ ಅದ್ ಅವ್ಕೆ ಸೇರ್ದ ವಿಚಾರ ನಾ ಹೇಳ್ತಿದ್ದೆ. ಅವು ಹೇಳ್ದಾಂಗೇ ಆದ್ದ್ ಮಾತ್ರ ನಿಜ. ನನ್ನ ವಿದ್ಯಾರ್ಥಿಗಳ್ಲಿ ಕೆಲವು ಜನ ನನ್ನ ಸ್ಥಾನದಷ್ಟೇ

ದೊಡ್ಡ ಸ್ಥಾನ ಪಡ್ದೊಂತ ಹೇಳುವ ಕುಶಿ ನಂಗೆ ಉಟ್ಟು. ಹಕ್ಕಲೆ ಪಕ್ಕಲ್ ಇದ್ದೊಪ್ರ ಒಮ್ಮೊಮ್ಮೆ ಬಂದ್ ನೋಡುದೂ ಉಟ್ಟು. ಓಂದೆ ಹಾಂಗೆ ಇದ್ದಂವ ಒಬ್ಬ ದೂರ ಹೋಗಿ ದೊಡ್ಡ್ ಕೆಲ್ಸಕೆ ಸೇರ್ದ ಮೇಲೆ ಒಂದೆರ್ಡ್ ಸಱರ್ತಿ ಊರಿಗೆ ಬಂದಂವ ಬಂದ್ ನೋಡುದು ಇರ್ಲಿ, ಒಂದು ಫೋನ್ ಕೂಡ ಮಾತಾಡದೆ ಹೋತು. ಇದ್ ಕಾಲದ ಗುಣ. ಏನ್ ಮಾಡಿಕಾದೆ? ಒಬ್ಬ ನಾ ಕಱಲ್ಸಿದ ಹೈದ ಒಂದು ದೊಡ್ಡ ಯೂನಿವರ್ಸಿಟಿನ ವೈಸ್ ಛಾನ್ಸಲರ್ ಆತ್. ನಂಗೆ ಓಗ್ಗೋ ಓಗ್ಗ್. ಹಾಂಗೆ ಅವನ ಆಫೀಸ್‌ಲಿ ನೋಡಿ ನನ್ನ ಸಂತೋಸುನ ಹೇಳಿಕಮೊಸಂತ ಹೋದರೆ, ಅವನ ನೋಡೊಕೂರೆ ತುಂಬ ಹೊತ್ತು ಕಾಯೊಕಾತ್. ಇದೆಲ್ಲ ಕಾಲದ ಗುಣ. ನಾವೇನ್ ಮಾಡಿಕಾದೆ ಸಱರಿ. ರಾಮಾಯಣಱಲಿ ಪಿಟ್ಕಾಯಣಂತ ನನ್ನ ಸಂಗ್ತಿನ ನೀವು ಕೇಳ್ದ್ರೈಕೆ ಹೇಳ್ದೆ. ಮುಂದೆ ನೀವು ನಿಮ್ಮ ಜೀವನಱಲಿ ಸಱರಿ ನಡ್ಕಱಣಿ.

ದ್ರೋಣರ ಗುರುಕುಲಱಲಿ ವಿದ್ಯಾಭ್ಯಾಸ ಬಿರುಸಾಗಿ ಸಾಗ್‌ತಿತ್ತ್. ಬಿಲ್ಲ್ ವಿದ್ಯೆಲಿ ಅರ್ಜುನ ತುಂಬ ಹುಸಾರಾತ್. ಒಂದು ದಿನ ಕತ್ತಲೆಗೆ ಊಟ ಮಾಡಿಕಱಂಡ್ ಇರ್ಕನ ದೀಪ ಕೆಟ್ಟಱತ್. ಬೊಳ್ಳು ಇಲ್ಲಿದಿದ್ದರೂ ಕಱಯಿ, ಪಾತ್ರಂದ ತೆಗ್‌ದ್ ಬಾಯಿಗೆ ಹಾಕಿಕಂಬಕೆ ಯಾವ ತೊಂದರೆನೂ ಇಲ್ಲೆ. ಹಾಂಗಾರೆ ಕತ್ತಲೆಲಿ ಏಕೆ ಬಾಣಪ್ರಯೋಗ ಮಾಡಿಕೆ ಬೊತ್ತ್‌ಂತ ಅಂವಂಗೆ ಆಲೋಚನೆ ಆತ್. ಅಂದ್‌ಂದಳೇ ಅಂವ ಕತ್ತಲೆಲೂ ಬಾಣ ಬುಡಿಕೆ ಅಭ್ಯಾಸ ಮಾಡಿಕೆ ಸುರುಮಾಡ್ತ್. ಒಂದ್ ಇರ್ಲ್ ದ್ರೋಣಱರ್ ನಡ್ಕಱಂಡ್ ಬಾಕನ ರೊಂಯ್‌ರೊಂಯ್‌ಂತ ಬಾಣ ಬುಡುವ ಸದ್ದ್ ಕೇಳಿ ಆಶ್ಚರ್ಯ ಆತ್. ನೋಡಿರ ಅದ್ ಅರ್ಜುನ ರಾತ್ರಿಲಿ ಬಾಣ ಬುಡಿಕೆ ಅಭ್ಯಾಸ ಮಾಡ್‌ತಿತ್ತ್. ಅಪ್ಕೆ ತುಂಬ ಕುಸಿ ಆತ್. ಗುರು ಆದಂವ ತನ್ನ ವಿದ್ಯಾರ್ಥಿಗಳೊಳೆಗೆ ಭೇದ ಬಾವ ತೋರ್ಸಿಕೆ ಆಗಱದ್ ಇದರ್‌ಂದ ವಿದ್ಯಾರ್ಥಿಗಳೊಳೆಗೆ ಹುರುಡು, ಮತ್ಸರ ಉಂಟಾಕೆ ದಾರಿ ಆದೆ ಪ್ರತಿಯೊಬ್ಬನು ತುಂಬ ಬುದ್ಧಿವಂತ ಆಗಿರ್ದುಲೆ. ಹಾಂಗೆ ಓಂದೆ ಬಿದ್ದವರ ತುಂಬ ಹೀಯಾಳ್ಸಿರೆ ಅಂವ ಮತ್ತಷ್ಟ್ ಓಂದೆ ಬೀಳ್ದು. ಆದರೆ ತುಂಬ ಹುಸಾರಿರುವ ವಿದ್ಯಾರ್ಥಿನ ಮೇಲೆ ಸಹಜವಾಗಿ ಗುರುಗೆ ಹೆಚ್ಚ ಪ್ರೀತಿ ಇರುದು ರೂಢಿ. ಬಿಲ್ಲ್ ವಿದ್ಯೆಲಿ ಅರ್ಜುನ ತುಂಬ ಬುದ್ಧಿವಂತಿಕೆ ತೋರ್ಸಿದರ್‌ಂದ ಅವನ ಮೇಲೆ ಅಪ್ಕೆ ತುಂಬ ಪ್ರೀತಿ ಇತ್ತ್. ಇದರ್‌ಂದ ಕರ್ಣಂಗೆ ಅಸಮಾದಾನ ಆಗಿ ಅಂವ ಅರ್ಜುನನೊಟ್ಟಿಗೆ ಸ್ಪರ್ಧಿಸಿಕೆ ಸುರುಮಾಡ್ತ್. ಅರ್ಜುನ ಮಾಡುವ ಎಲ್ಲದನೂರ್ ಅಂವನೂ ಮಾಡ್‌ತಿತ್ತ್. ಅದರೊಟ್ಟಿಗೆ ಕೋಪ, ಮತ್ಸರ ಹೊಗಿಯತಿತ್ತ್.

ಭೀಮಂಗೂ ದುರ್ಯೋಧನಂಗೂ ಗಧಾಯುದ್ಧಲಿ ಹೆಚ್ಚಿನ ಜಾಣತನ ಇತ್ತ್. ಹಾಂಗೇ ಅವರಿಬ್ಬರೊಳೆಗ ಮತ್ಸರ, ಸ್ಪರ್ಧೆನೂ ಇತ್ತ್. ಮತ್ತೆಲ್ಲ ರಾಜಕುಮಾರಱರ್ ಬೇರೆ ಎಲ್ಲದನೂರ್ ಕಱಲ್ತ್‌ಕಱಂಡ್ ಇದ್ದೊ. ದ್ರೋಣಱರ್ ಅವರ ಮಬ್ಬ ಅಶ್ವತ್ಥಾಮನನೂ ಒಬ್ಬ ವಿದ್ಯಾರ್ಥಿಯಾಗಿಯೇ ಮಾಡಿಕಱಂಡ್ ಇದ್ದೊ. ಅದರ್ಲಿಯೂ ಮಬ್ಬಂತೇಳ್ದ ಮೋಹ ಹಚ್ಚು ಹೆಚ್ಚಿ. ಹಾಂಗೆ ಬೇರೆಪ್ಕೆ ಹೇಳಿ ಕೊಡುದರ್‌ಂದ ಅಂವಂಗೆ ಹಚ್ಚು ಹೆಚ್ಚಿಗೆ ಹೇಳಿಕೊಡೊಕುಂತ ಯೋಜನೆ ಮಾಡ್ದೊ. ಎಲ್ಲಱವ್ರೂ ಒಟ್ಟಿಗೆ ಇರ್‌ಕನ ಹಾಂಗೆ ಮಾಡಿಕೆ

ಆಮುಲ್. ಅದಿಕೆ ಒಂದು ಉಪಾಯ ಮಾಡ್ದೊ. ಎಲ್ಲ ಮಕ್ಕಳಿಗೂ ಒಂದೊಂದು ಪಾತ್ರ ಕೊಟ್ಟ್, ಅದರ್ಲಿ ಹಳ್ಳಂದ ನೀರ್ ತುಂಬುಸಿ ತಂದ್ ಹಾಕಕೆ ಹೇಳ್ದೊ. ಆ ಪಾತ್ರಗಳ ಬಾಯಿ ಸಣ್ಣಲಿದ್. ಆದರೆ ಅಶ್ವತ್ಥಾಮಂಗೆ ಕೊಟ್ಟ ಪಾತ್ರದ ಬಾಯಿ ಅಗಲ ಇದ್ದ್ ಅದರ್ಲಿ ಬೇಗ ನೀರ್ ತುಂಬುತಿತ್ತ್. ಹಾಂಗೆ ಅಶ್ವತ್ಥಾಮ ಬೇಗ ಬಾಕ ಅನುಕೂಲ ಆತ್. ಒಳ್ದವು ಬಾಕೆ ಪಟ್ಟಿನ ಹೊತ್ತ್ ಹಿಡಿಯುತಿತ್ತ್. ಹಾಂಗೆ ಒಳ್ದವು ಬಂದ್ ಸೇರಿಕೆ ಮುಂದೆ ಇಂವಂಗೆ ಗುಟ್ಟುಲಿ ಕಲಲಿವು ಮಂತ್ರಾಸ್ತ್ರಗಳ ಹೇಳಿ ಕೊಡ್ತಿದ್ದೊ. ಅರ್ಜುನಂಗೆ ಈ ಗುಟ್ಟು ಗೊತ್ತಾತ್. ಹಾಂಗೆ ಅಂವನೂ ತನ್ನ ಪಾತ್ರದ ಬಾಯಿನ ಅಗಲ ಮಾಡಿಕಂಡ್, ಅಶ್ವತ್ಥಾಮನ ಒಟ್ಟೊಟ್ಟಿಗೆ ಬಾಕೆ ಸುರು ಮಾಡ್ಕನ ಉಪಾಯ ಇಲ್ಲದೆ, ಅರ್ಜುನಂಗೂ ಕಲ್ಲಿಕೊಟ್ಟೊ. ಬ್ರಹ್ಮಾಸ್ತ್ರನ ಬುಡಿಕೆ ಮಾತ್ರ ಅಶ್ವತ್ಥಾಮಂಗೆ ಸಾಮರ್ಥ್ಯ ಇತ್ತ್ ಹೊರ್ತು ಅದರ ಹಿಂದೆ ತಕಂಬಕೆ ಆತಿತ್ಲೆ. ಅರ್ಜುನಂಗೆ ಮಾತ್ರ ಎರ್ಡಕ್ಕೂ ಸಾಮರ್ಥ್ಯ ಇದ್ದದರ್ಂದ ಆ ಅಸ್ತ್ರನ ಅರ್ಜುನಂಗೆ ಮಾತ್ರ ವಹಿಸಿಕೊಟ್ಟೊ. ಆದರೂ ಅಶ್ವತ್ಥಾಮಂಗೆ ಅದರ ಪ್ರಯೋಗ ಮಾಡಿಕೆ ಗೊತ್ತಿತ್ತ್ಂತ ಕಲೆಂಡದೆ. ಭಾರತ ಯುದ್ಧಲೆಲಿ, ದ್ರೋಣನ ವಧೆಯಾದ ಕೋಪಲೆಲಿ ಪಾಂಡವರ ಎಲ್ಲ ನಾಶ ಮಾಡೊಕುಂತೇಳಿ ಆ ಅಸ್ತ್ರನ ಪ್ರಯೋಗ ಮಾಡ್ತ್. ಅದರ ಪ್ರಭಾವ ಉತ್ತರೆನ ಹೊಟ್ಟೆಲಿದ್ದ ಕೂಸಿಗೂ ತಾಂಗಿ ಆ ಕೂಸು ಹೊಟ್ಟೆಲೇ ಸತ್ತ್ ಹೋಗಿತ್ತ್. ಆಗ ಕೃಷ್ಣನ ಮಹಿಮೆಂದ ಆ ಕೂಸು ಬೊದ್ಕಿತ್.

**ಮಕ್ಕ :**

ಅದ್ ಯಾವ ತರದ ಅಸ್ತ್ರ ಆಗಿತ್ತ್ ತಾತಾ?

**ತಾತ :**

ಬಹುಶಃ ಆಗಲೆಳೂ ನಮ್ಮ ಈ ಕಾಲಲೆಲಿ ಇರುವ ಅಣು ಬಾಂಬು ಹೈಡ್ರೋಜನ್ ಬಾಂಬುಗಳ ಹಾಂಗೆ ಸರ್ವನಾಶ ಮಾಡುವಂತ ಅಸ್ತ್ರಗ ಆಗಿದ್ದಿರುವ್ರೋ. ದ್ವಾಪರ ಯುಗದ ಅಂತ್ಯ ಕಾಲಕ್ಕೆ ಅವೇ ಕಾರಣ ಆದೊನೋ ಏನೋ. ಅಶ್ವತ್ಥಾಮನಂಥ ಅಪ್ರಬುದ್ಧರ ಕೈಗೆ ಅಂಥ ಭೀಕರ ಆಯುಧಂಗ ಸಿಕ್ಕಿರೆ ಪ್ರಪಂಚಕ್ಕೇ ಕೇಡ್. ನಮ್ಮ ಈಗನ ಅವಸ್ಥೆನೂ ಹಾಂಗೇ ಆಗುಟು. ಪಾಕಿಸ್ತಾನ, ಕೊರಿಯಾ, ಚೀನ ಇನ್ನೂ ಹಾಂಗೇ ಇರುವ ದೇಶಂಗ ಎಲ್ಲ ಈ ಆಯುಧಗಳ ತಯಾರ್ಲಿಕಲೆಂಡೊಳೊ. ಎಲ್ಲ್ಯಾರ್ ದೇಶ ದೇಶಗಳೊಳಗೆ ಯುದ್ಧ ಸುರಾಗಿ ಅವಿವೇಕಂದ ಯಾದಾರ್ ಒಂದು ದೇಶ ಇದರ ಪ್ರಯೋಗ ಮಾಡಿರೆ, ಮತ್ತೊಬ್ಬನೂ ಪ್ರತಿಯಾಗಿ ಹಾಂಗೇ ಮಾಡಿರೆ ಅವು ಮಾತ್ರ ಅಲ್ಲ. ಇಡೀ ಪ್ರಪಂಚಕ್ಕೆ ಆ ದೋಸ ಹಬ್ಬಿದೆ. ಸರ್ವನಾಶ ಆದೆ. ಕೆಡುವ ಕಾಲಕೆ ಬುದ್ಧಿ ಇಲ್ಲೆ, ಮರಣ ಕಾಲಕೆ ಮದ್ದ್ಲ್ಲೆ. ಹಾಂಗೆಲ್ಲ್ಯಾರ್ ಆದೇಂತಾದರೆ ನಾ ಇದರ ಬರ್ದ್ದ ಪ್ರಯೋಜನ ಇಲ್ಲೆ ಅಲ್ಲೊ?

ತನ್ನ ಈಗನ ವೈರಿಯಾಗಿರುವ ದ್ರುಪದ, ದ್ರೋಣನ ಕೊಲ್ಲುವಂತ ಮಜ್ಜ ಧೃಷ್ಟದ್ಯುಮ್ನನ ಯಜ್ಞಕುಂಡಲೆಲಿ ಪಡ್ತ್. ಹುಟ್ಟಿಕನೇ ಅಂವ ಬಿಲ್ಲ್ ಬಾಣಗಳ ಹಿಡ್ಕಂಡೇ ಹುಟ್ಟಿದಂವ. ಅಂತ್‌ಂವನೂ ತನ್ನ ಗುರುಕುಲಕೆ ವಿದ್ಯಾರ್ಥಿಯಾಗಿ ಸೇರಿಕೆ ಬಂದಂವನ, ತನಗೆ ಮುಂದೆ ಅಪಾಯ ಉಂಟುಮಾಡಂವನೇ ಆದರೂ ದ್ರೋಣಲೆರ್ ಸೇರ್ಲಿಕಲೆಂಡೊ. ಮುಂದೆ

ಬಾದ್ಯೈಕೆ ಈಗಳೇ ಹೆದ್ರೂಕುಯಾಕೆ? ನಮ್ಮಲ್ಲಿ ಕೆಲೂವ್ರು ಜನ ಜಾತಕ, ಪಂಚಾಂಗ, ಜ್ಯೋತಿಷ್ಯಂತ ಹೇಳಿಕಳೆಂಡ್, ನಾವ್ಗೆ ಆ ದೋಸ ಉಟ್ಟು, ಈ ದೋಸ ಉಟ್ಟು, ಅದಿಕೆ ಆ ಪೊರಿಯಾರ ಮಾಡೊಕು, ಈ ಪೂಜೆ ಮಾಡ್ಲೊಕುಂತ ಹೇಳಿ ಇಲ್ಲದ ದುಡ್ಡುನೆಲ್ಲ ಕಳೆರ್ಚಿ ಮಾಡಿ, ಹಾರ್ತ್ರ ದೊಳ್ಳು ಬೆಳ್ಳಿಕೆ ನೋಡುವೆ. ಎದೆ ಧೈರ್ಯ ಇರಳೆಂವಂಗೆ ಇದ್ ಯಾದೂ ಅಗತ್ಯ ಇಲ್ಲೆ. ಹಾಂಗೆ ದ್ರೋಣರ ಎದೆಗಾರಿಕೆನ ಮೆಚ್ಚೊಕು.

ಇವರ ಕ್ಯಾತಿನ ಕೇಳ್ಟ ಕಾಡ್‌ಲಿದ್ದ ಬೇಡರ ಹೈದ ಏಕಲವ್ಯ ಇವರ ಗುರುಕುಲಳೆಲಿ, ಇನ್ನೂ ಹೆಚ್ಚಿನ ಬಿಲ್ಲ್ ವಿದ್ಯೆನ ಕಳೆಲಿಯೊಕುಂತ ಆಸೆಲಿ ಬಂದ್ ಕೇಳ್‌ಕನ, ಇದ್ ಕ್ಷತ್ರಿಯರಾದ ರಾಜ ಕುಮಾರಳೆರಿಗಿರುವ ಗುರುಕುಲ. ಇದರ್ಲಿ ನಿಂಗೆ ಸೇರಿಕೆ ಅವಕಾಶ ಇಲ್ಲೇಂತ ಹೇಳಿ ಅವನ ನಿರಾಕರ್ಲಿದೊ. ಹಾಂಗೆ ಆ ಹೈದ ಹಿಂದೆ ಹೋದರೂ ಧೈರ್ಯಕೆಟ್ಟಿಳೆತ್‌ಲೆ ದ್ರೋಣರ ತನ್ನ ಮಾನಸಗುರುಂತೇಳಿ ಸ್ವೀಕಾರ ಮಾಡ್ತ್. ತಾನಿದ್ದ ಕಾಡ್‌ಲಿ, ಗುರುಗಳ ಮೊಣ್ಣ್‌ನ ಮೂರ್ತಿನ ಮಾಡಿ ಸ್ಥಾಪನೆ ಮಾಡ್ತ್. ಯಾಗೋಳು ಬೊಳ್ಪಿಗೆ ಎದ್ದ್, ಮಿಯ್ದ್, ಕಾಡ್ ಹೂಗಳ ತಂದ್ ಅದಿಕೆ ಅರ್ಪಿಸಿ, ಪೂಜೆ ಮಾಡಿ ಅಡ್ಡ ಬಿದ್ದ್ ಮತ್ತೆ ಬಾಣ ಬುಡಿಕೆ ಸುರುಮಾಡ್‌ತಿತ್ತ್. ದಿನಾಂದಿನಕೆ ಅದರ್ಲಿ ಹುಸಾರ್ ಆಕಳೆಂಡ್ ಬಾತ್. ದೂರಂದ ಬಾವ ಸಳೆಬ್ದನ ಕೇಳಿ ಅಲ್ಲಿಗೆ ಬಾಣ ಹೊಡ್ದ್ ಗುರಿ ತಾಂಗ್ಲಿಕೆ ಅವಂಗೆ ಗೊತ್ತಾತ್. ಇದಿಕೆ 'ಶಬ್ದಭೇದೀ' ಅಥವಾ 'ಶಬ್ದವೇದೀ' ವಿದ್ಯೆಂತ ಹೆಸರ್. ಹಿಂದೆ ದಶರಥಂಗೆ ಈ ವಿದ್ಯೆಗೊತ್ತಿತ್ತ್. ಅಂವ ಒಮ್ಮೆ ಬೇಟೆಗೆ ಹೋದಂವ ಕಾಡ್‌ಲಿರ್‌ಕನೇ ಕತ್ತಲಾತ್. ಆಗ ಶ್ರವಣಕುಮಾರಂತೇಳ್ವ ರುಸಿಕುಮಾರ ಅಂವನ ಕುರುಡರಾದ ಅಯ್ಯನ್ನೂ ಅಪ್ಪನ್ನೂ ತೀರ್ಥಯಾತ್ರೆಗೆಂತ, ಒಂದು ಬೆದ್‌ರ್‌ನ ಕಾವಡಿಂತೇಳ್ವರ ಮಾಡಿ ಅದರ್ಲಿ ಕುದ್ದುರ್ಲಿ ಹೊತ್ತ್‌ಕಳೆಂಡ ಹೋಂವ, ಅಯ್ಯಪ್ಪ ನೀರ್ ಕುಡಿಯಕೆ ಬೇಕು ಮಜ್ಜಂತ ಹೇಳ್‌ಕನ ಅವರ ಒಂದು ಮರದಡಿಲಿ ಕುದ್ದ್ರ್ಲಿ. ಒಂದು ಚೊಂಬು ಹಿಡ್ಕಳೆಂಡ್ ನೀರ್‌ನ ಕೊಳದಕ್ಕಲ್ ಹೋಗಿ ಚೆಂಬುನ ನೀರ್‌ಲಿ ಕಳೆಂತ್‌ಸಿತ್. ಅದ್ಕೆ ನೀರ್ ತುಂಬುಕನ 'ಗುಳುಗುಳು'ಂತ ಸದ್ದಾತ್. ಆನೆ ಎಲ್ಲಿಯೋ ನೀರ್ ಕುಡ್ದದಂತ ಗ್ರೈಸಿದ ದಶರಥ ಬಾಣನ ಎಳ್ದ್ ಬುಟ್ಟಳೆತ್ ಅದ್ ಶ್ರವಣ ಕುಮಾರಂಗೆ ತಾಂಗಿ ಅಂವ 'ಅಯ್ಯೋ! ನಾ ಸತ್ತೆ'ಂತ ಹೇಳಿ ಬೊಬ್ಬೆ ಹಾಕಿತ್. ದಶರಥ ಓಡಿ ಹೋಗಿ ನೋಡ್‌ಕನ ಶ್ರವಣ ಕುಮಾರ ಸಾಯುವ ಸ್ಥಿತಿಲಿತ್ತ್. ಕ್ಷಮೆ ಕೇಳ್ಟರಾಜಂಗೆ, ನೀ ಈ ನೀರ್‌ನ ತಕಳೆಂಡ್ ಹೋಗಿ ಹಜ್ಜ ದೂರಳೆಲಿ ಒಂದು ಮರದಡಿಲಿರುವ ನನ್ನ ಕುರುಡ ಅಯ್ಯಪ್ಪಂಗೆ ಕೊಡುಂತೇಳಿ ಪ್ರಾಣ ಬುಟ್ಟಳೆತ್. ಹಾಂಗೆ ದಶರಥ ಅವರ ನೋಡಿ ನಡ್ದ ಸಂಗತಿನ ಹೇಳಿ ಕ್ಷಮೆ ಕೆಳ್‌ಕನ, ಇದ್‌ಕೆ ಎಂತ ಕ್ಷಮೆ? ನೀನೂ ನಮ್ಮ ಹಾಂಗೆ ಪುತ್ರಶೋಕಲ್ಲಿ ಸಾಯುವಂತೇಳಿ ಅವ್ರೂ ಸತ್ತ್‌ಬಿದ್ದೊಗಡ.

ಈ ಸಾಪನ ಕೇಳಿ ದಶರಥಂಗೆ ಬೇಜಾರ ಆಗುವ ಬದ್‌ಲಿಗೆ ಸಂತೋಸೇ ಆತ್ ಗಡ. ಏಕೆ ಮಕ್ಕಳೇ? ಹೇಳಿ ನೋಡೊನೊ.

**ಮಕ್ಕ :**

ನಾವು ಈ ಕಥೆಲ್ ಮುಳ್ಗಿ ಹೋಗಿದ್ದೊ ತಾತ. ಅಳ್ಗೀಲ್ ಬಂದಾಂಗ ಆದೆ. ನೀವೇ ಹೇಳೊಕು.

ತಾತ :

ಸರಿ ಕೇಳಿ, ದಶರಥಂಗೆ ಮೂರು ಹೆಣ್ಣಕ ಇದ್ದರೂ ಎಷ್ಟೋ ಕಾಲ ಮಕ್ಕ ಆತ್ತೇಲೆ. ರುಸಿಗಳ ಮಾತ್ ಸುಳ್ಳಾಕಿಲೆ. ಹಾಂಗೆ ನಂಗೆ ಶೋಕ, ಸಾವು ಉಂಟಾದರೂ ನಂಗೆ ಮಕ್ಕ ಆದವೆಲ್ಲೇಂತ ಅಂವಂಗೆ ಸಂತೋಸು ಆಕೆ ಕಾರಣ–ಗೊತ್ತಾತ್ತೋ?

ಒಂದು ದಿನ ದ್ರೋಣ, ಅರ್ಜುನ ಮತ್ತ ಒಳ್ದ ಪಾಂಡವರ್, ಎಲ್ಲ ಕಾಡಿಗೆ ಬೇಟೆಗೇಂತ ಬಂದೊ ಏಕಲವ್ಯನ ದುರ್ದೈವ, ಅವೆಲ್ಲ ಅಂವ ಇದ್ದ ಕಾಡ್‌ಗೇ ಬಂದೋ. ಅವರ ಒಟ್ಟಿಗೆ ಬಂದಿದ್ದ ನಾಯಿಗೆ ಏಕಲವ್ಯನ ಮೂಕೊಳ್ಕ ಸಿಕ್ಕಿ, ಬೊರಿಯಕೆ ಸುರು ಮಾಡ್ತ್. ಆ ಕೂಡ್ಲೆ ಎಲ್ಲಿಂದಲೋ ರೊಂಯನೆ ಬಂದ ಬಾಣಂಗ ಒಂದಾದ ಮೇಲೆ ಒಂದು ಬಂದ್, ಅದರ ಬಾಯ ತುಂಬಿಕಂಡ್ ನಾಯಿಗೆ ಬಾಯ ಮುಚ್ಚಕೆ ಆತ್‌ಲೆ. ಇದರ ನೋಡಿ ಅರ್ಜುನಂಗೆ ಆಶ್ಚರ್ಯ ಆತ್. ಅಷ್ಟರವರೆಗೆ ಬಾಣ ಬುಡುದರ್ಲಿ ಅಂವನೇ ಜಾಣಂತ ತಿಳ್ಕಂಡಿತ್ತ್. ಸಾಲದ್ದಕ್ಕೆ ದ್ರೋಣರೂ ಲೋಕಲಿ ಎಲ್ಲರ್‍ನೂ ಮೀರ್ರುವ ಬಿಲ್ಗಾರ ನೀನೆ ಆವಾಂಗೆ ನಿನ್ನ ಮಾಡಿನೇಂತ ತನ್ನ ಪ್ರೀತಿನ ಶಿಷ್ಯಂಗೆ ಮಾತ್ ಕೊಟ್ಟಿದ್ದೊ. ಎಲ್ಲಿಂದ ಈ ಬಾಣಂಗ ಬಂದೋಂತ ಹುಡ್ಕ್ಯಂಡ್ ಹೋಕನ ಏಕಲವ್ಯ ಅಭ್ಯಾಸ ಮಾಡುದು ಕಂಡತ್. ತಾನ್ ಕ್ಷತ್ರಿಯಂತೇಳ್ವ ಗರ್ವ ಅರ್ಜುನಂಗೆ. ಹಾಂಗೆ ಏಕಲವ್ಯನ "ಯಾರ್ ನೀ"ಂತ ದರ್ಪಂದಲೇ ಕೇಳ್ತ್. ಏಕಲವ್ಯ ವಿನಯಲೇ ಉತ್ತರ ಕೊಟ್ಟತ್. "ನಾ ದ್ರೋಣ ಶಿಷ್ಯ, ಏಕಲವ್ಯ"ಂತ ಹೇಳ್ತ್. ನೀ ಸುಳ್ಳು ಹೇಳಿಯ, "ನಿನ್ನ ಆಚಾರ್ಯರ ಗುರು ಕುಲಲಿ ನಾವು ಎಂದೂ ಕಂಡತ್‌ಲೆ. ಅವು ಹೇಂಗೆ ನಿಂಗೆ ಗುರು ಆಕೆ ಸಾಧ್ಯ?"ಂತ ಅರ್ಜುನ ತೇಂಕಾರಲೇ ಕೇಳ್ತ್. ನೀ ಹೇಳ್ದ ಸರಿ, ರಾಜಕುಮಾರ. ಗುರುಕುಲಕ ಸೇರುವ ಆಸೆಂದ ನಾ ಬಂದಿದ್ದೆ. ಆದರೆ, ಕ್ಷತ್ರಿಯರಿಗೆ ಮೀಸಲಾಗಿದ್ದ ಅದರ್ಲಿ ನಂಗೆ ಪ್ರವೇಶ ನಿಷೇಧಂತ ಗುರುಗ ನನ್ನ ಹಿಂದೆ ಕಳ್ಸಿದೊ. ಆದರೆ ಅವೇ ನನ್ನ ಮಾನಸ ಗುರುಂತ ನಾ ನೆನ್ಸಿಕಂಡೆ. ಅವರ ಮಣ್ಣ್‌ನ ಮೂರ್ತಿನ ಸ್ಥಾಪನೆ ಮಾಡಿ, ನಿತ್ಯವೂ ಆ ಮೂರ್ತಿಗೆ ಪೂಜೆ ಮಾಡಿ, ನನ್ನ ಅಭ್ಯಾಸನ ಸುರುಮಾಡ್ದೆ. ಅವರ ಪರೋಕ್ಷ ಆಶೀರ್ವಾದದ ಬಲಂದ ನಾ ಇಷ್ಟರ ಮಟ್ಟಿಗೆ ಕಲ್ತೊಳೆ. ನಿಂಗನೂ ಇದರ ಕಲ್ತ್‌ಕಣೊಕುಂತ ಆಸೆ ಉಟ್ಟುಂತಾದರೆ ನಾ ಹೇಳಿ ಕೊಟ್ಟನೆ."

ಇದರ ಕೇಳಿ ಅರ್ಜುನಂಗೆ ಅವಮಾನ ಆಗಿ ಸಿಟ್ಟ್‌ಬಾತ್. ಸೀದಾ ದ್ರೋಣರಲ್ಲಿಗೆ ಹೋಗಿ, ಕೊಪಲಿ ಹೇಳ್ತ್ "ಗುರುಗಳೇ, ಲೋಕಲಿ ನನ್ನಂದ ಮೇಲಾದ ಬಿಲ್ಗಾರ ಇಲ್ಲದಾಂಗೆ ನಂಗೆ ಎಲ್ಲದರ್‍ನೂ ಕಲ್ಸಿ ಕೊಟ್ಟನೇಂತ ಹೇಳಿದ್ದ ನೀವು ಮಾತಿಗೆ ತಪ್ಪಿಯೊಳರಿ. ಕಾಡ್‌ಲಿರುವ ಬೇಡರ ಹೈದ ನನ್ನ ಮೀರ್ರುವಂತ ವಿದ್ಯೆನ ನಿಮ್ಮಂದಾಗಿ ಪಡ್ದುಟು. ನೀವು ನಂಗೆ ಸುಳ್ಳು ಹೇಳಿ ಮೋಸ ಮಾಡ್ದರಿ"ಂತ ಅಪವಾದ ಹೊರ್ಸಿತ್. ದ್ರೋಣರಿಗೆ ತುಂಬ ಬೇಜಾರಾತ್. ಈ ಕ್ಷತ್ರಿಯರ ಹಂಗಿಗೆ ಬಿದ್ದ್ ಇಂಥ ಮಾತ್ ಕೇಳಿಕಾತ್ ನನ್ನ, ಮಜ್ಜಂದ ಹೆಜ್ಜಿ ಇಂವಂಗೆ ಹೇಳಿಕೊಟ್ಟ್ ಕಲ್ಸಿಯೊಳೆಂತೇಳ್ದು ಇವಂಗೆ ಮತ್ತೇನ ಹೋಗುಟು" ಹೀಂಗೆ ತುಂಬ ಸಂಕಟ ಪಟ್ಟ್‌ಕಂಡೊ.

ಮತ್ತೆ ಮತ್ತೆ ಅರ್ಜುನ ಹೇಳುವ ಚುಚ್ಚು ಮಾತ್‌ಂದ ತುಂಬ ಹಿಂಸೆ ಪಟ್ಕಂಡೊ. ಇದಿಕೆ ಏನ್ ಉಪಾಯಂತ ತುಂಬ ಯೋಚನೆ ಮಾಡ್ದೊ. ಮತ್ತೆ ಏಕಲವ್ಯ ಇದ್ದ ಕಾಡಿಗೆ ಬಂದೊ. ಇಷ್ಟರವರೆಗೆ ಪ್ರತಿಮೆನ ರೂಪಲಿ ಇದ್ದ ಗುರುಗ ಈಗ ಪ್ರತ್ಯಕ್ಷ ಆಕನ ಏಕಲವ್ಯಂಗಾದ ಸಂತೋಸುನ ಹೇಳಿಕೆ ತಿರಲೆವ್. ದಿಡೀರ್‌ಂತ ಅವರ ಕಾಲಿಗೆ ಅಡ್ಡ ಬೀತ್. ಕಾಡ್‌ಂದ ಒಳ್ಳೊಳ್ಳೆ ಹಣ್ಣ್‌ಗಳ ಕೊಯ್ದ್ ತಂದ್ ದ್ರೋಣರ ಎದ್‌ರ್ಲಿ, ಒಂದು ಕೊಡಿ ಬಾಳ್ಲೆಲಿ ಇಸಿತ್. ಅವನ ಬಿಡಾರಂದ ಒಂದು ಗಿಂಡಿಲಿ ಅವನ ಅಜ್ಜಿ ಹಾಲ್ ತಕಲೆಂಡ್ ಬಾತ್. ಹಾಂಗೆಲ್ಲ ಉಪಚಾರ ಮಾಡ್ದ ಮೇಲೆ ಏಕಲವ್ಯ ಹೇಳ್ತ್, "ಗುರುಗಳೇ, ನಿಮ್ಮ ಆಶೀರ್ವಾದಂದ ಇಷ್ಟರ ಮಟ್ಟಿಗೆ ಕಲ್ತೊಳೆ ನಾ ನಿಮ್ಗೆ ಏನ್ ಸೇವೆ ಮಾಡೊಕುಂತ ಅಪ್ಪಣೆ ಕೊಡಿ. ಒಡನೆ ಅದರ ಮಾಡಿನೆ"ಂತ ಕೈ ಮುಗ್ತ್. ಈ ಮುಗ್ಧ ವಿನಯ ಕೆಲವು ಸಲ ತೀರ ಅಪಾಯ ತಂದದೆ. ಒಬ್ಬನ ಮುಗ್ಧತೆನ ದುರುಪಯೋಗ ಪಡ್ಲಿಕೆಂಬ ದುರಾತ್ಮರೇ ಪ್ರಪಂಚಲಿ ತುಂಬ ಒಳೊ. ಈಗ ಒಬ್ಬ ಕ್ಷತ್ರಿಯನ ಹಾಂಕಾರದ ಕಾರಣಂದ ಈ ಮುಗ್ಧ ವ್ಯಾಧನ ಜೀವನನೇ ಹಾಳ್ ಮಾಡಿಕೆ ಬಂದೊಳೆ. ಈ ಪಾಪನ ನಾ ಹೇಂಗೆ ಬೀಟುವೆನೋಂತ ದ್ರೋಣ ಮನ್ಸ್‌ಲೇ ಹೇಳಿಕಂಡಲೆತ್. ಮತ್ತೆ ಮನ್ಸ್ ಗಟ್ಟಿ ಮಾಡಿ ಏಕಲವ್ಯಂಗೆ ಹೇಳ್ತ್: "ನೋಡು ಮಜ್ಜ ನನ್ನಂದಾಗಿ ಈ ವಿದ್ಯೆನ ನೀ ಪಡ್ದೊಳಂತ, ನಾ ನಿಂಗೆ ಗುರು ಆಗೊಳೆಂತ ನಿನ್ನ ಭಾವನೆಲಿ ಉಟ್ಟುಂತಾದರೆ, ನೀ ನಂಗೆ ಗುರುದಕ್ಷಿಣೆಂತ ಕೊಡೊಕಾದೆಂತ ಗೊತ್ತುಟ್ಟೊ?" "ಗೊತ್ತುಟ್ಟು ಗುರುದೇವಾ! ನಾ ಏನ್ ಕೊಡೊಕುಂತ ಹೇಳಿ"–ಏಕಲವ್ಯ ಹೇಳ್ತ್. ಆಗ ದ್ರೋಣ. "ನಿನ್ನ ಬಲ್ದ ಕೈನ ಕೊಂಬ ಬೆರ್ಳನ ನಂಗೆ ದಕ್ಷಿಣೆ ಕೊಡು"ಂತ ಹೇಳ್ತ್. ಆ ಕೂಡ್ಲೆ, ಏಕಲವ್ಯ ಒಂದು ಬಾಣನ ತೆಗ್ದ್ ತನ್ನ ಬಲ್ದ ಕೈನ ಕೊಂಬ ಬೆರ್ಲ್‌ನ ಬುಡಂದ ತುಂಡು ಮಾಡಿ ಅದರ ಒಂದು ಸೊಪ್ಪುನ ಮೇಲೆ ಇಸಿ ದ್ರೋಣಂಗೆ ಕೊಟ್ಟಲೆತ್.

ಅಲ್ಲಿ ನಿತ್ತಕಲೆಂಡ್ ಇದ್ದ ಏಕಲವ್ಯನ ಅಜ್ಜಿ "ಅಯ್ಯಯ್ಯೋ! ನನ್ನ ಟಿಕ್ಕನ ಬಾಲಿ ತಕಲೆಂಡಲೆತ್ ಈ ಹಾರಂಪ! ಅಯ್ಯೋ ಸಿವನೆ ! ನೀ ಇನ್ನ್ ಹೇಂಗೆ ಕೆಲ್ಸ ಮಾಡಿ ತಿಂಬ ಮಜ್ಜ. ಕೈಲಿ ಹುಗ್ಗನ ಬಾಚಿ ಉಂಬಕು ನಿಂಗೆ ಕಷ್ಟ ಆತಲೆ ಮಜ್ಜ. ಇಷ್ಟ್ ದಿನ ನಿನ್ನ ಸಾಂಕಿ ದೊಡ್ಡಲೆದ್ ಮಾಡ್ದ ನಂಗೆ ಈ ನಿನ್ನ ಕಷ್ಟನ ನೋಡುವ ಪುಣ್ಯ ಒದ್ಗಿತೋ!" ಅಜ್ಜಿ ಇಡೀ ಕಾಡೆ ಅಳುವಾಂಗೆ ಬೊಬ್ಬೆ ಹಾಕಿ ಅತ್ತಲೆತ್. ಆಗ ಏಕಲವ್ಯ ಅಳ್ಬೇಡ ಅಜ್ಜಿ. ಇದ್ ಅಳುವಂತ ಸಂಗತಿ ಅಲ್ಲ. ಗುರುಗೆ ಕೊಡುವ ದಕ್ಷಿಣೆನ ಸಂತೋಸುಂದ ಕೊಡೊಕು ಆಗ ಅನಕೆ ಆಗಲೆದ್. ಗುರುಗಳ ಮನ್ಸಿಗೆ ಬೇಜಾರ್ ಆಕೆ ಆಗಲೆದ್. ಸುಮ್ಮನಿರ್. "ಎಂತ ನಿನ್ನ ಗುರು? ಉಗುರು! ನನ್ನ ಸಂಕಟ ನಂಗೆ. ನಾ ಅಂದೇ ಹೇಳ್ದೆ. ಈ ವಿದ್ಯೆ ನಾವ್ಗೆ ಬಿದ್ದಿದ್ ಅಲ್ಲ ಮಜ್ಜ. ತನ್ನ ಹಾಂಗೇ ಇರುವ ಬೇರೊಬ್ಬನ ಜೀವತೆಗಿದು ಅವನ ನೆತ್ತರ್ ಹಲ್ಲಿ ಅದರ್ಲಿ ಕುಸಿಪಡುವ ರಾಜಕುಲದೊವು ಗಡ! ಚತ್ರಿಯರ್‌ಗಡ ಆ ನೆತ್ತರ್ ಕುಡಿವ ಉಂಬುಳಾಗ ಏನ್ ಬೇಕರೂ ಮಾಡಿಕಲೆಂಪ್ ಇಲ್ಲಿ. ಅವರ ದುಷ್ಟ ವಿದ್ಯೆನಿಂಗೆ ಬೇಡ. ನಾವು ದೇವ್ರು ಕೊಟ್ಟ ನೆಲನ ಒಕ್ಕಕ್ಕಲೆಂಡ್ ಅದರ್ಲಿ ಸಿಕ್ಕುವರ ತಿಂದ್‌ಕಂಡ್ ನಮ್ಮಷ್ಟಕ್ಕೆ ಇರೊನೋಂತ. ನೀ ಕೇಳ್ತ್ಲೆ. ಈಗ ಅಂಗಹೀನ ಆಗೊಳೆ. ನಿಂಗೆ ಸಾಯ ಮಾಡೊವ್ರು

ಯಾರೋಳೊ? ನೋಡು ಆ ಹಾರಂವ ಹೇಂಗೆ ಕಲ್ತ್‌ನಾಂಗ ಕುದ್ದುಟು!" ಅಜ್ಜ ಮಾತಾಡುವ ಮಾತ್ ದ್ರೋಣಂಗೆ ಅರ್ಥ ಆಗದಿದ್ದರೂ ಅದರ ಭಾವನೆ ಅರ್ಥ ಆತಿತ್ತ್. ಅವಂಗೆ ಏಕಲವ್ಯನ ನೋಡಿ ಕಣ್ಣೀರ್ ಬಾತ್. ನಡ್ಗುವ ಸ್ವರಂದ, "ಮಜ್ಜ ಏಕಲವ್ಯ! ಕ್ಷತ್ರಿಯ ರಾಜಕುಮಾರ ಅರ್ಜುನಂಗೆ ನಾ ಅಂದ್ ಕೊಟ್ಟ ಮಾತ್‌ನ ಒಳ್ಕಂಬ ಉದ್ದೇಶಂದ ಅವನ ಬುಚ್ಚು ಮಾತ್‌ನ ಹಿಂಸೆ ಬಾಣದ ಪೆಟ್ಟ್‌ಂದೊಳೊ ತೀಕ್ಷ್ಣ ಆಗಿದ್ದವರ್‌ಂದ ನಿನ್ನ ಜೀವನನ ದೊಲಿ ತಕಣಕಾಗಿ ಬಾತ್. ಎಂದೆಂದಿಗೂ ಗುರುಭಕ್ತಿಂತ ಹೇಳುವ್ದಕೆ ನಿನ್ನನೇ ಉದಾಹರಣೆಯಾಗಿ ಜನ ಹೇಳುವ್ರೊ. ನಿನ್ನ ಹೆಸರ್ ಯುಗ ಯುಗಗಳ್ಳೇ ಕಳ್ದರೂ ಶಾಶ್ವತವಾಗಿದ್ದು. ಇದೆ ನಿಂಗೆ ನನ್ನ ವರ. ನಾ ಇನ್ನ್ ಹಸ್ತಿನಾವತಿಗೆ ಹೋನೆ ಬರಿ" ಹೀಂಗೆ ಹೇಳಿ ಕಣ್ಣೊರ್ಸಿಕಂಡ್ ಅಲ್ಲಿಂದ ಹೊರ್ಟಳ್ತ್.

ಹಸ್ತಿನಾವತಿಗೆ ಬಂದವನೇ ಅರ್ಜುನನ ಕರ್ದಿತ್. ಅಂವ ಬಂದಾಕನ ಏಕಲವ್ಯನ ಬಲ್ಲಕ್ಕೆನ ಕೊಂಬ ಬೆರ್ಳನ ನೆತ್ತ್‌ರ್ ಮೆತ್ತಿಕಂಡ್ ಇದ್ದವರ ಇಂದ ಇದ್ ನಿಂಗೆ ಗುರು ಕೊಡುವ ದಕ್ಷಿಣೆ ತಕ. ಇಂದ್‌ಂದ ಜಿಲ್ಲ್ ಗಾರಲ್ಲಿ ನಿನ್ನ ಮೀರ್ದಂವನೇ ಇಲ್ಲೆಂತಾತ್. ತನ್ನಷ್ಟಕ್ಕೆ ಸಾಧನೆ ಮಾಡಿ ಹೆಚ್ಚಿ ಕಲ್ತ್ ಕಾಡ್‌ಲಿದ್ದ ಬೇಡರ ಹೈದನ ಜೀವನವೇ ವ್ಯರ್ಥ ಆವಾಂಗೆ ಮಾಡ್ದೆ, ನಿನ್ನ ಕ್ಷತ್ರಿಯ ಹುಟ್ಟುಗುಣದ ಅವಿವೇಕಂದ ಕೂಡ್ದ ಆಸನನೆ. ಅಹಂಕಾರಂದ ನನ್ನ ನಾ ಮಾಡದ ತಪ್ಪಿಗೆ ಹಂಗ್‌ಸಿ ಮಾತಿಗೆ ತೊಟ್ಟದಂವಂತ ಹೇಳಿ ನಂಗೆ ಬೇನೆ ಮಾಡ್ದ. ಕಾರಣ. ನಿನ್ನ ನನ್ನ ಸ್ವಂತ ಮಜ್ಜಂದ ಹೆಚ್ಚಿ ಮಮತೆಂದ ನೋಡಿಕಂಡಿದ್ದೆಂತ ನಿಂಗೂ ಗೊತ್ತಿದ್ದರ್ದ. ಇನ್ನ್ ನಾ ಕಲ್ತ್‌ವಂತದೇನೂ ಇಲ್ಲೆ ನಂಗೆ ಗೊತ್ತಿರುವಂತದರ ಎಲ್ಲ ಕಲ್ಸಿ ಕೊಟ್ಟೊಳೆ. ಮುಂದೆ ನಿಮ್ಮ ವಿದ್ಯಾ ಪರೀಕ್ಷೆ ಎಷ್ಟುಟ್ಟುಂತೇಳ್ದರ ನಿಮ್ಮ ಹಿರಿಯೊವ್ಕೆ ಗೊತ್ತಾಗುವ ಹಾಂಗೆ ನೀಪ್ಗೆಲ್ಲ ಒಂದು ಪರೀಕ್ಷೆ ಇಸೊಕುಂತೊಳೆ. ಅದು ಮುಗ್ದ ಮೇಲೆ. ಈ ಗುರುಕುಲನ ಮುಚ್ಚನೆ. ನಾ ಒಬ್ಬ ಸಾಮಾಜಿಕನಾಂಗೆ ಇದ್ದ್‌ಕಣೆ ದ್ರೋಣಾಚಾರ್ಯರ ಮನ್‌ಸಾಗೆ ತುಂಬ ಬೇನೆ ಮಾಡಿಬುಟ್ಟೆಂತ ಅರ್ಜುನಂಗೆ ತುಂಬ ದುಃಖ ಆತ್. ನನ್ನ ಕ್ಷಮಿಸಿ ಗುರುಗಳೇ ನಾ ನನ್ನ ಉದ್ವೇಗಲ್ಲಿ ಏನೇನೋ ಮಾತಾಡಿ ಬುಟ್ಟೆ ಬುದ್ಧಿ ಬೆಳೆಯದ ಮಕ್ಕಳ ಹಾಂಗೆ. ಏನೇ ಆದರೂ ನಾ ನಿಮ್ಮ ಶಿಷ್ಯಂತೇಳ್ದರ ಮರಿಯದೆ ನೀವು ಕರುಣೆ ತೋರ್ಸೊಕುಂತ ಅವರ ಕಾಲಿಗೆ ಅಡ್ಡ ಬೀತ್. ಆಗ ದ್ರೋಣ ಹೇಳ್ತ್ ಸರಿ ಸರಿ ಎದ್ದೇಳ್ ನಿಂಗೆ ಕಡ್ದರೆ ಸಂದ್ ಬುಟ್ಟದೇನೊ? ಹಾಂಗೆ ನನ್ನ ನಿನ್ನ ಗುರು-ಶಿಷ್ಯ ಸಂಬಂಧಲ್ಲಿ ಎಂದಿಗೂ ಸಂದ್ ಬುಡಿಕಿಲೆ ಇಲ್ಲಿ ಇನ್ನೊಂದು ವಿಷಯನ ಹೇಳನೆ. ಕೇಳಿಕ ಮುಂದೆ ಎಂದಾದರೂ ಒಂದು ದಿನ ನೀನೂ ನಾನೂ ಯುದ್ಧಮಾಡುವ ಸಂದರ್ಭ ಬರ್‌ಗಿರೆ ಆಗ ನೀ ನಿನ್ನ ಸರ್ವಶಕ್ತಿನ ಉಪಯೋಗ್ಸಿ ಹೋರಾಡೊಕು, ಅಲ್ಲದೆ ಇವ್ರ ನನ್ನ ಗುರುಗಾತೇಳಿ ಹಗುರ ಯುದ್ಧ ಮಾಡಿಕೆ ಆಗಲ್ಲ ಗೊತ್ತಾತೋ?ಂತ ಕೇಳ್ದ. ಹಿಂದನ ಕಾಲದ ಗುರುಗ ಎಲ್ಲ. ತಾವು ಕಲ್ಸಿದ ವಿದ್ಯೆ ಸಾರ್ಥಕ ಆದುಂತೇಳಿರೆ, ತನ್ನ ಶಿಷ್ಯನೇ ತನ್ನ ಸೋಲ್ಸುವಾಂಗೆ ಆಕನಂತ ಶಿಕ್ಷಂದಿದ್ದೊ. ವಿದ್ಯೆಂತೇಳಿರೆ ಎಷ್ಟು ಕಲ್ತರೂ ಮುಗಿಯದಂತದ್ದ್. ಗುರು

ಕೆಲ್ಸಿದಷ್ಟಕ್ಕೇ ಅದ್ ನಿತ್ತ್ ಹೋದರೆ ಮುಂದೆ ಬೆಳಿಯುದೆ ಮುರುಂಟಿ ಹೋದಾಂಗೆ. ಹಾಂಗೆ ಆಕ ಬೊತ್ತೇಂತ ಇರುವ ಉದ್ದೇಶಂದ ಆ ರೀತಿ ದ್ರೋಣೆರ್ ಹೇಳ್ದ ಮಾತ್‌ನ ಉದ್ದೇಶ. ಈಗನ ಕಾಲೆಲಿ ಶಿಷ್ಯ ತುಂಬ ಬೆಳ್ದರೆ ಹೆಚ್ಚಿನಸೆವುಕೆ ಮತ್ಸರನೇ ಆದು.

ಮತ್ತೆ ಕೆಲವು ದಿನ ಕೆಳ್ದ ಮೇಲೆ ದ್ರೋಣಾರ್ ಭೀಷ್ಮರ ನೋಡಿ ಹೇಳ್ದೊ "ನಂಗೆ ಗೊತ್ತಿದ್ದ ಎಲ್ಲ ವಿದ್ಯೆನ ನಿಮ್ಮ ಮಕ್ಕಳಿಗೆ ಕೆಲ್ಸಿ ಕೊಟ್ಟೋಳೆ. ಅವೆಲ್ಲ ಎಷ್ಟರ ಮಟ್ಟಿಗೆ ಕೆಲ್ತೋಳೊಂತ ಹಿರಿಯೊವಾದ ನೀವೆಲ್ಲ ನೋಡೂಕು. ಹಾಂಗೆ ಒಂದು ದಿನ ಪರೀಕ್ಷೆ ಇಸ್‌ನೆ. ಅದಾದ ಮೇಲೆ ಈ ಗುರುಕುಲನ ಮುಚ್ಚೆ ನಾ ನಿವೃತ್ತಿ ಪಡಿಯೊಕುಂತೋಳೆ. ಅದಿಕೆ ನಿಮ್ಮ ಅಪ್ಪಣೆನೂ ಕೇಳಿನೆ". ಭೀಷ್ಮಂಗೆ ಸಂತೋಸಾತ್. ಗುರುಕುಲನ ಮುಚ್ಚುವಂತ ಹೇಳ್ದುದರ ಕೇಳಿ ಬೇಜಾರೂನು ಆತ್. ಮಕ್ಕಳ ಪರೀಕ್ಷೆ ನಡಿವ ದಿನ ನಿಶ್ಚಯ ಮಾಡಿ, ಜಾಗೆನ್ನೂ ಗೊತ್ತ್ ಮಾಡ್ದೊ. ಪರೀಕ್ಷೆನ ಕಳ, ಜೆನಕೆ ಕುದ್ದ್ ನೋಡುವ ಜಾಗೆನ ಏರ್ಪಾಡ್ ಮಾಡ್ಸಿದೊ. ಸ್ಥಳ ಶುದ್ಧಿ, ಗಣ ಹೋಮಗಳ ಎಲ್ಲ ಮಾಡ್ಸಿ, ದಿಗ್ಬಲಿ ಕೊಡುದರ್ನೂ ಕೊಟ್ಟೊ. ಹೀಂಗೆಲ್ಲ ತಯಾರ್ ಮಾಡ್ದ ಮೇಲೆ ಒಂದು ದಿನ ಪರೀಕ್ಷೆ ನಡಿದೂಂತ ನಿಶ್ಚಯ ಮಾಡ್ದೊ.

ಪರೀಕ್ಷೆ ನಡಿವ ದಿನ ಅರಮನೆಗೆ ಸೇರ್ದೊವು ಮತ್ತೆ ನಗರವಾಸಿಗ ಎಲ್ಲ ಬಂದ್ ಅವ್ವವ್ವ ನಿಶ್ಚಯ ಮಾಡಿದ್ದ ಜಾಗೆಗಳ್ಲಿ ಕುದ್ದ್‌ಕಂಡೊ. ಅವು ಒಬ್ಬಂದೊಬ್ಬ ಮಾತಾಡುವ ಗುಜುಗುಜು ಶಬ್ದಂದ ಆ ಸಭೆ ಎಲ್ಲ ತುಂಬಿತ್. ನಿಶ್ಚಯ ಮಾಡ್ದ ಗೆಳಿಗೆಗೆ ಸೆರಿಯಾಗಿ ದ್ರೋಣಾರ್ ಬೆಳ್ಳಂಗೆನ ವಸ್ತ್ರನ ಕಚ್ಚೆ ಹಾಕಿ ಉಟ್ಟ್, ಬಿಳಿ ಶಾಲ್‌ನ ಹೊದ್ದ್‌ಕೆಂಡ್ ಸಭಾಂಗಣಕ್ಕೆ ಪ್ರವೇಶ ಮಾಡ್ದೊ. "ಸದ್ದ್"ಂತ ಎತ್ತರದ ದೆನಿಲಿ ಹೇಳ್‌ಕನ ಸಭೆ ಎಲ್ಲ ಮೌನ ಆತ್. ಮತ್ತೆ ವಿದ್ಯಾರ್ಥಿಗಳ ಒಳಗೆ ಬನ್ನೀಂತ ಹೇಳ್ದೊ. ದುರ್ಯೋಧನನ ಹಿಂದೆ ಕೆಂಡ್ ಕೌರವರ ಒಂದು ಗುಂಪು, ಯುಧಿಷ್ಠಿರನ ಹಿಂದೆ ಕೆಂಡ್ ಪಾಂಡವರ ಗುಂಪು ಒಳಗೆ ಬಂದೊ. ಸುರುಗೆ ಯುಧಿಷ್ಠಿರ ಅವನ ಪರಿಣತಿನ ತೋರ್ಸಿಕೆ ಹೇಳ್ದೊ. ಅಂವ ಮಾಡುವ ಕೊಂತಂತೇಳುವ ಅಸ್ತ್ರದ ಪ್ರಯೋಗನ ಜೆನ ಮೆಚ್ಚಿಕೆಂಡೊ. ಮತ್ತೆ ದುರ್ಯೋಧನನ ಸರದಿ. ಅವಂಗೆ ಜೊತೆಯಾಗಿ ಭೀಮನೂ ಕಳಕೆ ಬಾತ್. ಗದಾಯುದ್ಧದ ಪರಿಣತಿನ ಒಬ್ಬಂದ ಒಬ್ಬ ಮೇಲ್‌ಂತ ಅವು ತೋರ್ಸಿದೊ. ಬೆರೀ ತೋರಿಕೆನ ಪ್ರದರ್ಶನದ ಬದ್‌ಲಿಗೆ ಅವಿಬ್ಬೊರೂ ಮೇರೆ ಮೀರುವ ಸೊಮುದ್ರಂಗಳ ಹಾಂಗೆ ಒಬ್ಬಂದೊಬ್ಬ ಬಲವಾಗಿ ಹೊಡ್ಕಂಬಕೆ ಸುರು ಮಾಡ್ದೊ. ಆಗ ಗುರು ಅಶ್ವತ್ಥಾಮನ ಕರ್ದ್, ಅವರ ತಡಿಯಕೆ ಹೇಳ್ದೊ. ಹಾಂಗೆ ಅಂವ ಕೂಡ್ಲೇ ಹೋಗಿ, ಅವರಿಬ್ಬರ ನೊಡುಲಿ ನಿತ್ತತ್. ಅವರ ನೋಡಿ ಅವಿಬ್ಬೊರೂ ದೂರ ದೂರ ನಿತ್ತೊ. ಅರ್ಜುನನ ಪರೀಕ್ಷೆನ ದ್ರೋಣಾರ್ ಬೇಕುಂತಳೆ, ಎಲ್ಲವರಾಂದ ಕಡೆಗೆ ಇಸಿದೊ. ಬಾಕಿ ಒಳ್ದೊವು ಎಲ್ಲ ಅವರವರ ವಿದ್ಯೆನ ತೋರ್ಸಿ, ಜೆನಂಗಳ ಮೆಚ್ಚಿಸಿಕೆಂಡೊ.

ಅದೆಲ್ಲ ಆದ ಮೇಲೆ ಅರ್ಜುನನ ಬಾಕೆ ಹೇಳ್ದೊ. ಅವನ ತುಂಬ ಹೊಗಳಿ, ಬಿಲ್ಲ್ ವಿದ್ಯೆಲಿ ಇವನ ಮೀರ್ದೊವು ಮೂರು ಲೋಕೆಲಿಯೂ ಇಲ್ಲೆ. ಅಂವನ ಸಾಧನೆ

ನೀವೇ ಈಗ ನೋಡಿಂತ ದ್ರೋಣೇರ್ ಹೇಳಿ ಅರ್ಜುನಂಗೆ ಸನ್ನೆ ಮಾಡ್ತು. ಅರ್ಜುನ ಒಂದೊವಾಗಿ ಅಂವನ ಜಾಣ್ಮೆನ ತೋರ್ಸ್ಲತ್. ಸುರುಗೆ ಅಗ್ನ್ಯಸ್ತ್ರನ ಬುಟ್ಟೇತ್. ಸುತ್ತೊಳು ಕಿಚ್ಚಿ ಧಗಧಗಂತ ಎದ್ದೇತ್. ಜೆನಕೆ ಬೇಂಕೆ ತಡಿಯಕೆ ಬೊತ್ತಾತ್. ಆಗ ವರುಣಾಸ್ತ್ರನ ಬುಟ್ಟೇತ್. ಬಾನ ತುಂಬಿ ಮೋಡ ಮಿಂಚ್ ಗಡುಗು ತುಂಬಿ ಘೋರಂತ ಮಳೆ ಹೊಯ್ದ್, ಕಿಚ್ಚೆಲ್ಲ ಕೆಟ್ಟ್ ಹೋತು. ಹೀಂಗೆ ನಾನಾ ತರದ ಅಸ್ತ್ರ. ಪ್ರತ್ಯಸ್ತ್ರಗಳ ಬುಟ್ಟ್ ಎಲ್ಲವರ್ನೂ ಆಶ್ಚರ್ಯೇಲಿ ಮುಳ್‌ಗ್‌ಸಿತ್. ಎಲ್ಲೇವು ಮೆಚ್ಚಿಕೆಂಡೊ.

ಇದರೆಲ್ಲ ನೋಡಿ ಕೌರವರ ಮನ್‌ಸ್ ಕೊದ್ದೇತ್. ದ್ರೋಣೇರ್ ಯಾಗೋಳೂ ಪಕ್ಷಪಾತ ಮಾಡುವೆಂತೇಳಿ ಕರ್ಣಂಗೆ ಅರ್ಜುನನ ಮೇಲೆ ಭಾರೀ ಮಾತ್ಸರ ಆತಿತ್. ಹಾಂಗೆ ಅವನೊಟ್ಟಿಗೆ ಯಾಗೊಳೂ ಸ್ಪರ್ಧೆಗೆ ನಿತ್ತ್ ಅಂವ ಮಾಡ್ದರ ಎಲ್ಲದನ್ನೂ ಇಂವನೂ ಹಾಂಗನೇ ಮಾಡ್‌ತ್ತಿತ್. ಈಗೇಳೂ ಅಷ್ಟೆ ಅರ್ಜುನ ತೋರ್ಸಿದ ಎಲ್ಲ ವಿದ್ಯೆನೂ ಮಾಡಿ ತೋರ್ಸಿತ್. ಆದರೆ ಇಷ್ಟರವರೆಗೆ ಮನ್ಸ್‌ನೊಳಗೇ ಕೊದ್ದ್‌ಕೆಂಡ್ ಇದ್ದ ಕೋಪ ಹೊರೆಗೆ ಬಾತ್. ಹಾಂಗೆ ಅರ್ಜುನನ ನೋಡಿ ಹೇಳ್ತ್: "ಅರ್ಜುನ ಈ ಪರೀಕ್ಷಾ ರಂಗವೇ ಯುದ್ಧ ರಂಗ ಆಗೇಲಿ. ಧೈರ್ಯ ಇದ್ದರ ನನ್ನೊಟ್ಟಿಗೆ ಯುದ್ಧ ಮಾಡ್ ನೋಡೊನೊ"ಂತ ಕೋಪೇಲಿ ಹೇಳ್ತ್. ಅದರ ಕೇಳಿ ಅರ್ಜುನ, "ಕರ್ಣ! ಇಲ್ಲಿ ಸೇರಿರೊವು ಗೌರವಸ್ಥರಾದ ಗುರು ಜನಂಗ, ಮಾನವಂತೇರಾದ ಮಾನಿಸಿಗ. ಇಂಥವರೆದ್‌ರ್, ಈ ತರದ ಹೀನ ಮಾತಾಡಿಬುಟ್ಟೆ. ಬೇರೆಲ್ಲಿಯಾದರೂ ಆಗಿದ್ದರೆ, ನನ್ನ ತೋಳುನ ತೊರ್ಸಾಟನ ತೆಗ್ಗ್‌ಸಿನೆಂತ ಹೇಳುವ ನಿನ್ನ ಮಾತ್ ಮುಗಿಯಕೆ ಮುಂದೇ ನಿನ್ನ ಹಾಂಕಾರನ ಇಳ್ಸಿಕೆ ಬೊತ್ತಾಂತ ಎಂದಾರ್ ಹೇಳ್ತಿದ್ದೆನೋ? ಕರ್ಣನ ಮಾತ್ ಕೇಳಿ ಕೃಪಾಚಾರ್ಯೇರಿಗೂ. ದ್ರೋಣಾಚಾರ್ಯೇರಿಗೂ ಎಲ್ಲಿಲ್ಲದ ಕೋಪ ಬಾತ್. "ಕರ್ಣ ಹಿಂದೆ ಮುಂದೆ ನೋಡಿ ಮಾತಾಡ್ ಅರ್ಜುನ ರಾಜಕುಮಾರ, ಕ್ಷತ್ರಿಯ. ನೀ ಸೂತಪುತ್ರ ನಿನ್ನ ಕುಲಯಾದ್, ನಿನ್ನ ಅಪ್ಪ ಯಾರ್‌ಂತ ಹೇಳ್ ನೋಡೊನೊ ನಿನ್ನಂತ ಕುಲಹೀನನೊಟ್ಟಿಗೆ, ಉತ್ತಮ ಕುಲದ ಅರ್ಜುನ ಯುದ್ಧ ಮಾಡಿಕೆ ನಿಷೇಧ ಉಟ್ಟು"ಂತ ಕೋಪೇಲಿ ಹೇಳ್ತ್. ತನ್ನ ಕುಲದ ಬಗ್ಗೆ ಹೀನೈಸಿ ಮಾತಾಡುದರ ಕೇಳಿರೆ ಅವನ ಧೈರ್ಯ ಎಲ್ಲ ಇಳ್ದ್ ಹೋತಿತ್. ಹಾಂಗೆ ಅಂವ ಬೆಪ್ಪಾಗಿ ಇರುದರ ನೋಡಿ. ದುರ್ಯೋಧನಂಗೆ, ಕರ್ಣನ ದೂಷಿಸಿದ ಇಬ್ಬೊರು ಆಚಾರ್ಯರ ಮೇಲೆನೂ ತುಂಬ ಕೋಪಬಾತ್ "ಏನ್ ನೀವು ಕುಲ ಕುಲಂತ ಯಾಗೋಳು ಗೋಂಕುರು ಕಪ್ಪೆಗ ವಟಗುಟ್ಟದಾಂಗೆ ಹೇಳ್‌ಕೆಂಡೇ ಒಳೆರಿ ಒಬ್ಬಂಗೆ ಅವನ ಶೌರ್ಯ ಧೈರ್ಯನೇ ಕುಲ ಅಲ್ಲದೆ ಬೇರ ಕುಲ ಇಲ್ಲೆ. ಹಾಂಗೆ ನೋಡಿರ ನೀವು ಒಬ್ಬ ಹುಲ್ಲು ಮದೆಲಿ, ಮತ್ತೊಬ್ಬ ದ್ರೋಣೇಲಿ ಹುಟ್ಟಿದೆವು ಅವೆರ್ಡಕ ಕುಲ ಉಟ್ಟೋ? ಹೇಳಿ! ಕರ್ಣನ ಈಗೇಳೇ ಕುಲವಂತನಾಗಿ ಮಾಡಿ ತೋರ್ಸ್ನೆ ಮತ್ತೆ ಆದರೂ ನಿಮ್ಮ ಹೊಲ್ಸ್ ಬಾಯಿಲಿ ಕುಲದ ಮಾತ್ ನಿಲ್ಲೇಲಿ." ಹೀಂಗೆ ಹೇಳ್ದ ದುರ್ಯೋಧನ ಕೂಡ್ಲೆ ಪುರೋಹಿತರ ಕರ್ಸಿ ಕರ್ಣಂಗೆ ಪುಣ್ಯ ತೀರ್ಥಂಗಳ್‌ಂದ ಅಭಿಷೇಕ ಮಾಡ್ಸಿ ಅಂಗರಾಜ್ಯದ ಪಟ್ಟ ಕಟ್ಟಿತ್. ಮತ್ತೆ ಕರ್ಣನ ತೊಬ್ಬಿಕೆಂಡ್ ಹೇಳ್ತ್ "ಕರ್ಣ, ಯಜಮಾನ ಆಳ್,

ಸ್ವಾಮಿ, ಅಯ್ಯಾ, ಒಡೆಯಾ, ನೀವು ತಾವ್ಪುಂತೇಳ್ವ ನಡೆತೆಗ ಎಲ್ಲ ಬೇರೆವ್ವೆ ಇಲ್ಲೆ. ನಿನ್ನ ನನ್ನ ಮಧ್ಯೆ, ನೀ, ನಾಂತೇಳ್ವ ಮಾತೇಸಾಕ್, ನೀನೂ ನಾನೂ ಸ್ನೇಹಿತಳ್. ಗೊತ್ತಾತೋ"ಂತ ಹೇಳ್ತ್. ಕರ್ಣನ ಕಣ್ಣ್ಲಿ ಆನಂದದ ಕಣ್ಣೀರ್ ಬಳಬಳಂತ ಹರ್ತ್. "ಇಂದ್‌ಂದ ಮೇಲೆ ಈ ಸಣ್ತ್ರ ಮತ್ತೆ ನನ್ನ ಸರ್ವಸ್ವ ನಿನ್ನ ಸೇವೆಗಾಗಿಯೇ ಮೀಸಳಾಗಿರ್ದು ಮಿತ್ರ ಸೂರ್ಯದೇವ್ರ ಮೇಲೆ ಆಣೆ"ಂತ ಕರ್ಣ ಹೇಳ್ತ್. ದುರ್ಯೋಧನ ಗುರುಗಳ್ಲೂ ಹಿರಿಯವರ್ಲೂ ಧಿಕ್ಕರ್ಲಿ ಕರ್ಣಂಗೆ ಅಂಗರಾಜ್ಯದ ಪಟ್ಟಕಟ್ಟಿತ್. ನಿಜವಾಗಿ ಹೀಂಗೆ ಮಾಡಿಕೆ ಅವಂಗೆ ಅಧಿಕಾರ ಇಲ್ಲೆ. ಈಗ ರಾಜ ಆಗಿರಂವ ಧೃತರಾಷ್ಟ್ರ. ಇಂವ ಯುವರಾಜನ ಅಧಿಕಾರಳಲಿನೂ ಇತ್ತ್‌ಲೆ. ಹೀಂಗೆ ಅಧಿರಾಜನ ಅಪ್ಪಣೆ ಇಲ್ಲದೆ ಈ ರೀತಿ ಮಾಡ್ದು ರಾಜದ್ರೋಹ. ಆದರೆ ಧೃತರಾಷ್ಟ್ರಂಗೆ ಪುತ್ರಮೋಹ. ಹೀಂಗೆ ಅಂವನೂ ಏನೂ ಹೇಳ್ತ್‌ಲೆ. ಪಾಂಡವರ ವಿರೋಧವಾಗಿಯೇ ದುರ್ಯೋಧನ ಮಾಡ್ತ್‌ಂತ ಅವಂಗೆ ಗೊತ್ತಿತ್ತ್. ಇದರ ನೋಡಿ ನಾಗರಿಕರೆಲ್ಲ ಹೇಳ್ದೊ ಕೌರವ ಕೊತ್ತಿನಾಂಗೆ ಹಾಲ್‌ನ ಮಾತ್ರ ನೋಡ್ತ್. ಅದ್ ಕಣ್ಣ್ ಮುಚ್ಚಿಹಾಲ್ ಕುಡಿಯಕೆ ನೋಡಿರೆ ಬೆನ್ನಿಗೆ ಕೋಲುನ ಪೆಟ್ಟ್ ಬೀಳಿಕೆ ಉಟ್ಟುಂತ ಗ್ರಹಿಸಿತ್‌ಲೆ. ಹೀಂಗೆ ಮಾತಾಡುವ ಹೊತ್ತಿಗೆ ಕತ್ತಲೆ ಆಕಂಡ್ ಬಾತ್ ಎಲ್ಲೊವ್ರು ಅವರವರ ಮನೆಗಳಿಗೆ ಹೋಗಿ ಸೇರ್ದೊ.

ಮಕ್ಕಳ ವಿದ್ಯಾಪರೀಕ್ಷೆ ಮುಗ್‌ದ ಮೇಲೆ, ದುರ್ಯೋಧನಂಗೆ ಪಾಂಡವರ ಮೇಲೆ ಇದ್ದ ಮತ್ಸರ, ಹಗೆತನ ಎಲ್ಲ ಮುಂದೆ ಒಳಗೊಳಗೆ ಹೊಗೆಯುತಿದ್ದಳದ್ ಈಗ ಹೊರಗೆ ಪ್ರತ್ಯಕ್ಷ ಆಗಿ ಭುಗಿಲಿಕೆ ಸುರಾತ್. ಇದರೆಡೆಲಿ, ಭೀಷ್ಮ ದ್ರೋಣ ಮತ್ತೆ ವಿದುರಂತೇಳ್ವ ಎಲ್ಲ ಹಿರಿಯಳವ್ರು, ಹಿಂದೆ ಪಾಂಡು ಹಸ್ತಿನಾವತಿಗೆ ರಾಜ ಆಗಿದ್ದದರ್‌ಂದ, ಪರಿಸ್ಥಿತಿನ ಒತ್ತಡಂದ, ಕುರುಡನಾದರೂ ಈಗ ಧೃತರಾಷ್ಟ್ರನೇ ರಾಜಾಂತಾಗಿದ್ದರೂ, ನ್ಯಾಯವಾಗಿ ಪಾಂಡುಪುತ್ರರ್ಲಿ ಹಿರಿಯಂವಾದ ಯುಧಿಷ್ಠಿರಂಗೇ ರಾಜ್ಯಾಧಿಕಾರ ಸೇರಕಾದ್ದ್. ಹಾಂಗಾಗಿ ಯುಧಿಷ್ಠರಂಗೆ ಈಗ ಯುವರಾಜ ಪಟ್ಟ ಕಟ್ಟುನೋಂತ ಧೃತರಾಷ್ಟ್ರನೊಟ್ಟಿಗೆ ಮಾತಾಡ್ದೊ. ಅಂವಂಗ ಮನ್ಸ್‌ನ ಒಳಗೆ ಬಂದುತರ ಆದರೂ, ಅದರ ಎದ್‌ರಿಗೆ ತೋರ್ಲಿಕಣದೆ, ನೀವ್ಗ ಹಿರಿಯಳರಿಗೆ ಯಾದ್ ಸಳರಿ ಕಂಡದನೊ ಹಾಂಗೆ ಮಾಡಿ. ನನ್ನಂದೇನೂ ಅಡ್ಡಿ ಇಲ್ಲೆಂತ ಹೇಳ್ತ್.

ಯುವರಾಜ ಪಟ್ಟಾಭಿಷೇಕಕ್ಕೆ ಎಲ್ಲ ತಯಾರ್ ಮಾಡಿಕಂಡ್ ಇರ್‌ಕನ, ಯುಧಿಷ್ಠಿರಂಗೆ ಯುವರಾಜ ಪಟ್ಟಾಭಿಷೇಕ ಮಾಡುದುಂತೇಳುದರ ಕೇಳಿ ದುರ್ಯೋಧನಂಗೆ, ಭೂಮಿ ಆಕಾಶ ಒಂದಾಗುವಷ್ಟು ಕೋಪ ಬಾತ್. "ಯುಧಿಷ್ಠಿರಾದಿಯಾಗಿರುವ ಆ ಐದ್ ಜೆನಕ್ಕೂ ಈ ಕುರು ಸಾಮ್ರಾಜ್ಯಳಲಿ ಹಕ್ಕಿಲ್ಲೆ. ಅವ್ರು ಪಾಂಡುನ ಮಕ್ಕ ಅಲ್ಲ. ಹಾಂಗೆ ಅವರ ಪಾಂಡವಳರ್‌ಂತ ಹೇಳ್ದೊ ತೊಪ್ಪು. ಋಷಿ ಶಾಪಂದಾಗಿ ಚಿಕಪಂಗೆ, ತನ್ನ ಹೆಣ್ಣಕ್ಕಳ ಸಂಸರ್ಗ ಆಕೆ ಸಾಧ್ಯ ಇಲ್ಲೇಂತಿರ್ಕನ, ಅವೆಲ್ಲ ಬೇರೆ ಬೇರೆವ್ವೆ ಹುಟ್ಟಿದ ಮಕ್ಕ. ಇನ್ನೂ ಹೀನಾಯವಾಗಿ ಹೇಳೊಕುಂತಾದರೆ, ಹಾದರಕೆ ಹುಟ್ಟಿದಳವ್ರು. ಅವ್ರು ಪಾಂಡುವಳರ್ ಆಕೆ ಸಾಧ್ಯನೇ ಇಲ್ಲೆ. ಬೇಕರೆ ಮೂರು ಜೆನರ ಕೌಂತೇಯಳರ್‌ಂತೇಳಿಯೂ, ಮತ್ತಿಬ್ಬರ ಮಾದ್ರೇಯಳರ್‌ಂತೇಳಿಯೂ ಗುರ್ತಿಸಿಕೆ ಹೇಳಳಕ್ ಹೊರ್ತು ಬಿಟ್ಟಾರೆ ಪಾಂಡವಳರ್‌ಂತ

ಕರಿಯಕೆ ಬೊತ್ತ್. ಅವು ನಮ್ಮ ಕುಟುಂಬಕ್ಕೆ ಸೇರ್ದವೇ ಅಲ್ಲ. ಹೀಂಗಿರ್‌ಕನ ಯುಧಿಷ್ಠಿರಂಗೆ ಯುವರಾಜ ಪಟ್ಟ ನ್ಯಾಯ ಅಲ್ಲ"ಂತ ದುರ್ಯೋಧನ ಬಲವಾಗಿ ವಾದ ಮಾಡ್ತ್. ಕೋರ್ಟ್‌ಲಿ ವಾದ ಮಾಡುವ ವಕೀಲರ್‌ಗ ತಮ್ಮ ವಾಕ್ಚಾತುರ್ಯಂದ, ಎದ್‌ರ್ ವಾದಿ ವಕೀಲರ ಬಾಯಿ ಮುಚ್ಚಿಸುವಾಂಗೆ ಮಾಡ್ದ ಹೆಮ್ಮೆಂದ ಎದೆ ಉಬ್ಬುಸಿಕಂಡ್ ನಿತ್ತತ್.

ಭೀಷ್ಮಂಗೆ ಇದರ ಕೇಳಿ ಸಿಟ್ಟ್ ಬಾತ್. "ದುರ್ಯೋಧನ ತಲೆಂದ ಕಡ್ಡ ಮಾತಾಡ್ತೇದ. ಹಿಂದೆ ಇದ್ದ ಧರ್ಮ ಶಾಸ್ತ್ರ ಪದ್ಧತಿಗಳ ತಿಳಿಯದೆ ತಲೆ ಹರ್ಟೆ ಮಾತಾಡುದು ಸರಿ ಅಲ್ಲ. ಆ ಧರ್ಮ ಶಾಸ್ತ್ರಗಳ ಆರ್ಯಾವರ್ತಲಿ ಒಪ್ಪಿಕಂಡ ಪ್ರಕಾರ ಯುಧಿಷ್ಠಿರಾದಿ ಐದ್ ಜನ ಮಕ್ಕಳೂ ಪಾಂಡುನ ಮಕ್ಕಳೇ ಆದವೆ. ಇಂಥ ಪರಿಶುದ್ಧ ಜೀವಂಗಳ ನೀ ಹಾದರಕೆ ಹುಟ್ಟಿದೊವುಂತ ಹೇಳುದು ಮಹಾ ಪಾಪ ಕಾರ್ಯ. ನಿನ್ನ ನೋಟಲಂದಳೇ ನೋಡಿ ನಾನೂ ಕೇಳಿನೆ ನಿನ್ನ ಅಪ್ಪ ಹೇಂಗೆ ಹುಟ್ಟಿದ್‌ಂತ ನಿಂಗೆ ಗೊತ್ತುಟೋ? ನೀ ಎಲ್ಲಿ ಹೇಂಗೆ ಹುಟ್ಟಿದೋಂತ ಗೊತ್ತುಟೋ? ಈ ಕುರು ಸಾಮ್ರಾಜ್ಯಕೆ, ಇರುವ ನಿಜವಾದ ಏಕೈಕ ಅಧಿಪತಿಂತೇಳಿರ ನಾನೇ, ನಾ ಬುಟ್ಟ್ ಕೊಟ್ಟದರ್‌ಂದ, ಇದೆಲ್ಲ ನೀವ್ಗೆ ಉಟ್ಟು. ಬೇಕುಂತೇಳಿರೆ ಎಲ್ಲದನ್ನೂ ನನ್ನ ಕೈಗೆ ತಕಂಬ ಅಧಿಕಾರ ನಂಗೆ ಉಟ್ಟು. ನಾ ನಂಗೆ ನ್ಯಾಯಂತ ಕಂಡಾಂಗೆ ಮಾಡಿ, ಯುಧಿಷ್ಠಿರಂಗೆ ಯುವರಾಜ ಪಟ್ಟ ಕಟ್ಟಿಯೇ ತೀರುವೆ. ಅದಿಕೆ ಯಾವ ಅಣ್ಣ ಅಡ್ಡಿ ಬಂದದೇಂತ ನೋಡಿಕಣೆ. ಇಡೀ ರಾಜ ಪದವಿನೇ ಯಾರಿಗೆ ಬೇಕರೂ ಕೊಡುವ ಅಧಿಕಾರ ನಂಗೆ ಉಟ್ಟು." ಹೀಂಗೆ ಭೀಷ್ಮ ಕೋಪಲಿ ಕಿಡಿ ಕಿಡಿಯಾಗಿ ಹೇಳ್‌ಕನ ದುರ್ಯೋಧನನ ಗರ್ವ ಎಲ್ಲಿ ಇಳ್ದ್ ಹೋತ್. "ತೊಪ್ಪಾತ್ ಅಜ್ಜ ನನ್ನ ಕ್ಷಮ್ಸಿ. ನೀವು ಹೇಳ್ದಾಂಗೆ ಕೇಳ್ವೆ"ಂತ ಹೇಳಿಕಂಡ್ ಅವರ ಕಾಲಿಗೆ ಬೀತ್. ಮತ್ತೆ ಯುವರಾಜ ಪಟ್ಟಾಭಿಷೇಕ ಕ್ರಮವಾಗಿ ನಡ್ತ್.

ದುರ್ಯೋಧನ ಭೀಷ್ಮನ ಕೋಪನ ನೋಡಿ ಹೆದ್‌ರಿಕಂಡ್ ಹಾಂಗೆ ಹೇಳಿರೂ ಮತ್ತೆ ಯಥಾ ಪ್ರಕಾರ ನಾಯಿ ಬಾಲ ಡೊಂಕುಂತೇಳ್ವ ಸ್ಥಿತಿಗೇ ಬಾತ್. ಬೇರೆವರೊಟ್ಟಿಗೆ ಮಾತ್ ನಡಿಯಕಿಲೆ. ಅದರೆ ಅಪ್ಪ ಧೃತರಾಷ್ಟ್ರಂದ್ ಕುರುಡು ಪ್ರೇಮ. ಅಮ್ಮ ಗಾಂಧಾರಿ ಒಮ್ಮೊಮ್ಮೆ ಟೀಕೆ ಮಾಡಿರೂ, ಅದಿಕೆನೂ ನನ್ನ ಮಜ್ಞಂತೇಳುವ ಮೋಹ ಏನೂ ಕಮ್ಮಿ ಇತ್ಲೆ. ಇದ್ ಗೊತ್ತಿದ್ದ ಅಂವ, ಅವರಿಬ್ಬರ ಯಾಗೋಳು ಓಲೈಕೆ ಮಾಡಿಕೆ ಸುರು ಮಾಡ್ತ್. ಉಪಾಯ ಕಾಣದೆ ಅವನ ಮಾತಿಗೆ ಸರಿಂತ ಹೇಳುವಾಂಗೆ ಮಾಡ್‌ತಿತ್.

"ನೀವಪ್ಪ, ಹಾವುಗೆ ಹಾಲ್ ಹೊಯ್ದಾಂಗೆ ಮಾಡಿ ನಮ್ಮ ದಾಯಾದಿಗಳ ಜೆಕ್ಕರೆ ನಾವ್ಗೇನೂ ಹಕ್ಕಿಲ್ಲೆನೋ? ಪಾಂಡವರ ರಾಜ್ಯ ಭಾರ ಮಾಡಿಕಂಡ್ ಇರುವಂತಾದರೆ ನಾವೇನ್ ಚಿಪ್ಪಿ ಕೋಲು ಹಿಡ್ಕಂಡ್ ಬೇಡಿಕಂಡ್ ಹೋಕೋ? ದೇವ್ರೇನೋ ನಿಮ್ಮ ಕುರುಡನಾಗಿ ಹುಟ್ಟ್‌ಸಿತ್. ಅದರೆ ಬುದ್ಧಿಂತೇಳುವ ಒಳಗಣ್ಣ್ ಕೂಡ ಕುರುಡಾಗುಟೋ? ಹಕ್ಕಿಗಳೂ, ಮೃಗಂಗಳಾದರೂ, ತಮ್ಮ ತಮ್ಮ ಮರಿಗಳಿಗೆ, ಪಿಳ್ಳೆಗಳಿಗೆ ಪ್ರೀತಿ ತೋರ್ಸುವೆ. ಕುರುಕುಲ ಸಾಮ್ರಾಟನ ಮಕ್ಕ ಆಗಿದ್ದರೂ ನಾವ್ಗೆ ಮಾತ್ರ ಯಾದಿಕೂ ಗತಿ ಇತ್ಲೆ. ಇದ್ ನಮ್ಮ ಹಣೆಬರ." ಹೀಂಗೆ ಹೇಳಿ ದುರ್ಯೋಧನ ಉದ್ದುಸುರು ಬುಟ್ಟತ್.

ಕೋಪಂದ ಹೇಳುವ ಮಾತ್‌ಂದಲೂ. ಮೆತ್ತಂಗೆ ಮಾತಾಡುವ ಮಾತ್ ತುಂಬ ಪರಿಣಾಮ ಬೀರಿದೆ. ಹಾಂಗೆ ಮಾತ್ ಗೊತ್ತಿದ್ದೆವು ಯಾಗೊಳೂ ಮೆಲ್ಲಂಗೆ ಮೆದುಮಾತ್‌ಲೇ ಹೇಳೊಕಾದ್ದರ ಎಲ್ಲ ಹೇಳುವೊ.

ದುರ್ಯೋಧನನ ಮಾತ್, ಧೃತರಾಷ್ಟ್ರನ ಅಂತರಂಗನ ತಟ್ಟಿತ್. ಅವನ ಕುರುಡು ಕಣ್ಣ್‌ಂದೊಳೂ ನೀರ್ ಹರಿಯಕೆ ಸುರಾತ್. ಅಂವನೂ ನಡ್‌ಗುವ ದನಿಂದ ಮಾತಿಗೆ ಸುರು ಮಾಡ್ತ್.

"ನೀ ಹೇಳ್ದ್ ನಿಜ ಮಜ್ಜ. ನಾನೂ ನಿನ್ನ ಹಾಂಗೇ ಆಲೋಚಿಸ್‌ಕೆಂಡ್ ಇದ್ದೆ. ಏನ್ ಮಾಡ್ದು ಹೇಳ್. ಭೀಷ್ಮ, ದ್ರೋಣ ಮತ್ತೆ ವಿದುರಂತೇಳೊವು ಒಳೊಲ. ಅವರ ನಂಗೆ ಮೀರಿಕೆ ಆದ್‌ಲೆ. ಹಾಂಗಾಗಿ ನಾ ನೆನ್ನಿದರ ಮಾಡಿಕೆ ಆದುಲೆ".

ಅದಿಕೆ ದುರ್ಯೋಧನ ಹೇಳ್ತ್. "ಅದ್ಕೆ ನೀವೇಕೆ ಯೋಚನೆ ಮಾಡಿರೆ ಅಪ್ಪಾ. ನೀವು ಈಗ ಕುರುಕುಲ ಸಾಮ್ರಾಟ. ಅವು ಎಷ್ಟಾದರೂ ರಾಜ ಸೇವಕೆರ್. ಸಿಂಹಾಸನಾಧೀಶನ ಅಪ್ಪಣೆನ ಪಾಲ್‌ಸಕಾದ್ದ್ ಅವರ ಧರ್ಮ. ನೀವು ಅವರ ಕೈಗೊಂಬೆಯಾಗಿರದೆ, ನಿಮ್ಮ ಅಧಿಕಾರನ ಹಂಗಿಲ್ಲದೆ ನಡ್ಸೊಕು. ಹಾಂಗೆ ಮಾಡಿರ ಮಾತ್ರ ಅವೂ ನೀವ್ಗೆ ಗೌರವ ಕೊಡುವೊ" ಹೀಂಗೆ ದುರ್ಯೋಧನ ಇನ್ನೊಂದು ದಾಜಿನ ವಾಟ್‌ಸಿತ್. ಮತ್ತೆ ಮಾತ್‌ನ ಮುಂದುವರ್ಸಿತ್. ಈ ಪಾಂಡವರ ಹೇಂಗಾರ್ ಮಾಡಿ ಹಸ್ತಿನಾವತಿಂದ ದೂರ ಮಾಡೊಕು. ಅವು ಇಲ್ಲಿ ನಮ್ಮೊಟ್ಟಿಗೆ ರಾಜಭೋಗ ಅನುಭವಿಸಿಕೆಂಡ್ ಇರುದು ನಂಗೆ ಸೇರುದುಲೆ. ಕಾಡ್‌ಲಿ ಹುಟ್ಟಿದ ಅವು ಕಾಡ್‌ಲೇ ಬೆಳಿಯಲಿ. ಏನಾರ್ ನೆವನ ಹೇಳಿ ಅವರ ಇಲ್ಲಿಂದ ಹೊರೆಗೆ ಹಾಕಿ."

ಹೀಂಗೆ ಎಷ್ಟೋ ಹೇಳಿ, "ವಾರಣಾವತಲಿ ಈಗ ಪಶುಪತಿ ಉತ್ಸವಂತೇಳ್ದು ಹಜ್ಜ ದಿನ ಮುಟ್ಟ ನಡ್ದದೆ ಗಡ. ಅದರ ನೋಡಿಕೆ ಹೋಗಿ ಹಜ್ಜ ದಿನ ಅಲ್ಲಿ ಕುಸೀಲಿ ಇದ್ದ್ ಬನ್ನಿಂತ ಹೇಳಿ ಕಳ್ಸಿ. ನೀವು ಹೇಳುದರ ಯುಧಿಷ್ಠಿರ ಎಂದೂ ಮೀರಿಕಲೆ" ಹೀಂಗೆ ದುರ್ಯೋಧನ ಒಳಗುಟ್ಟು ಬುಡದೆ ಧೃತರಾಷ್ಟ್ರನ ಒಪ್ಪ್‌ಸಿತ್. ಒಂದೆರ್ಡ್ ದಿನ ಕಳ್ದ್, ಧೃತರಾಷ್ಟ್ರ ಯುಧಿಷ್ಠಿರಂಗ ಹೇಳಿ ಕಳ್ಸಿ ಬರ್ಸಿತ್ ಅವನೊಟ್ಟಿಗೆ ಧೃತರಾಷ್ಟ್ರ, ನೀವು ಐವ್ರ ಮಕ್ಕ ವಾರಣಾವತಲಿ ಪಶುಪತಿ ಉತ್ಸವ ನಡ್ದದೆ ಗಡ, ಅದರ ನೋಡಿಕೆ ಹೋಗಿ ಹಜ್ಜ ದಿನ ಅಲ್ಲಿ ಕುಸೀಂದ ಇದ್ದ್ ಬನ್ನಿ. ಇಲ್ಲಿ ಆ ನನ್ನ ಕೆಟ್ಟ ಮಜ್ಜ ಏನಾರ್ ಒಂದು ತಕರಾರ್ ತೆಗ್ದ್, ನಿಮ್ಮ ನೆಮ್ಮದಿಗೆ ಬಂಗ ತಂದದೆ. ಹಾಂಗೆ ಅಲ್ಲಿಗೆ ಹೋಗಿ ನೆಮ್ಮದಿಲಿ ಹಜ್ಜ ದಿನ ಕಳ್ದ್ ಮತ್ತೆ ಬನ್ನಿ".

ಧೃತರಾಷ್ಟ್ರ ಪ್ರೀತಿ ಸೂಸುವ ಮಾತ್‌ಲಿ ಹೇಳ್ತ್. ಯುಧಿಷ್ಠಿರ ಆಗ "ಸಲಿ ದೊಡಪ. ನೀವು ಹೇಳ್ದಾಂಗೇ ಆಗಲಿ. ಆದರೆ ನೀವ್ಯಾರೂ ನಮ್ಮೊಟ್ಟಿಗೆ ಬಾದುಲೆನೋ"ಂತ ಕೇಳ್ತ್. ನಾನೂ ನಿನ್ನ ದೊಡಪನೂ ಕುರುಡೆರ್. ನಾವು ಬಂದೇನ್ ಮಾಡುದು ? ಮತ್ತೆ ಒಳ್ಳೆ ಉರಿಕೊಳ್ಳಿಗ ನಿಮ್ಮೊಟ್ಟಿಗೆ ಬಂದರೆ ಕೇಳುದೇ ಬೇಡ. ಹಾಂಗೆ ಯಾವ ರಗಳೆನೂ ಇಲ್ಲದೆ ನೀವೇ ಹೋಗಿ ಇದ್ದ್ ಬಂದ್, ಮತ್ತೆ ಅಲ್ಲಿ ನಡ್ದ ಸಂಗತಿಗಳ ಎಲ್ಲ ನಾವ್ಗೆ ಹೇಳಿರೆ

ಕೇಳಿಕೆ ಸಂತೋಸು ಅದು.

"ಸಇರಿ ಹಾಂಗಾರೆ ನಾಳೆನೇ ಹೊರ್ಡುವೆ ದೊಡಪ" "ಆಗಇಲಿ ಮಜ್ಜ. ಹೋಗಿ ಬನ್ನಿ. ಅಲ್ಲಿ ನಿಮ್ಮ ವಸತಿ ಏರ್ಪಾಡಿಗೆ ಇಲ್ಲಿಂದ ಒಬ್ಬ ದೂತ ಮುಂದೇ ಹೋಗಿರೋಕು"

ಯುಧಿಷ್ಠಿರ ಬಂದವನೇ ಅವ್ವ ಕುಂತಿಗೂ ತಮ್ಮಂದಇರಿಗೂ ಈ ಸುದ್ದಿನ ಹೇಳ್ತ್. ಮತ್ತೆ ಭೀಷ್ಮಂಗೆ, ವಿದುರಂಗೆ, ದ್ರೋಣಇರಿಗೂ ಈ ಸುದ್ದಿನ ತಿಳ್ಸಿತ್. ಪಾಂಡಇವರ್ ಹಸ್ತಿನಾವತಿನ ಬುಟ್ಟ್ ಹೋದವಂತ ಕೇಳಿ ಅವ್ಕೆಲ್ಲ ಬೇಜಾರ ಆತ್. ಕಇಣ್ಣ್ ತುಂಬಿ ಬಾತ್. ಗಂಟ್‌ಲ್ ಕಇಟ್ಟಿತ್.

ಪಾಂಡವಇರ್ ವಾರಣಾವತಕೆ ಹೊರ್ಡುವೆ ಗಡಂತ ಕೇಳಿ ದುರ್ಯೋಧನಂಗೆ ತುಂಬ ಸಂತೋಸು ಆತ್. ಅಂವ ಅದಿಕೆ ಮುಂದೆನೇ ಪುರೋಚನಂತೇಳ್ವ ಅವನ ಗುಟ್ಟು ಕಾಯುವ ದೂತಂಗೆ ಬೇಕಾದ್ದರ ಕೊಟ್ಟ್ ಗುಟ್ಟುಲಿ ಕಇಳ್ಸಿ ಕೊಟ್ಟಇತ್. ಏನೇನ್ ಮಾಡೊಕುಂತೇಳ್ವ ಸಂಗತಿನ ಎಲ್ಲ ವಿವರವಾಗಿ ಹೇಳ್ತ್. ಅಂವಂಗೆ ಒಪ್ಸಿಸಿದ ಕೆಲ್ಸನ ಅಂವ ಪೂರ್ಲೂಲಿ ಮುಗ್ಸಿ ಬಂದರೆ ಅಂವಂಗೆ ಭಾರೀ ಸನ್ಮಾನ ಕಾದುಟ್ಟುಂತೇಳ್ತ್. ಪುರೋಚನ ಒಂದು ತೇರ್ನ ಹತ್ತಿ ಎಲ್ಲಿಯೂ ನಿಲ್ಲದೆ ವಾರಣಾವತಕ್ಕೆ ಸೇರುವಾಂಗೆ ಏರ್ಪಾಟ್ ಮಾಡ್ತ್.

ಮೊರ್ದಿನ ಪಾಂಡವಇರ್ ಕುಂತೀ ಸಮೇತ ಹೊರ್ಟ್ರೊ. ಭೀಷ್ಮ, ವಿದುರ ಮತ್ತೆ ದ್ರೋಣಇರ್ ಅವರ ದಾರಿ ಕಇಳ್ಸಕೆಂತ ಹಜ್ಜ ದೂರ ನಡ್ಕಇಂಡ್ ಬಂದೊ. ಅವರ ಕಇಣ್ಣ್‌ಗಳ್‌ಂದ ಬಳ ಬಳಂತ ಕಇಣ್ಣೀರ್ ಹರಿಯುತ್ತಿತ್ತ್. ವಿದುರ ಯುಧಿಷ್ಠಿರನ ಅವನ ಹಕ್ಕಲೆ ಕರ್ದ್ ಬೇರೆವ್ಕೆ ಗೊತ್ತಾಗದಂತ 'ಕಾಗೆ ಭಾಷೆ'ಲಿ, ಕಿಚ್ಚಿಂದೊಳು, ನೀರ್‌ಂದೊಳು ಎಚ್ಚಇರಿಕೆಲಿ ಇರೋಕುಂತ ಹೇಳ್ತ್. ಗೊತ್ತಾತ್‌ಂತ ಅದೇ ಬಾಸೆಲಿ ಯುಧಿಷ್ಠಿರನೂ ಉತ್ತರ ಕೊಟ್ಟಇತ್.

**ಮಕ್ಕ:**

ತಾತ! ಅರೆಬಾಸೆ, ಕನ್ನಡ, ತುಳು, ಕೊಡ್ಗ್ ಬಾಸೆಗಂತೇಳುವುದರ ಕೇಳ್ಯೊಳೊ. ಈಗ 'ಕಾಗೆ ಬಾಸೆ'ಂತ ಒಂದು ಹೊಸ ಬಾಸೆನ ಹೇಳಿರೆಲೆ. ಅದ್ ಎಲ್ಲಿ ಪ್ರಚಾರಇಲಿ ಉಟ್ಟು?

**ತಾತ:**

ನೀವ್ಗೆ ಅದ್ ಗೊತ್ತ್‌ಲೆನೊ? ಎಂತ ಹೆಡ್ಡ ಮಕ್ಕ ನೀವು! ಸಣ್ಣಿತರ್ಲಿ ಸಾಲೆ ಮಕ್ಕ ಆಟಕ್ಕೆ ಒಂದು ಶಬ್ದದ ಅಕ್ಷರಗಳ ಹಿಂದೆ ಮುಂದೆ ಮಾಡಿ, ಅಲ್ಲದಿದ್ದರೆ ಎರ್ಡ್ ಅಕ್ಷರಗಳ ನೊಡುಲಿ ಇನ್ನೊಂದು ಅಕ್ಷರನ ಸೇರಿಕ್ಕಇಂಡ್ ಸುರುಗೆ ಆಟಕ್ಕಾಗಿ ಉದಾ: 'ಕತ್ತೆ ಸೂಳೆಮಗ' 'ತೆಕ್ಕಗಮಳೆಸೂ' (ಅಕ್ಷರಗಳ ಹಿಂದೆ ಮುಂದೆ ಮಾಡುದು) ಕಮಲ ಕಕಮಕಲ (ನೊಡುಲಿ 'ಕ' ಅಕ್ಷರ ಸೇರ್ಸಿ) ಹೀಂಗೆ ಅಭ್ಯಾಸ ಮಾಡಿ ಜೋರುಲಿ ಮಾತಾಡಿರೆ, ಮಾತಾಡುವ ಆ ಇಬ್ರೋರಿಗಲ್ಲದೆ ಬೇರೆವ್ಕೆ ಗೊತ್ತೇ ಆಕಿಲೆ. ಈ ಕ್ರಮನ ಯುದ್ಧ ಸಮಿಯಇಲಿ ಶತ್ರುಗಇಳಿಗೆ ಗೊತ್ತಾಗದ ಹಾಂಗೆ ಸಂದೇಶ ಕಇಳ್ಸಿಕೂ ಉಪಯೋಗ ಮಾಡುವೆ.

ವಿದುರನ ಗುಪ್ತಚರ್ಯೆ ಭಾರಿ ವಿಶೇಷವಾದ್ದ್. ದುರ್ಯೋಧನ ಏನೇನ್ ಹುನ್ನಾರ

ಮಾಡ್ಲೋಂತ ಅಂವಂಗೆ ಗೊತ್ತಾತಿತ್ತ್. ಅದರೆ ಅವನ ಸಂಗತಿ ಪೇರೆವ್ಕೆ ಗೊತ್ತಾತಿತ್ತ್‌ಲೆ. ಹಾಂಗೆ ಅಂವ ಪಾಂಡವಳೆಂಗೆ ಮುನ್ಸೂಚನೆ ಕೊಟ್ಟೀತ್.

ದುರ್ಯೋಧನ ಪಾಂಡವಳೆರ್ ಹೊರ್ಡ್ತಿಕೆ ಮುಂದೇನೆ ಅವನ ದೂತ ಪುರೋಚನನ ಕಳ್ಸಿ ಕೊಟ್ಟವರ ಮುಂದೆನೇ ಹೇಳ್ಕೊಳ್. ಅವನ ಕೆಲ್ಸ ಪೂರೈಸಿಕೆ ಹಜ್ಜಾ ಸಮಯ ಬೇಕಾದ್ದೆಂತ ಅಂವನ ಮುಂದೇ ಕಳ್ಸಿಕೆ ಕಾರ್ಣ. ಹೊರ್ಟ ಮೇಲೆ ಪಾಂಡಳೆವರ್ ಆ ವಾರಣಾವತಕ್ಕೆ ಸೀದಾ ಬಂದ್ ತಲ್ಪಿ ಬುಟ್ಟರೆ ಅಂವನ ಕೆಲ್ಸ ಪೂರ್ತಿ ಆಕಿಲೆ. ಹಾಂಗೆ ನೊಡು ನೊಡುಲಿ ಅವು ನಿತ್ತ್ ವಿಶ್ರಾಂತಿ ತಕಂಬಕೆ ವಿನೋದಳೆಲಿ ಇರಿಕೆಂತ ಅಲ್ಲಲ್ಲಿ ತಂಗುದಾಣಗಳ ಏರ್ಪಾಡ್ ಮಾಡ್ತ್. ಅಂತಿಂತು ಪಾಂಡವಳೆರ್ ಅಲ್ಲಿಗೆ ಬಂದ್ ಸೇರಿಕೆ ಮುಂದೆ ಅರ್ಕ್, ಸೆಣಬು ಬೆಲ್ಲ ಸೇರ್ಸಿ ಕಟ್ಟಿದ ಭವ್ಯ ಅರಮನೆ ತಯಾರಾತ್. ಅದರ ಕಲಾಕುಸುರಿನ ನೋಡಿರೆ ಯಾರೂ ಮರುಳಾಕು. ಪಾಂಡವರ, ಕಳಸ, ಕನ್ನಿಟ, ತೋರಣ, ಪತಾಕೆಗಳೊಟ್ಟಿಗೆ ಸ್ವಾಗತ ಮಾಡುವ ಏರ್ಪಾಡ್ ಮಾಡ್ತ್. ಅವು ಹೊಸಮನೆಗೆ ಒಕ್ಕಲಾದೊ. ಮನೆ ಒಳಗ ಏನೋ ಒಂದು ವಿಶೇಷ ಪೊರಿಮಳ ಯುಧಿಷ್ಠಿರ ಎಲ್ಲದನ್ನೂ ಸೂಕ್ಷ್ಮಳೆಲಿ ನೋಡಿ ತಮ್ಮಂದಳೆರಿಗೂ ಅವ್ವಂಗೂ ಹೇಳ್ತ್. ಇದ್ ನಾವ್ಗ ಕಟ್ಟ್‌ಸಿದ ಅರಮನೆ ಅಲ್ಲ ನಮ್ಮ ಕೆಡ್ಸಿಕೆ ಹಾಕಿದ ಅಡ್ಡಿಲ್. ಒಂದು ಕಿಡಿ ಸೋಂಕಿರೆ ಸಾಕ್. ಭಗ್ಗನೆ ಹೊತ್ತಿ ನಮ್ಮ ಬೂದಿ ಮಾಡ್ತು. ಪುರೋಚನ ಭಾರಿ ವಿನಯ ತೋರ್ಸಿಕಳೆಂಡ್, ಸಮಯ ಕಾದ್‌ಕಳೆಂಡೇ ಉಟ್ಟು. ಬೇಟೆಗೆ ಹೋವ ನೆಪನಳೆಲಿ. ನಾವು ಹಗ್‌ಲಿಡೀ ಕಾಡ್‌ಲಿ ದಾರಿಗ ಪೇಂಗೆಲ್ಲ ಒಳೊಂತ ಶೊಧಿಸಿಕಳೆಂಡ್ ಇರೊನೊ. ಇಲ್ಲಿಂದ ತಪ್ಪಿಸಿಕಳೆಂಡ್ ಹೋಗದಿದ್ದರೆ ನಾವು ಒಳಿವಾಂಗಿಲ್ಲೇಂತೇಳ್ತ್. ಹಾಂಗೆ ಯಾಗೋಳು ಅವು ಬೇಟೆಗ ಹೋಕೆ ಸುರು ಮಾಡ್ತೊ. ಹೀಂಗಿರ್ಕನ ವಿದುರ ಕಳ್ಸಿದ ಆಳ್ ಒಬ್ಬ ಬಂದ್ ಯುಧಿಷ್ಠಿರನ ನೋಡಿ. ನಿಮ್ಮ ಅರಮನೆಂದ ಗಂಗಾನದಿನವರೆಗೆ ಸುರಂಗ ಕೊರ್ದ್ ಕೊಡಿಕೆ ನಂಗೆ ವಿದುರ ಅಪ್ಪಣೆ ಮಾಡಿಟುಂತ ಹೇಳ್ತ್. ನಾ ಇನ್ನ್ ಆ ಕೆಲ್ಸನ ಗುಟ್ಟುಲಿ ಸುರುಮಾಡಿ, ಕೆಲೆವು ದಿನಳೆಲಿ ಮುಗ್ಸಿಕೊಟ್ಟನೆ. ನೀವು ಅದರ ಮೂಲಕ ತಪ್ಪ್‌ಸಿಕಳೆಂಡ್ ಹೋಗಿ ಬೇರೆ ಎಲ್ಲ್ಯಾರ್ ಹೋದ್ರ್ಯೋಂತ ಹೇಳ್ತ್. ಮತ್ತೆ ಅಂವ ಗುಟ್ಟುಲಿ ಅವನ ಕೆಲ್ಸ ಸುರು ಮಾಡ್ತ್. ಹಜ್ಜಾ ದಿನಳೆಲಿ ಅದೂ ಮುಗ್ತ್. ಅರಮನೆನ ನೊಡು ಕೋಣೆಂದ ಗಂಗೆನ ದಡಕ್ಕೆ ಮುಟ್ಟುವ ಹಾಂಗೆ ದಾರಿ ಆತ್. ಮತ್ತೆ ವಿದುರ ಹೇಳ್ದ ಹಾಂಗೆ, ಒಬ್ಬ ಮುಗ್ಯನ ಕಿಚ್ಚ್, ಅಂವಂಗೆ ದುಡ್ಡು ಕೊಟ್ಟ್, "ಇಲ್ಲಿಗೆ ಒಂದು ಇರ್ಲ್ ಐದ್ ಜನ ಗಳೆಂಡ್ ಮಕ್ಕಳೊ ಅವರ ಅಯ್ಯನೂ ಬಾದ್ರೊ. ನೀ ಅವರ ದೋಣಿಲಿ ಆಚೆ ಕರೆಗೆ ದಾಟ್ಸೊಕು. ಗುರ್ತಿಗೆ ಅವು 'ನವಗ್ರಹೇಭ್ಯೋ ನಮಃ'ಂಥ ಹೇಳುವೊ. ನೀನೂ ಅವರ್ಕ್ಯೋ ಹೇಳಿರೆ ಅಷ್ಟೆ ನಂಬಿಕೆ ಬಾದು. ಮತ್ತೆ ಅವರ ದೋಣಿಗೆ ಹತ್ತ್‌ಸಿ ಆಚೆ ಕರೆಗೆ ಮುಟ್ಟ್‌ಸ್. ಇದ್ ಗುಟ್ಟುಲಿ ಆಕು. ಬೇರೇನೂ ಮಾತಾಡಿಕೆ ಆಗಳೆದ್. ಹೀಂಗೆ ಹೇಳಿ ಅವನ ಒಪ್ಪ್‌ಸಿತ್.

ಇದಾದ ಕೆಲೆವು ದಿನಳೆಲಿ ಅಮಾಸೆ ಬಾತ್. ಅಂದ್ ಕೆಲೆವು ಹಾಲ್ಗ ಊಟ ಕೊಡಿಕೆ ಉಟ್ಟುಂತೇಳ್. ಅರಮನೆಲಿ ಅವರ ಕೆಲ್ಸಕ್ಕಿದ್ದ ಪೊರಿಚಾನಂಗಳ ಎಲ್ಲ "ನಿಂದಿಂದ

ಒಂದು ದಿನ ಹೊರಗೆಲ್ಲಿ ಯಾರ್ ಛತ್ರಗಳ್ಲಿ ನಿತ್ತ್ ಕಣೋ"ಂತ ಹೇಳಿ ಹೊರಗೆ ಕಳ್ಸಿದ್ರೊ. ಹಿಂಬೊತಾಕನ ಒಂದು ಬೇಡತಿ ಅದರ ಐದ್ ಮಕ್ಕಳೊಟ್ಟಿಗೆ ಬಂದ್, 'ನಾವ್ಗೇನಾರ್ ಊಟ ಕೊಡಿ ಅಮ್ಮಾ'ಂತ ಬೇಡ್ತ್. ಕುಂತಿ ಅಂದ್ ಒಳ್ಳೆ ಅಡಿಗೆನೆಲ್ಲ ಅವ್ಕೆ ಹೊಟ್ಟೆತುಂಬ ಇಕ್ಕಿಕೊಟ್ಟಲೆತ್. ಮರುಭೂಮಿಗೆ ಮಳೆ ಬಂದಾಂಗೆ ಆತ್. ಗಂಟ್ಲಿಗೆ ಮುಟ್ಟುವಷ್ಟ್ ತಿಂದ್ 'ಡರ್ತ್ ಡರ್ತ್'ಂದ್ ತೇಗ್ ಬುಟ್ಟ್ ಕಲೆಂಡ್ ಎದ್ದ್ ಕೈ ತೊಳ್ಕ್ ಬಂದಲೆವ್ಕೆ, ಉಂಡ ಆಯಾಸಲೆಲಿ ನಿದ್ದೆ ತೂಗಿಕೆ ಸುರಾತ್. ಜಗ್‌ಲಿನ ಮೂಲೆಲಿ ಕುದ್ದೊವ್ರು ಅಲ್ಲಲ್ಲೆ ಮಲ್ಗಿ ಗೂರು ಬುಟ್ಟ್ಕಲೆಂಡ್ ನಿದ್ದೆ ಮಾಡ್ದ್ರೊ.

ಸುಮಾರ್ ನಲೆಡೀರ್ಲ್ ಆವ ಹೊತ್ತಿಗೆ ಭೀಮ ಮೆಲ್ಲಂಗೆ ಅರಮನೆ ಜಗ್‌ಲಿಲಿದ್ದ ಹೊರ ಕೋಣೆನ ಹಕ್ಕಲೆ ಬಂದ್ ನೋಡ್ತ್. ಆ ಕೋಣೆಲಿ ಯಾಗೋಳು ಪುರೋಚನ ಮಲ್ಗುದು. ಊಟದ ಮತ್ತ್ಲಿ ಅಂವಂಗೂ ಭಾರಿ ನಿದ್ದೆ. ಭೀಮ ಸೀದಾ ಒಳಗೆ ಹೋಗಿ ಅವ್ನ ಅಣ್ಣ ತಮ್ಮಂದರ ಎಲ್ಲ ಸುರಂಗಕ್ಕೆ ಇಳ್ಸಿ ನೀವ್ರು ಮುಂದೆ ನಡ್ಕಲೆಂಡ್ ಹೋಗ್ತಾ ಇರಿ. ನಾ ಬೇಗ ಬನ್ನ್ಂತೇಳಿ ಒಂದು ದೊಂದಿ ಹೊತ್ತ್ಸಿಕಲೆಂಡ್ ಹೊರಗೆ ಬಂದ್ ಪುರೋಚನ ಮಲ್ಗಿದ್ದ ಕೋಣೆನ ಬಾಗ್‌ಲಿಗೆ ಕಿಚ್ಚಿಕೊಟ್ಟಲೆತ್. ಭಗ್ಗನೆ ಕಿಚ್ಚ ಹಿಡ್ತ್ ಮತ್ತೆ ಭೀಮ ಒಳಗೆ ಓಡಿ ಸುರಂಗಲೆಲಿ ಇಳ್ದ್ ತನ್ನ್ವರ ಸೇರಿಕಲೆಂಡಲೆತ್. ಅದ್ ಮುಂದೇ ಅಮಾಸೆನ ಕಲೆರಿಕತ್ತ್ಲೆನ ದಿನ. ಸುರಂಗದೊಳಗೆ ಕಲೆರಿಕೂಟ ಕತ್ತ್ಲೆ. ಎಡ್ಗ್ರಂಡ್, ಮುಗ್ಗ್ರಿಕಲೆಂಡ್ ಅವ್ಕೆ ಮುಂದೆ ನಡಿಯಕೆ ನಿದಾನ ಆತ್. ಹಾಂಗೆ ಭೀಮ ಅವ್ವನ್ನೂ, ಅಣ್ಣನ್ನೂ ಹೆಗಲ್ ಮೇಲೆ ಕುದ್ದ್ರ್ಸಿಕಲೆಂಡ್ ಅರ್ಜುನ ಮತ್ತೆ ನಕುಲ ಸಹದೇವರ ಎರ್ಡ್ ಪಕ್ಕಂದೊಳೂ ತೆತ್ತಿ ಕುದ್ದ್ರ್ಸಿಕಲೆಂಡ್ ದಾಪುಗಾಲ್ ಹಾಕಿತ್. ಹಜ್ಜ್ ಹೊತ್ತ್ಲಿ ಗಂಗೆನ ಕರೆಗೆ ಬಂದ್ ಎತ್ತಿದ್ರೊ. ಅಲ್ಲಿ ದೋಣಿ ಬುಡಂವ ಕಾದ್‌ಕಲೆಂಡ್ ಇತ್ತ್, ಇವರ ನೋಡ್ದವನೇ 'ನವಗ್ರಹೇಭ್ಯೋ ನಮಃ'ಂತ ಹೇಳ್ತ್. ಇವ್ರೂ ಹಾಂಗೆ ಹೇಳ್ದ್ರೊ. ಹಾಂಗೆ ಪರಿಚಯ ಆಗಿ, ಇವ್ರು ದೋಣಿಲಿ ಕುದ್ದ್ರೊ. ಅಂವ ಚುಕ್ಕಾಣಿ ಒಟ್ಟಿಕೆ ಸುರುಮಾಡ್ತ್. ಹಜ್ಜ್ ಹೊತ್ತ್ಲಿ ಆಚೆ ಕರೆಗೆ ದೋಣಿ ಸೇರ್ತ್. ಇವ್ರು ಇಳ್ದ್ರೊ. ಬಾನಲೆಲಿ ನಕ್ಷತ್ರಂಗ ಮಿಣಿ ಮಿಣಿ ಮಿಣ್‌ಕ್ಕಿಕಲೆಂಡ್ ಇದ್ದದರ್‌ಂದ ಹಜ್ಜ್ ಬಾನ ಬೊಳ್ಪು ಹೊರ್ತು ಮತ್ತೇನೂ ಇಲ್ಲೆ. ಇವರ ಎದ್‌ರಿಗಿದ್ದಲೆದ್ ಕಗ್ಗಾಡ್. ಬಾನೆತ್ತರ ಬೆಳ್ದ ಮರಂಗಳ ಗುಂಪು ಇದ್ದಲೆಲ್ಲಿ ಅಡಿ ಬುಟ್ಟ ಕಾಡ್ ಆದ್ದರ್‌ಂದ ಅಲ್ಲಿ ನಡಿಯಕೆ ಹೆಜ್ಜೆಬಂಗ ಇಲ್ಲೆ. ಮತ್ತೆ ಕಲಲೆವ್ರು ಕಡೆ, ಕಾಡ್ ಗುಲಾಬಿ, ಮುಳ್ಕರೆ ಮುಳ್ಳು, ಚೂರಿ ಮುಳ್ಳು ದೈಗಳ್‌ಂದ ಕೂಡ್ದ ಜಿಗ್ಗ್ ಬಲ್ಲೆ. ಅಡಿಲಿ ಕಲೆಲ್ಲ್ ಮುಳ್ಳು ದರ್ಗ್ ತುಂಬಿದ ನೆಲ. ಹೀಂಗಿರುವ ಕಷ್ಟಂಗಳೆಲ್ಲ ಸೈಸಿಕಲೆಂಡ್ ಭೀಮ ತನ್ನ ಅಯ್ಯೆನ್ನೂ ಅಣ್ಣ ತಮ್ಮಂದಲೆರ್ನೂ ಹೊತ್ತ್ಕಲೆಂಡ್ ಹೇರಿಕಲೆಂಡ್, ಆ ಕಾಡ್ಲಿ ಮುಂದೆ ಮುಂದೆ ನಡ್ತ್. ಬೇರೆಷ್ಕೆಲ್ಲ ಗಾಢ ನಿದ್ರೆ, ಹಕ್ಕಲೆಂದ ಕೇಳಿಬಾಪ ಕಾಡಾನೆಗಳ ಘೀಂಕಾರ, ಹುಲಿಗಳ ಗರ್ಜನೆ, ಇಂವ ನಡಿವ ರಬಸನ ನೋಡಿ ಹೆದ್‌ರಿ ಓಡುವ ಕಾಟಿಗಳ ಹಿಂಡ್‌ಗಳ ದುಡು ದುಡು ಕಾಲ್ ಸದ್ದ್, ಕಾಟಿಗಳ ಕಾಲಿಗೆ ಸಿಕ್ಕಿ ದೂರಕೆ ಹಾರಿ ಬೇರೆ ಕಲೆಲ್ಲ್‌ಗಳ ಮೇಲೆ ಬೀಳ್‌ಕಲೆನ ಕೇಳುವ ದಡದಡ ಸದ್ದ್. ಇದ್ ಒಂದರ್ನೂ

ಗಣ್ಯ ಮಾಡದೆ ಭೀಮ ನಡ್ತ್. ಒಂದು ಕಡೆ ಹಜ್ಜ ಸಮತಟ್ಟಾದ ಜಾಗೆ. ಅಲ್ಲಿ ಒಂದು ದೊಡ್ಡ ಆಲದ ಮರ. ವಿಸ್ತಾರವಾಗಿ ಹಬ್ಬಿತ್ತ್. ಅದರ ಕೊಂಬೆಗಳ್‌ಂದ ಬೇರ್‌ಗ ತುಂಬ ಕಡೆ ಕಂಬಗಳ ಹಾಂಗೆ ನೆಲಕ್ಕಿಳ್ದಿತ್ತ್. ಅದರ ಅಡಿಲಿ ಒಂದು ಕಡೆ ಚೋಟುದ್ದದಷ್ಟಕ್ಕೆ ದಪ್ಪಂಗೆ ಹುಲ್ಲ್ ಬೆಳ್ದಿತ್ತ್. ಅಲ್ಲಿ ಭೀಮ ತಾನ್ ಹೊತ್ತ್ ತಂದವರೆಲ್ಲ ಮೆತ್ತಂಗೆ ಇಳ್ಸಿ ಸಲರಿಯಾಗಿ ಮಲ್ಗ್‌ಸಿತ್. ಅವೆಲ್ಲ ಆ ಹುಲ್ಲುನ ಮೇಲೆ, ಹಾಸಿಗೆನ ಮೇಲೆ ಮಲ್ಗಿದಷ್ಟೆ ಸುಖಲಿ ನಿದ್ದೆ ಮಾಡಿಕಟಂಡ್ ಇದ್ದೊ. ಭೀಮ ಅವ್ಕೆ ಕಾವಲಾಗಿ ಕುದ್ದಲತ್. ಅವಂಗೆ ತುಂಬ ಆಯಾಸ ಆಗಿತ್ತ್. ಬೆಗ್‌ರ್‌ದರದರಂತ ಇಳಿಯತ್ತಿತ್ತ್. ತಾನ್ ಹೊದ್ದ್‌ಕಟಂಡಿದ್ದ ವಸ್ತ್ರನ ತೆಗ್ದ್, ಅದರ್‌ಂದ ಗಾಳಿ ಬೀಸಿಕಂಡಲತ್. ಅಂವ ವಾಯುಪುತ್ರ ಅಲ್ಲೊ? ಹಾಂಗೆ ಹಜ್ಜ ಬೀಸ್‌ಕನೇ ತುಂಬ ಗಾಳಿ ಬಂದ್ ಅಂವನ ಬೇಗೆನ ಕಟಮ್ಮಿ ಮಾಡ್ತ್. ನೀರ್ ಕುಡಿಯೊಕುಂತ ಆತ್. ಆದರೆ ಈ ಕಾಡ್‌ಲಿ ಇವರೆಲ್ಲ ಬುಟ್ಟ್ ಹೋದು ಅಪಾಯ. ನೀರ್ ಬೇಕರೆ ಬಂದಷ್ಟೇ ದೂರ ಹಿಂದೆ ಗಂಗೆ ಇರುವಲಲ್ಲಿಗೆ ಹೋಕು. ಬೇಡಾಂತ ಆದರ ತಡ್ಕಂಡಲತ್. ಅಂವಂಗೆ ತುಂಬ ಆಯಾಸ ಅದ್ದರ್‌ಂದ ಕುದ್ದ್‌ಕಟಂಡ್ ಇದ್ದ ಹಾಂಗೆ ನಿದ್ದೆ ತೂಗಿಕೆ ಸುರಾತ್. ಎಷ್ಟ್ ತಡ್ಕಂಡರೂ ನಿದ್ದೆ ಬಂದ್ ತಲೆ ದಡ್ಕಂತ ಒಂದು ಕಡೆಗೆ ವಾಲುದು. ಅಂವ ಕೂಡ್ಲೆ ತಲೆ ಕೊಡ್ಕಿ ನೆಟ್ಟಂಗೆ ಕುದ್ದುರುದು. ಇದ್ ಹೀಂಗೇ ಪುನಾರಾವರ್ತನೆ ಆತ್ತಿತ್ತ್. ಆಗ ಇತ್ತನ ಗೂಡವೆ ಇಲ್ಲದೆ ನೆಲದ ಮೇಲೆ ಅನಾಥರ ಹಾಂಗೆ ಮಲ್ಗಿದ ಅವ್ವನ, ಅಣ್ಣನ ಮತ್ತೆ ತಮ್ಮಂದರ ನೋಡಿ ಅಂವಂಗೆ ದುಃಖ ತಡಿಯಕೆ ಆಗದೆ ಕಣ್ಣ್‌ಂದ ಬಳ ಬಳಂತ ನೀರ್ ಸುರ್ಸಿಕಟಂಡ್ ದುಕ್ಕಡ್ಸಿ ದುಕ್ಕಡ್ಸಿ ಅಳಿಕೆ ಸುರು ಮಾಡ್ತ್. ಹಸ್ತಿನಾವತಿನ ಪಾಂಡು ಚಕ್ರವರ್ತಿನ ರಾಣಿ ಮತ್ತೆ ಯುವರಾಜನ ಪಟ್ಟ ಕಟ್ಟ್‌ಸಿಕಟಂಡ ಅಣ್ಣ ಲೋಕೈಕ ವೀರಂತ ಹೆಸರ್ ಪಡ್ದ ಅರ್ಜುನ, ದಿವ್ಯಜ್ಞಾನಿ ಸಹದೇವ, ಅತ್ಯಂತ ಸುಂದರ ಪುರುಷಂತ ಹೆಸ್‌ರಾದ ನಕುಲ, ನೀವೆಲ್ಲ ಹಂಸದ ತೂಪ್ಪುಳುಂದ ಮಾಡ್ದ ಹಾಸಿಗೆ ಹಾಸಿದ ಮಣಿ ಮಯ ಮಂಚಲಲಿ ಮಲ್ಗೊವ್ಕೆ, ಈಗ ಇಂತ ಅವಸ್ತೆ ಬಾತೋ ವಿಧಿಯೇಂತ ನೆನ್ಸಿಕಟಂಡ್ ಅತ್ತ್ ಕಟಂಡ್ ಕುದ್ದಲತ್. ಅಂಥ ಗಟ್ಟಿ ಹೃದಯದ, ಗಟ್ಟಿ ದೇಹದ ಭೀಮನೂ ಅತ್ತ್‌ಲತ್‌ಂತ ಹೇಳಿರೆ, ಬೇರೆವರ ಮಾತೇನ್?

ಕೆಲಲವು ಜೆನ ಅತ್ತವೆ. ಕೆಲಲವು ಜೆನ ನೆಗಾಡುವೆ. ಹಾಂಗೆ ಆ ಕಾಡ್‌ಲಿ ಇದ್ದ ಮನೆನ ಅಣ್ಣ, ತಂಗೆ, ಇಬ್ರೊರೂ ನೆಗಾಡಿಕೆ ಸುರು ಮಾಡ್ದೊ ಅಣ್ಣ ಹಿಡಿಂಬ, ತಂಗೆ ಹಿಡಿಂಬೆ– ಇಬ್ರೊರೂ ನರಭಕ್ಷಕರಾದ ರಕ್ಕಸಲರ್. ಆ ಕಾಡ್ ಅವ್ಕೆ ಸೇರ್ದ್. ಅದಿಕೆ ಹಿಡಿಂಬವನಾಂತ ಹೆಸ್‌ರ್. ಇದರೊಳಗೆ ತೊಪ್ಪಿಯಾರಾರ್ ಮೊಂಯುಸಲರ್ ಹುಕ್ಕರೆ, ಅವು ಹಿಂದೆ ಹೋಕಿಲ್ಲೆ.

ಹಿಡಿಂಬ ತಂಗೆನಕರ್ದ್ ಹೇಳ್ತ್, “ತಂಗೆ ಹಿಡಿಂಬೆ, ನಿಂಗೆ ಮೊಂಯುಸರ ಮೂರಿ ಬಾದು ಗೊತ್ತಾದೆನೊ? ನೋಡು ಆ ಆಲದ ಮರದ ಹಕ್ಕಲೆ ಒಳೊ. ನೀ ಹೋಗಿ ಅವರ ಹಿಡ್ಕಂಡ್ ಬಾ. ಇಂದ್ ನಾವು ಹಬ್ಬದೂಟ ಮಾಡೋನೊ. ಎಳೆ ಸಿದ್ದೊವು ಆದರೆ ಹಾಂಗೆ ಕಬ್ಬುನ ಕೋಲು ಮುರ್‍ದಾಂಗೆ ಮುರ್ದ್ ಮುರ್ದ್‌ತಿನಲಕ್. ಬೆಳ್ದೊವಾದರೆ ದೊಡ್ಡ ಕಡಾಯಲಿ ತುಂಬ ಎಣ್ಣೆ ಹೊಯ್ದ್, ಒಲೆಗೆ ತುಂಬ ಕಿಚ್ಚಿ ಬಚ್ಚಿ ಪೋಲುನ

ಕರಕರಂತಾವಾಂಗೆ ಹೊರ್ಸ್ಟ್ ತಿನಏಕ್. ಒಂದು ಇಡೀ ತೊಡೆ, ಕೈ ಮತ್ತೆ ಬಾರಿಯಲುಂದ ಕೂಡ್ದ ಮಾಸ ನಂಗೆ. ಮತ್ತೊಂದು ಭಾಗವ್ನ ನಿಂಗೆ ನೀ ಬೇಗ ಹೋಗು. ನಾ ಒಲೆಲಿ ಕಡಾಯ ಇಸಿ, ಎಣ್ಣೆ ಹೊಯ್ದ್ ಒಲೆಗೆ ಕಿಚ್ಚಿ ಮೊಟ್ಟನೆ. ನೀ ಬಾಕನ ಎಣ್ಣೆ ಕೊದ್ದ್ ತಯಾರಾಗಿದ್ದು. ಹೋಗು ಬೇಗ"ಂತೇಳಿಕಏಂಡ್ ಬಾಯಿ ಚಪ್ಪಿಕಂಡಏತ್. 'ಅವರ ತಲೆಗಳ ತುಂಡು ಮಾಡಿ ಇಂದ್ ಬೆಸಗೆಲಿ ಇಸಿಕೆ ಹೇಳೊಕು. ನಾಳೆನೋ ನಾಡ್ದೊ, ಅವ್ರುಗಳ ಕಿಚ್ಚಿಗೆ ಹಾಕಿ ಕುದೊಲುಗಳ ಎಲ್ಲ ಕಏರ್‌ಂಚ್ಸಿ, ಮತ್ತೆ ಚೆಣ್ಣ ಮೇಲೆ, ತಲೆನ ನೆಲದ ಮೇಲೆ ಇಸಿ, ಅದರ ಮೂಕುನ ಹಕ್ಕಲೆ ಬೇರಿ ಗುದ್ದಿರೆ ತಲೆ ಪಳಕ್ಕಂತ ಎರ್ಡ್ ಹೋಳಾದು. ಆಗ ಒಳೆಗಿರವ ಗಿಣ್ಣನ (ಮೆದುಳು) ಹಾಂಗೆ ತೆಗ್ದ್ ಬಾಯಿಗೆ ಹಾಕಂಡರೆ ಆ ರುಚಿನ ಕೇಳೊಕೋ?' ಹೀಂಗೆ ನೆನ್ಸಕನ ಅವಂಗೆ ತಡಿಯಕೆ ಬೊತ್ತದಷ್ಟ್ ಬಾಯಿ ನಿರ್ ಬಾಕೆ ಸುರಾತ್.

ಅಣ್ಣನ ಮಾತ್‌ನಾಂಗೆ ಹಿಡಿಂಬೆ ಮೊಂಯಿಸರ ಮೂಕೊಳ್ಳ ಹಿಡ್ಕಏಂಡ್ ಬಾತ್. ರಕ್ಕಏಸಏರಿಗೆ ಕತ್ತಲೆಲೂ ಪೊರ್ಲುರ್ಜ ಕಣ್ಣ್ ಕಂಡದ, ಹಾಂಗೆ ನೋಡ್‌ಕನ ಅದಿಕೆ ಕುಡ್ದ್ ಕಏಂಡಿರುವ ಬಲ ಭೀಮ ಕಂಡಏತ್. ಆಹ!ಂತೇಳಿಕಏಂಡ್ ಮುಂದೆ ಹಜ್ಜೆ ಎತ್ತದೆ ನಿತ್ತಏತ್ ನಡಿಯಕನ ಅವನ ಪೊರ್ಲುರ್ಜನ ಒಂದೇ ಸವನೆ ನೊಡಿಕೆ ಆದುಳೆ. ಅವನ ತೋರ ಮೀಸೆ, ಉರುಂಟು ಮೋರೆನ ಗತ್ತ್! ಅಬ್ಬ ಆ ಮೂಕೋ! ಆ ಹುಬ್ಬೋ! ಅವನ ತೋಳುಗ ತೇಕ್ಕನ ಮರಂದ ಕೆತ್ತಿದಾಂಗೆ, ಎಷ್ಟ್ ತೋರ ಒಳೊ! ಅವನ ಎದೆ ಅಷ್ಟ್ ಅಗಲ ಆಗಿ ಉಬ್ಬಿಕಏಂಡ್ ಉಟ್ಟು! ಅಯ್ಯಯ್ಯೋ! ಒಮ್ಮೆ ಈ ನನ್ನ ತೋರಮೊಲೆಗಳ ಆ ಎದೆಗೆ ಒತ್ತಿ ಚಪ್ಪಟೆ ಆಗುವಾಂಗೆ ಅಂವನ ಗಏಟ್ಟಿ ತೊಬ್ಬಿ ಕಂಡರೆ ಹೇಂಗಿದ್ದು! ಅಂವನೂ ನನ್ನ ಅವನ ತೋಳುಗಳ್‌ಂದ ತೊಬ್ಬಿ ಹಿಡ್ದ್ ಒತ್ತಿಕಂಡರೆ, ಅಯ್ಯೋ, ಅಯ್ಯೋ! ಹೇಂಗಾದು? ಹೇಂಗಾದು? ನಾ ರಕ್ಕಸೀಂತ ನನ್ನ ವಿಕಾರ ರೂಪುನ ಅಂವ ಮೆಚ್ಚದಿದ್ದರೆ ಏನ್ ಮಾಡುದು? ಅಂವಂಗೆ ಮೆಚ್ಚಿಕೆ ಆವಾಂಗೆ, ಅಪ್ಸರೆಂದಏಲೂ ಮೇಲಾದ ಪೊರ್ಲುರ್ಜಗಿ ಬದ್‌ಲಾಕಣೆ. ಹಾಂಗೆ ಅದೊಂದು ಮಂತ್ರನ ಪಿಸಿ ಪಿಸಿಂತ ಹೇಳುವೇ ತಡು. ಅದರ ರೂಪು ಬದ್‌ಲಾತ್. ಮೆಯಿನ ಕಏಪ್ಪು ಬಣ್ಣ ಹೋಗಿ ಕೇದೆಗೆನಾಂಗೆ ಹೊಳಿಯಕೆ ಸುರಾತ್. ಮೋರೆ ಚೆಂದ್ರನ ಕಾಂತಿಂದ ಹೊಳಿಯತ್ತಿತ್ತ್. ಸಂಪೆಗೆ ಹೂವ್ರನಾಂಗೆ ನೀಳವಾದ ಅದರ ಮೂಕುಂದ ಬಾವ ಉಸುರು ಸುರಿಗೆ ಹೂವ್ರನ ಪೊರಿಮಳದಾಂಗೆ ಇತ್ತ್. ಅದರ ಎರ್ಡ್ ತುಟಿಗ ತೊಂಡೆ ಹಣ್ಣ್‌ನಾಂಗೆ ಇದ್ದ್ ಅದರ್‌ಂದ ಪ್ರೀತಿಂತೇಳುವ ಜೇನ್ ಹನ್ನಿದನೋಂತ ಕಾಂಬತಿತ್ತ್. ಅದರ ಹಿಂದೆ ಇದ್ದ ಹಲ್ಲ್‌ಗಳ ಸಾಲ್, ಮುತ್ತುಗಳ ಸಾಲ್‌ನಾಂಗೆ ಇತ್ತ್. ಕಏಪ್ಪಾದ ತಲೆಕೂದೊಲು ಮೋರೆಂತೇಳ್ವ ಚೆಂದ್ರನ ನೂಂಗಿಕೆ ಬಂದ ರಾಹುನಾಂಗಿತ್ತ್. ಅದ್ ಮುಡ್ದ ಹೂವ್ರನ ಪೊರಿಮಳಕೆ ತುಂಬಿಗ ಸುತ್ತಿ ಸುತ್ತಿ ಬಾಕನ ಗುಂಯ್ಯಂತ ಸದ್ದ್ ಮಾಡ್‌ತಿದ್ದೊ. ಮೋರೆನ ಪೊರಿಮಳಕೆ ಮುಸುರುವ ತುಂಬಿಗಳ ಓಡ್ಸಿಕೆ, ಅದ್ ಅತ್ತಿತ್ತ ಕೈಯಾಡ್ಸಕನ ಅದರ ಕೈಲಿದ್ದ ಬಳೆಗ ಕಳಂಕ್ ಕಿಳ್‌ಂಕ್‌ಂತ ಸದ್ದ್ ಮಾಡ್‌ತಿದ್ದೊ. ಈ ಎಲ್ಲ ಪೊರಿಮಳ ಮತ್ತೆ ಸದ್ದ್‌ಗಳೊಟ್ಟಿಗೆ ಅದ್ ವೈಯಾರಏಲಿ

ನಡ್ಕಣಂಡ್ ಬಾಕನ ಅದರ ಕಾಲುಂಗಿಲಂಗಳೂ 'ಚುಣುಕ್ ಮಿಣುಕ್'ಂತ ಸದ್ದ್ ಮಾಡ್ತಿದ್ದೊ.

ಭೀಮ ಇದರ ಗಮನಿಸಿಕಣಂಡ್ ಇತ್ತ್. ಈ ನಟ್ಟ ಅಮಾಸೆನಂದ್ ಈ ಕಣಿಕೂಟ ಕತ್ತ್ಲೆಲಿ. ಒಬ್ಬಂಟ ಹೆಂಗ್‌ಸ್ ಇಂಥ ಕಾಡ್‌ಲಿ ಬರೊಕುಂತಾದರೆ ಇದ್ ರಕ್ಕಸ ಮಾಯೆನೆ ಆಗಿರೊಕು. ನೋಡೊನೋಂತ ಮೊಸ್ಗದೆ ಕುದ್ದಣೆತ್. ಹಿಡಿಂಬೆ ಸೀದಾ ಬಂದಣೆದ್ ಭೀಮನ ಹಕ್ಕಲೆ ಅವಂಗೆ ತಾಂಗಿ ಕುದ್ದಣೆತ್. ಭೀಮ ಅದರ ಮೈ ಮುಟ್ಟದಾಂಗೆ ತೆಲ್ಗಿ ಕುದ್ದ್ ಯಾರ್ ನೀ. ಏಕೆ ಬಂದಂತ ಕೇಳ್ತ್. ಅದ್ ತನ್ನ ಪೂರ್ವ ವೃತ್ತಾಂತದ ಪರಿಚಯನ ಎಲ್ಲ ಹೇಳಿ, "ನಿನ್ನೊಟ್ಟಗೆ ಮುಚ್ಚುಮರೆ ಏಕೆ? ನಿನ್ನ ನೋಡ್ದ ಕೂಡ್ಲೇ ನಾ ನಿಂಗೆ ಮನಸೋತೆ. ನೀ ನನ್ನ ಮೊದುವೆ ಆಗಿ ನಂಗೆ ರತಿಸುಕ ಕೊಡೊಕು. ಕಾಮಂತೇಳಂವಂದ ನಾ ಕೆಟ್ಟೆ. ಹೇಳ್ದಾಂಗೆ, ಅಲ್ಲಿ ಮಲ್ಗ್ಯೊಣೊಲೆ ಅವ್ರ ಯಾರ್?" ಅವ್ರ ಅವ್ವ, ಅಣ್ಣ ಮತ್ತೆ ತಮ್ಮಂದಣೆರ್"

"ಇನ್ನ್ ತಡು ಮಾಡಿರೆ ನನ್ನ ಅಣ್ಣ ಹಿಡಿಂಬ ನಮ್ಮ ಇಸಿಕಿಲ್ಲೆ. ನೀ ನನ್ನ ಹೆಗ್‌ಲ್‌ಲಿ ಕುದ್ದ್ಕ. ನಾ ನಿನ್ನ ಆಕಾಶ ಮಾರ್ಗಣೆಲಿ, ದೂರ ಎಲ್ಲ್ಯಾರ್ ಕರ್ಕಣಂಡ್ ಹೋನೆ. ಅಂವ ಬಂದ್ ಬೇಕರೆ ಇವರ ತಿನಣೆಲಿ ಬಾ ತಡು ಮಾಡ್ದಡ".

"ಕುಲವ ನಾಲಗೆಯರುಹಿತು?ಂತ ಒಂದು ಮಾತುಟ್ಟು. ನಿನ್ನ ಹೊಲ್ಸ್ ಮಾತ್‌ಂದಳೇ ನಿನ್ನ ಕುಲದ ಗುಟ್ಟು ಗೊತ್ತಾದೆ. ಬರ್ಲಿ ಆ ನಿನ್ನ ಅಣ್ಣ. ಅಂವನ ಬಲ ಎಷ್ಟ್ ಉಟ್ಟುಂತ ನಾ ನೋಡಿಕಣೆ".

ಇಷ್ಟಾಕನ ತಂಗೆ ತಡು ಮಾಡ್ತಾಂತ ಕೋಪಣೆಲಿ ಆರ್ಭಟೆ ಕೊಟ್ಟ್ಕಣಂಡ್ ಹಿಡಿಂಬ ಬಾತ್. ತಂಗೆ ಯಾರೋ ಗಣಂಡ್‌ಸ್‌ನೊಟ್ಟಗೆ ಕುದ್ದ್ಕಣಂಡ್ ಚಕ್ಕಂದ ಹೊಡ್ದದಂತೇಳಿ ಕೋಪಂದ ಕಿಡಿ ಕಿಡಿ ಆತ್.

ಅವನ ನೋಡಿ ಭೀಮ ಕೋಪಣೆಲಿ ಹೇಳ್ತ್. "ಏಯ್! ಬೊಬ್ಬೆ ಮಾಡ್‌ಬಡ ನಿದ್ದೆ ಮಾಡೊವ್ಕ ತೊಂದರೆ ಆದೆ. ನಿಂಗೆ ಯುದ್ಧ ಬೇಕುಂತಾದರೆ ಅಲ್ಲೇ ನಿಲ್ಲ್. ನಾನೇ ಬನ್ನೆಂತೇಳಿ ಒಂದು ಮರನ ಕಿತ್ತ್ ಬೀಸಿ ರಕ್ಕಸನ ಮೇಲೆ ಇಟ್ಟಣೆತ್. ಅದರ ರಭಸಕ್ಕೆ ಬಂದ್ ಮಾರ್ ದೂರ ಹಾರಿ ಹೋದ ರಕ್ಕಸ, ಒಂದು ದೊಡ್ಡ ಗುಂಡು ಕಣಲ್ಲನ ಹಿಡ್ಕಂಡ್ ಅದರ ಭೀಮನ ಮೇಲೆ ಬೀಸಿ ಇಟ್ಟಣೆತ್. ಭೀಮ ಹಾರಿ ಅದರ ಚೆಂಡ್‌ನಾಂಗೆ ಕೈಲಿ ಹಿಡ್ದ್ ಅದರ್‌ಣದಳೇ ಬೀಸಿ ರಕ್ಕಸಂಗೆ ಹೊಡ್ತ್. ಹಕ್ಕಲೆ ಇದ್ದ ಮರಣೆಗ ಎಲ್ಲ ಮೊರ್ಪಿ ಒಂದು ಕಡೆ ರಾಶಿ ಬಿದ್ದೊ. ಇತ್ತ ಕಡೆಗೆ ಕಣಲ್ಲ್‌ಗಳ ದೊಡ್ಡ ಗುಪ್ಪೆ ಬೀತ್. ಸುಮಾರ್ ಹೊತ್ತು ಈ ಹೋರಾಟ ನಡ್ದ್, ಕಡೆಗೆ ಭೀಮನ ಗುದ್ದಿಗೆ ರಕ್ಕಸ ನೆತ್ತ್‌ರ್ ಕಾರಿಕಣಂಡ್ ಬಿದ್ದ್ ಸತ್ತಣೆತ್.

ಇಷ್ಟೊತ್ತಿಗೆ ನಿದ್ದೆಲಿದ್ದೊವ್ರ ಎದ್ದ್ ಅವ್ಕೆ ಆಶ್ಚರ್ಯ ಆತ್. ಭೀಮ ಒಬ್ಬನೇ ಇಂತ ಸಾಸಕ್ಕೆಳಿಯಕ್ಕಾಗಯ್ತ್. ಅವಂಗೇನಾರ್ ಅಪಾಯ ಆಗಿದ್ದರೆ? ಹೀಂಗೆ ಕುಂತಿನೂ ಯುಧಿಷ್ಠಿರನೂ ಅವಂಗೆ ಹಜ್ಜಾಜೋರಾಗಿ ಹೇಳ್ದೊ. ಭೀಮ ಅದ್ಕೇನೂ ಉತ್ತರ ಹೇಳ್ತಿಲ್ಲೆ. ಸುಮ್ಮನೆ ಹಲ್ಲ್ ಬುಟ್ಟಣೆತ್. ಇಷ್ಟಾಕನ ತನ್ನ ಅಣ್ಣ ಕಣ್ಣೆದ್‌ರೇ ಸತ್ತ್ ಬಿದ್ದರೂ ಭೀಮನ

ಮೇಲಿನ ಅದರ ಮೋಹ ಕಮ್ಮಿ ಆತ್ಲೆ. ಆದರೆ ಭೀಮ ಅದರ ಕಡೆಗೆ ಕಡೆಗಣ್ಣಿಂದೂ ಒಳೂ ನೋಡ್ತ್ಲೆ. ಅದ್ ಬಂದ್ ಕುಂತೀನಕ್ಕಲೆನೂ, ಯುಧಿಷ್ಠಿರನಕ್ಕಲೆನೂ "ನನ್ನ ಭೀಮಂಗೆ ಮೊದುವೆ ಮಾಡ್ಲೊಕು"ಂತೇಳಿ ಅಳುಮೋರೆ ಮಾಡಿಕಂಡ್ ಕೇಳ್ತ್. ಅವರ ಮನ್‌ಸೂ ಮೆತ್ತಂಗಾತ್. "ಒಂದು ಗೂಡೆನೇ ನಾಚಿಕೆ ಬುಟ್ಟ್ 'ನಂಗೆ ಮೊದುವೆ ಮಾಡ್ಲಿಂತ ಅಳಕೊರೆ ಅದರ ಮನ್‌ಸ್‌ನ ಸ್ಥಿತಿ ಹೇಂಗಿರ್ಬಡ! ಒಲ್ದ್ ಬಂದ ಹೆಣ್ಣ್‌ನ ನಿರಾಕರ್ಲಿಕೆ ಆಗದ್. ಭೀಮ! ನೀ ಈ ಗೂಡೆನ ಮೊದುವೆ ಆಗ್. ಪಾಪ ಅದಿಕೆ ಇನ್ನ್ ಯಾರ್ ಒಳೊ? ನೀನೇ ಅದರ ಕೈ ಹಿಡಿಯೊಕೂಂತ" ಇಬ್ರೂ ಹೇಳ್ರು. ಆದರೆ ಭೀಮ ಒಪ್ಪಿತ್ಲೆ. "ಜೆನ್ಮಲಿ ಅದ್ ರಕ್ಕಸಿಯಾಗಿರ್ದು ಆದರೆ ಈ ರೂಪುಲಿ ಅದ್ ದೇವತೆನೂ ಮೀರ್ದು." ಹೀಂಗೆ ಭೀಮನೊಟ್ಟಿಗೆ ಅಯ್ಯೆ ಮಜ್ಜನೂ ವಾದ ಮಾಡ್ರು.

ಭೀಮ, "ಅದ್ ಮಾಯಾವಿ. ಗಳಿಗೆಗೊಂದು ವೇಸ ಬದ್ಲ್ಲಿಕೆ ಅದಿಕೆ ಗೊತ್ತುಟು. ಇದರ ಕಟ್ಟಿಕಂಡರೆ ನನ್ನ ಮೊಯಾರ್ದ ಒಳ್ಳಂಗೆನ."

"ಹಾಂಗಲ್ಲಪ್ಪ. ಒಲ್ದ್ ಬಂದ ಹೆಣ್ಣಿಗೆ ನಿರಾಸೆ ಮಾಡಿಕೆ ಆಗದ್"ಂತ ಕುಂತಿ ಹೇಳ್ತ್. "ಹಿಂದೆ ತ್ರೇತಾಯುಗಲಿ ರಾವಣನ ತಂಗೆ ಶೂರ್ಪಣಕೆನೂ ರಾಮನಕ್ಕಲೇ ಹೀಂಗೇ ಬಂದಿತ್ತ್." "ಆಗ ರಾಮ ಲಕ್ಷ್ಮಣಲ್ ಏನ್ ಮಾಡ್ರು?" "ಅದರ ಕೆಬಿ ಮೂಕು ಕೊಯ್ದ್ ಕಳ್ಸಿದ್ರು." "ಇದ್ಕನೂ ಹಾಂಗೇ ಮಾಡೊಕೋ?" ಅದ್ಕೆ ಕುಂತಿ: "ನನ್ನಂಥ ಅಯ್ಯೆ ಅಲ್ಲಿ ಇದ್ದಿದ್ದರೆ ಶೂರ್ಪಣಖಿಗೆ ಆ ತರದ ಶಿಕ್ಷೆ ಕೊಡಿಕೆ ಬುಡಿಕಿತ್ತ್ಲೆ. ಅದೆಲ್ಲ ಕಳ್ದ್ ಹೋದ ವಿಚಾರ. ಅದ್ ಹಾಂಗಿರ್ಲಿ. ಈಗ ನೀ ಅಲ್ಲದೆ ಅದ್ಕೆ ಬೇರೆ ಗತಿ ಇಲ್ಲೆ. ಹಾಂಗೆ ನೀ ಅದರ ಮೊದುವೆ ಆದೇ ನ್ಯಾಯ." ಯುಧಿಷ್ಠಿರನೂ ಹಾಂಗೇ ಹೇಳ್ತ್. "ಮಕ್ಕಳಿಗೆ ತಾಯಿಯೇ ದೇವ್ರು. ನಮ್ಮ ಅಮ್ಮ ಹೀಂಗೆ ಹೇಳ್ತಂತಾದರೆ ಅದ್ ದೇವ ವಾಕ್ಯ. ಅದೇ ವೇದ ವಾಕ್ಯನೂ ಅಪ್ಪು. ಹಾಂಗೆ ನೀ ಈ ಮಾತ್‌ನ ಎಂದೂ ಮೀರಿಕೆ ಸಾಧ್ಯ ಇಲ್ಲೆ."

ಭೀಮ ನೀರ್‌ಂದ ಮೇಲೆ ಬಿದ್ದ ಮೀನ್‌ನಾಂಗಾತ್. "ಹಾಂಗಾರೆ ನನ್ನ ಎರ್ಡ್ ಶರ್ತಗ ಒಳೊ. ಒಂದು, ಅದ್ ನನ್ನೊಟ್ಟಿಗೆ ಇರ್ಕನ ಎಲ್ಲ ಇದೇ ರೂಪುಲಿ ಇರೊಕು. ಎರಡ್ನೆದ್, ಅದಿಕೆ ಒಂದು ಕೂಸು ಆಕನ ಮುಟ್ಟ ನಾ ಅದರೊಟ್ಟಿಗಿರ್ದು. ಆ ಮೇಲೆ ನಾ ಸ್ವತಂತ್ರ. ಹಿಡಿಂಬೆ ಆ ಶರ್ತಗಳ ಒಪ್ಪಿತ್. ಅಷ್ಟ್ರಲ್ಲಿ ದಿವ್ಯ ಜ್ಞಾನಿ ಸಹದೇವ ಅವರ ಮೊದುವೆಗೆ ಒಳ್ಳೆ ಮುಹೂರ್ತ ನೋಡಿ ಹೇಳ್ತ್. ನಕುಲ ಎರ್ಡ್ ಪೊರ್ಲುದ ಹೂಮಾಲೆಗಳ ಕಟ್ಟಿತ್. ಅವ್ರು ಒಬ್ಬಂದೊಬ್ಬ ಮಾಲೆ ಬದ್ಲ್ಲಿಕಂಡೊ. ಹಿಡಿಂಬೆ ಪಾಂಡವರ ತನ್ನ ಅರಮನೆಲಿ ನಿಲ್ಸಿ, ಔತಣ ಮಾಡಿ ಸಂತೋಸ್ ಪಡ್ಸಿತ್. ಹೊಸ ಮೊದ್‌ಮಕ್ಕ ಹಿರಿಯರ ಅಪ್ಪಣೆ ಕೇಳಿ ವಿಹಾರ ಸ್ಥಳಗಳಿಗೆ ಹೋದೊ. ಬೆಟ್ಟಗಳ ನೆತ್ತಿಲಿ, ಹಳ್ಳಗಳ ಕರೆಲಿ ಹೀಂಗೆ ಎಲ್ಲೆಲ್ಲಿ ರಮ್ಯ ಜಾಗಗ ಒಳೊನೊ ಅಲ್ಲೆಲ್ಲ ನಿತ್ತ್ ಮನ್ಸ್‌ತಣಿವಷ್ಟ್ ವಿಹರ್ಸಿದೊ. ಹಜ್ಜ್ ಸಮಯ ಕಳ್ತ್. ಹಿಡಿಂಬೆಗೆ ಬೊಸ್ರ್ ನಿತ್ತತ್. ಮತ್ತೆ ಹಜ್ಜ್ ಸಮಯ ಕಳಿಯಕನ ಒಬ್ಬ ಗಂಡ್ ಕೂಸು ಹುಟ್ಟಿತ್. ರಾಕ್ಷಸನ ಜೆನ್ಮ ಲಕ್ಷಣಲಿ ಆ ಕೂಸು ಹುಟ್ಟ್‌ಕನೆ ನವಯೌವನ

ಹೊಡಿದಂವಾಗಿತ್ತ್. ಅವನ ತಲೆ ಬೋಳಾಗಿ ಮೊಗ್‌ಚಿ ಹಾಕಿದ ಮೊಣ್ಣ್‌ನ ಕಂದಲಿಲ್‌ನಾಂಗೆ ಇದ್ದುದರ್‌ಂದ ಅವಂಗೆ ಘಟೋತ್ಕಚಂತ ಹೆಸ್‌ರ್ ಇಸಿದೊ. ಇನ್ಸ್ ಹಿಂದೆ ಮಾತಾಡಿ ಇದ್ದ ಹಾಂಗೆ ಪಾಂಡಲೆವಲೆರ್ ಅಲ್ಲಿಂದ ಹೊರ್ಟೊ. ಅವು ಮೂರುವರೆ ವರ್ಶ ಹಿಡಿಂಬೆನ ಅರಮನೆಲಿ ಇದ್ದೊ. "ನಾವು ಇಷ್ಟುದಿನ ನಿಮ್ಮಲೆಲ್ಲಿ ಸುಖಲೆಲಿ ಇದ್ದೊ. ಇನ್ಸ್ ಹೊರ್ಟವೆ. ನೀವು ಅಯ್ಯೆ ಮಜ್ಜನೂ ಪೊಲ್ರುಲಿ ಇರಿ"ಂತ ಅವ್ಕೆ ಆಶೀರ್ವಾದ ಮಾಡಿ ಹೊರ್ಟೊ. ನೀವ್ಗೆ ಏನಾರ್ ಅಗತ್ಯ ಬಿದ್ದರೆ ನನ್ನ ನೆನ್ಸಿ. ನಾ ಬಂದ್ ಎಂತ ಕೆಲ್ಸನಾರೂ ತೀರ್ಸಿಕೊಡುವೆ"ಂತ ಘಟೋತ್ಕಚ ಪಾಂಡವರಿಗೆ ಹೇಳ್ತ್. ಹಾಂಗೆ ಮಾತಾಡಿಕಲೆಂಡ್, ಅಯ್ಯೆನೂ ಮಜ್ಜನೂ ಹಳ್ಳದ ಕರೆಗೆ ಮುಟ್ಟ ಬಂದ್ ಅವರ ಕಲೆಳ್ಸಿಕೊಟ್ಟ್ ಮತ್ತೆ ಮನೆಗೆ ವಾಪಾಸಾದೊ.

ಇತ್ತ ವಾರಣಾವತಲೆಲಿ ಅಮಾಸೆನಂದ್ ರಾತ್ರೆ ಪಾಂಡವಲೆರಿದ್ದ ಅರಮನೆಗೆ ಕಿಚ್ಚಿ ಹಿಡ್ದ್ ಕಿಚ್ಚಿನ ನಾಲಿಕೆಗ ಬಾನೆತ್ತರಕ್ಕೇರಿ ಕೊಣಿದರ ನೋಡಿ ಆ ಊರುನ ಪ್ರಜೆಗ ಎಲ್ಲ ಗಾಬ್ರಿಂದ ಓಡಿ ಬಂದೊ. ಅಷ್ಟೊತ್ತಿಗೆ ಆ ಅರಮನೆನ ಹೆಚ್ಚಿನಂಶ ಬೂದಿಯಾಗಿ ಹೋಗಿತ್ತ್. ಯಾರೂ ಏನೂ ಮಾಡುವಾಂಗಿತ್ತ್‌ಲೆ. ಒಂದು ಜಗ್‌ಲಿಲಿ ಮಲ್ಗಿ ನಿದ್ದೆ ಮಾಡಿದ್ದ ಬೇಡತಿನ ಮತ್ತೆ ಅದರ ಐದ್ ಜೆನ ಮಕ್ಕಳ ಸರ್‍ರಗಲೆಳೂ. ಸುಟ್ಟ್ ಬೂದಿಯಾಗಿ ಮೊಂಯಿಸರ ಸರ್‍ರದ ಆಕಾರಲೆಲೇ, ಆದರೆ ಯಾರ್ದ್ಯಾರ್‌ಂದ್ ಗುರ್ತ ಸಿಕ್ಕದಾಂಗೆ ಇದ್ದೊ. ಅದರ ನೋಡ್ದೊವ್ಕೆ, ಅವು ಕುಂತಿ ಮತ್ತೆ ಪಾಂಡವಲೆರೇಂತ ನಿಗಲೆಂಟ್ ಆತ್. "ಅಯ್ಯಯ್ಯೋ!"ಂತ ಬೊಬ್ಬೆ ಹೊಡ್ದೊ. ಮತ್ತೆ "ಎಂತಾ ಪುಣ್ಯ ಪುರುಷಲೆರಿಗೆ ಈ ಗತಿ ಆತೊ ದೇವ್ರೇ! ನಮ್ಮ ಊರಿಗೆ ಹೀಂಗೆ ಸಾಯಕಾಗಿಯೇ ಬಂದಲೆರಿಯೋ ದೊರೆಗಳೆ? ನಿಮ್ಮ ಆಳ್ವಿಕೆಲಿ ಸುಖ ಸಂತೋಸುನ ಅನುಬೋಗ್ಸುವ ಪುಣ್ಯ ನಾವ್ಗೆ ಇಲ್ಲದಾತಲೆ– ದೇವ್ರೇ! ಆ ಹೂವ್ರುನಾಂಗಿದ್ದ ಸರ್‍ರದೊವು, ಜೀವಮುತ್ತಂಗೆ ಕಿಚ್ಚಿಲಿ ಬೇಯ್‌ಕನ ಎಷ್ಟ್ ಬೇನೆ ಆಗಿದೋರ್? 'ನೀರ್. ನೀರ್'ಂತ ಕೇಳಿಕಲೆಂಡೇ ಜೀವ ಬುಟ್ಟೊನೊ? ದುರ್ಯೋಧನಂಗೆ ಇನ್ಸ್ ನೆಮ್ಮದಿ. ಇವರ ಪಾಲೆಲ್ಲ ಅಂವಂಗೇ ಸಂದಿತಲೆ. ಕಲೆಣ್ಣಿಲ್ಲದ ವಿಧಿ ಇನ್ನೇನೆಲ್ಲ ದ್ರೋಹ ಮಾಡಿಕೆ ಒಳೆನೋ? ಹೀಂಗೆ ನಾನಾ ರೀತಿ ಹೇಳಿಕಲೆಂಡ್ ಎದೆಗೆ ಹೊಡ್ಕಲೆಂಡ್ ಅತ್ತೊ.

ಮತ್ತೆ ಪುಜಾಪ್ರಮುಖಲೆರೆಲ್ಲ ಸೇರಿ ಹಸ್ತಿನಾವತಿಗೆ ನಿಯೋಗ ಹೊರ್ಟ್, ಅಲ್ಲಿಗೆ ತಲ್ಪಿ, ಭೀಷ್ಮರಿಗೆ, ಧೃತರಾಷ್ಟ್ರಂಗೆ, ದ್ರೋಣ, ವಿದುರಲೆರಿಗೆಲ್ಲ ವಾರಣಾವತದ ಅರಮನೆಗೆ ಕಿಚ್ಚಿ ಬಿದ್ದ್, ಕುಂತಿ ಪಾಂಡವಲೆರ್ ಕಿಚ್ಚಲಿ ಬೊಸ್ಮ ಆಗಿ ಹೋಗಿ ಬುಟ್ಟೊಂತೇಳಿಕಲೆಂಡ್ ಗೋಳೋಂತ ಅತ್ತೊ.

ಭೀಷ್ಮ ದ್ರೋಣರಂತ ಹಿರಿಯೊವ್ಕೆ ತಡಿಯಕೆ ಬೊತ್ತದ ದುಃಖ ಆತ್. ಸುರುಗೆ ಧೃತರಾಷ್ಟ್ರಂಗೂ ತುಂಬ ದುಃಖ ಆತ್. ಆದರೆ ಮತ್ತೆ ಒಳೆಗಂದೊಳೆಗ ಒಂದು ತೃಪ್ತಿನೂ ಇತ್ತ್. ವಿದುರನೂ ತೋರಿಕೆಗೆ ಭಾರಿ ದುಃಖದವರಾಂಗೆ ತೋರ್ಸಿಕಂಡಲೆತ್. ಕೌರವ. ಕರ್ಣಾದಿ ಪಾಳ್ಯಕ್ಕೆ ಸೇರ್ದೊವೆಲ್ಲ ಕೃತಕ ಶೋಕನ ತೋರ್ಸಿದೊ. ನಿಜವಾದ ದುಃಖ ಅನುಭವಿಸಿದೊವ್ರುಂತೇಳಿರೆ ಹಸ್ತಿನಾವತಿನ ಪ್ರಜೆಗ, ಭೀಷ್ಮ ಮತ್ತೆ ದ್ರೋಣ ಮತ್ತೆ ಧೃತರಾಷ್ಟ್ರ

ವಿದುರನ ಕರ್ಪ್ ಸತ್ತ್ ಹೋದ ಕುಂತಿಗೂ. ಪಾಂಡವರಿಗೂ ಅಪರ ಕ್ರಿಯೆಗಳ ಮಾಡಿ ಬಾಕೆ ಹೇಳ್ತ್. ಹಾಂಗ ವಿದುರ ವಾರಣಾವತಕ್ಕೆ ಹೋಗಿ. ಜೇಡೆತಿ ಮತ್ತೆ ಅದರ ಮಕ್ಕ ಸುಟ್ಟ್ ಹೋದಲ್ಲಿಂದ ಅವರ ಬೂದಿನ ಸಂಗ್ರಹಿಸಿ. ಗಂಗೆಲಿ ಬುಟ್ಟ್, ಜಲದಾನಕ್ರಿಯೆ ಮುಂತಾಗಿ ಮಾಡಿ ಹಿಂದೆ ಬಾತ್. ಯಾರ್ ಸತ್ತೆದಿಕೋ ಯಾರಿಗೋ ನಷ್ಟ ಸದ್ಗತಿ ಕ್ರಿಯೆಗ. ಹಸ್ತಿನಾವತಿನ ರಾಜವಂಶದವೆಲ್ಲ ಗಂಗಾನದಿಗೆ ಹೋಗಿ ತಲೆ, ಮೈ ಮೀಯ್ಡ್ ಸೂತಕ ಕಳ್ಕೆಂಡ್ ಬಂದೊ. ಒಂದು ಅನ್ನ ಸಂತರ್ಪಣೆಂತ ಮಾಡ್ಡಿದೊ.

ಇತ್ತ ಹಿಡಿಂಬೆನ್ನೂ, ಘಟೋತ್ಕಚನ್ನೂ ಬುಟ್ಟ್ ಬಂದ ಕುಂತಿ ಮತ್ತೆ ಅದರ ಮಕ್ಕ ಮುಂದೆ ಮುಂದೆ ನಡ್ದೊ. ಒಂದು ದಿನ ವೇದವ್ಯಾಸ ಋಸಿ ಅವ್ಕೆ ಕಾಂಬಕೆ ಸಿಗ್ತ್. ಇನ್ನ್ ಹಣ್ಣು ದಿನ ನೀವು ಯಾರ್‌ಂದ್ ಯಾರಿಗೂ ಗೊತ್ತಾದ ಹಾಂಗೆ ಇರೊಕು. ಮುಂದೆ ನೀವ್ಗೆ ಒಳ್ಳೆ ಕಾಲ ಬಂದದೆ. ಹಣ್ಣು ಮುಂದೆ ಹೋದರೆ ಏಕಚಕ್ರ ನಗರ ಸಿಕ್ಕಿದೆ. ಅಲ್ಲಿನ ಬ್ರಾಹ್ಮಣ ಕೇರಿಲಿ ಬ್ರಾಹ್ಮಣ ವೇಸಲಿ ಇದ್ದ್, ಭಿಕ್ಷೆ ಬೇಡಿಕೆಂಡ್ ಜೀವನ ದೂಡಿ ಮುಂದೆ ಎಲ್ಲ ಶುಭ ಆದಂತ ಹೇಳಿ ಅಂವ ಮಾಯ ಆಗಿ ಹೋತು.

ಋಸಿನ ಮಾತ್‌ನ ಪ್ರಕಾರ ಪಾಂಡವೆರ್ ಏಕಚಕ್ರನಗರಕ್ಕೆ ಬಂದೊ. ಒಬ್ಬ ಬ್ರಾಹ್ಮಣನ ಮನೆನ ಕೊಟೆಗೆಲಿ ನಿಲ್ಲಿಕೆ ಜಾಗೆ ಪಡ್ಕಂಡೊ. ದಿನೋಳು ಬೊಳ್ಗನ ಹೊತ್ತು ಐದ್ ಜೆನ ಮಕ್ಕಳೂ ಭಿಕ್ಷೆ ಬೇಡಿಕೆ ಹೋವೊ. ಪ್ರತಿ ಮನೆಗಳ ಬಾಗ್‌ಲ್‌ಲಿ ನಿತ್ತ್, "ಭಿಕ್ಷಾಂ ದೇಹಿ"ಂತೇಳ್ವೊ. ಮನೆವು ಭಿಕ್ಷೆ ಹಾಕುವೊ. ಅದರ ತಂದ್ ಅಯ್ಯನ ಕೈಲಿ ಕೊಡುವೊ. ಕುಂತಿ ಅದರ ಎರ್ಡ್ ಪಾಲ್ ಮಾಡಿ, ಒಂದು ಪಾಲ್‌ನ ಭೀಮಂಗೆ ಕೊಟ್ಟ್ ಮತ್ತೊಂದು ಪಾಲ್‌ನ ಒಳ್ದ ಐದ್ ಜೆನ ಪಾಲ್ ಮಾಡಿ ತಿಂದ್‌ಕೆಂಡ್ ಕಾಲ ನೂಕಿದೊ.

ಆಗನ ಕಾಲ ಸುಭಿಕ್ಷದ ಕಾಲ. ಜೆನಂಗೆಲ್ಲ ಧರ್ಮದ ದಾರಿಲಿ ನಡಿಯೊವು. ಗೃಹಸ್ತೆರ್‌ಂತ ಹೇಳಿರೆ ಅತಿಥಿ ಸತ್ಕಾರ ಅಗತ್ಯವಾಗಿ ಮಾಡೊಕು. ಮನೆಗೆ ಯಾರೇ ಬರ್ಲಿ ಅವ್ಕೆ ಊಟ ಉಪಚಾರ ಮಾಡ್ಡಿಯೇ ತಾವು ಊಟ ತಿಂಡಿ ಮಾಡುವ ನಿಯಮ. ಈಗನವು ಆದರೆ ಊಟದ ಹೊತ್ತಿಗೆ ಬಂದೊವ್ಕೆ, "ನಾವ್ಗೆ ಈಗ ಊಟ ಎಲ್ಲ ಆಗಿ ಕುದ್ದದಷ್ಟೆ ಅಣ್ಣಂತ" ಎರ್ಡ್ ಸಲ್ತಿ ಹೇಳಿ ಅವಂಗೆ ಏನೂ ಕೊಡದೆ ಕಳ್ಸುವೊ. ಒಂದು ವೇಳೆ ಪಾಂಡವು ಭಿಕ್ಷೆ ಬೇಡುವ ಅವಸ್ಥೆ ಈಗ ಬಂದಿದ್ದರೆ ಅವರ ಹಂಗ್‌ಸಿ ಹಂಗ್‌ಸಿ ಕೊಂದಿದ್ದೊಂತ ಕಂಡದೆ. ಕಾಲಾವಸ್ಥೆನೂ ಬದ್‌ಲಾಗುಟುಂತೇಳ್ವು ನಿಜ. ಈಗ ಬೇಡಿರೆ ಬೇಕಾದ್ದ್ ಸಿಕ್ಕಿದೆಂತಾದರೆ ಕೆಲ್ಸ ಮಾಡಿಕೆ ಏದೆ ಬೊಗ್ಗಿಕಿಲ್ಲೆ. ಹೀಂಗೆ ಇವು ಸಮಾಜಕ್ಕೆ ಒಂದು ಹೊರೆ ಆದವೆಂತೇಳುವ ಕಾರಣಕೆ ಸರ್ಕಾರೂನೂ ಬೇಡುವರ ನಿಷೇಧಿಸುವ ಕಾನೂನು ತಂದುಟು.

ಸುಮಾರ್ ಒಂದು ಒಂದೂವರೆ ವೊರ್ಸ ಮುಟ್ಟ ಪಾಂಡವೆರ್ ಹೀಂಗೆ ಅಲ್ಲಿದ್ದೊ. ಒಂದು ದಿನ ಹಿಂಬೊತ್ತ್, ಧರ್ಮರಾಯ, ಅರ್ಜುನ, ಮತ್ತೆ ನಕುಲ ಸಹದೇವ ಎಲ್ಲ ಸಂಧ್ಯಾವಂದನೆ ಮಾಡಿಕೆಂತ ಹಳ್ಳದ ಕರೆಗ ಹೋಗಿದ್ದೊ. ಮನೆಲಿ, ಕುಂತಿ ಮತ್ತೆ ಭೀಮ ಇಬ್ರೊರೇ ಇದ್ದೊ. ಆಗ ನೆರೆಮನೆಂದ ಜೋರು ಅಕ್ಗ್‌ಲ್‌ನ ಸ್ವರ ಕೇಳಿ ಬಾತ್. ಕುಂತಿಗೆ

ಭಾರಿ ಯೋಚನೆ ಆತ್. ಭೀಮನೊಟ್ಟಿಗೆ, "ನೀ ಮನೆಲೇ ಇರ್. ನಾ ಬೇಗ ಹೋಗಿ ಏನ್ ಸಂಗ್ತೀಂತ ವಿಚಾರ್ಸಿಕಂಡ್ ಬನ್ನೆ"ಂತ ಹೇಳಿ ಕುಂತಿ ಹೋತು. ಹಾಂಗೆ ಹೋಗಿ ನೋಡ್‌ಕನ, ಆ ಮನೆಲಿ ಒಬ್ಬ ಹಾರಂವ, ಅವನ ಹಾರ್ತಿ, ಮತ್ತೆ ಒಂದು ಹತ್ತ್ ಹನ್ನೆರ್ಡ್ ವೊರ್ಸದ ಹೆಣ್ಣ್ ಕೂಸು, ಮತ್ತೊಂದು ನಾಲ್ಕೈದ್ ವೊರ್ಸದ ಗಂಡ್ ಕೂಸು ಇಷ್ಟ್ ಜನರ ಒಂದು ಸಣ್ಣ ಸಂಸಾರ ಇತ್ತ್. ಹಾರ್ತಿ ಹಾರಂವನೊಟ್ಟಿಗೆ "ನಾಳೆ ನೀವು ಹೋದು ಬೇಡ ನನ್ನ ಕಳ್ಸಿ. ನೀವು ಹೋದರೆ ಈ ಮನೆನ ಕಾಪಾಡೊವ್ರು ಯಾರೊಳೋ"ಂತ ಅತ್ತ್‌ಕಂಡ್ ಹೇಳ್ತ್. ಆಗ ಹೆಣ್ಣ್ ಕೂಸು, "ನೀವಿಬ್ರೂ ಹೋದು ಬೇಡ ನಾ ಹೇಂಗಿದ್ರೂ ನಿಮ್ಮ ಬುಟ್ಟ್ ಬೇರೊಂದು ಮನೆಗೆ ಹೋಂವ. ಹಾಂಗೆ ಈಗ ನಾ ಈ ಕಾರ್ಯಕೆ ಹೋದರೆ ಈ ಮನೆ ಒಳೀದು, ಬೆಳೀದು. ಹಾಂಗೆ ಬೇರೆ ಯೋಚನೆ ಮಾಡದೆ, ನನ್ನ ಕಳ್ಸಿ"ಂತ ಹೇಳಿಕಂಡ್, ಅಳುವ ಅಯ್ಯೆ ಅಪ್ಪನ ನೋಡಿಕಂಡ್, ಅದೂ ದಿರೀಂತ ಆಳಿಕೆ ಸುರುಮಾಡ್ತ್. ಆಗ ಆ ಸಣ್ಣ ಕೂಸು ಒಂದು ಕೋಲು ಹಿಡ್ಕಂಡ್, ನಿಮ್ಮ ಅಳ್ಸುವ ಆ ರಕ್ಕಸನ ಈ ಕೋಲುಲಿ ಹೊಡ್ದ್ ನೆಳನ ಪಚ್ಚ ಮಾಡ್ದಾಂಗೆ ಮಾಡಿ ಕೊಂದ್ ಹಾಕಿನೆಂತ ಹೇಳಿ ನೆಲಕ್ಕೆ ಬೇರಿ ಹೊಡ್ತ್. ಆ ಕೂಸುನ ಮುಗ್ಧ ನಡ್ತೆ. ಅಳುವೊವ್ರ್ಕೂ ನಗೆ ಬರ್ಸಿತ್.

ಕುಂತಿ "ಏನ್ ಸಮಾಚಾರ? ಏಕೆ ಹೀಂಗೆ ಅತ್ತರೆ?"ಂತ ಆ ಹಾರಂವನ ಕೇಳ್ತ್, ಅದ್ಕೆ ಹಾರಂವ "ಅಯ್ಯೋ ನಮ್ಮ ಗೋಳುನ ಕೇಳಿ. ನೀವೂ ಏಕೆ ಎತ್ತೆ ಪಡೊಕು?"ಂತ ಹೇಳ್ತ್. ಅದಿಕೆ ಕುಂತಿ, "ಹಾಂಗಲ್ಲ ತನ್ನ ಕಷ್ಟನ ಇನ್ನೊಬ್ಬನಕ್ಕಲೆ ಹೇಳಿಕಂಡರೆ, ತೆರ್ದ ಬಾಗ್‌ಲ್‌ಂದ ಗಾಳಿ ಬೀಸಿ ಹೊರಗೆ ಹೋದಾಂಗೆ. ಮನ್‌ಸಿಗೆ ಹಜ್ಜು ಹಗ್‌ರ ಅದು. ಇದ್ ಮೊಂಯಿಸರಾದೊವ್ರು ಒಬ್ಬಂದೊಬ್ಬಂಗೆ ಮಾಡುವ ಸಾಯ"ಂತ ಹೇಳ್ತ್. ಮತ್ತೆ ಹಾರಂವ ಹೇಳಿಕೆ ಸುರು ಮಾಡ್ತ್, "ನೋಡಿ ಈ ನಗರದ ಹೊರಭಾಗಲಿ ಇರುವ ಕಾಡ್‌ಲಿ ಬಕಂತೇಳುವ ಒಬ್ಬ ರಕ್ಕಸ ಉಟ್ಟು. ಹಿಂದೆ ಅಂವ ನಗರಕ್ಕೆ ಬಂದ್, ಕೈಗೆ ಸಿಕ್ಕಿದವರೆಲ್ಲ ಹೊಡ್ದ್, ಬೊಡ್ದ್ ಮುಕ್ಕ್‌ತಿತ್ತ್. ಹೀಂಗೆ ಹಾನಿ ಮಾಡುವರ ತಡಿಯಕೆ ಆಗದೆ, ನಗರದ ಪ್ರಮುಖರೆಲ್ಲ ಸೇರಿ ಅವನೊಟ್ಟಿಗೆ ಒಂದು ಒಪ್ಪಂದ ಮಾಡಿಕಂಡೊ. ಆ ಪ್ರಕಾರ ದಿನೋಳು ನಾಲ್ಕ್ ಕಳ್ಸಿಗೆ ಅಕ್ಕಿನ ಹುಗ್ಗ ಮಾಡಿ ಅದಿಕೆ ಬೇಕಾದ ಗೈಪು, ಸಾಂಬಾರ್‌ಗಳೊ ಮಾಡಿ, ಒಂದು ಗಾಡಿಗೆ ಎರ್ಡ್ ಕೋಣಂಗಳ ಕಟ್ಟಿ ಒಬ್ಬ ಮೊಂಯಿಸ ಆ ಗಾಡಿನ ಹೊಡ್ಕಂಡ್ ಅಂವ ಇದ್ದಲ್ಲಿಗೆ ನಿತ್ಯ ಹೋಕು. ಆ ರಕ್ಕಸ ಅಷ್ಟ್ ಹುಗ್ಗ ಗೈಪುಗಳ ಅಲ್ಲದೆ ಆ ಎರ್ಡ್ ಕೋಣಂಗಳೊ, ಅದರೆಲ್ಲ ತಕ್‌ಲಂಡ್ ಹೋದ ಮೊಂಯಿಸನ್ನೂ ತಿಂದ್ ಆ ಗಾಡಿನ ಮಟ್ಟ ಊರಿಗೆ ಸೇರುವಾಂಗೆ ಮಾಡುದು. ದಿನಕ್ಕೊಂದೊಂದು ಮನೆವ್ರು ಈ ಸರಂಜಾಮುಗಳ ತಯಾರ್ಸಿ, ಒಬ್ಬ ಮೊಂಯಿಸ ಸರದಿ ಪ್ರಕಾರ ತಕಲಂಡ್ ಹೋಕು. ಇದ್ ಕಡ್ಡಾಯ. ಒಂದು ದಿನದ ಸರದಿ ತೊಪ್ಪಿತ್ತಾಂತಾದರೆ ರಕ್ಕಸ ಬಂದ್ ನಗರನ ಹೊಡಿ ತೆಗಿದು.

ನಾಳೆನ ಸರದಿ ನಮ್ಮದ್. ನಾನೇ ಹೋನೇಂತೇಳರೆ ಮುಂದೆ ಈ ಕುಟುಂಬಕ್ಕೆ

ಆಧಾರ ಇಲ್ಲದಾಂಗೆ ಆಗಿ ಸರ್ವನಾಶ ಆದಂತೇಳುದೆಯ್ಯ. 'ನೀವು ಹೋಕ ಹೊತ್ತ್, ನಾ ಹೋನೆ'ಂತ ನನ್ನ ಹೆಣ್ಣ್ ಹೇಳಿಕಲಂಡ್ ಅತ್ತನೆ. ಅದ್ ಹೋತುಂತಾದರೆ, ಮತ್ತೆ ಈ ಮಕ್ಕಳ ಆರೈಕೆ ಮಾಡಿಕೆ ಯಾರೋಳೋಂತ ಹೇಳಿಕಲಂಡ್ ನಾ ಅತ್ತನೆ. ಅದಿಕೆ ಈ ಹೆಣ್ಣ್ ಕೂಸು ಹೇಳ್ಟ್, "ಅವ್ವಾ, ಅಪ್ಪಾ, ನೀವಿಬ್ರೊರೂ ಹೋದು ಬೇಡ, ನಾ ಹೇಂಗೂ ನಿಮ್ಮ ಬುಟ್ಟ್ ಬೇರ ಮನೆ ಸೇರೊಂವ. ಹಾಂಗೆ ನಾನೇ ಹೋನೇ"ಂತ. ಅದ್ ಬೇರೆಯೊವ್ನ ಸೇರೋಕಾದ ಸೊತ್ತ್. ಹಾಂಗಿರ್ ಕನ ಬೇರೆವರ ಒಡವೆನ ನಾವು ಉಪಯೋಗ್ಸಿದ ದೋಸ ನಾವ್ಗ ಬಂದದೆ. ಇನ್ನ್ ನನ್ನ ಮಣ್ಣ, ತುಂಬ ಸಣ್ಣವ. ಅಂವನ ಕಳ್ಸಿರೆ ವಂಶಕ್ಕೆ ಮುಂದೆ ಯಾರೂ ಇಲ್ಲದೆ ಈ ಕುಟುಂಬಲಿ ಸತ್ತೊವ್ರಕೆ ಪಿಂಡ ಬುಡಿಕೆ ಗೆತಿ ಇಲ್ಲದಾದ. ಹೀಂಗೆ ಯಾವ ದಾರಿನೂ ಕಾಣದೆ ನಾವಲ್ಲ ಗೋಳಾಡಿಕಲಂಡ್ ಒಳ್" ಹೀಂಗ ಹಾರಂವ ಹೇಳಿಕಲಂಡ್ ಅತ್ತಲೆತ್.

ಇದರ ಕೇಳಿ ಕುಂತಿಗೂ ಬೇಜಾರಾತ್. ಇದಿಕ್ಕೊಂದು ಉಪಾಯನ ನೆಸ್ಸಿ ನಗೆನೂ ಬಾತ್. ಒಬ್ಬನ ಕಷ್ಟನ ನೋಡಿ ನಗಾಡುವ ಈ ಹೆಂಗ್ ಸ್ ಗೆ ಕಲ್ಲ್ ಮನ್ ಸ್ಂತ ಕಂಡದೆ. ಲೋಕಲಿ ಇಂತೂವ್ರೂ ಒಳೋಲೆ, ದೇವ್ರೇಂತ ಹಾರವಂಗೆ ಹಜ್ಜ್ ಸಿಟ್ಟೂ ಬಾತ್. ಆಗ ಕುಂತಿ ಹೇಳ್ತ್. "ನೀ ಕಲ್ಸಕಾದ ಸಾಮಾನ್‌ಗಳ ಎಲ್ಲ ಜೋಡ್ಸ್. ಅದರ ತಕಲಂಡ್ ಹೋಕೆ ನನ್ನ ಒಬ್ಬ ಮಜ್ಜನ ಕಳ್ಸನೆ" ಅದಿಕೆ ಹಾರಂವ. "ಅಯ್ಯಯ್ಯೋ ತಾಯಿ! ಎಂತಮಾತ್ ಹೇಳಿಯ? ಮಕ್ಕಳ ಮೇಲೆನ ಮೋಹ ಎಲ್ಲಾ ಜೀವಿಗಳಿಗೂ ಒಂದೇ ತರ ಅಲ್ಲೋ? ಹಾಂಗಿರ್ಕನ ನಿನ್ನ ಮಜ್ಜನ ಈ ಕೆಲ್ಸಕೆ ಕಳ್ಸಿಕೆ ನಿಂಗ ಹೇಂಗೆ ಮನ್ಸ್ ಬಾದು?'ಂತ ಕೇಳ್ತ್.

"ನಿಂಗ ಗೊತ್ತ್‌ಲೆ. ನಂಗೆ ಐದ್ ಜೆನ ಮಕ್ಕ ಒಳೊ. ಅದರ್ಲಿ ಎರ್ಡ್‌ನೆ ಮಜ್ಜ ಉಟ್ಟೋಲೆ. ಅಂವನ ಸಾಂಕಿಕೆ ನಂಗೆ ತುಂಬ ಕಷ್ಟ ಆದ್ಟ್. ಅಂವ ದೊಡ್ಡ ಹೊಟ್ಟೆ ಬಾಕ. ಅವಂಗೆ ತಿಂಬಕೆ ಕೊಟ್ಟ್, ಕೊಟ್ಟ್ ಸಾಕಾದೆ. ಅವನ ಒಮ್ಮೆ ಹೊರಗೆ ಹಾಕಿರೆ ಸಾಕಪ್ಪಾಂತ ನಂಗೆ ಆಗುಟು." ಹೀಂಗೆ ಕುಂತಿ ಹೇಳುದರ ಕೇಳಿ ಹಾರಂವಂಗ ಹೀಂಗೆನೂ ಒಂದು ಅಯ್ಯ ಈ ಲೋಕಲಿ ಇರುದೋಂತ ಆಶ್ಚರ್ಯ ಆತ್. ಅಂವ. "ಅವ್ವಾ ನೀವು ತಮಾಸೆ ಮಾಡಿ ಈ ಬಡ ಹಾರಂವನ ಗಾಯಕೆ ಉಪ್ಪು ಇಕಿದಾಂಗೆ ಮಾಡ್ಬಡಿ"ಂತ ಹೇಳ್ತ್.

ಆಗ ಕುಂತಿ "ಉಪ್ಪೂ ಇಲ್ಲೆ: ಮೆಣ್ಸೂ ಇಲ್ಲೆ. ನೀ ಎಲ್ಲ ಸಾಮಾನ್‌ಗಳ ತಯಾರ್ ಮಾಡಿ ಇಸ್. ನಾಳೆ ಬೊಳ್ಳಾಕನ ನನ್ನ ಮಜ್ಜ ನಿನ್ನ ಮನೆ ಮುಂದೆ ಇರ್ದ"ಂತ ಹೇಳಿ ಎದ್ದ್ ಹೊರ್ಟ್ ತನ್ನ ಮನೆಗೆ ಬಾತ್. ಎಲ್ಲ ಸಂಗತಿನ ಭೀಮಂಗೆ ಹೇಳ್ತ್. ಅದರ ಕೇಳಿ ಅವಂಗೆ ಕುಶಿಯೋ ಕುಶಿ. ಒಂದು, ನಾಳೆ ಹೊಟ್ಟೆ ತುಂಬ ತಿಂಬಕೆ ಸಿಕ್ಕದೇಂತ. ಇನ್ನೊಂದು, ಯಾರೊಟ್ಟಿಗೂ ಹೋರಾಡದೆ ತುಂಬ ದಿನ ಆಗಿ ಜಡ್ಡ್‌ಗಟ್ಟಿದ ಮೈಗೆ ಹಜ್ಜ್ ಲವಲವಿಕೆ ಉಂಟಾಕೆ ಒಂದು ಸಂದರ್ಭ. ಹೀಂಗೆ ಭಾರಿ ಕುಶಿಲಿದ್ದ ಭೀಮ ಯುಧಿಷ್ಠಿರನೂ ತಮ್ಮಂದಿರೂ ಬಂದ ಕೂಡ್ಲೆ ಬಕಾಸುರನ ಸುದ್ದಿನ ಹೇಳ್ತ್. ಅವ್ವೂ ಕುಶಿ ಆತ್. ಅವ್ರಕೆ ಖಾತ್ರಿ ಭೀಮನ ಕೈಗೆ ಸಿಕ್ಕಿದ ರಕ್ಕಸ ಜೀವ ಬುಡುದು ಹೊರ್ತು ಅವಂಗೆ ಬೇರೆ ದಾರಿ ಇಲ್ಲೆ. ಹಾಂಗೆ ಈ ಊರೊವ್ರು ಕೊಟ್ಟ ಋಣಕ್ಕೆ ಪ್ರತಿಯಾಗಿ ಅವ್ಕೆ ನಾವೊಂದು ಉಪಕಾರ

ಮಾಡಿಕೊ ಒಂದು ಅವಕಾಶ ಸಿಗ್ತ್ಂತ ಸಂತೋಸು ಪಟ್ಟ್ ಕಣಂಡೊ. ಇರ್‍ಲ್ ಎಚ್ಚರಿರ್‌ವಷ್ಟ್ ಹೊತ್ತು ಅವು ಬಕನ ಸುದ್ದಿನೇ ಮಾತಾಡಿಕಣಂಡೇ ಇದ್ದೊ. ಭೀಮಂಗಂತೂ ಎಚ್ಚರ. ನಿದ್ದೆ, ಕನ್ಸ್‌ಗಂತೇಳಿಯೇ ಬೊಳ್ಪಾತ್. ಕನ್ಸ್‌ಲಿ ಅವಂಗೆ ರಕ್ಕಸಂದೊಳೂ ಹೆಚ್ಚಿಗೆ ಕಾಂಬೊದು ಗಾಡಿ ತುಂಬಿದ ಹುಗ್ಗೆ ಗೈಪುಗಳ ರಾಶಿ. ಎಷ್ಟೋ ಸಣರ್ತಿ ನಿದ್ದೆಲೆ ಬಾಯಿ ಚಪ್ಪಿಕಂಬತಿತ್ತ್.

ಬೊಳ್ಪಿಗೆ ಎದ್ದಂವ ಅಯ್ಯನ ಕಾಲಿಗೆ ನಮಸ್ಕಾರ ಮಾಡ್ತ್ ಅಣ್ಣಂಗೂ ನಮಸ್ಕಾರ ಮಾಡ್ತ್. ತಮ್ಮಂದರ ತಲೆಮೇಲೆ ಕೈಯಾಡ್ಸಿ, ಹಾರ್ರ್ ಮನೆ ಅಂಗಳಕ್ಕೆ ಹೋತು. ಅವು ಎಲ್ಲ ತಯಾರ್ ಮಾಡಿ ಇಸಿದ್ದೊ. ಹಾರಂವನೂ ಹಾರ್ತಿನೂ ಅವಂಗೆ ಸೇಸೆ ಹಾಕಿ, ಆರೆತಿ ಮಾಡಿ, ಜಯಶೀಲನಾಗ್‌ಂತ ಆಶೀರ್ವಾದ ಮಾಡಿ, ಗಾಡಿನ ಅವನ ಕೈಗೆ ಒಪ್ಪಿಸಿದೊ. ಅವು ಮಾಡ್ದ ಆಶೀರ್ವಾದಂತೇಳ್ದು ಬರೀ ಉಪಚಾರದ ಮಾತ್, ಅಷ್ಟೆ! ಏಕೆಂದರೆ ರಕ್ಕಸನ ಹಕ್ಕಲೆ ಹೋದಂವ ತಿರ್‌ಗಿ ಬಾಕೆ ಉಟ್ಟೊ?ಂತ ಅವರ ಮನ್ಸ್‌ಲಿ. ಈಗಣೂ ನಾವು ಮೊಯಿಸಣರ್ ಹಿರಿಯೊವು ಕಿರಿಯೊವುಕೆ ಆಶೀರ್ವಾದ ಮಾಡುವೆ. “ನೀವ್ಗೆ ಎಲ್ಲ ಒಳ್ಳೆದಾಗಲಿ”ಂತ ಹರ್ಸುವೆ. ಅವು ಹರ್ಸಿದಾಂಗೆ ಎಲ್ಲ ಆಗಿ ಬುಟ್ಟರೆ ಈ ಲೋಕಣಲಿ ಕಷ್ಟಂತೇಳುದೇ ಇರಿಕಿತ್ತ್‌ಲೆ. ಆದರೆ ನಾವು ನಮ್ಮ ಕಣ್ಣ್ ಮುಂದೆ ಎಷ್ಟ್ ಗೋಳಾಟಗಳ ನೊಡುದುಲೆ? ಆದರೆ ಮನ್‌ಷ್‌ನ ಆಸೆ ದೊಡ್ಡಣದ್. ನಮ್ಮ ಆಸೆಗಳ ಪ್ರಕಟ ಮಾಡುದೇ ಆಶೀರ್ವಾದ. ಅದರ ಕೇಳ್ದೊವ್ಕೆ ಮನ್ಸಿಗೆ ಹರ್ಸ ಆದೆ. ಹೇಳೊವ್ರೊಕೂ ಕುಸಿ ಆದೆ. ಅಂತು ಇದೆಲ್ಲ ಒಂದು ಪೊಳ್ಳು ಭರವಸೆಂದ ನಡ್ದದೆ. ಆಶೀರ್ವಚನಂಗ ಆ ವ್ಯಕ್ತಿನ ಜಯ ತಾವ ಕಾರ್ಯಕೆ ಪ್ರೇರಣೆ ಕೊಟ್ಟ್ ಅಂವಂದ ಒಳ್ಳೆ ಕೆಲ್ಸ ಆಕೆನೂ ಸಾಧ್ಯ ಉಟ್ಟು. ಅದಿರ್ಲಿ, ಮುಂದನ ಕತೆನ ನೋಡೊನೊ.

ಭೀಮ ಬೇಕುಂತಳೇ ನಿಧಾನವಾಗಿ ಗಾಡಿ ಓಡ್ಸಿತ್. ರಕ್ಕಸಂಗೆ, ತಡುವಾದಣಷ್ಟೂ ಹೆಚ್ಚ್ ಹಸಿವಾದು, ಹಸಿವು ಹೆಚ್ಚಿದಣಷ್ಟೂ ಕೋಪನೂ ಹೆಚ್ಚುದು. ಜೆಗಳಕೆ ತಾನಾಗಿ ಕಾಲ್ ಕೆರ್ದ್ ಬಾದು. ಆಗ ಅವನ ಮೊಡ್ಡಿ ಹಿಡಿಯಕೆ ಸುಲಭ. ಒಂದು ಗಾದೆ ಉಟ್ಟು. ‘ಹಸಿದ ಹಾರಂವನ ತಡಿಬೇಡ. ಉಂಡ ಮುಸಲ್ಮಾನನ ತಡಿಬೇಡ’ಂತ. ಮುಂದೆ ಈ ಗಬ್ಬ್ ಊಟನ ನಾ ಹೊಡ್ಕಣೆ. ಆಮೇಲೆ ರಕ್ಕಸನ ಹೊಡಿಯಕೆ ಸುಲಭ. ಹೀಂಗೆ ನೆನ್ಸಿದ ಭೀಮ ಒಂದು ಮರದಡಿಲಿ ಗಾಡಿನ ನಿಲ್ಸಿತ್. ಹುಗ್ಗೆಗೆ ಸಾಂಬಾರ್ ಗೈಪುಗಳ ಬೆರ್ಸಿ ಪೊರ್ಲ್ ಕಲ್‌ಸಿತ್. ಮತ್ತೆ ಮುದ್ದೆ ಮಾಡಿ ಮಾಡಿ, ಬಾಯಿಗೆ ಹಾಕಿ ಚಪ್ಪಿ ಚಪ್ಪಿ ನೂಂಗಿತ್. ಎಷ್ಟಾದರೂ ಹಾರ್ರ್ ಮಾಡುವ ಅಡಿಗೆನೇ ಅಡಿಗೆ. ಬೇರೆವ್ರೊಕೆ ಕೊಡಿಕೆ ಇದ್ದಣದರ ನೀರ್ ಚಾರ್‌ಂತ ಉಪ್ಪಾದರೆ ಉಪ್ಪು, ಕಾರ ಆದರೆ ಕಾರ ಆಗಿ ಮಾಡಿಕೊಡುವ್ರೊ ಇಂದ್ ಹಾಂಗೆ ಮಾಡ್‌ತ್‌ಲೆ. ಲಾಯ್ಕುಟ್ಟು. ಹೊಟ್ಟೆ ತುಂಬ ಹೊಡಿಯೊನೋಂತ ತಿಂಬಕೆ ಸುರುಮಾಡ್ತ್. ಪಾತ್ರಗಳ ಅಡಿಲಿ ಹಜ್ಜಿ ಮಾತ್ರ ಹುಗ್ಗೆ ಒಳ್ತ್. ಅದರ ರಕ್ಕಸಂಗೆ ತೋರ್ಸಿಕಣಂಡ್, ನಂಪುಸಿಕಣಂಡ್ ತಿನಣಕ್‌ಂತ ನೆನ್ಸಿ, ಓಂದಕೆ ಗಾಡಿನ ಹೊರ್ಡ್ಸಿ, ರಕ್ಕಸ ಇರುವ ಜಾಗಗೆ ಬಾತ್. ಬಕ ದೂರಂದಣಳೇ ಇವನ ನೋಡಿ ಕೋಪಣಲಿ ಅವನ ಕೋರೆ ಹಲ್ಲ್‌ಗಳ ಕಟ ಕಟಂತ ಕಣಚ್ಚಿಕಣಂಡ್ ಸದ್ದ್ ಮಾಡ್‌ತಿತ್ತ್. ಭೀಮ ಒಳ್ಳೆ ಹುಗ್ಗೆ

ಗೈಪುಗಳ ಕಲ್ಸಿ ದೊಡ್ಡ ಮುದ್ದೆ ಮಾಡಿ ರಕ್ಕಸಂಗೆ ಕೊಡುವ ಹಾಂಗೆ ಕೈ ನೀಂಡಿ. ಮತ್ತೆ ಪಕ್ಕನೆ ತನ್ನ ಬಾಯೊಳೆಗೆ ತುಂಬ್‌ಸಿ. ಚಪ್ಪಿ ಚಪ್ಪಿ ನೂಂಗಿ, ಡರ್ರ್ ಡರ್ರ್‌ಂತ ತೇಗ್ ಬುಟ್ಟ್, ನೆಗಾಡ್‌ತ್ತಿತ್ತ್. ಇಷ್ಟರವರೆಗೆ ಯಾರೊಬ್ಬಂಗೂ ಹೀಂಗೆ ಮಾಡಿಕೆ ಧೈರ್ಯ ಇತ್ತ್‌ಲೆ. ಇಂದ್ ಇಂವನ ವರ್ತನೆ ವಿಶೇಷವಾಗಿ ಉಟ್ಟೊಲೇಂತ ಆಶ್ಚರ್ಯನೂ ಆತ್. ಮನ್ಸ್‌ನೊಳಗೆ ಪಿಜ್ಯ ಹೆದ್‌ರಿಕೆನೂ ಆತ್. ಆದರೆ ರಕ್ಕಸನ ಕುಹಕ ಬುದ್ಧಿಂದ. ಸದ್ದಿಲ್ಲದೆ ಭೀಮನ ಹಿಂದೆಂದ ಬಂದ್. ಅವನ ಎರ್‌ಡ್ ಪಕ್ಕಗೆಳಿಗೂ ಜೋರಿ ಗುದ್ದಿತ್. "ಏ! ಹಿಜ್ಯ ತಡಿ ಮಾರಾಯ ಬಾಕಿ ಇದ್ದದರ ಮುಗ್ಸಿಕಣೆ. ಆಕೇರಿಗೆ ಇದ್ದೆದರ ಚೇಂಟೆ ತಿಂಬೊದುಟ್ಟಲೆ ಅದ್ ಬಾರಿ ರುಚಿಂತ ಹೇಳಿಕೆಂಡ್. ರಕ್ಕಸ ಒಬ್ಬ ಲೆಕ್ಕಕೇ ಇಲ್ಲದಂವಂತೇಳಿ. ಅಂವ ಒಳ್ಳದರ ಮುಗ್ಸುವ ಕೆಲ್ಸಲೇ ಇತ್ತ್. ಬಕ ಹಿಂದೆ ಹೋಗಿ ತಿರ್ಗ ಬಂದ್ ಮೇಲೆ ಜೀಳುವಷ್ಟರ್ಲಿ ಭೀಮ ಎದ್ದ್, ಪಕ್ಕಕೆ ತೆಲ್ಗಿ ನಿತ್ತತ್. ವೇಗಂದ ಬಂದ ರಕ್ಕಸ, ಮುಂಗ್ಗುರ್ಲಿ ಬೀತ್. ಆಗ ಭೀಮ ಅವನ ಎರ್ಡ್ ಕಾಲ್‌ಗಳ್‌ಲಿ ಹಿಡ್ದ್ ನೇಜಿ. ಅವನ ಗರಗರಂತ ಸುತ್ತಿ ಮತ್ತೆ ಮೊಡ್ಕಳ ಪಾರೆಕಲ್ಲಿಗೆ ಸೀರೆನ ಬೀಸಿ ಬೊಡಿವಾಂಗೆ. ಕಲ್ಲಿಗೆ. ಮರಕ್ಕೆ ಅವನ ಬೀಸಿ ಬೀಸಿ ಬೊಡ್ತ್. ರಕ್ಕಸನ ಉಸುರು ಹಾರಿ ಹೋತು. ಒಂದು ಕಾಡ್ ಬೊಳ್ಳಿನ ಎಳ್ತ್ ತಂದ್ ಅವನ ಹೆಣದ ಎರ್ಡ್ ಕಾಲ್‌ಗಳ ಸೇರ್ಸಿ ಕಟ್ಟಿ ಅದರ ಇನ್ನೊಂದು ಕೊಡಿನ ಗಾಡಿನ ಹಿಂದೆಗೆ ಬಿಗ್‌ದ್ ಕಟ್ಟಿ ಗಾಡಿನ ಹಿಂದೆ ಹೊಡ್ಕಂಡ್ ಬಾತ್. ಆ ರಕ್ಕಸನ ಹೆಣನ ಎಳಿಯಕ ಆ ಕೋಣಂಗೆಳಿಗೆ ತುಂಬ ಬಂಗ ಆತಿತ್ತ್. ಭೀಮ ಕೋಣಂಗೆಳಿಗೆ ಉತ್ಸಾಹ ಬಾಕೆ, ಗದ್ದೆ ಹೊಡ್‌ಕನ ದೆನಿ ಕೊಟ್ಟವೆಲೆ. ಹಾಂಗೆ 'ಓವ್ರೋ ಬೊಳ್ಳೆ ಬೇಕ ನಡಪುಲ ಮಗಾ, ಎಡ್ಡೆ ಒಯ್ದು ಮಗ ಕಾಳಾ.–ಅಂ..ಓ..... ಇಲ್ಲಡೆಗ್ ಬೇಕೊನೆ ಎತ್ತ್‌ಂಟ ನಿಕ್‌ಳೆಗ್, ಪೆಲಕಾಯಿತ ರಚ್ಚೆತ, ಬೆಚ್ಚ ಕಮ್ಮನೊ ಮಡ್ಡಿನ್ ಬಂಜಾರ ತಿನಿಯಾರ ಕೊಪ್ಪರ್ಣವೆ,.... ಓವ್ರೋ..... ಓ.ಓ. ಮಧ್ಯಾಹ್ನ ಕರೀತ್ ಬಯ್ಯಾವ್ರೋಣ್ಣು ಬರ್ಪುಂಡು! ನಿಕ್‌ಳೆ ಕಂಟೆಲ್ತ್ ಗೆಜ್ಜೆ, ಜಣಜಣ ಪಣ್ಣುಂಡು. ನಲಿತೊಣ್ತ್ ನಡಪುಲೆ ಪೊಸ ಮದಿಮಯಲೆಕೊನೇ ಓವ್ರೋ.... ಕಾಳೆನೊ. ಬೊಳ್ಳನೊ ಓವ್ರೋ.....ಓ ..ಅಂ"

ಇಂವ ರಾಗೆಲಿ ಹಾಡುದರ ಕೇಳಿ ಕೇಳಿ ಕೋಣಂಗೂ ಗಿಜಿಲ್ ಗಿಜಿಲ್‌ಂತ್ ತಾಳ ಹಾಕುವಾಂಗೆ ತಲೆ ಮುಕ್ಕುಡ್ಸಿಕೆಂಡ್ ಉತ್ಸಾಹಲಿ ನಡ್ಡೊ. ಕಾಡ್‌ಲಿದ್ದ ಪಕ್ಕಿಗೆಲ್ಲ ಹಾರಿಬಂದ್ ದಾರಿ ಕರೆಲಿ ಇದ್ದ ಮರಂಗಳ್ಲಿ ಕುದ್ದ್‌ಕೆಂಡ್ ಆಲ್ತ್‌ತಿದ್ದೊ. ಭೀಮ ಆ ರಕ್ಕಸನ ಹೆಣನ ನಗರದ ನೊಡುಲಿದ್ದ ಮೈದಾನಲಿ ಹಾಕಿ. ಗಾಡಿನೂ ಕೋಣಂಗಳೂ ಆ ಹಾರಂವಗೊಪ್ಪ್‌ಸಿ, ಮನೆಗೆ ಬಾತ್. ನಡ್ದ ಸಂಗತಿನೆಲ್ಲ ಕೇಳಿ ಕುಂತಿಗೂ ಅವನ ಅಣ್ಣ ತಮ್ಮಂದಲಿರಿಗೂ ತುಂಬ ಕುಸಿ ಆತ್. ಭೀಮನ ತುಂಬ ಕೊಂಡಾಡ್‌ದೊ.

ಇಡೀ ನಗರನ ತಲ್ಲಣ್ಸಿ ಹೋವಾಂಗೆ ಮಾಡ್‌ತಿದ್ದ ರಕ್ಕಸನ ಕೊಂದ ವೀರಂಗೆ ಜೆನ ಎಲ್ಲ ಸೇರಿ, ಮೆರವಣಿಗೆ ತೆಗ್ದ್ ಜಯಕಾರ ಹಾಕಕೆಂಡ್ ಬೀದಿ ಬೀದಿ ಸುತ್ತಿದೊ. ರಕ್ಕಸನ ಕೊಂದ ನಿಜವಾದ ವೀರ ಯಾರ್‌ಂತ ಅವ್ಕ ಗೊತ್ತ್‌ಲೆ. ಬ್ರಾಹ್ಮಣರ ಕೇರಿಲಿ ಎಲ್ಲಿಂದಲೋ ಬಂದ್ ನಿತ್ತ ಬ್ರಾಹ್ಮಣರ್ಲಿ ಒಬ್ಬಂತ ಮಾತ್ರ ಅವ್ಕೆಗೊತ್ತು. ಕೆಲೆವು ಇಂತ

ರಕ್ಕಸನ. ಪುಳಿಚಾರ್ ಹಾರಂವಂಗೆ ಕೊಲ್ಲಿಕೆ ಹೇಂಗೆ ತೀರ್ದುಂತ ಸೊಂಸಯು ಆದಿಕೆ ಮತ್ತೊಬ್ಬ, ಹಾರ್ಲ್ ಸರ್ತಲಿ ಬಲಇಲ್ಲದೆ ಇರುವ್ರೊ. ಆದರೆ ಅವರ ಹಕ್ಕಲೆ ಇರುವ ಮಂತ್ರ ತಂತ್ರಂಗಳ ಮಾಟ, ಕಾಟಗ ಏನ್ ಸಾಮಾನ್ಯದ್ದೊ? ಅಂತ ಮಂತ್ರ ಸಿದ್ದಿ ಪಡ್ದಲೆವ್ರು ಏನ್ ಬೆಕರೂ ಮಾಡುವ್ರೊ ಗುತ್ತುಟ್ಟೋಂತ ಸಮರ್ತನೆ ಕೊಟ್ಟಲೆತ್. ಓಂಗೆ ಎಲ್ಲಲೆವ್ರೂ, ಆ ಪರದೇಸಿ ಬ್ರಾಹ್ಮಣನ ಯಾಗೋಳು ಹೊಗ್‌ಳಿಕಲೆಂಡೇ ಇದ್ದೊ. ಈ ಬ್ರಾಹ್ಮಣಲೆರ್ ಭಿಕ್ಷೆ ಬೇಡಿಕೆ ಹೋಕನ ತುಂಬ ತುಂಬ ಭಿಕ್ಷೆ ಹಾಕಿಕೆ ಸುರುಮಾಡ್ದೊ.

ಓಂಗಿರ್‌ಕನ ಒಂದು ದಿನ ಹೊತ್ತು ಕಲೆಂತುವ ಸಮಯಕ್ಕೆ ಹರ್ಕ್‌ಲ್ ಬಟ್ಟೆನ ಉಟ್ಟ್‌ಕಲೆಂಡ್ ಇದ್ದ ಒಬ್ಬ ಹಾರಂವ, ಸಂಗೆ ಮಲ್ಗಿಕೆ ಹಣ್ಜಾಗೆ ಕೊಡುವಲೆರಿಯೋಂತ ಕೇಳ್ತ್. ಅಂವಂಗೆ ಹಾಸಿಕಂಬಕೆ ಒಂದು ಸಾರೆಜದ ಚಲೆರ್ಮನ ಕೊಟ್ಟೊ. ಅದರ್ಲಿ ಮಲ್ಕ್ಕಲೆಂಡ್ ಇದ್ದ ಹಾರಂವನೊಟ್ಟಿಗೆ ಯುಧಿಷ್ಠಿರ. ನೀವ್ರು ಎಲ್ಲಿಂದ ಬಂದಲೆರಿ? ಎಲ್ಲಿಗೆ ಹೋದರೆಂತ ಕೇಳ್ತ್. ಅದ್ಕ ಆ ಹಾರಂವ. ನಾ ಉತ್ತರಾಪಥದ ಹಸ್ತಿನಾವತಿಂದ ಬಂದೆಂತ ಹೇಳ್‌ಕನ. ಹಂಗಾರೆ ಅಲ್ಲಿ ಪಾಂಡವರ ಸುದ್ದಿ ಏನಾರ್ ಉಟ್ಟೊ? ಧೃತರಾಷ್ಟ್ರ ಮತ್ತೆ ದುರ್ಯೋಧನ ಎಲ್ಲ ಹೇಂಗೆ ಒಳೊಂತ ಕೇಳ್ತ್. ಅವೆಲ್ಲ ಸೌಖ್ಯಲೆ ಒಳೊ. ದುರ್ಯೋಧನ ಭಾರಿ ಕುಶೀಲೇ ಉಟ್ಟು. ಪಾಂಡವಲೆರ್ ಅರ್ಕ್ನ ಮನೆಲಿ ಸುಟ್ಟ್ ಬೊಸ್ಮ ಆಗಿ ಹೋದೊ. ದಾಯಾದಿಗಳ ಬೇರ್‌ಸಮೇತ ಕಿತ್ತ್ ಇಟ್ಟಾಂಗೆ ಆತ್. ಇಡೀ ಕುರು ಸಾಮ್ರಾಜ್ಯ ನನ್ನಲೆದೇ ಆತ್ಂತ ನೆಮ್ಮದಿಲೇ ಉಟ್ಟು. ಇತ್ತ ದ್ರುಪದಂಗೆ ದ್ರೋಣಂದ ಆದ ಅವಮಾನಕ್ಕೆ ಪ್ರತೀಕಾರ ಮಾಡುವ ಉದ್ದೇಶಂದ ದ್ರೋಣನ ಕೊಲ್ಲುವಂತ ಒಬ್ಬ ಮಜ್ಜನ್ನೊ, ಅರ್ಜುನಂಗೆ ಹೆಣ್ಣಾಗುವಂತ ಒಂದು ಮಗಳನ್ನೊ ಪಡಿಯೊಕೂಂತ ನಿಶ್ಚಯ ಮಾಡಿ, ದ್ರುಪದ ಒಬ್ಬ ರುಸಿನ ಮೂಲಕ ಪುತ್ರಕಾಮೇಷ್ಟಿಯಜ್ಞ ಮಾಡ್ಲಿತ್. ಆ ಯಜ್ಞಕುಂಡಂದ ಬಿಲ್ಲ್. ಬಾಣ, ಅಭೇದ್ಯ ಅವಚ ಮತ್ತೆ ಗುರಾಣಿನ ಹಿಡ್ಕಲೆಂಡ್ ಒಬ್ಬ ಮಜ್ಜ ಹುಟ್ಟಿ ಬಾತ್. ಅವಂಗೆ ಧೃಷ್ಟದ್ಯುಮ್ನಂತ ಹೆಸ್ರ್. ಆ ಮೇಲೆ ತುಂಬ ಸುಂದರಿಯಾದ ಯಾಜ್ಞಸೇನಿ. ಅಥವಾ ಅದರ ಮೈ ಬಣ್ಣ ಹಣ್ಣು ಕಲೆಪ್ಪು ಇರುದರ್‌ಂದಾಗಿ ಕೃಷ್ಣೆಂತಳೂ ಹೆಸ್‌ರಿರುವ ಒಬ್ಬ ಮಗಲೆಳೂ ಬಾತ್. ಇವರ ಒಟ್ಟಿಗೆ ಒಂದು ಬಿಲ್ಲೂ, ಅದರೊಟ್ಟಿಗೆ ಐದ್ ಬಾಣಂಗಲೆಳೂ ಹುಟ್ಟಿ ಬಂದೊ.

ಈ ಬಿಲ್ಲ್‌ಗೆ ಈ ಬಾಣಗಳ ಏರ್ಸಿ, ದ್ರುಪದನಮನೆ ಅಂಗಳಲಿ ನೆಲೆಟ್ಟ ಕಂಬಲೆಲಿ ಮೇಲೆ ತಿರ್ಗ್ತ್ಂಡ್ ಇರುವ ಯಂತ್ರದ ಮೀನಿನ ಕೆಳಗೆನ ನೀರ್‌ಲಿ ಅದರ ಪ್ರತಿಬಿಂಬ ನೋಡಿ ಗುರಿ ಇಸಿ ಹೊಡ್ಡ್ ತಾಂಗ್ಲುವ ವೀರನೇ ದ್ರೌಪದಿಗೆ ಗಂಡ ಆದೂಂತ ಆಕಾಶವಾಣಿ ಹೇಳಿಟು ಗಡ. ಅಂಥ ಸಾಹಸ ಪುರುಷ ಅರ್ಜುನ ಅಲ್ಲದೆ ಬೇರೆ ಯಾರೂ ಇಲ್ಲೆಂತ. ಹಾಂಗಾಗಿ ಪಾಂಡವಲೆರ್ ಎಲ್ಲಿಯೋ ಇರೊಕುಂತ ಕಂಡದಂತ ಬುದ್ಧಿವಂತರಾದ ಕೆಲವ್ರು ಜೆನ ಮಾತಾಡಿಕಲೆಂಡ್ ಒಳೊಂತಳೂ ಆ ಹಾರಂವ ಹೇಳ್ತ್.

ದ್ರುಪದ ಅವನ ಮಗ ದ್ರೌಪದಿಗೆ ಸ್ವಯಂವರ ಮಾಡೊಕುಂತೇಳಿ ಛತ್ರವತಿಂತೇಳುವ ಅವನ ಪಟ್ಟಣನ ಬಾರೀ ಜೋರ್ಲು ಸಿಂಗರ್ಸ್ಲಿ ದೇಶಲಿರುವ ರಾಜಕುಮಾರರ ಎಲ್ಲರ

ಕಳ್ಸಿಟು. ದುರ್ಯೋಧನ ಕರ್ಣಾದಿಗಳೆಲ್ಲೂ ಅಲ್ಲಿಗೆ ಬಂದ್ ಸೇರ್ರ್ಕೊ. ನಾ ಅಲ್ಲಿಂದ ಬಂದಳೆದ್'ಂತ ಹಾರಂವ ಯುಧಿಷ್ಠಿರಂಗೆ ಹೇಳ್ತ್.

ಈ ವರ್ತಮಾನ ಕೇಳ್ದ ಮೇಲೆ ಪಾಂಡವರ್ ಎಲ್ಲೆವ್ರೂ ಸಮಾಲೋಚನೆಗೆ ಕುದ್ರ್ಲೊ. ತಲೆಗೆ ಸೀರೆನ ಮುಸುಕು ಹಾಕಳೆಂಡ್ ಎಷ್ಟ್ ದಿನ ಇನ್ನೂ ತಲೆಮುಚ್ಚಿಕಳೆಂಡ್ ಹೇಡಿಗಳಾಂಗಿರ್ದು? ದ್ರೌಪದಿನ ಸ್ವಯಂವರದ ನೆವನಂವ ಒಂದೇ ಕಡೆಲಿ ನಮ್ಮ ಶತ್ರುಗಳೆಲ್ಲೂ ಮಿತ್ರೆರೂ ಸೇರಿರುವ್ರೊ. ಇಲ್ಲಿ ಒಮ್ಮೆಗೇ ಶತ್ರುಗಳೆಳಿಗೂ ಮಿತ್ರೆರಿಗೂ ಅರ್ಜುನನ ಬಾಣ ಬುಡುವ ಚಾತುರ್ಯ ಎಲ್ಲದರ್ರೂ ತೋರ್ಸಿಕೆ ಒಂದು ಒಳ್ಳೆ ಸಂದರ್ಭ. ಇನ್ನ್ ನಾವು ಇಲ್ಲಿರುದು ಸಾಕ್, ಪಾಂಚಾಲನಗರದ ಕಡೆಗೆ ಬೇಗನೆ ಹೊರ್ಡೊನೋಂತ ನಿಶ್ಚಯ ಮಾಡ್ದ್ರೊ. ಹಾಂಗೆ ಹೊರ್ಟ್, ಗಿರಿಗಳ, ಕಾಡ್‌ಗಳ, ಹಳ್ಳಿಗಳ, ಪಟ್ಟಣಗಳ ದಾಟಿಕಳೆಂಡ್ ನಡ್ಕಳೆಂಡ್ ಹೋದ್ರೊ, ಕಾಡ್‌ನ ಮರಗಳ, ಮೃಗಳ ಹೂಹೊಳ್ಳಿಗಳ ಪೊಲ್ರ್ಬನ ನೋಡಿಕಂಡ್ ಸಂತೋಸು ಪಟ್ಕಳೆಂಡ್ ಹೋದ್ರೊ. ದಾರಿನ ಉದ್ದಕ್ಕೂ ಅವ್ಕೆ ಶುಭ ಶಕುನಂಗಳೇ ಕಂಡ್ ಅವರ ಮನ್ಸಿಗೆ ಹರ್ಷನೂ ಉತ್ಸಾಹನೂ ಉಂಟಾತ್. ಹಾಂಗೇ ನಡ್ಟ್ ನಡ್ಟ್, ಯಮುನಾ ನದಿಕರೆಗೆ ಎತ್ತಿದ್ರೊ. ಹಗ್‌ಲ್ ಕಳೆಳ್ದ್ ಕತ್ತಲಾತ್. ಅಲ್ಲಿ ಅಂಗದ ಪರ್ಣಂತೇಳುವ ವನ ಪ್ರದೇಶ. ಅದ್ ಅಂಗದಪರ್ಣಂತ ಹೆಸ್‌ರಿರುವ, ಕುಬೇರನ ಆಳಾಗಿದ್ದ ಒಬ್ಬ ಗಂಧರ್ವನ ಅಧಿಕಾರಕ್ಕೆ ಸೇರ್ದ ಜಾಗೆ. ತುಂಬ ಕತ್ತಲೆ ಆಗಿದ್ದರ್'ಂದ, ಎಲ್ಲರ್'ಂದ ಮುಂದೆ ಅರ್ಜುನ ಒಂದು ಸೂಟೆನ ಹಿಡ್ಕಳೆಂಡ್ ಹಳ್ಳ ದಾಟಿಕೆ ಹೊರ್ಟಿತ್ತ್. ಅಷ್ಟ್ರಲ್ಲಿ ಅಲ್ಲಿ ಆ ಗಂಧರ್ವ ಅವನ ಹೆಣ್ಣ್‌ಗಳೊಟ್ಟಿಗೆ ನೀರಾಟ (ಜಲಕ್ರೀಡೆ) ಆಡ್‌ತಿತ್ತ್. ಬೇರೆ ಜನಂಗ ಅಲ್ಲಿ ಬಂದದರ್'ಂದ ಅವರ ಆಟಕ್ಕೆ ತೊಂದರೆ ಆತ್. ಅವನ ಹೆಣ್ಮಕಳಿಗೆ ನಾಚಿಕೆ ಆತ್. ಗಂಧರ್ವ ಕೋಪಳೆಲಿ ಕಿಡಿ ಕಿಡಿ–ಆತ್. ಅರ್ಜುನನ ಎದ್‌ರಿಗೆ ಬಂದ್ ಯಾರ್ರ್ಯಾ ನೀ ಈ ಹೊತ್ತ್ಲಿ? ಈ ಪ್ರದೇಶ ನನ್ನ ಆಧೀನಳೆಲಿ ಇರುವಂತಳೆದ್. ಈ ಇರ್ಳ್‌ನ ಹೊತ್ತು ಕೂಡ ನಮ್ಮಂತ ಗಂಧರ್ವರಿಗಲ್ಲದೆ ನಿಮ್ಮಂತ ನರ ಹುಳ್ಳಿಗಳೆಳಿಗಲ್ಲ. ಹೀಂಗಿರ್ಕನ ಈ ಅತಿಕ್ರಮಣ ಮಾಡಿಕೆ ನಿಂಗೆ ಎಷ್ಟ್ ಸೊಕ್ಕು ಇರೊಕು ಅಲ್ಲಾಂತ ? ಕೇಳ್ತ್. ಅರ್ಜುನಂಗೆ ಕೋಪ ಬಂದ್ ಆ ಸೂಟೆನ ಹರ್ಕಿ ಅವನ ಕಡೆಗೆ ಇಟ್ಟೆತ್. ಅದರ ಕಿಚ್ಚಿ ಲಯ ಕಾಲದ ಅಗ್ನಿನಾಂಗೆ ಹಬ್ಬಿ ಎಲ್ಲದರ್ನೂ ಸುಡಿಕೆ ಸುರುಮಾಡ್‌ಕನ ಗಂಧರ್ವ ಬಂದ್ ಕ್ಷಮೆ ಕೇಳಿ ಅರ್ಜುನನ ಕಾಲಿಗೆ ಬೀತ್. ಅರ್ಜುನ ಅಗ್ನಿನ ಶಾಂತ ಮಾಡ್ತ್. ಮತ್ತೆ ಅಂಗದ ಪರ್ಣ ಕುಂತಿನ್ನೂ, ಪಾಂಡವರ್ರೂ ಅವನ ಅರಮನೆಗೆ ಕರ್ಕಂಡ್ ಹೋತು. ಅಲ್ಲಿ ಅವ್ರಕೆ ಸುಖ ಮಜ್ಜನಕ್ಕೆ ಮತ್ತೆ ಮೃಷ್ಟಾನ್ನ ಭೋಜನಕ್ಕೆ ಏರ್ಪಾಡ್ ಮಾಡ್ತ್. ಆ ಮೇಲೆ ಅರ್ಜುನಂಗೆ "ನೀ ನನ್ನ ಜೀವಳೆಲಿ ಒಳ್ಳೆ ಉಪಕಾರ ಮಾಡಿಯೊಳ. ಹಾಂಗೆ ನಾ ನಿಂಗೆ ಚಾಕ್ಷುಸೀ'ಂತೇಳುವ ವಿದ್ಯೆನ ಹೇಳಿ ಕೊಟ್ಟನೆ ಅದರ್'ಂದ ನೀ ಎಷ್ಟ್ ದೂರಳೆಲಿರುವ ಎಂತದರ್ನೂ ನೋಡಳೆಕ್'ಂತ" ಹೇಳ್ತ್. ಅದಿಕ್ಕೆ ಅರ್ಜುನ, "ನಾ ಕ್ಷತ್ರಿಯ. ನಂಗೆ ದಾನ ತಕಂಬಕೆ ಆಗಳೆದ್'ಂತ" ಹೇಳ್ತ್. ಹಾಂಗಾರೆ ನಿನ್ನ ಆಗ್ನ್ಯಸ್ತ್ರ ಪ್ರಯೋಗನ ನಂಗೆ ಹೇಳಿಕೊಡು ಅದಿಕ್ಕೆ ಪ್ರತಿಯಾಗಿ ನೀ ಇದರ ತಕ"ಂತ ಹೇಳ್ಳ್ರಕೆ ಅರ್ಜುನ ಒಪ್ಪಿ

ಹಾಗೇ ಮಾಡ್ತ್. ಮತ್ತೆ ನನ್ನ ಸ್ನೇಹದ ಕಾಣಿಕೆಯಾಗಿ ನನ್ನ ಹಕ್ಕಲ್ ಇರುವ ಐನೂರು ಜಾತಿ ಕುದುರೆಗಳ ಒಪ್ಪುಸಿಕಣೊಕುಂತ ವಿನಯëಲಿ ಕೇಳ್ತ್. ಆಗ ಯುಧಿಷ್ಠಿರ ಹೇಳ್ತ್. "ಅದೆಲ್ಲ ನಮ್ಮëದಾಗಿ ಈಗ ನಿನ್ನಕ್ಕಲೇ ಇರ್ಲಿ. ಅಗತ್ಯ ಬೀಳ್ಕನ ಮುಂದೆ ಅದರ ನಿನ್ನ ಕëಯಿಂದ ತರ್ಸಿಕಂಡವೆ." ಅದಿಕೆ ಗಂಧರ್ವನೂ ಒಪ್ಪಿಕಂಡëತ್. ಮೊರ್ದಿನ ಬೊಳ್ಪಿನ ಸೂರ್ಯೋದಯದ ಸಮಿಯಕೆ ಪಾಂಡವëರ್ ಅಯ್ಯ್ ಮಕ್ಕ ಅಲ್ಲಿಂದ ಹೊರ್ಟ್ರ್.

ಹಾಂಗೆ ಹೋದೊವು ಪಾಂಚಾಲ ದೇಸಕ್ಕೆ ಮುಟ್ಟಿದೊ. ಅದ್ ಬಾರಿ ಸಂಪೊತ್ತ್ನ ಊರಾಗಿ ಕಂಡëತ್. ಭೂಮಿಗೆ ನೀರ್ ಹಾಯ್ಸಿಕೆ ಮಾಡ್ದ ಕಾಲುವೆಗ ಬಲೆ ನೆಯ್ದ ಹಾಂಗೆ ಎಲ್ಲ ಕಡೆಗೂ ಇದ್ವೊ. ಅದರ್ಲಿ ಎಲ್ಲದರ್ಲೂ ತಿಳಿಯಾದ ನೀರ್ 'ಜುಳು ಜುಳು'ಂತ ಹರಿಯುತ್ತಿತ್ತ್. ಆ ನೀರ್ಲಿ, ಜೆರ್ಲುದ್ದದ, ಜೋಟುದ್ದದ, ಮೀನ್‌ಜೆರ್ಗ್‌ಗ, ಅತ್ತ ಇತ್ತ ಮೀಸಿ ಕëಂಡ್. ಬಿಸ್ಲ್ ಬೀಳ್ಕನ ತಮ್ಮ ಮೈ ಬಣ್ಣನ ಮಿಂಚ್ಸಿಕëಂಡ್ ಇದ್ವೊ. ಇದರ ನೋಡಿಕೆ ಮೊಂಯಿಸëರಿಗೆ ಮಾತ್ರ ಅಲ್ಲ ಕೊಕ್ಕರೆಗëಳೂ ಕುಸಿಪಟ್ಟ್ ಕëಂಡ್, ಅರೆಗëಣ್ಣ್ ಮುಚ್ಚಿëಂಡ್ ತಪಸ್ ಮಾಡುವಾಂಗೆ ಒಂಟಿಕಾಲ್ಲಿ ನಿತ್ಕëಂಡ್ ಇದ್ವ್, ತಮ್ಮ ಹಕ್ಕಲ್ ಬಂದೊವ್ಕೆ ಮೋಕ್ಷ ಕೊಡುವ ಕಾರ್ಯëಲಿ, ಹೊರೆಗೆನ ಪ್ರಪಂಚನ್ನೆ ಮರ್ತಿದ್ವೊ. ದೂರ ದೂರëಲಿ ಒಂದೊಂದು ಕೆರೆಗ, ಆಕಾಶವೇ ನೆಲಕೆ ಬಿದ್ದ ಹಾಂಗೆ ವಿಸ್ತಾರವಾಗಿ ಸರೋವರಂಗ ಎಲ್ಲ ಇದ್ವೊ. ಆ ಕೆರೆ ಮತ್ತೆ ಸರೋವರಂಗಳ್ಲಿ ದೊಡ್ಡ ದೊಡ್ಡ ತಾವರೆ ಹೂವುಗ ಕೆಂಪು, ಬಿಳಿ ಬಣ್ಣಗಳ್ಂದ ಕೂಡಿ, ಬಿಸ್ಲ್ ಬೀಳ್ಕನ ಕಾಮನ ಬಿಲ್ಲ್ನ ಬಣ್ಣ ಮಿಂಚಿಕëಂಡ್ ಇರ್ತಿತ್ತ್. ಗಾಳಿ ಅದರ ಮೇಲೆಂದ ಬೀಸ್ಕನ ನೀರ್ನ ಕಣಗಳ್ಂದ ತೊಂಪಾಗಿರುದಲ್ಲದೆ, ಹೂಗಳ ಪೊರಿಮಳನ ಹೊತ್ತ್ಕëಂಡ್ ತಂದ್ ಎಲ್ಲೊವ್ಕ ಸಂತೋಸು ಮತ್ತೆ ಸುಖನೂ ಉಂಟು ಮಾಡ್ತಿತ್ತ್.

ಪೊರ್ಲು ಪೊರ್ಲುನ ಕಾಡ್ಗ ಕëಣ್ಣಿಗೆ ಸೊಗಸ್ ಬೀರಿಕëಂಡ್ ಇದ್ವೊ. ಮಾಯಿನಮರ, ಹಲ್ಸಿನಮರ, ಪೇರಳಮರ, ದಾಳಿಂಬೆ, ಚಿಕ್ಕು, ಮುಂತಾದ ಹಣ್ಣ್ನ ಮರದ ತೋಟಗ ಅಲ್ಲಲ್ಲಿ ಇದ್ವೊ. ಮಾಯಿನ ಮರಗ, ಚಿಗ್ರ್ ಹೂವುಗಳ್ಂದëಳೂ, ಮಿಡಿ, ಕಾಯಿ ಹಣ್ಣ್ಗಳ್ಂದëಳೂ ತುಂಬಿ, ಗೆಲ್ಗëಳಿಗೆ ದಿನ್ನ ತಡಿಯಕೆ ಬೊತ್ತದೆ, ನೆಲಕ್ಕೆ ಬೊಗ್ಗ್ಯಂಡ್, ಗಾಳಿಗೆ ತೂಗಿಕëಂಡ್ ಇದ್ವೊ. ಗëಂಡ್ ಕೋಗಿಲೆಗ ಮರದ ಎತ್ತರದ ಕೊಂಬೆಗಳ್ಲಿ ಕುದ್ಕëಂಡ್, ಎಳೆಗೆಂಪಾದ ಮಾಯಿನ ಚಿಗ್ರ್ನ ತಾನೇ, ಒಬ್ಬೆನೇ ತಿಂಬಕೆ ಮನ್ಸ್ ಬಾರದೆ, ಅದರ ಜೋಡಿ ಹಕ್ಕಿಗೆ 'ಕೂ' ಹಾಕಿ ಕರ್ಕëಂಡ್ ಕಾಯುತಿದ್ವೊ. ಕೆಂಪು ಕೊಕ್ಕುನ ಗಿಳಿಗëಳಿಗೆ, ತಮ್ಮ ಹಸುರ್ ಮೈಬಣ್ಣದ ಬಗ್ಗೆ ತುಂಬ ಹೆಮ್ಮೆ ಇರುವಾಂಗೆ ಕಾಂಬತ್ತಿತ್ತ್. ಅವು ಹಾರಿಬಂದ್, ಮತ್ತಂಗೆ ಹಣ್ಣಾದ ಮಾಯಿನ ಹಣ್ಣ್ನ ಹುಡ್ಕಿ ಹಕ್ಕಲಿನ ಗೆಲ್ಲ್ಲಿ ಕುದ್ದ್ ನೇತಾಡಿಕëಂಡ್, ಹಣ್ಣ್ನ ಹೊರಗೆನ ಚೋಲಿನ, ಹರಿಯಾಗಿದ್ದ ಕೊಕ್ಕುನ ಬಾಯಿಲಿ ಕëಚ್ಚಿ, ಎಳ್ದ್, ಅದರ ಮೇಲೆ ಮಾಡಿ, ಒಳಗೆ ಕೆಂಪಾಗಿ ಕಾಂಬು ಹಣ್ಣ್ನ ರಸಪಿಂಡನ, ಸುರ್ರಂತ ಹೀರಿ ರಸ ಕುಡ್ದ್ ಸುಕಪಡ್ತಿದ್ವೊ. ಹಣ್ಣ್ನ ಅರ್ಧ ರಸನ ಹೀರುವಷ್ಟ್ಲಿ ಅದರ ಹೊಟ್ಟೆ ತುಂಬುತಿತ್ತ್. ಆಗ ಅದ್, ಅದರ ಜತೆಗಾತಿನ

ಕರ್ದ್ಗ. 'ಬಾನೆ. ಈ ಹಣ್ಣ್ನ ರಸ ಲಾಯ್ಕುಟ್ಟು. ಇದರ ಕುಡಿ'ಂತ ಹೇಳ್ತಿತ್ತ್. ಅದ್ಕೆ ಆ ಹಣ್ಣ್‌ಗಿಳಿ, ನಾ' ಆಗಳೇ ಕುಡ್ತ್ ಹಣ್ಣ್ನ ರಸ ಇನ್ನೂ ಆರ್ಗಿತ್ಲೆ. ನಂಗೆ ಬೇಡ'ಂತ ಮತ್ತೊಂದು ಗೆಲ್ಲ್‌ಲಿ ಹೋಗಿ ಕುಡ್ಕೆತ್. "ನಿನ್ನ ದಿಮಾಕಿದ್ದರೆ ನಿಂಗಾತ್'ಂತ ಆ ಗೆಂಡ್ ಗಿಣಿ ಕೋಪಲಿ ಮತ್ತೊಂದು ಹಣ್ಣ್ ಗಿಣಿನೊಟ್ಟಿಗೆ ಸರಸ ಮಾಡಿಕೆ ಸುರುಮಾಡ್ತ್. ಆಗ ಹಣ್ಣ್ ಗಿಳಿಗೆ ತುಂಬ ಕೋಪ ಬಂದ್ ರೆಂಕೆನ ಅಲ್ಗಿಸಿ. ಮುಲ್ಲೆನ ಪೊಕ್ಕಿಸಿ. ಇರ್. ಇರ್. ಕತ್ತಲಾಕನಾರ್ ಗೂಡಿಗೆ ಬಾವಲೆ! ಆಗ ನಿಂಗ ಕಲ್ಸಿನೆ ಬುದ್ಧಿ!" ಹೀಂಗೆ ಹೇಳಿಕಂಡ್ ಹಾರಿ ಹೋತು.

ದಾರಿ ನಡಿಯಕನ ಇದರೆಲ್ಲ ನೋಡೊವ್ಕೆ. ಪೊಜ್ಜೆಲೇ ಗೊತ್ತಾಗದಾಂಗೆ ದಾರಿ ಸಾಗುದು. ಒಮ್ಮೊಮ್ಮೆ ದಾರಿ ಕರೆಂದ ಮೊಲಗ ಎದ್ದ್ ಓಡುವೊ. ಕಾಲ್ ಬುಡಂದ ಅವು ಸದ್ದ್ ಮಾಡಿ ಓಡ್‌ಕನ ನಡಿಯೊವು ಹದ್ಕಿ ಬೀಳುವೊ. ಕೆಂಪಂಗ, ಸಾರೆಜಂಗ. ದೂರಲಿ ಗುಂಪು ಗುಂಪಾಗಿ ಮೇದ್‌ಕಂಡ್ ಇರ್‌ತಿದ್ದೊ. ಮೊಂಯಿಸರ ನೋಡಿ ಹೆದ್‌ರಿಕಂಡ್ ದೂರ ಓಡ್‌ತಿದ್ದೊ. ಮತ್ತೊಂದು ಕಡೆ ಕಮ್ಮ್‌ನ ತೋಟ ಕೊಟ್ಟೆ ಕಮ್ಮ್‌ಗ ಎತ್ತರ ಬೆಳ್ದ್, ಬಾನಕ್ಕೆ ಕೈ ನಿಲ್ಕಂಡ್ ಇರುವೊ. ಇವ್ಕೆ ವಯಸ್ಸ್‌ನ ಗುಣಂದ ತಲೆ ಭಾರ ಒಳ್ಳೆ ಎಳೆ ಪ್ರಾಯದೊವ್ಕಂತ ಕಮ್ಮ್. ಒಳ್ಳೆ ಸಣ್ಣ ಕಮ್ಮ್‌ಗಳ್ಲಿ ಹಣ್ಣಡಿಕೆ ಹಸಿಯಡ್ಕೆ, ಎಳೆ ಅಡಿಕೆಗಳ ಕೀಲೆಗ ತುಂಬಿಕಂಡ್ ಇರುವೊ. ಇದ್ ನೋಡಿಕೆ ತುಂಬ ಪೊರ್ಲು. ಒಂದು ಕಡೆ ಜಿಂಗಾರ ಬಿರ್ದ್ಗ. ಮಿಡಿ ಅಡಿಕೆಗಳ ಗೊಂಚಲ್ ಬಿರ್ದ್, ಎಳೆ ಹಳದಿ ಬಣ್ಣಲಿ ಪೊರ್ಲು ಕಾಂಬೊದು. ಜಿಂಗಾರಕ್ಕೆ ಕವಚದಾಂಗಿದ್ದ ಹೊಂಬಾಳೆಗ ಒಂದೊಂದು ಕಮ್ಮ್‌ನ ಕೂಡಿಲಿ ಸೆಕ್ಕಂಡ್. ಮತ್ತ್ ಕೆಲವು ಸೋಗೆಗ ಹಣ್ಣಾಗಿ, ಸಾಳೆಗ ಕಮ್ಮ್‌ಂದ ಬಿರ್ದ್ಗ ಕೆಳೆಗೆ ಬೀಳ್‌ಕನ ಒಟ್ಟಿಗೆ ಕೆಳೆಗೆ ಬೀಳುವೊ. ಕೆಲವು ಕಮ್ಮ್‌ಗಳಿಗೆ ಎಲೆಬೊಳ್ಳಿಗ ಹಬ್ಬಿ ಅದರ ಸುತ್ತೊಳು ಬಿಗ್‌ದ್ ತೊಬ್ಬಿಕಂಡ್, ಪ್ರಣಯದ ಗೂಡೆಗ ತಮ್ಮ ಗಂಡಂದರ ಅತ್ತಿತ್ತ ಮೊಸ್ಗಿಕೆ ಬುಡದೆ ಹಿಡ್ಕಂಡ ಹಾಂಗೆ ಕಾಂಬತ್ತಿತ್ತ್. ಕಮ್ಮ್‌ಗಳ ಎಡೆ ಎಡೆಲಿ ಬಾಳೆಗಳೂ ಕೈ ಬೀಸಿಕಂಡ್ ಕುಸೀಲಿ ಇರುವೊ. ಕೆಲವು ಬಾಳೆಗಳ್ಲಿ ಕೆಂಪಾದ ಪೂಂಬೆ ಪೊರ್ಟ್‌ಕಂಡ್. ಇನ್ನ ಕೆಲವದರ್ಲಿ ಗೊನೆ ತೂಗ್ಯಂಡ್ ಇದ್ದು. ಫಲ ಕೊಟ್ಟ ಕೂಡ್ಲೇ ತನ್ನ ಜೀವನನ ಮುಕ್ತಾಯಗೊಳ್ಳುದು ಬಾಳೆ ಮಾತ್ರ. ಅದರ ಮುಂದೆನ ಸಂತತಿ ಬೆಳಿದು ಅದರ ಗೆಂಡೆಂದಳೇಂತ ದೇವ್ರುರು ಮಾಡ್ದ ಒಂದು ಅದ್ಭುತ.

**ಮಕ್ಕ:**

ತಾತ! ನಿಮ್ಮ ಈ ಕಾಡ್‌ಗಳ್ನೂ ತೋಟಗಳ್ನೂ ನೋಡಿಕಂಡ್ ನಿಧಾನಲಿ, ಪಾಂಡವರ್ ನಡ್ಕಂಡ್ ಛತ್ರಪತಿ ಪಟ್ಟಣದ ಸ್ವಯಂವರ ಮಂಟಪನ ಸೇರ್‌ಕನ ದ್ರೌಪದಿನ ಸ್ವಯಂವರ ಮುಗ್ದ್ ಹೋಗಿ ಬುಡುದೋಂತ ಯೋಜನೆ ಅದೆ.

**ತಾತ :**

ನೀವೆಲ್ಲ ಈ ವೇಗದ ಯುಗಲಿರುವ ಅರಸಿಕ ಶಿಖಾಮಣಿಗ. ಎಲ್ಲಿಗೆ ಹೋಕರೂ ವೇಗಲಿ ಹೋವ ಯಂತ್ರಂಗಳ್ಲಿ ಕುದ್ದ್ ಭುರ್‌ಂತ ಹೋಪುಕೆ ನಮ್ಮ ಸುತ್ತ ಇರುವ

ಪ್ರಕೃತಿನ, ಅದರ ಸೌಂದರ್ಯನ ನೋಡಿಕೆ ಅದರ ಸೌಂದರ್ಯನ ಅನುಭವಿಸಿಕೆ ಗೊತ್ತಿಲ್ಲೆ. ಜೆರ್ಲೀ ಬರಡ್ ಜೀವಿಗ. ಹಾಂಗಾಗಿ ನೀವು ಹೀಂಗೆ ಹೇಳಿರೆ.

**ಮಕ್ಕ:**

ನಾವೇನ್ ಮಾಡುದು ತಾತ, ನಾವ್ಗೆ ಸ್ವಯಂವರನ ಕಾಂಬ ಆತುರ. ಅದಿಕ್ಕೆ ಅವಸರ ಪಡ್ತಿದ್ದೊ.

**ತಾತಾ:**

ಅದೆಲ್ಲ ಸಿನೆಮಲಿ ನಡ್‌ದಾಂಗೆ ಗಳಿಗೊಳಿಗ ನಡಿವಂತಳೆದ್ದಲ್ಲ. ಸಾಕಷ್ಟ್ ಸಮಯದ ತಯಾರಿ ನಡಿಯೊಕು. ಮುಂದೆಲ್ಲ ನಮ್ಮವರಳೆಲ್ಲಿ ನಡಿಯುವ ಮೊದುವೆಗಳೆಲೂ ನಾಲ್ಕೈದ್ ದಿನಗಳಿಗೆ ಕಳೆಮ್ಮೆ ಇಲ್ಲದೆ ನಡಿಯತಿದ್ದೊ. ನಂಟ್ರಿಗೆ ಆಮಂತ್ರಣ ಕೊಡ್‌ಕನೂ, ದಿನ ಮುಂದಾಗಿ ಬಂದ್ ಇದ್ದ್ ಸುಧಾರ್ಸಿ ಕೊಡೊಕುಂತ ಹೇಳುವೊ. ಹಜ್ಜ ಜಿಪುಣತನ ಇದ್ದೊವು 'ದಿನ ಮುಂದಾಗಿ ಬನ್ನಿ'ಂತ ಕರಿಯಕೆ ಹೆದ್‌ರಿಕಳೆಂಡ್, "ಒಪ್ಪತ್ತು ಮುಂಚಿತವಾಗಿ'ಂತ ಮಾತ್ರ ಹೇಳುವೊ. ಈಗ ಹಾಂಗೆಲ್ಲ ಇಲ್ಲೆ. ಎಲ್ಲಿಯೋ ಒಂದು ಕಲ್ಯಾಣ ಮಂಟಪ ಕಾರ್ಯಕ್ರಮ ಕೊಟ್ಟಳೆದಿಕೆ ಸಳೆರಿಯಾಗಿ, ಎರ್ಡ್ ಕಡೆನ ದಿಬ್ಬಣದಳೆವೂ ಸೇರಿ, ಬೇಗ ಎಲ್ಲ ಕಾರ್ಯಗಳ ಮುಗ್ಸಿ, ನಿತ್ತ್‌ಕಳೆಂಡೇ ಮಾಡುವ ಪಾಳೆ ತಟ್ಟೆನ ಊಟ ಮುಗ್ಸಿ, ಕಳೆಯಿತೊಳ್ಳ ಕೈನೀರ್ ಆರಿಕೆ ಮುಂದೆ ತಮ್ಮ ತಮ್ಮ ವಾಹನಗಳಲ್ಲಿಗೆ ಹೋಗಿ ಘುರ್ರ್‌ಂತ ತಮ್ಮ ತಮ್ಮ ಮನೆ ಸೇರಿಕಂಬೊ. ಕೆಲಳೆವು ಜೆನ ದೊಡ್ಡಮೊಂಯಿಸಳೆರ್ ಮೊದುವೆ ಕಾರ್ಯ ಎಲ್ಲ ಮುಗ್‌ದ್ ಮೊದ್‌ಮಕ್ಕಳೆಳಿಗೆ ಸೇಸೆ ಹಾಕುವ ಸಮಯಕೆ ಬಂದ್, ಸೇಸೆ ಹಾಕಿ, ಫೋಟೋಕ್ಕೆ ಪೋಸು ಕೊಟ್ಟ್, ಗಬಗಬಂತ ಊಟ ಮುಗ್ಸಿ ಹೊರ್ಟ್ ಹೋವೊ. ಹಿಂದೆಲ್ಲ ಹಣ ಕಳೆಟ್ಟೆ ಸೇಸೆ ಹಾಕುದು ಹೆಣ್ಮಕ ಮಾತ್ರ. ಮೊದ್ಮಕ ಕುದ್ದ್‌ಕಳೆಂಡೇ ಇರುವೊ. ಮೈನ ಸಂದ್ ಸಂದ್ ಮುಟ್ಟ್‌ಸಿ ಸೇಸೆ ಹಾಕುದು ಪೊರ್ಲು ಕಾಂಬತಿತ್ತ್. ಈಗ ಗಳೆಣ್ಮಕಳೂ ನಿತ್ತ್‌ಕಳೆಂಡ್ ಇರುವ ಮೊದ್ ಮಕ್ಕಳ ಮೇಲೆ ನಾಲ್ಕ್ ಅಕ್ಕಿ ಹರ್ಕಿಟ್ಟ್, ಹೊರ್ಡೊನೊಂತ ಹೇಳ್‌ಕನ ಫೋಟೋಗ್ರಾಫರ್‌ಗ ನಿಲ್ಲಿ ನಿಲ್ಲಿಂತ ನಿಲ್ಸಿ ಫೋಟೊ ತೆಗಿಯುವೊ. ಫೋಟೊದೊವು ಸುತ್ತ ಮುತ್ತಿಕಳೆಂಡ್, ಸಭೆಲಿ ಕುದ್ದೊವುಕೆ ಮೊದುವೆನ ಯಾವ ಕಾರ್ಯ ಕ್ರಮನೂ ಕಾಂಬಕಿಲೆ. ಅದರೆಲ್ಲ ವೀಡಿಯೋ ಮೂಲಕನೇ ನೋಡಿಕಣೊಕು. ಕೆಲಳೆವು ಸಳೆರ್ತಿ ಮನೆ ಯಜ್‌ಮಾನಂಗೆ ಮೊದ್‌ವೆಗೆ ಬಂದವರ ಗೊತ್ತಾದು ವೀಡಿಯೋದ ಮೂಲಕನೇ. ಇದೆಲ್ಲ ಈ ವೇಗದ ಯುಗದ ಮಹಿಮೆ.

ಇನ್ನ್ ಸಾಕ್ ಈ ವಿವರ ಇಷ್ಟರ್ಲೆ ಪಾಂಡಳೆವಳೆರ್ ನಡ್ಡ್ ನಡ್ಡ್ ಛತ್ರವತಿ ಪಟ್ಟಣಳೆಲಿ ವೈಭವಂದ ಕಾಂಬತಿರುವ ಸ್ವಯಂವರ ಮಂಟಪದ ಹಕ್ಕಲೆ ಬಂದ್ ಸೇರ್ದೊ. ನಗರದ ಬೀದಿ ಬೀದಿಗಳ್ಲಿ ತರತರದ ತೋರಣಗ, ಚಪ್ಪರಗ, ಮನೆ ಮನೆಗಳೆಳೂ, ಸಾರಣೆ ಕಾರಣೆಗಳಿಂದ ಅಲಂಕಾರ ಆಗಿದ್ದೊ. ಪ್ರತಿ ಮನೆ ಬಾಗ್‌ಲಿಗೂ ಪೊರ್ಲುನ ರಂಗವಲ್ಲಿ ಹಾಕಿದ್ದೊ. ಎಲ್ಲ ಜೆನಂಗಳೂ ಹೊಸ ಹೊಸ ಬಟ್ಟೆ ಬರೆ ಚಿನ್ನ, ರನ್ನದ ಆಭರಣಂಗಳನ್ನ ಹಾಕಿಕಳೆಂಡ್ ಸಡಗರಂದ ಅತ್ತಿತ್ತ ಓಡಾಡ್‌ತಿದ್ದೊ.

ಬೀದಿಲಿ ಸಿಂಗಾರಗೊಂಡ ಆನೆಗ ಪರ್ವತಗಳೇ ನಡ್ಡಾಡುವಾಂಗೆ ಕಾಂಬತಿದ್ದೊ. ಹಾಂಗೇ ಸಿಂಗಾರಾದ ಕುದುರೆಗಳ ಮೇಲೆ ಸವಾರಿ ಮಾಡಿಕಣಿಂಡ್ ನಗರದ ಕಾವಲ್‌ಗಾರಣಿರ್ ಅತ್ತಿತ್ತ ತಿರ್‌ಗಾಡ್‌ತಿದ್ದೊ. ಸ್ವಯಂವರ ಮಂಟಪನ ಸುತ್ತಿ ನಾಲ್ಕ್ ರಾಜ ಬೀದಿಗ ಇದ್ದೊ. ಅವುಗಳ್ಲಿ ಸಾಲ್ ಸಾಲಾಗಿ ಸಣ್ಣ ರೀತಿನ ಅರಮನೆಗಳ ಹಾಂಗಿದ್ದ ಕಟ್ಟೋಣಂಗ ಒಳಗೂ ಹೊರಗೂ ಸಿಂಗಾರ ಆಗಿ, ಸ್ವಯಂವರಕ್ಕೆ ಬಂದ ರಾಜಕುಮಾರರಿಗೆ ಬಿಡಾರಗ ಆಗಿದ್ದೊ.

ಪಾಂಡವಣಿರ್ ಆ ನಗರಕ್ಕೆ ಬಂದ್ ಎತ್ತ್‌ಕನ ಎಲ್ಲೆಲ್ಲೂ ಜನವೇ ಜನ. ಇವ್ಕೆ ನಿಲ್ಲಿಕೆ ಎಲ್ಲಿಯೂ ಜಾಗೆ ಸಿಕ್ಕದೆ ಪರ್ದಾಡಿಕಣಿಂಡೊ. ಆಕೇರಿಗೆ, ನಗರದ ಒಂದು ಕಡೆಗೆ ಇದ್ದ ಒಂದು ಕುಂಬಾರನ ಮನೆನ ಕೊಟೆಗಲಿ ಜಾಗೆ ಸಿಗ್ತ್. ಹಾಂಗೆ ಅಲ್ಲಿದ್ದೊ.

ಸ್ವಯಂವರಕ್ಕೆ ದಿನ, ಮುಹೂರ್ತ ಎಲ್ಲ ನೋಡಿ ಜೋಯಿಸಣಿರ್ ಹೇಳ್ದೊ. ಅದರ ದ್ರುಪದ. ರಾಜಕುಮಾರಣಿರ್ ಬಂದ್. ನಿತ್ತಿದ್ದ ಕಡೆಲೂ ಪೇರೆ ಜನಕೆ ಗೊತ್ತಾಗುವಾಂಗೆನೂ ಡಂಗುರ ಸಾರ್ಸಿತ್. ರಾಜಕುಮಾರಣಿರ್, ಭಾರಿ ಶೃಂಗಾರ ಮಾಡಿಕಣಿಂಡ್ ಬಂದ್ ತಮ್ಮ ತಮ್ಮ ವೈಭವನ ಮೆರ್ಸಿಕಣಿಂಡ್ ಬಂದ್ ಸ್ವಯಂವರ ಮಂಟಪಲಿ ಕುದ್ದೊ. ನೋಡಿಕೆ ಬಂದ ಜನಂಗಳೂ ಒಂದು ಕಡೆ ಕುದ್ದೊ ಅರಮನೆನ ಅಂತಃಪುರಣಿಲಿದ್ದ ದ್ರೌಪದಿನ ಪೂರ್ಣ ಅಲಂಕಾರ ಮಾಡೀಂತ ದ್ರುಪದ ಅದರ ಸಖಿಯಣಿರಿಗೆ ಅಪ್ಪಣೆ ಮಾಡ್ತ್. ಅವೆಲ್ಲ ದ್ರೌಪದಿನ ಹಾಸ್ಯ ಮಾಡಿಕಣಿಂಡ್. ಅಲಂಕಾರ ಮಾಡಿಕೆ ಸುರುಮಾಡ್ದೊ. ಎದೆಲಿರುವ ಭಾರ ಮುಂದೇ ದೊಡ್ಡದಾಗುಟ್ಟು. ಅದರ ಮೇಲೆ ಈ ಹಾರಗಳ್ನ ತೊಡ್ಸಿರೆ, ಈ ಹಿಡಿಯಷ್ಟಿರುವ ಸೊಂಟ ಹೇಂಗೆ ತಾಂಗಿಕಂಬೊದು? ಈ ಒಡ್ಯಾಣನ ಸೊಂಟಕೆ ಹಾಕಿರೆ, ಮುಂದೇ ಕಡಕಣಿಲ್ಲ್ ಗುಂಡುನಾಂಗಿರುವ ನಿತಂಬ ಬಿಂಬಗಳ ಹೊರಿಕೆ ಹೊತ್ತದೆ ಹೊತ್ತ್‌ಕಣಿಂಡ್ ತಡವರ್ಸಿ ತಡವರ್ಸಿ ನಡಿವ ಪಾದಗ ಹೇಂಗಪ್ಪಾ ತಡಿವೋ? ಆದರೇನ್ ಮಾಡುದು? ಹೊಸ ಮೊದೊಳಿಗೆ. ಹಜ್ಜಾರ್ ಅಲಂಕಾರ ಮಾಡದಿದ್ದರೆ ಹೇಂಗೆ? ಓಂಗೆ ಹೇಳೀಕಣಿಂಡ್ ಸುತ್ತುಮುತ್ತು ಇದ್ದೊವು ಮತ್ತೆ ದ್ರೌಪದಿ ಸಾ ಕುಟ್ಟಿ ಕುಟ್ಟಿ ನೆಗಾಡಿಕಣಿಂಡ್ ಇದ್ದೊ. ಅಲಂಕಾರ ಎಲ್ಲ ಮುಗ್ದ ಮೇಲೆ, ಆರತಿ ಮಾಡಿ ದೃಷ್ಟಿ ಬೊಟ್ಟು ಇಸಿ, ಸ್ವಯಂವರ ಮಂಟಪಕೆ ಹೋಕೆ ಪಲ್ಲಕಿ ತರ್ಸಿ ಅದರ್ಲಿ ದ್ರೌಪದಿನ ಕುದ್ರ್ಸಿ ಆಳ್‌ಗ ಅದರ ದಂಡಿಗೆನ ಹೆಗ್‌ಲಿಗೇರ್ಸಿಕಣಿಂಡ್ ಹೊರ್ಟ್ ನಿತ್ತೊ. ಕಳಸ ಕನ್ನಟಿಗಳ ಹಿಡ್ದೊವು. ಚಾಮರ ಬೀಸೊವು ಎರ್ಡ್‌ಪಕ್ಕಲಿ ನಿತ್ತೊ. ಎದ್‌ರ್‌ಲಿ ಕೊಂಬು ವಾಲಗ, ಸಂಕ ಜಾಗಟೆಗಳ ಮಂಗಳ ಸದ್ದ್ ಮೊಳ್‌ಗಿತ್. ಎಲ್ಲವರ್‌ಂದ ಮುಂದೆ ಅರಮನೆನ ಹೆಬ್ಬಾಗ್‌ಲ್‌ಲಿ, ದ್ರುಪದನೂ ಧೃಷ್ಟದ್ಯುಮ್ನನೂ ಸಿಂಗಾರ ಮಾಡ್ದ, ದೊಡ್ಡ ಆನೆಗಳ ಮೆಲೆ ಕುದ್ದ್‌ಕಣಿಂಡ್, ದ್ರೌಪದಿನ ಪಲ್ಲಕಿ ಅರಮನೆನ ಬಾಗ್‌ಲಿಗೆ ಬಾದರ್ನೆ ಕಾದ್‌ಕಣಿಂಡ್ ಇದ್ದೊ. ಬಂದ ಕೂಡ್ಲೆ ರಾಜನ ಬಿರುದು ಬಾವುಲಿಗಳ ವಂದಿ ಮಾಗಧಣಿರ್, ದಣಿನಿಯತ್ತಿ ಘೋಷಣೆ ಮಾಡ್ದೊ. ರಕ್ಷಣಾ ಪಡೆನ ಸೈನಿಕಣಿರ್ ಮುಂದೆ ನಡ್ದೊ. ಮುಂಗಾರ್ ಮೋಡ, ಬಾನಣಿಲಿ ಹೋವ ಗಾಂಭೀರ್ಯಲಿ, ಸ್ವಯಂವರ ಮಂಟಪದತ್ತ ಈ ಮೆರವಣಿಗೆ ಹೋಗಿ ರಾಜನೂ, ರಾಜಕುಮಾರನೂ, ಅಂಬಾರಿಗಳ್‌ಂದ ಇಳ್ದ್ ಮಂಟಪನ ಹುಕ್ಕೊ. ಒಳಗೆ ಕುದ್ದಿದ್ದಣಿವು

ಎದ್ದ್ ನಿತ್ತೊ. ಅವರ ಕುದ್ದ್‌ರಿಕೆ ಹೇಳ್ದ ಮೇಲೆ ಅವೆಲ್ಲ ಕುದ್ದೊ. ಆ ಮೇಲೆ ದ್ರೌಪದಿ ಕುದ್ದ ಪಲ್ಲಕಿ, ಒಳಗೆ ಪ್ರವೇಶ ಆತ್, ಸಖಿಯರ್ ಕೈ ಕೊಟ್ಟ್ ಅದರ ಇಳ್ಸಿದೊ. ಮೋಡಂದ ಮಿಂಚ್ ಇಳ್ದ್ ನಿಲ್ಲುವಾಂಗೆ ದ್ರೌಪದಿ ಇಳ್ದ್ ನಿತ್ತಲೆತ್. ಅದರ ನೋಡ್ದ್ರ ರಾಜ ಕುಮಾರಲೆರಿಗೆಲ್ಲ ಒಂದು ಕ್ಷಣ ಮಿಂಚ್ ಹೊಡ್ದಾಂಗಾತ್. ಎಲ್ಲೊವು ಮೈ ಕೊಡ್ಕಿ ನೆಟ್ಟಂಗೆ ಕುದ್ದೊ.

ದ್ರೌಪದಿನ ಸಖಿ ಒಂದು ಹೂಮಾಲೆನ ದ್ರೌಪದಿನ ಕೈಗೆ ಕೊಟ್ಟ್ ಸಾಲಾಗಿ ಕುದ್ದಿದ್ದ ರಾಜಕುಮಾರ ಹಕ್ಕಲೆ ಹೋಗಿ ಅವು ಬಂದ ದೇಶ, ಅವರ ಸಂಪೊತ್ತ್, ಶೌರ್ಯ ಧೈರ್ಯಾದಿಗಳ ಪರಿಚಯ ಹೇಳಿಕಲೆಂಡ್ ಹೋಕೆ ಸುರುಮಾಡ್ತ್, ಅದೇ ಸಮಯಲೆಲಿ ಒಂದೆರ್ಡ್ ಸೀಮೆಗಳ ಆಳವನೇ ಆಗಿದ್ದರೂ ಅವರ ವಂದಿ ಮಾಗಧಲೆರ್ ಅವರೆಲ್ಲ "ರಾಜಾಧಿರಾಜ, ರಾಜ ಪರಮೇಶ್ವರ, ಅರಿರಾಯ ವನಿತಾ ವಕ್ಷೋಜ ಸ್ನಾತ ಭಾಷ್ಪವಾರೀ ಕಾರಣ........ ಎಂದಿತ್ಯಾದಿಯಾಗಿ ಹೊಗ್‌ಳ್‌ತಿದ್ದೊ. ಪ್ರತಿಯೊಬ್ಬ ರಾಜಕುಮಾರನೂ, ದ್ರೌಪದಿ ತನ್ನನೇ ಮೊದುವೆ ಆದಂತ ಗ್ರೈಸಿಕಲೆಂಡ್ ಬೀಗ್‌ತಿತ್ತ್. ದ್ರೌಪದಿ ಕಡೆಗಣ್ಣ್‌ಲಿಯೂ ನೋಡದೆ ಹೆಜ್ಜೆ ಎತ್ತ್‌ಕನ, ಗುಡ್ಸಿ ಮೂಲೆಲಿಸಿದ ಮಾಯ್ಚುನ ಸೂಡಿನಾಂಗಾತಿದ್ದೊ. ಅಂಗ, ವಂಗ, ಕಳಿಂಗ, ಕಾಂಭೋಜ, ಕಾಶ್ಮೀರ, ಗೂರ್ಜರ, ಮಾಳವ, ಗೌಳವ, ತೌಳವ, ಕೊಂಕಣ, ಪಾಂಡ್ಯ, ಚೇರ, ಚೋಳ........ ಹೀಂಗಿದ್ದ ಎಲ್ಲ ರಾಜ್ಯಗಳ ಅರ್ಸುಮಕ್ಕಳ್ನೂ, ದುರ್ಯೋಧನ ಕರ್ಣಾದಿಗಳ್ನೂ ತಿರಸ್ಕರಿಸಿ, ದ್ರೌಪದಿ ಹಿಂದೆ ಬಾತ್. ಒಂದು ಕ್ಷಣ ಏನ್ ಮಾಡ್ವೊಂದ್ ಯಾರಿಗೂ ಗೊತ್ತಾತ್‌ಲೆ. ಆಗ ದ್ರುಪದ, ಇದ್‌ಕೆ ತುಂಬ ಯೋಚನೆ ಬೇಡ. ನನ್ನ ಅರಮನೆನ ಅಂಗಳಲಿ ನಲೆಟ್ಟ ಕಂಬದ ಮೇಲೆ ಒಂದು ಚಕ್ರ ಸುತ್ತಿಕಲೆಂಡ್ ಇರುದರ್ಲಿ ಒಂದು ಲೋಹದ ಮೀನ್ ತಿರ್ಗ್ಯಂಡ್ ಉಟ್ಟು. ಕೆಳೆಗಿರುವ ಕಡಾಯದ ನೀರ್‌ಲಿ ಅದರ ಪ್ರತಿಬಿಂಬನ ನೋಡಿಕಲೆಂಡ್, ಅಲ್ಲಿಯೆ ಇಸಿದ ಬಿಲ್ಲಿಗೆ ಅಲ್ಲಿರುವ ಐದ್ ಬಾಣಗಳ್‌ಂದ ಗುರಿ ಹೊಡ್ದವಂಗೆ ನನ್ನ ಮಗಳ ಕೊಟ್ಟ್ ಮೊದುವೆ ಮಾಡಿನಂತ ದ್ರುಪದ ಡಂಗುರ ಸಾರ್ಸಿತ್. ಅರ್ಸು ಮಕ್ಕಲೆಳಿಗೆ ಒಳ್‌ಂಗೆ ಹೋದ ಆಸೆ ಚಿಗ್‌ರ್‌ತ್. ನಾ ಮುಂದೆ ನಾ ಮುಂದೆಂತ ಎದ್ದೊ. ಎಷ್ಟ್ ಬಂಗ ಬಂದರೂ ಆ ಬಿಲ್ಲನ ಇಸಿದಲ್ಲಿಂದ ಆಚೀಚೆ ಆಡ್ಸಿಕೆ ಕೂಡ ಅವರ್‌ಂದ ಆತ್‌ಲೆ.

ದುರ್ಯೋಧನ ಬಂದ್ ಗಲೆರ್ವಂದ ಆ ಬಿಲ್ಲ್‌ನ ನೇಚಿನೇಂತ ಓಡ್ಳಿಯಕನ ಅವನೇ ಒಂದು ಮಾರ್ ದೂರಕೆ ರಲೆಟ್ಟಿ ಜೀತ್. ಇದರೆಲ್ಲ ನೋಡಿಕಲೆಂಡ್ ನಿತ್ತ್‌ಕಲೆಂಡ್ ಇದ್ದ ದ್ರೌಪದಿ ಮತ್ತೆ ಅದರ ಸಖಿಯಲೆರ್ ತಪ್ಪಾಳೆ ಹೊಡ್ದ್ ನೆಗಾಡ್ದೊ. ದುರ್ಯೋಧನಂಗೆ ತುಂಬ ನಾಚಿಕೆ ಆತ್. ಚಪ್ಪೆ ಮೋರೆ ಮಾಡಿಕಲೆಂಡ್, ಮೋಣ್‌ಕ್ಯಗಾದ ಮೊಣ್ಣ್‌ನ ಉಜ್ಜಿಕಲೆಂಡ್ ಹೋಗಿ ಕುದ್ದಲೆತ್. ತನ್ನ ಒಡೆಯಂಗಾದ ಅಪಮಾನನ ನೋಡಿ ಕರ್ಣ, ನಾ ಗುರಿಗೆ ಹೊಡ್ದ್ ಆ ಹೆಣ್ಣ್‌ನ ಗೆದ್ದ್ ಅದರ ದುರ್ಯೋಧನಂಗೆ ಕೊಟ್ಟ್ ಮೊದುವೆ ಮಾಡ್ಸಿನೇಂತೇಳಿ ಎದ್ದ್ ಬಾತ್. ಬಿಲ್ಲಿಗೆ ನಮಸ್ಕಾರ ಮಾಡಿ ಎಡ್ದ ಕೈಲಿ ಅದರ ಎತ್ತಿದರ ನೋಡ್‌ಕನ ಇಂವ ಗುರಿಗೆ ಬಾಣ ಹೊಡ್ದ್ ಬುಟ್ಟದೆನೋಂತ ನೋಡೊವ್ವ ಶೂಂಸಯ

ಬಾತ್. ಆಗ ಇದನ್ನೇ ನೋಡಿಕಣ್ಡ್ ಇದ್ದ ದ್ರೌಪದಿ "ನಾ ಕುಲಹೀನನ ಮೊದುವೆ ಆಕಿಲ್ಲೆ"ಂತ ಗಟ್ಟಿಯಾಗಿ ಹೇಳ್ತ್. ಇದರ ಕೇಳ್ದ ಕರ್ಣನ ಉತ್ಸಾಹ, ಧೈರ್ಯ ಎಲ್ಲ ಜರ್ರಂತ ಇಳ್ದ್ ಹೋತು. ಮೈ ಕೈಯೆಲ್ಲ ಬೆಗ್ಗರಿಕೆ ಸುರಾತ್. ಅಂವ ಬಿಲ್ಲ್‌ನ ಪಟ್ಕಂತ ಅಲ್ಲಿ ಬುಟ್ಟ್ ಹಿಂದೆ ಬಂದ್ ಕುದ್ದಣ್ತ್. ಈ ಸ್ವಯಂವರಕೆ ಕೃಷ್ಣ ಮತ್ತೆ ಬಲರಾಮನೂ, ಬರೀ ನೋಡುವ ಉದ್ದೇಶಂದ ಬಂದಿದ್ದೊ. ಸ್ವಯಂವರ ಮಂಟಪಣಲಿ ಎಲ್ಲರ ಸಾಲ್‌ಲಿ ಅವ್ರೂ ಕುದ್ದ್‌ಕಣ್ಡ್ ಇದ್ದೊ. ಅವರ ಪಿಚಾರನ್ನೂ ಸಖಿ ಹೇಳ್‌ಕನ ದ್ರೌಪದಿಗೆ ಅವರ ಮೇಲೆ ಸೋದರ ಭಾವನನ್ನೇ ಬಂದ್ ಅದ್ ಅವ್ಕೆ ಕೈ ಮುಗ್ದ್ ನಮಸ್ಕಾರ ಮಾಡ್ತ್. ಮುಂದೆ ಯಾಗೋಳೂ ಕೃಷ್ಣ ಅದರ ತನ್ನ ತಂಗೆಂದ ಹೆಚ್ಚಾಗಿ ನೋಡಿಕಂಡಣ್ತ್. ಈಗ ಈ ಪಂಥನ ಗೆಲ್ಲುವ ಪೀರ ಈ ಕ್ಷತ್ರಿಯರ ಸಭೆಲಿ ಯಾರೂ ಇಲ್ಲೆಂತಾಕನ ದ್ರುಪದ ಬ್ರಾಹ್ಮಣ ಸಭೆನ ನೋಡಿ, "ನಿಮ್ಮ ಸಭೆಲಿ ಈ ಪಂಥಕೆ ಪ್ರಯತ್ನ ಮಾಡುವ ಹುರುಪು ಇರುವ ವ್ಯಕ್ತಿ ಯಾರಾರ್ ಈ ಬ್ರಾಹ್ಮಣ ಸಭೆಲಿ ಇದ್ದರೆ ಬರಣ್ಕ್"ಂತ ಸಾರ್‌ತ್. ಪಾಂಡವಣ್ರ್ ಬ್ರಾಹ್ಮಣ ವೇಸಣಲಿ ಇದ್ದೊವು ಬ್ರಾಹ್ಮಣರ ಸಾಲ್‌ಲಿ ಕುದ್ದಿದ್ದೊ. ಕೃಷ್ಣಂಗೆ ಅವರ ಗುರ್ತ ಸಿಕ್ಕಿ ಬಲರಾಮಂಗೆ ಪಿಸಿ ಮಾತ್‌ಲಿ ಹೇಳ್ತ್. ಮುಗಣ್ಲ್‌ನ ಪರದೆಂದ ಹೊರಗೆ ಬಾವ ಸೂರ್ಯನ ಹಾಂಗೆ ಅರ್ಜುನ ಮೆಲ್ಲ ಎದ್ದ್ ಬಾತ್. ಅದರ ನೋಡ್ದ ಹಾರ್ರ್ ತಲೆಗೊಬ್ಬ ಒಂದೊಂದು ಹೇಳಿಕೆ ಸುರು ಮಾಡ್ದೊ. "ಓಹೋಹೋ! ಏನ್ ಆಚಾರ್ರೆ? ರಾಜಕುಮಾರಿನ ರೂಪು ನಿಮ್ಮ ತಲೆ ತಿರ್ಗ್‌ಸಿತೋ? ಈ ಪಂಥಕ್ಕಿಳ್ದ್ ನಮ್ಮ ಜಾತಿನ ಮರ್ಯಾದಿ ತೆಗಿಯೊಕುಂತೋಳೋರಿಯೊ? ನಮ್ಮ ಪೌರುಷ ಎಲ್ಲ ಊಟದ ಎಲೆ ಮುಂದೆ. ಎಷ್ಟ್ ಹೋಳಿಗೆ ತಿಂಬರಿ? ಹತ್ತ್ ಲಾಡ್ ಒಮ್ಮಗೇ ತಿಂಬೋರಿಯೊ? ಎಷ್ಟ್ ಪಾಯ್ಸ ಕುಡಿವೋರಿ– ಇಂತ ಪಂತಗಳ ನಾವ್ಗೆ ಹಾಕಕಾದ್ದ್ ನ್ಯಾಯ. ಅದ್ ಬುಟ್ಟ್ ಬಿಲ್ಲ್, ಬಾಣ, ಹೆಣ್ಣ್ ಯಾರಿಗೆ ಬೇಕು ಇದೆಲ್ಲ? ಹೆಣ್ಣ್‌ನ ಗದ್ದರೂ ರಾಜಕುಮಾರಿಯಾದವಳ ಬಡ ಹಾರಂವ ಹೇಂಗೆ ಸಾಂಕುದು? ಆ ದುರ್ಯೋಧನ, ಕರ್ಣನಂತಣ್ವ್ಕೆ ಆಗದ ಕೆಲ್ಸ ಈ ಭಿಕಾರಿ ಹಾರವಂಗ ತೀರುದೋ? ನಿಜ, ಇವನ ಮೈಗೇನೋ ಸೋಂಕಿರೊಕು. ಹೀಂಗೆ ತಲೆಗೊಬ್ಬ ಒಂದೊಂದು ಮಾತಾಡ್‌ತಿರ್ಕನ ಅರ್ಜುನ ಗಂಭೀರ ನಡೆಂದ ಬಂದ್ ಬಿಲ್ಲ್‌ನಕ್ಕಲೆ ನಿತ್ತಣ್ತ್. ಬಿಲ್ಲಿಗೆ ನಮಸ್ಕಾರ ಮಾಡಿ ಅದರ ಎಡ್ದ ಕಣ್ಯಿಂದ ಹಿಡ್ದ್, ಒಂದು ಕೊಡಿನ ನೆಲಕ್ಕೂರಿ ಇನ್ನೊಂದು ಕೊಡಿನ ಬಗ್ಗ್‌ಸಿ, ಬೊಳ್ಳಿನ ಬಿಲ್ಲ್‌ನ ಕೊಪ್ಪಿಗೇರ್‌ಸಿ, ಒಮ್ಮೆ ಅದರ ಬೆರ್ಲ್‌ಂದ ಎಳ್ದ್ ಬುಟ್ಟ್ ರೊಂಯ್ಯಂತ ಶಬ್ದ ಮಾಡ್ತ್. ಮತ್ತೆ ಒಂದು ಬಾಣನ ಬಲ್ದ ಕೈಲಿ ಹಿಡ್ದ್, ಮೇಲೆ ತಿರ್ಗ್‌ತಿರುವ ಮೀನ್‌ನೊಮ್ಮೆ ನೋಡಿ ನೀರ್‌ಲಿ ಅದರ ಪ್ರತಿಬಿಂಬನ್ನೂ ನೋಡಿ, ಮೊಣ್‌ಕಾಲೂರಿಕುದ್ದ್, ಬಿಲ್ಲಿಗೆ ಬಾಣನ ಜೋಡ್ಸಿ ನೀರ್‌ನ ಪ್ರತಿಬಿಂಬನ್ನೇ ನೋಡಿ ಕಣ್ಡ್ ಸಮಿಯ ನೋಡಿ ಬಾಣ ಬುಟ್ಟಣ್ತ್. ಅದ್ ಆ ಮೀನ್‌ನ ಕಣ್ಣ್‌ಗೆ ತಾಂಗಿತ್. ಈ ಚಮತ್ಕಾರನ ನೋಡಿ ಜನ ಎಲ್ಲ "ಹೋ"ಂತ ಉದ್ಗಾರ ಮಾಡ್ದೊ. ದ್ರೌಪದಿ ಸಂಭ್ರಮಂದ ಅರ್ಜುನನ ಕುತ್ತಿಗೆಗೆ ಮಾಲೆ ಹಾಕಿತ್. ಕೂಡ್ಲೆ ಕಾವಲ್‌ನ ಸೈನಿಕರ್ ಅವರಬ್ಬರ ಸುತ್ತುವರ್ದ್ ಕಾವಲ್ ರಕ್ಷಣೆ ಕೊಟ್ಟೊ. ಕೊಂಬು ವಾದ್ಯಂಗ, ಸಂಕ ಜಾಗಟೆಗಂತ

ಹೇಳುವ ಮಂಗಳ ವಾದ್ಯಗ ಮೊಳಗಿದೊ. ಈಗ ಹಾರ್ರ ಅಟ್ಟಹಾಸ ಹೇಳಿಕೆ ತೀರದ್. ಕ್ಷತ್ರೀಯರ್‌ಂದಾಗದ ಕಾರ್ಯ ನಮ್ಮಂದ ಆತ್‌ಂತ ಅಷ್ಕಲ್ಲ ಹೆಮ್ಮೆ. ದ್ರುಪದ, ಅರ್ಜುನನ್ನೂ ದ್ರೌಪದಿನನ್ನೂ ರಥಲಿ ಏರ್ಸಿ ಅರಮನೆಗೆ ಕಳ್ಸಿಕೆ ಏರ್ಪಾಟ್ ಮಾಡ್ಸಿತ್.

ಅತ್ತ ಸೇರ್‍ದ ಕ್ಷತ್ರಿಯರೆಲ್ಲ ಅಪಮಾನದ ಕಿಚ್ಚಿಲಿ 'ಕೊತ ಕೊತ' ಕೊದ್ದೊ. ಹಾರಂವಂಗೆ ಹೆಣ್ಣ್ ಕೊಡುವ ಉದ್ದೇಸ ದ್ರುಪದಂಗೆ ಇದ್ದಿದ್ದರೆ ಅಂವ ಅಲಾಯ್ದ ಕೊಡಕಯ್ತ್. ನಾವು ಇಷ್ಟ್ ಜನ ಕ್ಷತ್ರಿಯರ ಎದ್‌ರಿಗೆ ಬಾಣನ ಗುರಿಗೆ ತಾಂಗ್ಸಿದ ನವನಂದ ಗಿಳಿನಾಂಗಿರುವ ಆ ಸುಕುಮಾರಿನ, ಒಬ್ಬ ದಳಿದ್ರ ಹಾರಂವಗೆ ಕೊಡುದುಂತೇಳಿರೆ ಇದ್ ನಾವ್ಗೆಲ್ಲಳವ್ಗೆ ದ್ರುಪದ ನಮ್ಮ ಮೋರೆಗೆ ಮೊಸಿ ಉದ್ದಿದಾಂಗೆ ಮಾಡ್ದ್ ಅಲ್ಲೊ? ಅವನ ಸುಮ್ಮನೆ ಬುಡಲಿಕ? ಹೀಂಗೆ ದುರ್ಯೋಧನ, ಶಲ್ಯನಂತರಳವು ಹೇಳ್‌ಕನ ಒಳ್ಳೊವೆಲ್ಲ ರೋಷಲಿ, ಮೀಸೆ ಕೊಣ್ಸಿದೊ. ತಮ್ಮ ಸೈನ್ಯಗಳ ಯುದ್ಧ ಕಳಕೆ ಹೊರ್ಟ್‌ಸಿಕೆ ತಯಾರ್ ಮಾಡ್ದೊ. ರಣಭೇರಿ ಗುಡ್ಗಿತ್. ಆನೆಗ ಕವಚಗಳ ಹಾಕ್ಸಿಕಳಂಡ್, ಕೊಂಬುಗಳಿಗ ಬಾಳ್ ಕತ್ತಿಗಳ ಕಟ್ಟಿಸಿಕಳಂಡ್ ಕೆಬಿಯಾಡ್ಸಿಕಳಂಡ್ ನಿತ್ತೊ. ಕುದುರೆಗಳಿಗೂ ಅಲಂಕಾರ ಆತ್. ಬಾಯಿಲಿ ನೊರೆ ಸೂಸಿಕಳಂಡ್, 'ಹಿಹಿಹೀ'ಂತ ಕೆನ್ಕಂಡ್ ತಲೆ ಮುಕ್ಕುಡು ಹಾಕಳಂಡ್ ಎದ್‌ರ್‌ನ ಬಲ್ದ ಕಾಲ್‌ನ ನೇಚಿಕಳಂಡ್ ನಾಗಾಲೋಟಕೆ ತಯಾರಾಗಿ ನಿತ್ತೊ. ರಥಗಳ ನೊಜ್ಜಕ್ಕೆ ಕುದುರೆಗಳ ಬಿಗ್‌ದೊ. ಸೈನಿಕರ್ ಕತ್ತಿ ಗುರಾಣಿ ಹಿಡ್ಕಂಡ್, ಬಿಲ್ಲ್‌ಗಾರ್‌ರ್ ಬತ್ತಳಿಕೆನ ಕಟ್ಟಿಕಳಂಡ್ ಬಿಲ್ಲ್‌ಗಳ ಹೆದೆಯೇರ್‌ಸಿಕಳಂಡ್ ನಿತ್ತೊ. 'ಡಮರ ಡಮರ ಡಮರ ಡಂ' 'ಡಮರ ಡಮರ ಡಮರ ಡಂ'ಂತ ಭೇರಿ ಹೊಡಿವ ಸದ್ದಿಗೆ ಹೆಜ್ಜೆ ಹಾಕಳಂಡ್ ಕ್ಷತ್ರಿಯರ ಸೈನ್ಯ ದ್ರುಪದನ ಅರಮನೆನ ಬೊಯ್ಲ್ ಜಾಗೆಗೆ ನಡ್ತ್. ದ್ರುಪದಂಗೆ ಧೈರ್ಯ ಕುಂದಿತ್. ಅವಂಗೆ ಅರ್ಜುನ ಮಾತ್ ಕೊಟ್ಟಳತ್. "ಮಹಾರಾಜರೇ ನೀವ್ಗೆ ಗಾಬ್ರಿ ಬೇಡ. ಇವಲ್ಲ ನಾ ನಿಮ್ಮ ಮಗಳ ಗೆದ್ದಳದಿಕೆ ಮತ್ಸರಳಲಿ ಯುದ್ಧಕೆ ಬಂದೊಳೊ. ಇವರ ನಾನೂ ನನ್ನ ಅಣ್ಣನೂ ವಿಚಾರ್ಸಿಕಂಡವೆ. ನೀವು ಸುಮ್ಮನೆ ನೋಡಿಕಳಂಡ್ ನಿಲ್ಲಿಂತ ಹೇಳಿ ತನ್ನ ಬಿಲ್ಲ್, ಬಾಣಗಳ ಹಿಡ್ಕಳಂಡ್ ತಯಾರಾತ್. ಅಷ್ಟರ್ಲಿ ಬ್ರಾಹ್ಮಣ ವೇಸಲಿದ್ದ ಭೀಮನೂ ಅವನ ಪಕ್ಕಲೆ ಬಂದ್ ನಿತ್ತಳತ್. ವಿರೋಧಿಗಳ ಪೈಕಿ ಕರ್ಣನೇ ಮೇಲಾದ ಬಿಲ್ಲಾಳ್. ಹಾಂಗೆ ಅಂವನೇ ಮುಂದೆ ಯುದ್ಧಕ್ಕೆ ಬಾತ್. ಅರ್ಜುನ ಅವನೊಟ್ಟಿಗೆ ಕಾದಾಟಕ್ಕೆ ನಿತ್ತಳತ್. ಈ ಬ್ರಾಹ್ಮಣನೇ ಅರ್ಜುನಂತ ಅವಂಗೆ ಗೊತ್ತಿತ್ತ್‌ಲೆ. ಹಾರಂವ ಅಲ್ಲೊ? ಅವನ ಸುಲಭಲಿ ಸೋಲ್ಸಲಕ್‌ಂತ ಯೋಚಿಸಿತ್ತ್. ಆದರೆ ಇಂವ ಕಾಂಬಾಂಗೆ ಅಲ್ಲ. ಜೋರುಟ್ಟುಂತ ಹೇಳಿಕಳಂಡ್ ತೀರ್‌ದಷ್ಟ್ ಹೋರಾಡ್ತ್. ಕಳಿಯಿಸಾಗಾದಾಕನ ಹಾರ್‍ರೊಟ್ಟಿಗೆ ಹೋರಾಡ್ತು ಸರಿ ಅಲ್ಲಂತ ಮೆಲ್ಲ ಮೆಲ್ಲ ಜೆನ್ಸ್ ತಿರ್ಗ್‌ಸಿತ್. ಶಲ್ಯನೂ ಮಲ್ಲಯುದ್ಧಲಿ ತನ್ನಂದ ಬುಟ್ಟೋವೇ ಇಲ್ಲೆಂತ ಮುಂದೆ ಯುದ್ಧಕಳಕ್ಕೆ ಇಳ್ತ್. ಅವನ ಅನುಸರ್ಸಿಕಳಂಡ್ ಬಂದ ಸೈನಿಕರ ಒಂದು ಮರನ ಕಿತ್ತ್ ಭೀಮ ಅವರ ಮೇಲೆ ಹೆರ್ಕಿ ಇಟ್ಟಳತ್. ಅವೆಲ್ಲ ಯಮಲೋಕಕ್ಕೆ ಹೋದೊ. ಮತ್ತೆ ಎದ್‌ರಾದ ಶಲ್ಯನ ಕುಸ್ತಿನ ಆಯಕಟ್ಟ್‌ಲಿ ಸರಿಯಾಗಿ ಮುಟ್ಟ್‌ಸಿ ಹಿಡ್ದ್. ನೆಲಕ್ಕೆ ಕುಕ್ಕಿತ್. ಶಲ್ಯ ಸೋತ ಮೋರೆ ಮಾಡಿಕಳಂಡ್ ಮೆಲ್ಲ ಹಿಂದೆ ಹೋತು.

ವೀರಾಧಿ ವೀರಱರ್ಂತ ಹೆಸ್ರ್ ಮಾಡ್ದ ಕರ್ಣ ಮತ್ತೆ ಶಲ್ಯನಂತೊವೇ ಸೋತೊಂತೇಳಿರೆ ಈ ಹಾರಂಪರ ಗೆಲ್ಲಿಕೆ ನಮ್ಮಂದ ಆಕುಟ್ಟೋಂತ ಒಳ್ಳ ರಾಜೆರ್ಗ್ಳಲ್ಲ ಬೆನ್ನ್ ತೋರ್ಸಿ ಅವರ ಊರು ಕಡೆ ಸಾಗಿದೊ.

ಭೀಮನೂ ಅರ್ಜುನನೂ ದ್ರೌಪದಿನ ಕರ್ಕಂಡ್, ಅವು ನಿತ್ತಿದ್ದ ಕುಂಬಾರನ ಮನೆನ ಕೊಟೆಗೆನಕ್ಕಲೆ ಬಂದೊ. ಕುಂತಿ ಒಳೆಗಿತ್ತ್. ಹಜ್ಜಾದೂರಂದಳೇ ಅರ್ಜುನ ಉತ್ಸಾಹಱಲಿ ಅಯ್ಯೆನ ಕರ್ದ್. "ಅವ್ವಾ ನಾವೊಂದು ಹೆಣ್ಣ್ ತಂದೊಳೇ"ಂತ ಹೇಳ್ತ್. ಕುಂತಿಗೆ "ಹೆಣ್ಣ್"ಂತೇಳ್ದು ಹಣ್ಣ್ಂತ ಕೇಳಿ, "ನೀವು ಐದ್ ಜನನೂ ಅದರ ಸರಿಪಾಲ್ ಮಾಡಿ ಕಱಂಡ್ ಅನುಭವ್ಸಿ ಮಜ್ಜ"ಂತ ಒಳಗಂದಱಳೀ ಹೇಳಿ ಹೊರೆಗೆ ಬಂದ್ ನೋಡ್ಕನ ಅದಿಕೆ 'ನಾ ಎಂತಾ ತೊಪ್ಪು ಮಾಡಿಬುಟ್ಟೆ'ಂತ ಬಾರಿ ಪಶ್ಚಾತ್ತಾಪ ಆತ್. ಹಾಂಗೆ ತುಂಬ ಬೇಜಾರ ಪಟ್ಕಱಂಡಱತ್. ಅದಿಕೆ ಅರ್ಜುನ ಅವ್ವ ಹೇಳ್ದ ಮಾತಂದರೆ ಅದ್ ವೇದವಾಕ್ಯಕ್ಕೆ ಸಮ. ಮಕ್ಕ ಆದೊವು ಅದರ ಮೀರಿಕೆ ಆಗಱದ್ಂತ ಯುಧಿಷ್ಠರಾದಿ ಸೋದರರೊಟ್ಟಿಗೆ ವಾದ ಮಾಡಿ ಅವರ ಒಪ್ಸಿತ್. ಧಱರ್ಮ ಸಂಕಟಕೆ ಸಿಕ್ಕಿ ಬಿದ್ದ ಅವು ಉಪಾಯ ಕಾಣದೆ ಒಪ್ಪಿಕಱಂಡೊ.

ರಾಜಕುಮಾರಿನ ಬ್ರಾಹ್ಮಣ ಒಬ್ಬ ಗದ್ಕಱಂಡ್ ಹೋತುಂತ ದ್ರುಪದಂಗೆ ಆಶ್ಚರ್ಯನೂ ಒಂದು ಕಡೆಂದ ಬೇಜಾರನೂ ಆತ್. ದ್ರೌಪದಿನ ಪಡ್ದ ಉದ್ದೇಸವೇ ಅದರ ಅರ್ಜುನಂಗೆ ಕೊಡೊಕುಂತ. ಈಗ ಅದ್ ನೆರವೇರದಾಂಗೆ ಆತಲೇಂತೇಳುವ ನಿರಾಸೆ ಅವಂಗೆ. ಮಜ್ಜನ ಕರ್ದ್ "ಅವು ಯಾರೇಂತ ಒಮ್ಮೆ ನೀ ಕಂಡ್‌ಹಿಡಿ"ಂತ ಹೇಳ್ತ್. ಹಾಂಗೆ ಧೃಷ್ಟದ್ಯುಮ್ನ ಅಂದ್ ಇರ್ಲ್ ಯಾರಿಗೂ ಗೊತ್ತಾಗದಾಂಗೆ ಅಣ್ಣ ತಮ್ಮಂದಱರಿಜ್ಜೊರು ದ್ರೌಪದಿನ ಕರ್ಕಂಡ್ ಹೋದ ದಾರಿಲೇ ಹೋಗಿ ಅವು ಇದ್ದ ಕುಂಬಾರನ ಮನೆನ ಕೊಟೆಗೆನಕ್ಕಲೆ ಬಾತ್. ಅಲ್ಲಿ ಅವರ ನೋಡಿಕಱಂಡ್ ಅವರ ಮಾತ್‌ಗಳ ಆಲ್ಸಿಕಱಂಡ್ ಇತ್ತ್. ಅಯ್ಯೆನ ಕಾಲ್ಕಡೆಲಿ ಐದ್‌ಜೆನ ಮಕ್ಕ ಮತ್ತೆ ಅವರ ಕಾಲ್ಕೆಳಗೆ ದ್ರೌಪದಿ ತನ್ನ ಕೈನೆ ತಲೆದಿಂಬು ಮಾಡಿಕೆಱಂಡ್ ಮಲ್ಗಿತ್ತ್. ಮಣಿಮಂಚದ ಮೇಲೆ ಮೆತ್ತಂಗೆನ ಹಾಸಿಗೆಲಿ ಮಲ್ಗಿ ಸುಖನಿದ್ದೆ ಮಾಡುವ ತನ್ನ ತಂಗೆ ಹೀಂಗೆ ನೆಲದ ಮೇಲೆ ಬೆರಿ ಒಂದು ಸೀರೆ ಹಾಸಿಕಱಂಡ್ ಮಲ್ಗಿದ ದುರವಸ್ಥೆನ ನೋಡಿ, ದೃಷ್ಟದ್ಯುಮ್ನಂಗೆ ಕಱಣ್ಣೀರ್ ಬಾತ್. ಮತ್ತೆ ಆ ಗಂಡ್‌ಮಕ್ಕ, ಆಯುಧಗಳ ಬಗ್ಗೆ, ಯುದ್ಧ, ಸೇನೆ, ವ್ಯೂಹಂತೇಳುದರ ಬಗ್ಗೆ ಬಾರಿ ಲವಲವಿಕೆಲಿ ಮಾತಾಡಿಕಱಂಡ್ ಇದ್ದೊ. ಇದರ್ಂದ ಇವು ಕ್ಷತ್ರಿಯರೇಂತ ಅವಂಗೆ ಖಾತ್ರಿ ಆತ್. ಮತ್ತೆ ಒಂದು ಅಯ್ಯೆ, ಐದ್ ಜೆನ ಮಕ್ಕಂತ ಹೇಳುದರ್ಂದ, ಇವು ಪಾಂಡವಱರೇ ಆಗಿರುವ್ರೋಂತ ಅಂದಾಜಿ ಮಾಡ್ತ್. ಅದರ್ನ ಬೊಳ್ದಿಗೆ ಬಂದ್ ಅಪ್ಪನೊಟ್ಟಿಗೆ ಹೇಳ್ತ್. ದ್ರುಪದಂಗೆ ತುಂಬ ಸಂತೋಸು ಆತ್. ಹಾಂಗೆ ಬೊಳ್ದಿಗೆ ರಥಗಳ ತಕಱಂಡ್ ಹೋಗಿ ರಾಜ ಮೊರ್ಯಾದೆಲಿ ಅವರ ಅರಮನೆಗೆ ಕರ್ಕಱಂಡ್ ಬಂದ್ ಬೇಕಾದ ಸನ್ಮಾನ ಮಾಡಿ ಕಱಂಡ್ ಇತ್ತ್.

ಇನ್ನ್ ಶಾಸ್ತ್ರ ರೀತಿಲಿ ಮೊದುವೆ ನಡಿಯಕೊಲೆಂತೇಳಿ ದ್ರುಪದ ಮೊದುವೆ ಮಂಟಪ

ಕಟ್ಟ್‌ಸಿತ್. ಪುರೋಹಿತರೊಟ್ಟಿಗೆ ದಿನ ಮುಹೂರ್ತ ಎಲ್ಲ ಕೇಳಿ ನಿಶ್ಚಯ ಮಾಡ್ತ್. ದ್ರುಪದನ ಮನ್ಸ್‌ಲಿದ್ದಿದ್, ಅರ್ಜುನಂಗೆ ಮಾತ್ರ ದ್ರೌಪದಿನ ಮೊದುವೆ ಮಾಡಿ ಕೊಡುದುಂತ. ಮೊದ್‌ಮಜ್ಜನ ಮಂಟಪಕೆ ಕರ್ಕಳಂಡ್ ಬನ್ನಿಂತೇಳ್ದ್ರೆಕೆ ಐದು ಜೆನನೂ ತಯಾರಾಗಿ ಮಂಟಪಕ್ಕೆ ಮೊದ್‌ಮಕ್ಕಳಾಗಿಯೇ ಪ್ರವೇಶ ಮಾಡ್ದೊ. ಇದರ ನೋಡಿ ಅಲ್ಲಿದ್ದೊವ್ಕೆಲ್ಲ ಆಶ್ಚರ್ಯ ಆತ್. ದ್ರುಪದಂಗೆ ಭಾರಿ ಕೋಪಬಾತ್. “ಪಾಂಡವರ್ ಬುದ್ಧಿವಂತರ್; ರೀತಿ ನೀತಿ ತಿಳ್ದೊವು. ವಿವೇಕಿಗಂತೆಲ್ಲ ಕೇಳಿದ್ದೆ. ಆದರೆ ಇಂಥ ಅವಿವೇಕದ, ಅನೀತಿನ ಕಾರ್ಯಕ್ಕಿಳ್ದರ ನೋಡಿರೆ ನಂಗೆ ಹೇಸಿಕೆ ಆದೆ.” ದ್ರುಪದ ಕಠೋರವಾಗಿ ಹೇಳ್ತ್. ಯುಧಿಷ್ಠಿರ ಸಮಾಧಾನಂದಳೇ ಹೇಳ್ತ್. ಎಲ್ಲ ದೇವ್ರುಗಳ್‌ಂದಲೂ, ಎಲ್ಲ ವೇದ ಶಾಸ್ತ್ರಾದಿಗಳ್‌ಂದಲೂ ಮೇಲಾದ ದೇವ್ರು ಮಕ್ಕಳಿಗೆ ಅವರ ಅವ್ವನೇ. ಹಾಂಗಿರ್ಕನ ಅದರ ಮಾತ್‌ನ ನಡ್ಸಕಾದ್ದ್ ನಮ್ಮ ಧರ್ಮ. ಇದರ್ಲಿ ಯಾವ ತೊಪ್ಪು ಇಲ್ಲೆ.

“ಯಾವ ಅಯ್ಯನೂ ಅದರ ನಿಜ ಬುದ್ಧಿಲಿ ಇದ್ದಿದ್ದರೆ ಈ ರೀತಿ ಹೇಳಿಕಿತ್ತ್‌ಲೆ. ಏನೊ ತೊಪ್ಪು ಮರ್ದ್ವಲಿ ಹೇಳ್ದ ಮಾತಿಗೆ ಯಾವ ಮಾನ್ಯತೆನೂ ಇಲ್ಲೆ. ಹಾಂಗಿರ್ಕನ ಲೋಕಲಿ ಇಲ್ಲದ ಅನಾಗರಿಕ ನಡತೆನ ನಾ ಒಪ್ಪಿಕಂಬಕೆ ತಯಾರ್ ಇಲ್ಲೆ.” ಖಡಾಕಂಡಿತವಾಗಿ ದ್ರುಪದ ಹೇಳ್ತ್.

ಈಗ ಅರ್ಜುನ ಮಾತಾಡ್ತ್. ಲೋಕಲಿ ಒಂದು ಗಂಡ್‌ಸ್ ಎಷ್ಟೋ ಹೆಣ್ಮಕಳ ಏಕಕಾಲಲಿ ಮೊದುವೆ ಆದೆ. ಗಂಡ ಸತ್ತರೆ ಅವನ ಮೊದುವೆ ಆದ ಹೆಣ್ಮಕ, ಜೀವ ಇದ್ದಾಂಗೆ ಗಂಡನ ಕಾಟದ ಕಿಚ್ಚಿಲಿ ಬಿದ್ದ್ ಸುಟ್ಟ್ ಬೂದಿಯಾಗಿ ಹೋದವೆ. ಆದರೆ ಹೆಣ್ಣ್ ಸತ್ತರೆ ಒಬ್ಬ ಗಂಡ ಆದರೂ ಹೆಣ್ಣ್‌ನ ಕಾಟಕೆ ಬಿದ್ದ್ ಸುಟ್ಟ್ ಬೂದಿಯಾದ ಕತೆ ಉಟ್ಟೋ? ಹೆಣ್ಣ್ ಮಾತ್ರ ಹೀಂಗೆ ಗಂಡನ ಹೆಣದೊಟ್ಟಿಗೆ ಬೂದಿಯಾಗಿ ಸತಿಸಹಗಮನ ಮಾಡ್ದ ಪುಣ್ಯಾತ್ಮಗಿತ್ತಿ ಆಕು. ಗಂಡ್ ಹಾಂಗೆ ಆಕುಂತಿಲ್ಲಂತೇಳುವ ನಿಯಮ ಮಾಡುವೆಲೆ, ಇದ್ ಯಾವ ನ್ಯಾಯ? ಗಂಡ ಒಂದು ಹೆಣ್ಣ್ ಇರ್‌ಕನೇ ಬೇರೆ ಹೆಣ್ಣ್‌ಗಳ ಮೊದುವೆ ಆಕ್‌ಂತಾದರೆ ಹೆಣ್ಣೂ ಹಾಂಗೆ ಬೇರೆ ಗಂಡಂದರ್ನ್ನೂ ಮೊದುವೆ ಆದರ್ಲಿ ತೊಪ್ಪು ಇಲ್ಲೆ. ಇದ್ ಅದರ ಹಕ್ಕ್ ಕೂಡ. ಹಾಂಗೆ ನಮ್ಮವ್ವನ ಮಾತ್‌ಲಿ, ಗೊತ್ತಿದ್ದೊ ಗೊತ್ತಿಲ್ಲದೆಯೋ ಹೇಳ್ದರ್ಲಿ, ದೇವ್ರೇ ಹೇಳ್ದಾಂಗೆ ತುಂಬ ಅರ್ಥ ಉಟ್ಟು.” ಯುಧಿಷ್ಠಿರಾದಿಗ ಅರ್ಜುನನ ಮಾತಿಗೆ ತಲೆ ತೂಗಿದೊ.

“ಹೆಣ್ಣ್, ಊಟಕ್ಕೆ ಹಾಕಿದ ಬಾಳೆಲೆನಾಂಗೆ, ಅದ್ ಒಬ್ಬಂಗೆ ಮಾತ್ರ ಮೀಸಲ್ ಆಗಿರುವಂತದ್. ಒಬ್ಬ ಉಂಡ ಬಾಳೆಲಿ ಇನ್ನೊಬ್ಬ ಉಂಡದೆನೋ? ಒಬ್ಬ ಅನುಭವಿಸಿದ ಹೆಣ್ಣ್‌ನ ಇನ್ನೊಬ್ಬ ಅನುಭವಿಸುವಾಂಗೆ ಆದರೆ ಆ ಹೆಣ್ಣ್ ಸೂಳೆಗೆ ಸಮ. ನನ್ನ ಮಗಳ ಹಾಂಗಾಕೆ ನಾ ಬುಡಿಕಿಲೆ. ಇದ್ ನಮ್ಮ ಕುಲಗೌರವದ ಪ್ರಶ್ನೆ” ದ್ರುಪದ ನಿರ್ಧಾರದ ಧೋರಣೆಂದ ಹೇಳ್ತ್.

ಪಾಂಡವರ್ ನಿರುತ್ತರರಾದೊ. ಸಂಕಟಕೆ ಸಿಕ್ಕಿದೊ. ವೇದ ವ್ಯಾಸರ ನೆನ್ಸಿದೊ. ಆ ರುಷಿ ಪ್ರತ್ಯಕ್ಷ ಆತ್. ದ್ರುಪದ ರುಷಿಗಳಾದ ಅವರ ತುಂಬ ಗೌರವಂದ ಆದರ ಮಾಡ್ತ್.

ನಾವ್ಗೆ ಎದ್‌ರಾದ ಸಮಸ್ಯೆ ಹೀಂಗೆ ಉಟ್ಟು ನೀವೇ ಇದಿಕೆ ಪೊರಿಯಾರ ಸೂಚಿಸೊಕುಂತ ಹೇಳ್ತ್.

ವೇದವ್ಯಾಸೆರ್ ಹೇಳಿಕೆ ಸುರು ಮಾಡ್ದೊ. "ದ್ರುಪದರಾಜ, ನಿನ್ನ ಇಂದ್‌ನ ಸಮಸ್ಯೆಗೆ ಇಂದ್‌ನ ವಿದ್ಯಮಾನಂಗ ಕಾರಣ ಅಲ್ಲ. ಅದ್‌ಕೆ ಇವರ ಹಿಂದೆನ ಜೆನ್ಮಗಳ್ಲಿ ನಡ್ದ ಕೆಲೆವು ಘಟನೆಗಳೇ ಕಾರಣ. ದ್ರೌಪದಿ ಪಾರ್ವತಿನ ಶಕ್ತಿ ರೂಪದ ಒಂದಂಶ ಆಗಿ ಯಜ್ಞ ಕುಂಡಲಿ ನಿಂಗೆ ಮಗಳಾಗಿ ಹುಟ್ಟಿತ್. ಹಿಂದೆ ಅದ್ ಮಹಾಪತಿವ್ರತೆಯಾದ ಬ್ರಾಹ್ಮಣ ಸ್ತ್ರೀಯಾಗಿತ್ತ್. ಅದರ ಗಂಡ ಒಬ್ಬ ಕುಷ್ಠರೋಗಿಯಾದ ಬ್ರಾಹ್ಮಣ. ಇದ್ ಮನ್‌ಸ್‌ಲಿ ಯಾವ ಹೇವರಿಕೆನೂ ಇಲ್ಲದೆ ಅವನ ಸೇವೆ ಶುಶ್ರೂಷೆ ಮಾಡಿಕೆಂಡ್ ಇತ್ತ್. ಒಂದು ದಿನ ಇದರ ಪರೀಕ್ಷೆ ಮಾಡೊಕುಂತ ಆ ಬ್ರಾಹ್ಮಣ ತಾನ್ ಊಟ ಮಾಡ್ದ ಬಾಳೆ ಎಲೆಲಿ ದ್ರೌಪದಿ (ಆಗ ಅದಿಕೆ ಬೇರೆ ಹೆಸ್‌ರ್ ಇತ್ತ್) ತನ್ನ ಗಂಡ ಬುಟ್ಟ ಅನ್ನನ ತಾನ್ ಊಟ ಮಾಡುವ ಪದ್ಧತಿನಾಂಗೆ ಬುಟ್ಟ ಅನ್ನಲಿ ಅವನ ಕೊಳ್‌ತ ಬೆರ್ಲ್ ತುಂಡುನ ಅಡ್‌ಂಗ್‌ಸಿ ಇಸಿ ಎದ್ದೆತ್ ಗಡ. ಅವನ ಹೆಣ್ಣ್ ಯಾವ ಹೇಸಿಕೆಯೂ ಆಗದೆ ಎಂದ್‌ನಾಂಗೆ ಸಂತೋಸುಲೇ ಉಂಡ್‌ತ್ ಗಡ. ಇದರ ನೋಡಿ ಆ ಬ್ರಾಹ್ಮಣರಿಗೆ ತುಂಬ ಮೆಚ್ಚಿಕೆ ಆಗಿ, ಅಂವ ತನ್ನ ಕುಷ್ಠರೋಗದ ಶರೀರನ ತನ್ನ ತಪಶ್ಶಕ್ತಿಂದ ಒಳ್ಳೆ ಸುಂದರ ಹೊಂತಕಾರಿ ಹುಡುಗನಾಂಗೆ ಬದ್‌ಲಿಸಿಕೆಂಡ್ ಅದರೊಟ್ಟಿಗೆ ಕಾಮಕ್ರೀಡೆ ನಡ್ಸಿತ್. ಎಷ್ಟಾದರೂ ಅದಿಕೆ ತೃಪ್ತಿಯಾಗದೆ ಮತ್ತೆ ಮತ್ತೆ ಅವನ ಒತ್ತಾಯ ಮಾಡ್‌ಕನ ಅವಂಗೆ ಕೋಪ ಬಂದ್. 'ನಿಂಗೆ ತುಂಬ ಜೆನ ಗಂಡಂದೆರ್ ಇರುವ ಹಾಂಗಾಗಲಿ'ಂತ ಸಾಪ ಕೊಟ್ಟ್ ಅದರ ಬುಟ್ಟ್ ತಪಸ್ಸಿಗೆ ಹೋತು. ಈ ಬ್ರಾಹ್ಮಣ್ತಿನೂ ಈಶ್ವರನ ಕುರಿತು ತಪಸ್ ಮಾಡ್ತ್. ಅದಿಕೆ ಮೆಚ್ಚಿದ ಈಶ್ವರ ಪ್ರತ್ಯಕ್ಷ ಆಗಿ, 'ಬೇಕಾದ ವರ ಕೇಳಿಕ'ಂತ ಹೇಳ್ತ್. ಆಗ ಆ ಬ್ರಾಹ್ಮಣ್ತಿ, "ಪತಿಂದೇಹಿ, ಪತಿಂದೇಹಿ'ಂತ ಗೊತ್ತಿಲ್ಲದೆ ಐದ್ ಸಲೆರ್ತಿ ಕೇಳಿ ಬುಟ್ಟೆತ್. ಒಂದೇ ಅಭಿಪ್ರಾಯ ಕೇಳೊಕೆ ಸಲಿಯಾಗಿ ಮಂದಲೆಟ್ಟ್ ಆಕುಂತ ಮತ್ತೆ ಮತ್ತೆ ಹೇಳುವ ಪದ್ಧತಿ ರೂಢಿಲಿ ಉಟ್ಟು. ಅದ್ ಆ ರೀತಿಂದ ಹೇಳ್ದ್. ಅದ್ಕೆ ಈಶ್ವರ ಪ್ರತಿ ಸಲೆರ್ತಿಗೂ "ತಥಾಸ್ತು"ಂತ ಹೇಳ್ದ ಕಾರಣ ಈ ಜನ್ಮಲಿ ಅದ್ಕೆ ಐದ್ ಜನ ಗಂಡಂದೆರ್ ಆಗವಂತೆದ್ ದೈವ ನಿಯಮ. ಅದರ ಮೀರಿಕೆ ಯಾರ್‌ಂದಳೂ ಬೊತ್ತ್".

"ಈ ಪಾಂಡವೆರ್ ಐದ್ ಜೆನವೂ ದೈವಿಕ ಪುರುಷರೇ. ಈಶ್ವರನ ವಿಚಾರಲಿ ಇವು ದೇವೇಂದ್ರರಾಗಿದ್ದೊವು ಉದ್ಧಟತನ ತೋರ್ಸಿದರ್‌ಂದ ಈಶ್ವರ ಇವರ ಸೆರೆಮನೆಲಿ ಹಾಕಿಸಿತ್. ತುಂಬ ಕಾಲ ಕಳೆಯಕನ ಅವ್ಕೆ ತಾವು ಮಾಡ್ದ ತೊಪ್ಪು ಗೊತ್ತಾಗಿ, ಈಶ್ವರನ ಕ್ಷಮೆ ಕೇಳ್ದೊ. ಅವಂಗೆ ಕರುಣೆ ಬಂದ್, "ನೀವು ಭೂಲೋಕಲಿ ಹುಟ್ಟಿ ವೀರೆರಾಗಿ ಕೀರ್ತಿಶಾಲಿಗಾಗಿ, ಪ್ರಜೆಗಳ ಕಾಪಾಡಿಂತ ವರ ಕೊಟ್ಟೆತ್. ಹಾಂಗೆ ಇವು ಭೂಮಿಗೆ ಬಂದ ದೈವಿಕ ಪುರುಷರ್. ಇವರ ಅಳಿಯಂದೆರಾಗಿ ಪಡಿದು ನಿನ್ನ ಸೌಭಾಗ್ಯ. ನೀ ಪೂರ್ಣಮನ್‌ಸ್ಸ್‌ಂದ ನಿನ್ನ ಮಗಳ ಈ ಐದ್ ಜನಕ್ಕೂ ಮೊದುವೆ ಮಾಡ್. ಎಲ್ಲ ಈಶ್ವರಾನುಗ್ರಹಂದ ನಡಿವ ಕಾರ್ಯ. ಎಲ್ಲ ಒಳ್ಳೆದಾದು. "ಹೀಂಗೆ ವೇದವ್ಯಾಸೆರ್

ದ್ರುಪದನ ಮನ್ಸ್‌ಲಿದ್ದ ಸೊಂಸಯನ ನಿವಾರಣೆ ಮಾಡ್‌ದೊ.

**ಮಕ್ಕ :**

ಪಂಪ ಕವಿ ಮಾತ್ರ ದ್ರೌಪದಿ ಅರ್ಜುನಂಗೆ ಮಾತ್ರ ಹೆಣ್ಣ್‌ಂತ ನ್ಯಾಯವಾಗಿಯೇ ವರ್ಣನೆ ಮಾಡಿಟುಂತ ಕಂಡದೆ. ಇಲ್ಲದ ಪುರಾಣಗಳ ಹೇಳಿ ಏನೇನೋ ಕತೆ ಕಟ್ಟಿತ್‌ಲೆಂತಕಂಡದೆ ಅಲ್ಲೋ ತಾತಾ?”

**ತಾತ :**

ತೋರ ಮಟ್ಟಿಗೆ ಸರಿಂತ ನಾವ್ಗೆ ಕಂಡರೂ ಅಂವ ಮುಂದೆ ತುಂಬ ತೊಡಕಿಗೆ ಸಿಕ್ಕಿಕಂಡದೆ. ಅವನ ಪೋಷಕ ರಾಜ ಎರಡ್ನೇ ಅರಿಕೇಸರಿನ ಅರ್ಜುನಂಗೆ ಸಮಮಾಡಿ ಅವನೇ ಕಥಾನಾಯಕಂತ ಮಾಡಿ ಕಾವ್ಯ ಬರ್ದದರ್‌ಂದ ತನ್ನ ರಾಜನ ಹೆಣ್ಣ್ ಐದ್ ಜೆನಕೂ ಹೆಣ್ಣಾಗಿ ಉಟ್ಟುಂತ ವರ್ಣಿಸುದು ಅವಂಗೆ ಅಪಮಾನ ಮಾಡ್ದ ಹಾಂಗಾದೆಂತೇಳ್ವ ಕಾರಣಕ್ಕೆ ದ್ರೌಪದಿ ಅರ್ಜುನಂಗೆ ಮಾತ್ರ ಹೆಣ್ಣ್‌ಂತ ವರ್ಣನೆ ಮಾಡಿರೂ, ಜೂಜಾಟಲಿ ಯುಧಿಷ್ಠಿರ ದ್ರೌಪದಿನ ಪಣವಾಗಿಸುದು ಮತ್ತೆ ಸೋಲುದು. ಅದ್ ತಮ್ಮನ ಹೆಣ್ಣ್ ಮಾತ್ರ ಆಗಿದ್ದಿದ್ದರೆ ಯುಧಿಷ್ಠಿರಂಗೆ ಹಾಂಗೆ ಮಾಡುವ ಹಕ್ಕಿತ್ತ್‌ಲೆ. ಸುಭದ್ರನ ಹಾಂಗೆ ಮಾಡ್ತ್‌ಲೆಲೆ. ಕೀಚಕ ಕೊಡುವ ಉಪದ್ರನ ದ್ರೌಪದಿ, ಮಧ್ಯರಾತ್ರೆಲಿ ಭೀಮನಕ್ಕಲೆ ಬಂದ್, ದೂರುದು. ಅದ್ ತಮ್ಮನ ಹೆಣ್ಣಾದರೆ ಹಾಂಗೆ ಮಾಡುದೋ? ದ್ಯೂತ ಪ್ರಸಂಗಲಿ, ಕೌರವರ್ ದ್ರೌಪದಿಗೆ ಅವಮಾನ ಮಾಡ್‌ಕನ. ಅದಿಕೆ ಪ್ರತೀಕಾರ ಮಾಡಿನೇಂತ ಪ್ರತಿಜ್ಞೆ ಮಾಡುದು ಭೀಮನೇ. ಅದ್ ತನಿಗೂ ಹೆಣ್ಣಲ್ಲದಿದ್ದರೆ ಭೀಮ ಹಾಂಗೆ ಮಾಡುದೋ? ದುಶ್ಶಾಸನನ ವಧೆ ಮಾಡಿ, ದ್ರೌಪದಿನ ರಣರಂಗಕ್ಕೆ ಬರ್ಸಿ ತನ್ನ ಪಕ್ಕಲಿ ಕುದ್ದ್‌ರ್ಸಿಕಂಡ್, ಅದರ ತಲೆ ಕೂದೊಲಿಗೆ ಅವನ ರಕ್ತನ ಹಾಕಿ ತಲೆ ಬಾಚುದು ಇದೆಲ್ಲ ಬೇರೆವರ ಹೆಣ್ಣಾಗಿದ್ದರೆ ಹೇಂಗೆ ಸಾಧ್ಯ? ಹೀಂಗೆ ಇಂಥ ಸಂದರ್ಭಲೆಲ್ಲ ಪಂಪ ಪೇಚಿಗೆ ಸಿಕ್ಕಿ ಆಭಾಸ ಮಾಡಿಕಂಡುಟ್ಟು. ಪಂಪನ ತುಂಬ ಮೆಚ್ಚಿಕಂಡ ವಿಮರ್ಶಕ ಮುಳಿಯ ತಿಮ್ಮಪ್ಪಯ್ಯನವು ಮಾತ್ರ ಇವನ ಸಮರ್ಥನೆಗೆ ತುಂಬ ಪೇಚಾಡಿಯೊಳೊ. ಆದರೆ ಅದರ ಒಪ್ಪಿಕೆ ಸಾಧ್ಯ ಇಲ್ಲೆ. ಕವಿ ಎಷ್ಟೇ ದೊಡ್ಡಂವ ಆದರೂ, ಒಬ್ಬ ರಾಜನ ಹಂಗಿಗೆ ಬಿದ್ದರೆ ಇಂಥ ಕೆಲವು ಆಭಾಸಗಳ ತಡಿಯಕೆ ಆಗದೆ ಹೋದೆ.

ಪಾಂಡವರ ಹೆಸ್‌ರ್ ಅಡ್‌ಂಗಿ ಹೋತು. ಇನ್ನ್ ಎಲ್ಲಿ ನಂಗೇ ಸೇರ್‌ದ್. ಹೀಂಗೆ ಪಜ್ಜಾದಿನ ಯಾವ ತಲೆಬೇನೆನೂ ಇಲ್ಲದೆ ಇದ್ದ ಕೌರವರಿಗೆ, ಈಗ ಪಾಂಡವರ್ ಹಿಂದೆಂದಳೂ ಬಲಶಾಲಿಗಾಗಿ, ಕೀರ್ತಿವಂತರಾಗಿ ಲೋಕಕ್ಕೆ ಪ್ರತ್ಯಕ್ಷರಾಗಿ ಬುಟ್ಟೊಂತೇಳ್ವು ದುರ್ಯೋಧನ, ದುಃಶ್ಶಾಸನ, ಕರ್ಣ, ಶಕುನಿ ಮತ್ತೆ ಒಳಗೆಂದೊಳಗೆ ಧೃತರಾಷ್ಟ್ರಂಗೂ ತಡಿಯಕೆ ಬೊತ್ತದ ತಲೆಬೇನೆನ ಉಂಟು ಮಾಡ್ತ್. ಭೀಷ್ಮ, ದ್ರೋಣಾದ್ಯರಿಗೆ ಮಾತ್ರ ಕಣ್ಣ್‌ಲ್ಲಿದವಂಗೆ ಹೊಸ ಕಣ್ಣ್ ಬಂದಾಂಗಾತ್. ಅವೆಲ್ಲ ಪಾಂಡವರ ಪಕ್ಷಿನಾವತಿಗೆ ಬೇಗ ಕರ್ಸೊಣು. ಯುಧಿಷ್ಠಿರಂಗೆ ಅರ್ಧ ರಾಜ್ಯದ ಪಾಲ್ ಕೊಟ್ಟ್ ಪಟ್ಟ ಕಟ್ಟೊಕುಂತ ನಿರ್ಧಾರ ಮಾಡ್ವೊ. ವಾಡಿಕೆನಾಂಗೆ ದುರ್ಯೋಧನ ಇದಿಕ್ಕೆ ವಿರೋಧ ಮಾಡ್ತ್. ಆದರೆ

ಭೀಷ್ಮನ ನಿರ್ಧಾರದೆದ್ರ್ ಅವನ ವಿರೋಧ ನಡ್ತ್ತೆ. ಭೀಷ್ಮ ವಿದುರನ ಕರ್ದ್ನ. ನಿಂಗೆ ಗೊತ್ತಿದ್ದಾಂಗೆಲ್ಲ ಹೇಳಿ ಪಾಂಡವರ ಒಪ್ಸಿ ಅವರ ಇಲ್ಲಿಗೆ ಕರ್ಕೞಂಡ್ ಬಾಂತ ಹೇಳ್ದ. ಸೞಿಂತ ಹೇಳಿ ವಿದುರ ರಥ ಏರಿ ಪಾಂಚಾಲ ನಗರಕ್ಕೆ ಹೋತು. ಅಲ್ಲಿ ಪಾಂಡವರ ನೋಡಿ. ಹಿಂದೆ ಕೆಲ ಕೆಟ್ಟ ಕೃತ್ಯಗ ನಡ್ದ್ ಹೋದ್ದೊ. ಅದೆಲ್ಲ ಕೞ್ದ್ ಹೋದ ಸಂಗತಿಗ. ಅದರ ಮರ್ತ್ ಇನ್ನೆಲ್ಲ ಒಂದಾಗಿ ಬಾಳುವಾಂಗೆ ನೀವು ಹಸ್ತಿನಾವತಿಗೆ ಬರೊಕುಂತೇಳಿ ಅವರ ಒಪ್ಸಿತ್. ದ್ರುಪದನೊಟ್ಟಿಗೆ ಹೇಳಿ, ಅಂವ ಕೊಟ್ಟ ಆನೆ, ಕುದುರೆ, ರಥ, ಐಶ್ವರ್ಯಾದಿಗಳ ತಕೞಂಡ್. ದ್ರೌಪದಿನ್ನೂ ಕರ್ಕೞಂಡ್, ಹಸ್ತಿನಾವತಿಗೆ ಹೊರ್ಟ್ಟೊ. ಕೆಲೞು ದಿನೞಿ ಹಸ್ತಿನಾವತಿ ತಲ್ಪಿದೊ.

ಪಟ್ಟಣದ ಹೊರವಲಯಕ್ಕೆ ಪಾಂಡವರ ಪರಿವಾರ ಬಂದ್ ಮುಟ್ಟಿತ್ಂತ ಗೊತ್ತಾಗಿ ಧೃತರಾಷ್ಟ್ರ ಮಹಾರಾಜ, ತನ್ನ ಪರಿವಾರನ, ಅಂದರೆ ಭೀಷ್ಮ, ದ್ರೋಣ, ಕೃಪ, ದುರ್ಯೋಧನ, ಕರ್ಣ, ದುಶ್ಶಾಸನ ಮತ್ತೆ ಬೇರೆ ಮಕ್ಕಳ್ನೂ, ಕಳಸ ಕನ್ನಟಿ ಮತ್ತೆ ಪೂರ್ಣ ಕುಂಭಗಳ ಹಿಡ್ದ ಹೆಣ್ಮಕಳದೞಂಡ್ನೂ ಕರ್ಕೞಂಡ್ ಹೋಗಿ ಅವರ ಸ್ವಾಗತ ಮಾಡ್ದ. ಭಾರೀ ದಿನಂದ ನೋಡದೇ ಇದ್ದೞದಲ್ಲದೆ, ಅವು ಸತ್ತೇ ಹೋದೊಂತ ತಿಳ್ಕೞಂಡಿದ್ದ ಟಿಸ ಎಲ್ಲ ದೂರ ಆತ್ಂತ, ಭೀಷ್ಮ ದ್ರೋಣಾದಿ ಹಿರಿಯೞರಿಗೆ ಉಕ್ಕಿ ಬಂದ ಸಂತೋಸಂದ. ಕಾಲಿಗೆ ಬೊಗ್ಗಿ ನಮಸ್ಕಾರ ಮಾಡ್ತಿದ್ದ ಪಾಂಡವರ ಎತ್ತಿ, ಗಟ್ಟಿಯಾಗಿ ತೊಬ್ಬಿಕೞಂಡೊ. ಯುವ ಪರಿವಾರದೊವ್ರೂ. ಹಿರಿಯ ಕಿರಿಯಂತೇಳ್ವ ತಾರತಮ್ಯ ನೋಡಿಕೞಂಡ್ ನಮಸ್ಕಾರ ಮಾಡುದು, ತೊಬ್ಬಿಕಂಬೊದು ಮುಂತಾದ ಶಿಷ್ಟಾಚಾರಗಳ ನಡ್ಲಿದೊ. ಹಿರಿಯ ಕುಲವೃದ್ಧರ ನೋಡಿ ತುಂಬ ಭಕ್ತಿಂದ ದ್ರೌಪದಿ ಅವರ ಕಾಲಿಗೆ ನಮಸ್ಕಾರ ಮಾಡ್ಕನ ಅವೆಲ್ಲ ತುಂಬ ಪ್ರೀತಿಲಿ ಅದಿಕ ಆಶೀರ್ವಾದ ಮಾಡ್ದೊ. ಗಾಂಧಾರಿಗೆ ಅದರ ಮೋರ್ಯನ ನೋಡಿಕ ಆಗದಾಂಗೆ ಆತಲೇಂತ ತುಂಬ ಸಂಕಟ ಆತ್. ಆದ್ ದ್ರೌಪದಿನ ತೊಬ್ಬಿ ಹಿಡ್ಕಂಡ್ ಅದರ ಮೈಮೇಲೆಲ್ಲ ಕೈಯಾಡ್ಸಿ ಸಂತೋಸು ಪಟ್ಟೞತ್. ಕೌರವರ ತಂಗೆ ದುಶ್ಶಳೆ, ದ್ರೌಪದಿನ ಒಂದು ಗೞಿಗೆನೂ ಬುಡದೆ, 'ಅತ್ತಿಗೆ', 'ಅತ್ತಿಗೆ'ಂತ ಮಾತ್ ಮಾತಿಗೂ ಕರ್ಕಂಡ್, ಮನೆಯಜ್ಮಾನ್ತಿನ ಕಾಲಿಗೆ ಬಗ್ಗಿಕೞಂಡ್ ಮಿಂಯಾ, ಮಿಂಯಾಂತ ದೇಳುವ ಕೊತ್ತಿನಾಂಗೆ, ಅತ್ತಿಗೆನ ಹಿಂದೊಮ್ಮೆ, ಮುಂದೊಮ್ಮೆ ಸುತ್ತಿಕೞಂಡೇ ಇರ್ತಿತ್ತ್. ತಮ್ಮ ಮನೆಗೆ ಇನ್ನೊಂದು ಮನೆನ ಹೆಣ್ಣ್, ತನ್ನ ಅಣ್ಣಂದೞರಿಗೆ ಹೆಣ್ಣಾಗಿ ಮೊದೊಳಗೆ ಆಗಿ ಬಾಕನ, ನಾದ್ನಿಕೞಳಿಗೆ ಆವ ಸಂತೋಸುಂತೇಳುದರ ಅಳಿಯಕೆ ಬೊತ್ತ್. ಭವಿಷ್ಯ ಜೀವನೞಿ ಇಬ್ಬೊರೂ ಕೞತ್ತಿ ಕೞತ್ತಿ ಹಿಡ್ಕಂಬ ಪ್ರಸಂಗ ಬಂದರೂ ಬಾಮ. ಅಂಥ ಸಂದರ್ಭ ಒಂದು ಬಾಕೆ ಉಟ್ಟುಂತೇಳುದರ ಸುಳಿವೇ ಸಿಕ್ಕದ ಈ ಅಮೃತಗೞಿಗೆನ ಅವರ ಆನಂದನ ನೋಡಿಯೇ ತಿಳಿಯೊಕು ಹೊರ್ತು ಅದರ ಹೇಳಿ ತಿಳ್ಸಿಕೆ ಆಕಲೆ. ಪಾಂಡವರ ಕೌರವರ ವಿಚಾರೞಿ ಕೌರವರ ದಾಯಾದಿ ಮತ್ಸರದ ಕಾರಣಂದ ಆಗಾಗ ಕಲುಷಿತ ವಾತಾವರಣಗ ಉಂಟಾಗ್ತಿದ್ದೊ. ಆದರೆ ಸೌಹಾರ್ದತೆಂದ ಕೂಡ್ದ ಅಲ್ಪ ಸಮಯಗಳೂ ಇರ್ತಿದ್ದೊ. ಈಗಳೂ ಹಾಂಗೇ ಒಂದು ಸಂತೋಸು ಕೊಡುವ ಅಲ್ಪ

ಕಾಲಿ. ಪಾಂಡವರ ವಾಸಕ್ಕೆ ಬೇರೆ ಬಿಡಾರಗಳ ವ್ಯವಸ್ಥೆ ಆತ್. ಮತ್ತೆ ದಿನ ದಿನ ಔತಣಗಳ ವ್ಯವಸ್ಥೆ ಆತ್. ಮತ್ತೆ ನಾನಾ ತರದ ಆಟ, ವಿನೋದಳ್ಂದ ಸಂತೋಸುಲಿ ದಿನ ಕಳೆಲ್ಲೊ.

ಇದೆಲ್ಲ ಆಗುವ ಹೊತ್ತಿಗೆ ಪಾಂಡವಳೆರಿಗೆ ಅರ್ಧ ರಾಜ್ಯ ಕೊಟ್ಟ್ ಯುಧಿಷ್ಠರಂಗೆ ಅದರ ಮಹಾರಾಜಂತ ಪಟ್ಟ ಕಟ್ಟುದುಂತ ಹಿರಿಯಳೆವು ನಿಶ್ಚಯ ಮಾಡ್ಲೊ. ಹಿಂದೆ ಪಾಂಡು ಮಹಾರಾಜ ಆಗಿದ್ದದಳೆರ್ಂದ ಅಂವ ಆದ ಮೇಲೆ ಕುರು ಸಾಮ್ರಾಜ್ಯಕೆ ರಾಜ ಆಕಾದ್ ಅವನ ಹಿರಿಯ ಮಜ್ಜ ಯುಧಿಷ್ಠಿರ. ಅಂಗ ಹೀನನಾದ ಧೃತರಾಷ್ಟ್ರ, ರಾಜಪದವಿಗೆ ಅನರ್ಹಂತ ಹಿಂದೆನೇ ತೀರ್ಮಾನ ಆಗಿ ಹೋದರೂ, ಪಾಂಡು ರುಸಿನ ಸಾಪದ ಕಾರಣಂದ ರಾಜ್ಯಾಧಿಕಾರನ ಬುಟ್ಟ್ ಹೋದ ಕಾರಣ ಧೃತರಾಷ್ಟ್ರ ಹಂಗಾಮಿರಾಜಂತ ಆತ್– ಅಷ್ಟೆ. ಅಂವನ ಹಿರಿಯ ಮಜ್ಜ ದುರ್ಯೋಧನ ಕುರುವಂಶಲಿ ಹಿರಿಯ ಮಜ್ಜ ಅಲ್ಲ. ಆ ಸ್ಥಾನ ಯುಧಿಷ್ಠಿರಂಗೆ. ಹಾಂಗಾಗಿ ಮುಂದೆನ ರಾಜ ಪದವಿ ಅವಂಗೇ ಇದ್ದಳೆದ್ಂತೇಳುವ ಕಾರಣಂದ ಹಿಂದೆ ಅವಂಗೆ ಯುವರಾಜ ಪಟ್ಟ ಕಟ್ಟಿಕಾಕನನೇ ದುರ್ಯೋಧನ ಬೇಕಾದಷ್ಟ್ ವಿರೋಧ ಮಾಡಿತ್ತ್. ಈ ಸಂದರ್ಭಲಿಯೂ ಅದೇ ರಾಗ ಹಾಡಿಕೆ ಸುರುಮಾಡ್‌ಕನ ಭೀಷ್ಮರ್ ಅವನ ಬಾಯಿ ಮುಚ್ಚ್‌ಸಿದೊ. ಮತ್ತೆ ಯುಧಿಷ್ಠರಂಗೆ ಅರ್ಧರಾಜ್ಯದ ಪಾಲ್ ಕೊಟ್ಟ್ –ಅಂದರೆ ಗಂಗಾ ನದಿಂದ ಪೂರ್ವದಕ್ಷಿಣವಾಗಿ ಸೇತು ಬಂಧದವರೆಗಿನ ಭಾಗ ಯುಧಿಷ್ಠಿರನ ಆಳ್ವಿಕೆಗೆ, ಗಂಗಾನದಿಂದ ಉತ್ತರ, ಪಶ್ಚಿಮದ ಭಾಗನ ದುರ್ಯೋಧನ ಆಳುವ ಹಾಂಗೆ ವಿಭಾಗ ಮಾಡಿ ಕೊಟ್ಟೊ. ಪಾಂಡವಳೆರ್ ಹಸಿನಾವತಿಲಿ ಇದ್ದರೆ ಯಾಗೋಳು ಕಲಹ, ತಂಟೆ ತಕರಾರ್‌ಗ ತೂಪ್ಪಿಕೇ ಇಲ್ಲೆ. ಹಾಂಗೆ ಅವು ಇಂದ್ರ ಪ್ರಸ್ಥನ ರಾಜಧಾನಿ ಮಾಡಿಕಣೊಕುಂತ ಧೃತರಾಷ್ಟ್ರ ಹೇಳ್ತ್. ಅದ್ ಬರೀ ಬರಡ್ ಭೂಮಿಂತ ವಿದುರ ವಿರೋಧಿಸಿತ್. ಯುಧಿಷ್ಠಿರ ದೊಡಪನ ಮಾತಿಗೆ ಪ್ರತಿ ಹೇಳದೆ ಒಪ್ಪಿಕಳೆಂಡಳೆತ್.

ಈ ಪಾಲ್ ವಿದ್ಯಮಾನ ನಡಿಯಕನ ಕೃಷ್ಣನೂ ಹಸ್ತಿನಾವತಿಲೇ ಇತ್ತ್. ಪಾಂಡವಳೆರ್ ಇಂದ್ರ ಪ್ರಸ್ಥಕ್ಕೆ ಹೋಕನ 'ನೀನೂ ಒಟ್ಟಿಗೆ ಬಂದರೆ ನಾಪ್ಗೆಲ್ಲ ತುಂಬ ಸಂತೊಸು. ಬಾಂತ ಯುಧಿಷ್ಠಿರ ಕರಿಯಕನ ಕೃಷ್ಣ ಒಪ್ಪಿಕಳೆಂಡ್ ಅವರೊಟ್ಟಿಗೆ ಇಂದ್ರ ಪ್ರಸ್ಥಕ್ಕೆ ಹೋತು. ಆ ಬರಡಾದ ಪ್ರದೇಶನ ನೋಡ್‌ಕನ ವಿದುರ ಹೇಳ್ದ್ ಎಷ್ಟ್ ಸಳೆರಿ, ಬೇಕುಂತಳೆಳಿಯೇ ಧೃತರಾಷ್ಟ್ರ ಈ ಬರಡ್ ನೆಲನ ಪಾಂಡಳೆವಳೆರಿಗೆ ಕೊಟ್ಟಳೆತ್ಂತ ಕೃಷ್ಣನ ಮನ್‌ಸ್ಸಿಗಾತ್. ಆಗ ಕೃಷ್ಣ ತನ್ನ ಮಹಿಮೆಂದ ದೇವ ಲೋಕದ ಶಿಲ್ಪಿನ ಕರ್ಸಿ, ಇಂದ್ರಪ್ರಸ್ಥಲಿ ಪಾಂಡವಳೆರಿಗೆ ಒಂದು ಅರಮನೆ ಕಟ್ಟಕೊಡಿಕೆ ಅಪ್ಪಣೆ ಕೊಟ್ಟಳೆತ್. ಕೆಲವೇ ದಿನಲಿ ಒಂದು ಸುಂದರ ಅರಮನೆನ ಅಂವ ನಿರ್ಮಾಣ ಮಾಡಿಕೊಟ್ಟಳೆತ್. ಹಸ್ತಿನಾವತಿಂದೊಳೂ ತುಂಬ ಸುಂದರವಾದ ಅರಮನೆ ಇಂದ್ರ ಪ್ರಸ್ಥಲಿ ಆತ್. ದೇವೇಂದ್ರನ ಅಮರಾವತಿನ ಮೀರುವಾಂಗೆ ಇದ್ದ್, ಇಂದ್ರ ಪ್ರಸ್ಥಂತೇಳುವ ಅದರ ಹೆಸರ್ ಸಾರ್ಥಕ ಆತ್.

ಇಂದ್ರಪ್ರಸ್ಥಳೆಲಿ ಯುಧಿಷ್ಠಿರನ ರಾಜ್ಯಭಾರ ಶಾಂತವಾಗಿ ನಡಿಯುತಿತ್ತ್. ಪ್ರಜೆಗಳೆಳಿಗೆಲ್ಲ

ಸುಕಸಂತೋಸು ಇತ್ತ್. ಒಂದು ದಿನ ಲೋಕ ಸಂಚಾರಿಯಾದ ನಾರದಏರ್ ಪಾಂಡವರ ಆಸ್ಥಾನಕ್ಕೆ ಬಂದ್ರೊ. ಬಂದೊವು ಲೋಕಾಭಿರಾಮಾಗಿ ಮಾತಾಡ್ಕನ, ದ್ರೌಪದಿನ ಸುದ್ದಿ ಎತ್ತಿದ್ರೊ. ದ್ರೌಪದಿ ತ್ರಿಲೋಕ ಸುಂದರಿ. ಆದೀಗ ಐದ್ ಜೆನಕ್ಕೆ ಹೆಣ್ಣಾಗಿ ಇರುದರ್ಂದ, ಅದರ ವಿಚಾರಏಲಿ ಸೋದರರೊಳಗೆ, ಅಸಮಾಧಾನ, ವೈಮನಸ್ಸ್ ಎಲ್ಲ ಬಾವ ಸಂದರ್ಭ ಉಟ್ಟು. ಎಷ್ಟೇ ಪ್ರೀತಿಯಿರುವ ಅಣ್ಣ ತಮ್ಮಂದಏರಾದರೂ, ಕಡು ಹಗೆಕಾರ್ರಾಗಿ, ಹೊಡ್ದಾಡಿಕಏಂಡ್ ಸತ್ತ್ ಹೋದ ಉದಾಹರಣೆಗಳೂ ಒಳೋಂತೇಳಿ ಸುಂದೋಪಸುಂದಂತೇಳ್ವ ಇಬ್ಬೊರು ರಕ್ಕಸ ಅಣ್ಣ ತಮ್ಮರ ಕತೆ ಹೇಳ್ದೊ. ಇವು ಬ್ರಹ್ಮನ ಕುರಿತು ತಪಸ್ಸು ಮಾಡಿ, ನಾವಿಬ್ಬೊರು ಅಣ್ಣ ತಮ್ಮಂದಿರಿಗೆ ನಾವಿಬ್ಬರು ಅಣ್ಣ ತಮ್ಮಂದಿಏರ್ ಒಬ್ಬಂಗೊಬ್ಬ ಹೊಡ್ದ್‌ಕೊಂಡ್ರೇ ನಾವ್ಗೆ ಸಾವು ಬರೋಕು ಹೊರ್ತು ಬೇರೆ ಯಾರ್ಂದೊಳೂ ಸಾವು ಬಾಕಿಲ್ಲೆಂತೇಳ್ವ ವರ ಪಡ್ದೊ. ಆ ಮೇಲೆ ಅವರ ಹಾವಳಿನ ಲೋಕಏಲಿ ಯಾರಿಗೂ ತಡಿಯಕೆ ಬೊತ್ತದಾತ್. ಅವಿಬ್ಬೊರೂ ಜೊತೆ ಬುಡದಷ್ಟ್ ತುಂಬ ಪ್ರೀತಿನೋವು. ಹೀಂಗಿರ್ಕನ ದೇವೇಂದ್ರ ವಿಶ್ವಕರ್ಮನೊಟ್ಟಿಗೆ ಹೇಳಿ ತಿಲೋತ್ತಮಂತೇಳ್ವ ಒಂದು ಪೋರ್ಲುನ ಅಪ್ಸರೆನ ಸೃಷ್ಟಿ ಮಾಡಿ ಅವರಏಲ್ಲಿಗೆ ಕಏಳ್ಳಿತ್. ಅದರ ನೋಡಿ ಅವಿಬ್ಬೊರೂ 'ನೀ ನಂಗೆ ಹೆಣ್ಣಾಕು' 'ನೀ ನಂಗೆ ಹೆಣ್ಣಾಕು'ಂತ ಎಳ್ದಾಡಿಕೆ ಸುರು ಮಾಡ್ದೊ. ಆಗ ತಿಲೋತ್ತಮೆ ಹೇಳ್ತ್: "ನಿಮ್ಮಿಬ್ಬರ್ಲಿ ಯಾರ್ ಬಲಶಾಲಿಯೋ. ಅವನ ನಾ ಮೊದುವೆ ಆದು"– ಇದರ ಕೇಳಿ ಅವಿಬ್ಬೆರೂ ಒಬ್ಬಂದೊಬ್ಬ ಹೊಡ್ದಾಡಿಕಏಂಡ್ ಇಬ್ಬೊರೂ ಸತ್ತೊ."

ಹೆಣ್ಣ್ನ ಮೋಹಂತೇಳ್ದು ಎಂತಏವ್ನೂ ಹುಚ್ಚಿ ಹಿಡ್ಸ್ವಂತಏದ್. ಅದಿಕ್ಕಾಗಿ ನೀವು ನಿಮ್ಮೊಳಗೆ ಒಂದು ನಿಬಂಧನೆ ಮಾಡಿಕಣೋಕು ದ್ರೌಪದಿ ಒಂದೊಂದು ವೊರ್ಸ. ನಿಮ್ಮ ಪೈಕಿ ಒಬ್ಬೊಬ್ಬನೊಟ್ಟಿಗೆ ಇರೊಕು. ಹಾಂಗೆ ಸರದಿ ಪ್ರಕಾರ ಆ ದಂಪತಿಗ ಏಕಾಂತಏಲಿರ್ಕನ ಬೇರೊಬ್ಬ ಅವರ ಅಂತಃಪುರಕ್ಕೆ ಪ್ರವೇಶ ಮಾಡಿ ಬುಟ್ರೆ (ಬೇಕುಂತಏಳೇ ಆಗಏಲಿ, ಅಕಾಸ್ಮಾತಾಗಿ ಆಗಏಲಿ) ಅಂತಂವ ಒಂದು ವೊರ್ಸ ತೀರ್ಥಯಾತ್ರೆಗೆ ಹೋಕು. ರುಸಿ ಹೇಳ್ದ ಈ ನಿಬಂದನನ ಎಲ್ಲಏವೂ ಸರಿಯಾಗಿ ಪಾಲ್ಸುವೆಂತೇಳಿ ಪಾಂಡವಏರ್ ಒಪ್ಪಿಕಂಡೊ.

ಹೀಂಗೇ ಕೆಲಏವು ಸಮಿಯ ಕಏಳ್ತ್. ಒಂದು ರಾತ್ರೆ ಕೆಲಏವು ಬ್ರಾಹ್ಮಣಏರ್ ಅರಮನೆ ಬಾಗ್ಲಿಗೆ ಬಂದ್ ಬೊಬ್ಬೆ ಹೊಡ್ದೊ. ಏನ್ಂತ ವಿಚಾರ್ಸ್ಕನ, "ಕಳ್ಳಏರ್ ಬಂದ್ ನಮ್ಮ ದನಂಗಳ ಹಟ್ಟಿಂದ ಬಿಚ್ಚಿಕಏಂಡ್. ಹೊಡ್ಕಏಂಡ್ ಹೋದ್ರೊ. ನಾವು ಬುಡ್ಸಿಕಂಬಕೆ ಹೋಕನ ಆಯುಧ ತೋರ್ಸಿ ನಮ್ಮ ಹೆದ್ರ್ಸಿದ್ರೊ. ನೀವೇ ಕಾಪಾಡೊಕು"ಂತ ಹೇಳಿ ಗೋಳೋಂತ ಅತ್ತೊ. ಅರ್ಜುನ ಅವ್ಕೆ ಭರವಸೆ ಕೊಟ್ಟಏತ್. "ಹೆದ್ರ್ಬಡಿ ನಾ ನಿಮ್ಮ ದನಂಗಳ ಬುಡ್ಸಿ ತನ್ನೆ"ಂತ ಹೇಳ್ತ್.

ಆದರೆ ದುರದೃಷ್ಟಂದ, ಅವನ ಬಿಲ್ಲ್ ಬಾಣಗ ಎಲ್ಲ ಆಯುಧ ಶಾಲೆಲಿ ಇದ್ದೊ. ಅಲ್ಲಿಗೆ ಹೋಕೊರೆ ಯುಧಿಷ್ಠಿರನ ಮಲ್ಗುವ ಕೋಣೆನ ದಾಟಿಯೇ ಹೋಕು. ಈಗ

ಉಪಾಯ ಇಲ್ಲೆ. ಹಾಂಗೆ ಅನಿವಾರ್ಯವಾಗಿ ಅರ್ಜುನ ಯುಧಿಷ್ಠಿರನೂ. ದ್ರೌಪದಿನೂ ಏಕಾಂತೞಲಿರ್‌ಕನ ಅಲ್ಲಿಗೆ ಪ್ರವೇಶ ಮಾಡಕಾಗಿ ಬಾತ್. ಅಂವ ಆಯುಧಗಳ ತಕಂಡ್‌ಬಂದ್. ಕಳ್ಳೞರ್ ಹೋದ ದಿಕ್ಕ್‌ನ ಕೇಳಿ, ಗಂಧರ್ವ ಕೊಟ್ಟ ಚಾಕ್ಷುಷೀ ವಿದ್ಯೆಂದ ಕಳ್ಳೞರ್ ಎಲ್ಲಿ ಒಳೋಂತ ತಿಳ್ಕೞಂಡ್ ಅಲ್ಲಿಗೆ ಹೋಗಿ ಬಾಣ ಬುಟ್ಟ್ ಅವರ ಸೋಲ್ಸಿ, "ದನಗಳ ಹಿಂದೆ ತಂದ್ ಕೊಡಿ. ಇಲ್ಲದಿದ್ದರೆ ನಿಮ್ಮ ಒಬ್ಬನ್ನೂ ಜೀವೞಲಿ ಇಸಿಕಿಲ್ಲೆ"ಂತ ಹೆದ್‌ರ್ಸಿತ್. ಅವ್ರೂ ಹಾಂಗೇ ಮಾಡಿ. ಅಡ್ಡ ಬಿದ್ದ್ "ಇನ್ನ್ ಮುಂದೆ ಇಂತ ತೊಪ್ಪು ಕೆಲ್ಸ ಮಾಡಿಕಿಲೆ ದಮ್ಮಯ್ಯ, ನಮ್ಮ ಬುಟ್ಟುಡಿಂತ ಹೇಳ್ವೊ. ಹಾಂಗೆ ಪಾರ್ರ್ರಿಗೆ ಅವರವರ ದನಂಗಳ ಕೊಟ್ಟ್ ಕಳ್ಳರ ಇನ್ನ್ ಯಾರಿಗೂ ತೊಂದರೆ ಕೊಡದೆ ಬೊದ್ಕ್ಯಣಿಂತ ಹೇಳಿ ಹಿಂದೆ ಬಾತ್.

ಅರ್ಜುನ ತೀರ್ಥಯಾತ್ರೆಗೆ ಹೊರ್ಡಿಕೆ ತಯಾರಾತ್. ಯುಧಿಷ್ಠಿರ ಅರ್ಜುನ ಹೋಕೆ ಬೊತ್ತ್. ಏಕಾಂತಲಿ ದೊಡ್ಡವ್ರು ಇರ್‌ಕನ ಸಣ್ಣೞವ್ರು ನೋಡಿರೆ ಅದ್ ದೋಸಂತ ಹೇಳಿಕೆ ಆದುಲೆ. ಅನಿವಾರ್ಯ ಕಾರಣಂದ, ಬೇರೆಯುವರ ಕಷ್ಟ ಪೊರಿಹಾರ ಮಾಡುವ ಕಾರಣಂದಾಗಿ ನೀ ನಮ್ಮ ಏಕಾಂತಕ್ಕೆ ಪ್ರವೇಶ ಮಾಡ್ದ ಹೊರ್ತಾಗಿ ಬೇರೆ ಕಾರಣ ಏನೂ ಇಲ್ಲೆ. ಹಾಂಗಾಗಿ ನೀ ಈ ಕಾರಣಕ್ಕಾಗಿ ತೀರ್ಥಯಾತ್ರೆ ಮಾಡುವ ಅಗತ್ಯನೇ ಇಲ್ಲೆ. ನೀ ಹೋಬಡಂತ ಎಷ್ಟೋ ಹೇಳ್ತ್. ಆದರೆ ಅರ್ಜುನ ಕೇಳ್ತ್‌ಲೆ. ತಿರ್ಥಯಾತ್ರೆಗೆ ಹೊರ್ಟೇ ಬುಟ್ಟೞತ್. ಪಂಪ ಕವಿ. ಏಕಾಂತ ಪ್ರವೇಶ ಪ್ರಸಂಗನ ತನ್ನ ಭಾರತೞಲಿ ಬುಟ್ಟುಟು. ಉಂಡ್‌ಕೞಂಡ್ ತಿಂದ್‌ಕೞಂಡ್, ಸುಮ್ಮನೆ ಕುದ್ದುರೊಂವ ರಾಜಂತೇಳುವ ಹೆಸ್‌ರಿಗೆ ಅನರ್ಹ. ವೈರಿಗಳ ನಾಶ ಮಾಡೊಕು; ದುಃಸಿಗೞಿಗ ತೊಂದರೆ ಕೊಡೊವರ ನಿವಾರ್ಸೊಕು. ಪ್ರಜೆಗೞಿಗೆ ನೆಮ್ಮದಿ ಇರುವಾಂಗೆ ಮಾಡೊಕು. ಈ ಉದ್ದೇಸಂದ, ಹೆಣ್ಣಿಗೆ ಕೂಡಾ ಹೇಳದೆ. ಹೇಳಿರೆ ಅದರ ಕಣ್ಣೀರ್, ಪ್ರಯಾಣಕ್ಕೆ ಅಡ್ಡಿಮಾಡುದುಂತೇಳಿ, ತನ್ನ ಆಭರಣಗಳ ಬಿಚ್ಚಿ ಇಸಿ. ಬತ್ತಳಿಕೆನ ಬೆನ್ನಿಗೆ ಕೞಟ್ಟಿಕೞಂಡ್, ಬಿಲ್ಲ್ ಹಿಡ್ಕೞಂಡ್ ಹೊರ್ಟೞತ್.

ಹಾಂಗೆ ಹೋದಂವ ಗಂಗಾನದಿ ತೀರೞಲ ಮುಂದೆ ಹೋಗಿ, ಗಂಗೆ ಭೂಮಿಗ ಇಳಿವಲ್ಲಿಗೆತ್ತಿತ್. ಅಲ್ಲಿ ಅವನ ಉಲೂಪಿಂತೇಳ್ವ ನಾಗಕನ್ಯೆ ನೋಡಿ. ಅವನ ಮೇಲೆ ಮೋಹ ಉಂಟಾಗಿ ಅವನ ನಾಗಲೋಕಕೆ ಕರ್ಕಂಡ್ ಹೋಗಿ, ಅಲ್ಲಿನ ವಿಲಾಸ ವೈಭವನೆಲ್ಲ ತೋರ್ಸಿ ಅವನೊಟ್ಟಿಗೆ ಸೇರಿ ರಮಿಸಿತ್. ಹಾಂಗೆ ಅದರೊಟ್ಟಿಗೆ ಸಂತೋಸುಂದ ಕೆಲೞವು ಕಾಲ ಕೞಿಯಕನ ಉಲೂಪಿ ಬೊಸ್‌ರಾಗಿ ಮತ್ತೆ ಅದಿಕೆ ಇರಾವಂತಂತ ಹೇಳುವ ಮಜ್ಜ ಹುಟ್ಟಿತ್. ಹಾಂಗೆ ಅರ್ಜುನ ಅಲ್ಲಿ ಆ ಕೂಸುನ ಬಾಲಲೀಲೆಗಳ್ನೂ, ಮತ್ತೆ ಉಲೂಪಿನ ಪ್ರೇಮಲೀಲೆಗಳ್ನೂ ನೋಡಿಕೞಂಡ್ ಮೈಮರ್ತವರಾಂಗೆ ಇನ್ನೂ ಹಜ್ಜದಿನ ಇದ್ದ್ ಮತ್ತೆ ಅಲ್ಲಿಂದ ಹೊರ್ಟ್, ಮಣಿಪುರಂತೇಳ್ವ ನಗರಕ್ಕೆ ಬಾತ್. ಅದಿಕ್ಕೆ ಮಣಲೂರುಂತ ಇನ್ನೊಂದು ಹೆಸ್‌ರ್. ಅಲ್ಲಿನ ರಾಜನ ಹೆಸ್‌ರ್ ನೀಲಧ್ವಜಂತ. ಅವಂಗೆ ಚಿತ್ರಾಂಗದೆಂತೇಳ್ವ ಮಗ. ಅದ್ದುಗೆ ಗೞಂಡ್ ಮಕ್ಕ ಇಲ್ಲದರ್‌ಂದ ಅದರ್ನೇ ಗೞಂಡ್ ಮಕ್ಕಳಾಂಗೆ ಸಾಂಕಿಕೞಂಡ್ ಇತ್ತ್. ಅದ್ ಯುದ್ಧ ವಿದ್ಯೆನೆಲ್ಲ ಕೞಲ್ತಿತ್ತ್. ಅದ್ ಮೊದುವೆ ಆಗಿ ಅದಿಕೆ ಗೞಂಡ್ ಕೂಸು

ಹುಟ್ಟಿರೆ, ಅಂವನೇ ಈ ರಾಜ್ಯಕ್ಕೆ ಮುಂದನ ರಾಜಂತ ಅದ್ರು ನೀಲಧ್ವಜ ಸಾರಿತ್. ಅರ್ಜುನ ಚಿತ್ರಾಂಗದೆನ ಮೊದುವೆ ಆಗಿ, ಅಲ್ಲಿ ಕೆಲಆವು ಕಾಲ ಕುಶೀಲಿ ಇತ್. ಚಿತ್ರಾಂಗದೆ ಗರ್ಭಿಣಿಯಾಗಿ ಗಂಡ್ ಕೂಸ್‌ನ ಹೆತ್ತಿತ್. ಅವಂಗೆ ಬಭ್ರುವಾಹನಂತ ಹೆಸ್‌ರ್ ಇಸಿದೊ. ಮತ್ತೆ ಕೆಲಆವು ಕಾಲ ಕಳ್ದ ಮೇಲೆ ಅರ್ಜುನ ಅವನ ತೀರ್ಥ ಯಾತ್ರೆನ ಮುಂದುವರ್ಸಿತ್.

ಮುಂದೆ ಅರ್ಜುನ ನಾರೀ ತೀರ್ಥಂತ ಹೆಸರಾಗಿದ್ದ ಒಂದು ಸುಂದರ ಪ್ರದೇಶಕ್ಕೆ ಬಾತ್. ಆ ಕೊಳದ ನೀರ್ ಸ್ವಚ್ಛವಾಗಿತ್. ಅದರ್ಲಿ ಮಿಯ್ಯನೋಂತ ಹೇಳಿ. ಬಟ್ಟೆ ಬಿಚ್ಚಿ ಆ ಕೊಳದೊಳಗೆ ಇಳ್ತ್. ಆಗ ಒಂದು ಮೊಸಳೆ ಬಂದ್ ಅವನ ಕಾಲ್‌ನ ಕಚ್ಚಿ ಹಿಡ್ಕಂಡತ್. "ಯಲ!"ಂತೇಳಿ ಕಾಲ್‌ನ ಕೊಡ್ಕಿ ಅದರ ಬಾಯೆನ ಎರ್ಡ್ ಕಆಯಿಗಳ್ಳಿಯೂ ಎಳ್ಡ್ ಬುಡ್ಸಿ, ಆ ಮೊಸಳೆನ ನೇಟಿ ಕೊಳಂದ ಹೊರೆಗೆನ ದಡಕ್ಕೆ ಹರ್ಕಿ ಇಟ್ಟಆತ್. ಆಗ ಅದೊಂದು ಸುಂದರ ಅಪ್ಸರ ಸ್ತ್ರೀಯಾಗಿ ರೂಪು ತಾಳಿ ನಿತ್ತಆತ್. ಆಶ್ಚರ್ಯ ಪಟ್ಟ್‌ಕಂಡ್ ನೋಡುವ ಅರ್ಜುನಂಗೆ, "ನಾವು ದೇವ ಕನ್ನಿಕೆಗ ಒಮ್ಮೆ ವನವಿಹಾರಕ್ಕಂತ ಇಲ್ಲಿಗೆ ಬಂದಿದ್ದೊ. ಇಲ್ಲಿ ಒಬ್ಬ ರುಸಿ ತಪಸ್ ಮಾಡಿಕಂಡ್ ಇತ್. ನೋಡಿಕೆ ಒಳ್ಳ ಜವ್ವಾನ ನಾಂಗೆ ಕಾಂಬತಿತ್. ನಾವು ಐದ್ ಜೆನ ಗೂಡೆಗ ಇದ್ದೆ. ಹುಡುಗಾಟದ ತಮಾಸೆಗಾಗಿ ಅವಂಗೆ ಕಿರಿಕಿರಿ ಆವಾಂಗೆ ಏನೆಲ್ಲ ಹುಚ್ಚಾಟ ಮಾಡ್ಯೊ. ಅವಂಗೆ ಕೋಪಬಂದ್ ಕಣ್ಣ್ ಬುಟ್ಟ್, ನೀವು ಮೊಸಳೆಗ ಆಗಿ ಹೋಗಿಂತ ಸಾಪಕೊಟ್ಟಆತ್. ಹಾಂಗೆ ನಾವು ಐದ್ ಜನನೂ ಮೊಸಳೆಗಾಗಿ ಬದ್‌ಲಾದೊ. ನಾವ್ಗೆ ತುಂಬ ದುಃಖ ಆತ್. ಆರುಸಿಗೆ ಅಡ್ಡ ಬಿದ್. "ನಮ್ಮಆದ್ ತೊಪ್ಪಾತ್. ನೀವು ಕೊಟ್ಟ ಸಾಪನ ಹಿಂದೆ ತಕಂಡ್ ನಮ್ಮ ಉದ್ಧಾರ ಮಾಡೊಕು"ಂತ ಬೇಡಿಕಂಡೊ. ಆಗ ಆ ರುಸಿ, "ಒಮ್ಮೆ ಕೊಟ್ಟ ಸಾಪನ ಹಿಂದೆ ಪಡಿಯಕೆ ಸಾಧ್ಯ ಇಲ್ಲೆ. ಅದರ ಸಕ್ತಿನ ಕಮ್ಮಿ ಮಾಡುವ ಮರು ಸಾಪ ಕೊಟ್ಟನೆ. ಮುಂದೆ ಒಬ್ಬ ಮಹಾಪುರುಷ ಇಲ್ಲಿಗೆ ಬಂದ್ ಈ ಕೊಳಗಆಳಿಗೆ ಇಳ್ದ್ ಮೀಯವ ಹೊತ್ತಿಗೆ ನೀವು ಅವನ ಕಾಲ್‌ನ ಹಿಡ್ಕಂಡರೆ ಅಂವ ನಿಮ್ಮ ಎತ್ತಿ ದಡಕ್ಕೆ ಬಿಸಾಡುದು. ಆಗ ನೀವ್ಗೆ ಮುಂದೆನ ರೂಪು ಬಾದು"ಂತ ಹೇಳ್ತ್. ಇನ್ನ್ ನನ್ನ ಒಳ್ದ ತಂಗೆಕಆಳೂ ಈ ಪರಿಸರಲಿರುವ ಬೇರೆ ನಾಲ್ಕ್ ಕೊಳಗಳ್ಳಿ ಮೊಸಳೆ ರೂಪುಲೇ ಒಳೊ. ದಯಮಾಡಿ ಅವರ ಸಾಪನ್ನೂ ಇಲ್ಲದಾಂಗೆ ಮಾಡಿ ಪುಣ್ಯ ಕಟ್ಟಿಕಣಿ"ಂತ ಹೇಳಿ ಕೈ ಮುಗ್ತ್, ಮತ್ತೆ ಅರ್ಜುನ ಆ ಬೇರೆ ನಾಲ್ಕ್ ಕೊಳಗಆಳಿಗೂ ಹೋಗಿ ಅಲ್ಲಿ ಮೊಸಳೆಗಾಗಿ ಇದ್ದಆವ್ಕೂ ಮೋಕ್ಷ ಕೊಟ್ಟಆತ್.

ಹಾಂಗೇ ಅರ್ಜುನ ತೀರ್ಥಯಾತ್ರೆನ ಮುಂದುವರ್ಸಿಕಂಡ್, ಕನ್ಯಾಕುಮಾರಿ ಅಲ್ಲಿಂದ ಪಶ್ಚಿಮ ಕರಾವಳಿ ತೀರಆಲಿ ಮುಂದುವರ್ದ್, ಕೇರಳದ ತಿರುವನಂತಪುರಂ, ಗುರುವಾಯೂರು ಎಲ್ಲ ನೋಡಿಕಂಡ್ ಬಾತ್. ಕೇರಳದವರ ಶುಚಿರುಚಿನ ಮೆಚ್ಚಿಕಂಡ್ ಅಲ್ಲಿನ ಗೂಡೆಗಳ ದೃಢ ಮೈಕಟ್ಟ್, ಸೊಂಟಂದ ಕೆಳಗೆ ಮಾತ್ರ ಸೀರೆ ಉಟ್ಟ್‌ಕಂಡ್, ಮೇಲೆ ಮೈ ಬುಟ್ಟ್‌ಕಂಡ್ ಇರುವ ಜವ್ವನತಿಯರ ರೂಪಾತಿಶಯನ ನೋಡಿ ಮೆಚ್ಚಿಕಂಡತ್. ನಾ ಒಬ್ಬ ಕವಿಯಾಗಿದ್ದಿದ್ದರೆ, ಇವರ ಮೆಚ್ಚಿ ವರ್ಣಿಸ್‌ತಿದ್ದೆ. ಚಿತ್ರಕಲಾವಿದ ಆಗಿದ್ದರೆ ಹಾಂಗೇ ಚಿತ್ರ ಮಾಡಿ ಇಸಿಕಂಬತಿದ್ದಂತೆಲ್ಲ ಯೋಚಿಸಿಕಂಡ್ ಬಾತ್. ಮುಂದೇ

ಚಂಚಲ ಮತ್ತೆ ಚಪಲ ಮನಸ್. ಹಾಂಗೆ ಏನೇನೊ ಯೋಚನೆಗ ಅವನ ಮನ್ಸ್‌ಲಿ ಸುಳಿಯುತಿದ್ದೊ. ಅಲ್ಲಿಂದ ಅಂವ ಗಂಧದಮರಗ ತುಂಬಿದ್ದ ಕಾಡ್‌ಗಳ್‌ಂದ ಕೂಡಿ, ದೊಡ್ಡ ದೊಡ್ಡ ಬೆಟ್ಟಗಳ, ನೀರ್‌ನ ಝುರಿಗಳ ನೋಡಿಕಣಂಡ್, ಕುಡು ಮಲೆನಾಡ್‌ಂತ ಆಗ ಹೆಸ್‌ರಾಗಿದ್ದ ಕೊಡ್‌ಗ್‌ನ ನೋಡಿಕಣಂಡ್, ಅಲ್ಲಿನ ಪ್ರಕೃತಿ ಸೌಂದರ್ಯನ ಮೆಚ್ಚಿಕಣಂಡ್, ಕಾಡ್‌ಲಿ ಬೆಟ್ಟಗಳ ಹತ್ತಿ ಇಳ್ಕಂಡ್ ಬಂದ್ ಪವಿತ್ರ ನದಿಗಳ್ಲಿ ಒಂದುಂತ ಹೆಸ್‌ರ್‌ಪಡ್ಡ ಕಾವೇರಿನ ನೋಡಿ ತುಂಬ ಸಂತೋಸು ಪಟ್ಟಣತ್. ಭಗಂಡೇಶ್ವರ ಮುನಿ ತಪಸ್ಸ್ ಮಾಡಿಕಣಂಡ್ ಇದ್ದ ಕಾವೇರಿ ಕನಕೆ-ಸುಜ್ಯೋತಿಂತೇಳುವ ಮೂರು ನದಿಗ ಸೇರುವ ತ್ರಿವೇಣಿ ಸಂಗಮ ಸ್ಥಾನಲಿದ್ದ ಆ ರುಸಿನ ಆಶ್ರಮಣಲಿ ಎರ್ಡ್ ದಿನ ನಿತ್ತ್‌ಣತ್. ವಾಸ್ತವವಾಗಿ ಇಲ್ಲಿ ಎರ್ಡೇ ಹಳ್ಳಂಗ ಮೇಲೆ ಕಂಡವೆ. ಸುಜ್ಯೋತಿಂತೇಳ್ದು ನೆಲದಡಿಲಿ ಗುಪ್ತವಾಗಿ ಹರ್ದದೆಂತ ಹೇಳುವೆ.

ರುಸಿ ಅವಂಗೆ ಬೇಕಾದ ಉಪಚಾರ ಮಾಡ್ತ್. ಕಾವೇರಿನ ಕತೆ ಹೇಳ್ತ್. ಬ್ರಹ್ಮ ಕವೇರ ಮುನಿನ ತಪಸ್ಸಿಗೆ ಮೆಚ್ಚಿ ಅವಂಗೆ ಒಂದು ಹೆಣ್ಣ್ ಕೂಸು ಆವಾಂಗೆ ವರಕೊಟ್ಟಣತ್. ಅದಿಕ್ಕೆ ಲೋಪಾಮುದ್ರೆಂತ ಮುಂದೆ ಇದ್ದ ನಿಜ ಹೆಸ್‌ರಾದರೂ ಕವೇರ ಮುನಿನ ಮಗಳಾದ್ದರ್‌ಂದ ಕಾವೇರಿಂತೇ ಪ್ರಸಿದ್ಧಿಗೆ ಬಾತ್. ಅದಿಕೆ ಅಗಸ್ತ್ಯನೊಟ್ಟಿಗೆ ಮೊದುವೆ ಆತ್. ಆಗ ಅಗಸ್ತ್ಯ ಬ್ರಹ್ಮಗಿರಿನ ಅಡಿಭಾಗಲಿ ಒಂದು ಅತ್ತೋಸು (ಅಶ್ವತ್ಥ ಮರ) ಮರದ ಬುಡಣಲಿ ಆಶ್ರಮ ಮಾಡಿ ಕಣಂಡ್ ಇತ್ತ್. ಲೋಪಾಮುದ್ರೆಗೆ (ಕಾವೇರಿಗೆ) ಜೆನಕ್ಕೆ ಏನಾರ್ ಉಪಕಾರ ಆಗುವಂತ ಕೆಲ್ಸ ನಾ ಮಾಡೊಕುಂತ ತುಂಬ ಆಸೆ. ಗಂಡ ತನ್ನ ಬುಟ್ಟ್ ಒಂದು ಅರೆಗಣಳಿಗೆನೂ ದೂರ ಹೋಕ ಬೊತ್ತ್‌ಂತ ಶರ್ತ ಹಾಕಿತ್ತ್. ಅಗಸ್ತ್ಯ ಅದಿಕೆ ಒಪ್ಪಿಕಣಂಡೂ ಇತ್ತ್. ಒಂದು ಪರ್ವ ದಿನಣಲಿ, ಎಲ್ಲೊವು ನಿದ್ದ್‌ಂದ ಎದ್ದ್‌ರಿಕೆ ಮುಂದೆ ಹರದಾರಿನಷ್ಟ್ ದೂರ ಇರುವ ಕನಕೆ ಹಳ್ಳಕೆ ಮೀಯುಕೆಂತೇಳಿ ಹೋತು. ಕಾವೇರಿಗೆ ಎಚ್ಚಣರಿಕೆ ಆಕೆ ಮುಂದೆ ತಿರ್‌ಗಿ ಬಂದ್ ಬುಡುವೆಂತ ಯೋಚಿಸಿತ್ತ್. ಒಟ್ಟಿಗೆ ಮಲ್ಕ್‌ಂಡ್ ಇದ್ದ ಗಂಡ ಎದ್ದ್ ಹೋಕನ ಅವನ ಮೈನ ಬೆಪ್ಪು (ಬಿಸಿ) ತನ್ನ ಮೈಗೆ ತಾಂಗವೆ ಅದಿಕೆ ಚಣಳಿ ಆಕೆ ಸುರಾತ್. ಎಚ್ಚಣರಿಕೆ ಆತ್. ತಪಸ್ಸಿಗೆ ಬೇಕಾದ ನೀರಿಗಾಗಿ ಮಾಡಿದ್ದ ಕುಂಡಿಕೆನ ಲೋಪಾಮುದ್ರೆ ಎದ್ದ್ ಬಂದ್ ಮಂತ್ರೋಚ್ಚಾರಣೆ ಮಾಡಿ. ನನ್ನಂದ ಲೋಕದ ಜೆನಕೆ ಉಪಕಾರ ಆಗವ ಹಾಂಗೆ ಆಗಣಲಿ. ದೇಶಕ್ಕೆ ಸುಭಿಕ್ಷ ಆಗಣಲಿಂತೇಳಿ ಹಾರ್ತ್. ಜಲ ರೂಪುತಾಳಿ ಅಲ್ಲಿಂದ ಉಕ್ಕಿ ಹರಿಯುಕೆ ಸುರಾತ್. ಅಗಸ್ತ್ಯ ಕನಕೆಲಿ ಒಂದು ಮುಳುಗು ಹಾಕಿ ಎದ್ದ್‌ರ್‌ಕನ, 'ನಾ ಹೆಣ್ಣ್‌ನ ಒಂದರ್ನೆ ಬುಟ್ಟ್ ಬಂದ್ ತೊಪ್ಪು ಮಾಡ್ದೆಂತ ಮನ್ಸಿಗಾತ್. ಹಾಂಗೆ ಅಲ್ಲಿಂದ ಬೇಗ ಬಾತ್. ಅಂವ ಬಂದ್ ಸೇರುವಷ್ಟ್ಲಿ ಕಾವೇರಿ ಜಲರೂಪ ತಾಳಿ ಸುಮಾರ್ ದೂರ ಹರ್ದ್ ಹೋಗಿತ್ತ್. ಅಗಸ್ತ್ಯ ಓಡಿಹೋಗಿ ಅಲ್ಲಿ ಅದರ ತಡಿಯೊಕುಂತೇಳ್‌ಕನ ಅದ್ ಮೇಲೆ ಕಾಣದಾಂಗೆ ನೆಲದೊಳಗೆ ಅಡ್‌ಂಗಿ ಹರಿಯುಕೆ ಸುರುಮಾಡ್ತ್. ಅಗಸ್ತ್ಯ ನನ್ನ ಬುಟ್ಟ್ ಹೋದಿಯುಲೇಂತ ಹೇಳಿಕಣಂಡ್ ಅಳಕೆ ಸುರುಮಾಡ್ತ್. ಹೆಣ್ಣ್‌ನ ಅಗಲಿಕೆ, ಎಂಥ ಜ್ಞಾನಿಗಾದಣರೂ ತಡಿಯುಕೆ ಬೊತ್ತದ ದುಃಖ

ತಾದು. ಹಾಂಗೆ ಅಗಸ್ತ್ಯನ ಅಳ್ಗಲ್‌ನ ನೋಡಿಕಾಗದೆ ಕಾವೇರಿ ಪ್ರತ್ಯಕ್ಷ ಆಗಿ ಹೇಳ್ತ್. "ನಾ ಒಂದು ರೂಪುಲಿ ಲೋಪಾಮುದ್ರೆಂತೇಳುವ ಹೆಸ್‌ರ್‌ಲಿ ನಿಮ್ಮೊಟ್ಟಿಗೇ ಇದ್ದನೆ. ಕಾವೇರೀಂತ ಜಲರೂಪಲಿ, ಲೋಕದ ಮುಂದೆ ಹರ್ಕಂಡ್ ಹೋನೆ. ಲೋಕದ ಜೆನರ ಧನ ಧಾನ್ಯ ಸಂಪೊತ್ತ್ ಹೆಚ್ಚುವಾಂಗೆ ಮಾಡಿ ಎಲ್ಲೊವ್ರುಕು ಸಂತೋಸು ಉಂಟು ಮಾಡಿನೆ. ಮತ್ತೆ ವೊರ್ಸಕೊಮ್ಮೆ, ತುಲಾ ಸಂಕ್ರಾಂತಿನಂದ್ ನಾ ಎಲ್ಲೊವ್ಕೆ ಪ್ರತ್ಯಕ್ಷ ಆನೆ. "ಹೀಂಗೆ ಹೇಳಿ ಅಗಸ್ತ್ಯನ ಹಿಂದೆ ಕಳ್ಳಿ ಅದ್ ಮುಂದೆ ಹರ್ಕಂಡ್ ಹೋತು. ಈ ಕತೆ ಕೇಳಿ ಅರ್ಜುನಂಗೆ ಕಾವೇರಿನ ಮೇಲೆ ತುಂಬ ಭಕ್ತಿ ಮತ್ತೆ ಗೌರವ ಉಂಟಾತ್. "ನಂಗೆ ಕಾವೇರಿ ಹುಟ್ಟುವ ಜಾಗೆನ ನೋಡೊಕು. ಅದಿಕೆ ಪೂಜೆ ಮಾಡೊಕು. ಇಲ್ಲಿಂದ ಎಷ್ಟ್ ದೂರ ಉಟ್ಟು? ದಾರಿ ಹೇಂಗೆ ಉಟ್ಟು"ಂತ ಕೇಳ್ತ್. ಆಗ ರುಸಿ, ಇಲ್ಲಂದ ಒಂದು ಹರದಾರಿನಷ್ಟ್ ದೂರ. ಕಾಡ್ ಮಲೆ ಬೆಟ್ಟಗಳ ಹತ್ತಿಕಣ್ಡ್ ಹೋಕು. ಹುಲಿ, ಕಾಟಿಗಳಂತ ಕಾಡ್ ಮುರ್ಗಗಳ ಹೆದ್‌ರಿಕೆ ನಿಂಗೆ ಇರಿಕಿಲ್ಲೆ. ಕಾರಣ ನಿನ್ನ ಕೈಲಿ ಬಿಲ್ಲ್ ಬಾಣಗ ಇರುದರ್‌ಂದ. ಆದರೆ ಉಂಬುಳುಗ ಮಾತ್ರ ನಿನ್ನ ಯಾವ ಅಸ್ತ್ರಗಳಿಗೂ ಹೆದ್‌ರಿಕಿಲ್ಲೆ. ಅದಿಕೆ ಕಾಡ್‌ಲಿರುವ ಒಂದು ಮೊದ್ದ್‌ನ ಮರದ ಕೆತ್ತೆನ ಗುದ್ದಿ ರಸ ತೆಗ್‌ದ್ ಕಾಲ್‌ಗೆಲ್ಲ ಉದ್ದಿಕಣ್ಡರೆ, ಅವು ಮೇಲೆ ಹತ್ತಿಕಿಲ್ಲೆ. ನನ್ನ ಹಕ್ಕಲೆ ಆ ಕೆತ್ತೆನ ರಸ ತೆಗ್ದ್ ಇಸಿದ್ ಒಂದು ಕುಡಿಕೆಲಿ ಉಟ್ಟು. ಅದರ ನಿಂಗೆ ಕೊಟ್ಟನೆ ನೀ ಹಿಡ್ಕಣ್ಡ್ ಹೋಗುಂತ" ಹೇಳಿ ರುಸಿ ಅದರ ಅವನ ಕೈಗೆ ಕೊಟ್ಟತ್. ಅಲ್ಲಿ ನಿಂಗೆ ನಿಲ್ಲಿಕೆ ಯಾವ ರುಸಿನ ಆಶ್ರಮನೂ ಈಗ ಇಲ್ಲೆ. ಅಗಸ್ತ್ಯ ಕಾವೇರಿ ಹೊರ್ಟ್ ಹೋದ ಮೇಲೆ ಆಶ್ರಮನ ಕಾಲಿ ಮಾಡಿ, ಶಿವ ಅಪ್ಪಣೆ ಮಾಡ್ದ ಹಾಂಗೆ ವಿಂಧ್ಯಾ ಪರ್ವತದತ್ತ ಹೋಗಿ ಅಲ್ಲಿ ನಿತ್ತುಟು. ಶಿವಂಗೂ ಪಾರ್ವತಿಗೂ ಮದುವೆ ನಡಿಯಕನ, ಅದರ ನೋಡುವ ಆಶೆಂದ ದೇವಾನು ದೇವತೆಗಳೂ, ಸಕಲ ಜೀವರಾಶಿಗಳೂ ಹಿಮಾಲಯಕ್ಕೆ ಬಂದ್ ಸೇರ್ದೊ. ಆ ಭಾರಕ್ಕೆ ಹಿಮಾಲಯ ಕುಸಿಯಕೆ ಸುರಾತ್, ತರ್ಕ್ಕಡಿನ ಒಂದು ತಟ್ಟೆ ಕುಸಿಯಕನ ಇನ್ನೊಂದು ತಟ್ಟೆ ಮೇಲೆ ಹೋದೆಲೆ ಹಾಂಗೆ ವಿಂಧ್ಯಾ ಪರ್ವತ ಮೇಲೆ ಮೇಲೆ ಏರಿಕಣ್ಡ್ ಹೋಗಿ ಸೂರ್ಯ ಚೆಂದ್ರರ ಚಲನೆಗೂ ಅಡ್ಡಿ ಆವ ಸ್ಥಿತಿ ಉಂಟಾತ್. ಅದಿಕ್ಕೆ ಶಿವ ಅಗಸ್ತ್ಯ ಅಲ್ಲಿಗೆ ಹೋಗಿ, ವಿಂಧ್ಯ ಪರ್ವತದ ತಲೆ ಮೆಟ್ಟಿ, ಭೂಮಿನ ಸಮತೋಲನಕ್ಕೆ ತರೊಕುಂತ ಅಪ್ಪಣೆ ಮಾಡ್ತ್. ಹಾಂಗೆ ಅಗಸ್ತ್ಯ ಆ ಪರ್ವತದ ತಲೆ ಮೇಲೆ ಹತ್ತ್‌ಕನ ವಿಂಧ್ಯ ಕೆಳಗೆ ಕುಸ್ದ್, ಮುಂದೆನ ಸ್ಥಿತಿಗೇ ಬಾತ್. ಹಿಮಾಲಯವೂ ಮೇಲೆ ಎದ್ದ್ ಅದರ ಯಥಾಸ್ಥಿತಿಲಿ ನಿತ್ತತ್.

"ಕತೆ ಬಾರಿ ಚೋದ್ಯಆಗಿ ಉಟ್ಟು ಗುರುಗಳೇ, ಕೇಳಿತುಂಬ ಸಂತೋಸು ಆತ್. ನಾ ಅಲ್ಲಿಗೆ ಹೋಗಿ ಎಲ್ಲ ನೋಡಿ ಕತ್ತಲಾಕೆ ಮುಂದೆ ಇಲ್ಲಿಗೆ ಬಂದ್ ಬುಟ್ಟನೆ" ಅರ್ಜುನ ಹೇಳ್ದೈಕೆ "ಹಾಂಗೇ ಮಾಡ್‌ಂ"ತ ರುಸಿ ಹೇಳಿ ಅವಂಗೆ ಹೋವ ದಾರಿನ ತೋರ್ಸಿತ್.

ಕಾವೇರಿ ಹುಟ್ಟುವ ಕುಂಡಿಕೆಗೆ ಪೂಜೆ ಮಾಡಿ ಆ ತೀರ್ಥಲಿ ಮಿಯ್ದ್, ಬ್ರಹ್ಮಗಿರಿನ ಮೇಲೆ ಹತ್ತಿ ಸುತ್ತೊಲು ನೋಡಿ, ಆ ಪ್ರಕೃತಿ ಸೌಂದರ್ಯಲಿ ಮೈಮರ್ತ್ ನಿತ್ತತ್. ತಂಪಾದ ಗಾಳಿ ಬಂದ್, ಹಿರಿಯೊವ್ರು ಮಕ್ಕಳ ಹಿಡ್ಕಣ್ಡ್, ಪ್ರೀತಿಂದ ಮೈಯೆಲ್ಲ ಕೈಯಾಡ್ಸುವಾಂಗೆ

ಮಾಡಿ. ಅಂವಂಗೆ ತುಂಬ ಸುಕ ಉಂಟು ಮಾಡ್ತ್. ಅಲ್ಲಿಂದ ಎತ್ತ ತಿರ್‍ಗಿ ನೋಡಿರೂ ಒಂದಾದ ಮೇಲೊಂದು ಬೆಟ್ಟಗ. ಕಿರಿಬೆಟ್ಟಗ ಹಬ್ಬಿಕಣ್ಡ್ ಬಿದ್ದೊಳೊ. ಕೆಳೆಗೆನ ಸಾಲ್‌ಲಿ ಮರಗ ವಿಸ್ತಾರವಾದ ಗೆಲ್ಲ್‌ಗ ತುಂಬಿದ ಹಸುರು ಸೊಪ್ಪು ಚಿಗ್‌ರ್‌ಂದ ಕೂಡಿ, ಮೇಲೆಂದ ನೋಡ್‌ಕನ ಬುಡ್ಡಿದ ಕೊಡೆನಾಂಗಿದ್ದ್, ಒಂದರ್‌ಂದೊಂದು, 'ನಾ ಮೇಲಾಕು', 'ನಾ ಮೇಲಾಕು'ಂತ ಸ್ಪರ್ಧೆಲಿ ಎತ್ತರಕೆ ಬೆಳ್ದಾಂಗೆ ಕಂಡವೆ. ಅಯ್ಯೋ! ಈ ಪೊರ್ಲ್‌ನೇ, ಈ ಸುಂದರ ಪ್ರಕೃತಿ ದೇವಿನ ನಾ ಹೇಂಗೆ ಮರಿವೆ? ಇನ್ನೆಂದ್ ಈ ಸೌಭಾಗ್ಯನ ನೋಡುವೆ? ಕಾವೇರಿ ತಾಯೇ! ನಿನ್ನ ದಯೆಂದ ಈ ಪುಣ್ಯ ಸ್ಥಳನ ನೋಡುವ ಪುಣ್ಯನ ನಂಗೆ ಒದ್‌ಗಿಸಿದ. ಇಲ್ಲಿ ನಿತ್ಯ ವಾಸ ಮಾಡಿಕಣ್ಡಿರುವ ನಿನ್ನ ಮಕ್ಕ ಎಷ್ಟ್ ಪುಣ್ಯ ಮಾಡ್ದವ್ರೋ? ನಿಂಗೆ ನನ್ನ ಸಾಷ್ಟಾಂಗ ನಮಸ್ಕಾರ! ಒಂದಲ್ಲ –ನೂರು; ನೂರಲ್ಲ–ನೂರೊಂದು! ನಮಸ್ಕಾರ" ಹೀಂಗೆ ಹೇಳಿಕಣ್ಡ್, ಮನ್‌ಸಿಲ್ಲದ ಮನ್ಸ್‌ಂದ ಇಳ್ದ್ ಬಂದ್, ಭೃಗಂಡೇಶ್ವರ ರುಸಿನ ಆಶ್ರಮಕೆ ಬಂದ್ ಸೇರ್‍ತ್.

ರುಸಿ ಅವನ ಕುದ್ದ್‌ರ್ಲಿ ಏಲಕ್ಕಿ, ಲವಂಗ ಮತ್ತೆ ಒಳ್ಳೆ ಮೆಣ್ಸ್ ಎಲ್ಲ ಗುದ್ದಿ ಹೊಡಿ ಮಾಡಿ ಆ ಹೊಡಿನ ಹಜ್ಜಿ ಬೆರ್ಲಿದ ಬೆಲ್ಲದ ಪಾನಕನ ಕುಡಿಯಕೆ ಕೊಟ್ಟಣತ್. ಕಿತ್ತಳೆ ಹಣ್ಣ್, ಬಾಳೆ ಹಣ್ಣ್‌ಗಳ ತಿಂಬಕೆ ತಂದ್ ಇಸಿತ್. ಇದರ ಕುಡ್ದ್, ತಿಂದ್ ಅರ್ಜುನ ದಣಿವಾರ್ಲಿ ಕಣ್ಡಣತ್. ಮತ್ತೆ ರುಸಿನೊಟ್ಟಿಗೆ ಮಾತಾಡಿಕೆ ಸುರು ಮಾಡ್ತ್. "ಗುರುಗಳೇ, ಇಲ್ಲಿನ ಜೆನಂಗ, ಗಣ್ಣ್‌ಕ ಹೆಣ್ಣ್‌ಕ ಎಲ್ಲ ಗಟ್ಟಿ ಮುಟ್ಟಾಗಿ ಚುರುಕಾಗಿ ಒಳೊ. ಗಣ್ಣ್‌ಕ ಹೆಚ್ಚಿನಣವು ಕಪ್ಪು ಬಣ್ಣದಣವು. ಆದರೆ ಹೆಣ್ಣ್‌ಕ ಕೇದಗೆನ ಬಣ್ಣಂದ, ಮೈ ಕೈ ತುಂಬಿಕಣ್ಡ್ ಪೊರ್ಲ್‌ನ ಮಿಂಚುವೆ. ಎದೆಂದ ಮೇಲೆ ಉಟ್ಟ ಸೀರೆನ ಸರ್‌ಂಗ್‌ನ ಎಳ್ದ್ ಕಟ್ಟಿ ಹೊರೆಗೆ ತಲೆ ಹಾಕೊಕುಂತ ಪೇಚಾಡಿಕಣ್ಡ್ ಇರುವ ಮೊಲೆಗಳಿಗ ಬಂಧನ ವಿಧಿಸುವೆ. ಕೇರಳಲಿ ಅವುಕೆ ಸಂಪೂರ್ಣ ಸ್ವಾತಂತ್ರ್ಯ ಕೊಟ್ಟವೆ. ಇಲ್ಲಿನ ಹೆಂಗ್‌ಸ್‌ಗ ತಮ್ಮ ತಲೆಗೆ ವಸ್ತ್ರನ ಕಟ್ಟಿ ಕಂಡವೆ. ಮೈ ತುಂಬ ಸೀರೆನ ಮುಚ್ಚಿ ಅವರ ಪೊರ್ಲ್‌ನ ಬೇರೆ ಜೆನಕ್ಕೆ ಕಾಣದಾಂಗೆ ಮಾಡಿರೂ, ಮೆಯಿನ ಒಟ್ಟು ಪೊರ್ಲ್‌ನ ಎದ್ದ್ ಕಂಡದೆ. ಅವು ಹೇಂಗೆ ಈ ಕಣಿಯ ಜನರೊಟ್ಟಿಗೆ ಸೊಂಸಾರ ಮಾಡುವೆಂತ ಆಶ್ಚರ್ಯ ಆದೆ. ಅಲ್ಲದೆ ಅವೆಲ್ಲ ದುಡಿಹೊಡ್ಕಣ್ಡ್ ಕೊಣ್ದವೆ. ಇದೆಲ್ಲ ನಂಗೆ ವಿಚಿತ್ರ ಕಂಡದೆ.

"ಇದೆಲ್ಲ ಆಯಾ ಊರುನ ಪ್ರಕೃತಿನ ಹೊಂದಿಕಣ್ಡ್ ಉಟ್ಟು" ರುಸಿ ಹೇಳ್ತ್. 'ಬೆಟ್ಟ ಗುಡ್ಡ ಕಾಡ್‌ಗಳ್‌ಂದ ಕೂಡ್ದ ಮಲೆನಾಡ್‌ನ ಜೆನಂಗ ಒಳ್ಳ ಚುರುಕಾಗಿ ಇದ್ದವೆ. ಆರೋಗ್ಯನೂ ಇದ್ದವೆ. ಅವ್ಕೆ ಶುದ್ಧಗಾಳಿ, ನೀರ್, ಆಹಾರಂಗ ಸಿಕ್ಕುವೆ. ಇಲ್ಲಿ ಚಳಿ ತುಂಬ ಇರುದರ್‌ಂದಾಗಿ, ಮೈತುಂಬ ಬಟ್ಟೆ ಹಾಕಂಬೊದು ಅಗತ್ಯ ಆದೆ. ಮತ್ತೆ ಗಣ್ಣ್‌ಕ ಹೊರೆಗೆ ಹೆಚ್ಚಿ ದುಡಿಯೊವು ಆದರ್‌ಂದ ಹೆಚ್ಚಿನವರ ಮೈಬಣ್ಣ ಕಪ್ಪಾಗಿದ್ದದೆ. ಮತ್ತೆ ಮಲೆನಾಡ್‌ನ ಹೆಣ್ಣ್‌ಗಳ ಮೈಬಣ್ಣ ಕೇದಗೆ ನಾಂಗೆ ಸರ್ವ ಸಾಧಾರಣವಾಗಿ ಎಲ್ಲ ಕಡೆಲೂ ಇದ್ದದೆ. ಹೀಂಗೆ ಇದ್ ಈ ಊರುನ ವಿಶೇಷ. ಇದರೆಲ್ಲ ನೀ ತುಂಬ ಸಮಯ ಮರಿಯಕಿಲ್ಲೇಂತ ಕಂಡದೆ' ಹೀಂಗೆ ರುಸಿ ಹೇಳ್‌ಕನ, ಅರ್ಜುನ ಹೇಳ್ತ್. "ನೀವು ಹೇಳ್ದ

ಸೆರಿ ಗುರುಗಳೇ! ನಾ ಹೋದಲ್ಲ ಈ ಊರುನ ನೆಂಪು ನಂಗೇ ಬಂದ್‌ಕೆಂಡೇ ಇರುಮ. ಇಲ್ಲಿನ ಮೊಂಯಿಸೆರಿಗೂ, ಸಕಲ ಜೀವ ಜಂತುಗೆಳಿಗೂ, ಆ ಕಾವೇರಮ್ಮ ಸೊವ್ರಕ್ಯ, ಸೊವ್ರಭಾಗ್ಯಗಳ ಕೊಟ್ಟ್ ಕಾಪಾಡೆಲಿ'. ಇಸ್ನ್, ನಸ್ನ ಪಯಣನ ಮುಂದುವರ್ಸಿನಂತ ಹೇಳಿ ಅಲ್ಲಿಂದ ಪಶ್ಚಿಮ ಕರಾವಳಿನ ಕಡೆಗೆ ಹೊರ್ಟೆತ್.

ಪಶ್ಚಿಮ ಘಟ್ಟಗಳ ಇಳ್ಟ್, ಪರಶುರಾಮ ಸೃಷ್ಟಿಂತ ಹೆಸ್‌ರ್ ಪಡ್‌ದ ಕರಾವಳಿ ಕಡೆಗೆ ಹೊರ್ಟೆತ್. ಕಾಡ್ ದಾರಿಲಿ ಇಳ್ಕೆಂಡ್ ನಡಿಯಕನ ಎರ್ಡ್ ಕಡೆಗೂ ತಿರ್ಗಿ ನೋಡಿರೆ, ಕೆಳಗೆ ದೊಡ್ಡ ದೊಡ್ಡ ಮರಗಳ್‌ಂದ ಕೂಡ್ದ ಕಾಡ್, ಮೇಲೆ ಮೇಲೆ ಹೋದಾಂಗೆ ಬೋಳಾದ, ಹುಲ್ಲು ಬೆಳ್ದಿರುವ ಕೋಟೆ ಕೆಟ್ಟಿದಾಂಗಿರುವ, ಬಾನದ ಮೈಯೊರ್ಸುವ ದೊಡ್ಡ ದೊಡ್ಡ ಬೆಟ್ಟಗಳ ಸಾಲ್ ಸಾಲ್ ಕಾಂಬೊ. ಹಾಂಗೇ ಎರ್ಡ್ ಮೂರು ದಿನ ನಡ್ದ್, ಕದ್ರಿ ಕ್ಷೇತ್ರದ ದರ್ಶನ ಮಾಡಿ, ಚಾಪೆ ಮೊಡ್ಚಿದಾಂಗೆ ಮೊಡ್ಚಿಕೆಂಡ್ ಬಂದ್ ಕಡಲ ದಂಡೆಗೆ ಬಡಿವ ತೆರೆಗಳ್‌ಂದ ಕೂಡ್ದ ಕಡಲ್‌ನ ನೋಡಿ ಸಂತೋಸು ಪಟ್ಟತ್.

ಅಲ್ಲಿಂದ ಅವನ ಪ್ರಯಾಣ ಉತ್ತರಕ್ಕೆ ಮೋರೆ ಮಾಡಿ ತಿರ್ಗಿತ್. ಇಲ್ಲೆಲ್ಲ ಜನ ಗುಂಪುಗುಂಪಾಗಿ ನೆಲ್ಸಿರ್‌ತಿತ್ತ್‌ಲೆ. ದೂರ ದೂರ ಮನೆಗ, ಅದಿಕೆ ಹೊಂದಿಕೆಂಡ್, ಅವ್ಕೆ ಸ್ವಂತವಾಗಿದ್ದ ಗದ್ದೆ, ತೋಟಗ ಇರ್‌ತಿದ್ದೊ. ಇವರ ಜೀವನೆಲಿ ಬೇಸಾಯ ಕಾಲ ಭಾರಿ ಸಂಭ್ರಮದ ಕಾಲ. ಎತ್ತ್ ಅಥವಾ ಕೋಣಂಗಳ ಜೊತೆಗೆಳ ಕೆಟ್ಟಿ ಗದ್ದೆ ಹೂಡುವೊ. ಬೊಳ್ಪಿಗೆ ಎದ್ದ್, ಹೂಡುವ ಎತ್ತ್ ಮತ್ತೆ ಕೋಣಂಗೆಳಿಗೆ ಹಿಂದಿನ ರಾತ್ರಿಯೇ ಹಲ್‌ಸಿನ ಸಾರೆನ ಮತ್ತೆ ತೆಗ್‌ಲೆಪ್ ಸೇರ್ಸಿ ಬೇಸಿದ ಮೊಡ್ಡಿನ ತಿಂಬಕೆ ಕೊಟ್ಟ್ ಹೂಡಿಕೆ ಹೋವೊ. ಏನಾರ್ ಹಣ್ಣ್, ಹೊಟ್ಟೆಗೆ ತಿಂದ್, ಮತ್ತೆ ಎಲೆ ಅಡಿಕೆ ಅಕ್ಕೆಂಡ್, ಆ ಪ್ರಾಣಿಗಳ ಗದ್ದೆಗೆ ಹೊಡ್ಕೆಂಡ್ ಹೋವೊ. ದಿನಾ ಹೋಗಿ ಅಭ್ಯಸ ಇದ್ದ ಆ ಎತ್ತ್‌ಗ ಮತ್ತೆ ಕೋಣಂಗ ಬೊಳ್ಳಿ ಹಾಕದೆ ಅವೇದಾರಿಲಿ ಸೀದಾ ನಡ್ಕಂಡ್ ಹೋಗಿ, ಒಟ್ಟಿಗೆ ಹೋದ ಹೂಡೊವ್ರ ಇಳ್ದ ಗದ್ದೆಗೆ ಇಳ್ದ್, ಜೊತೆ ಜೊತೆಯಾಗಿ ನಿಲ್ಲುವೊ. ಅವರ ಹೆಗ್‌ಲಿಗೆ ನೊಜ್ಜ ಇಸಿ ಗಂಟ್ಲ್ ಸುತ್ತ ಬೊಳ್ಳಿ ತಂದ್ ನೊಜ್ಜಕ್ಕೆ ಕೆಟ್ಟ್‌ವೊ. ಮತ್ತೆ ನೇಗ್‌ಲಿನ ಮೊನೆನ ನೊಜ್ಜದ ನಡುಲಿ ಇರುವ ಕಟ್ಟದಳೆಗೆ ಸಿಕ್ಕ್‌ಸಿ, ಮತ್ತೆ ನೇಗ್‌ಲ್‌ನ ಹಿಡಿಕ್ಕೈಯಿನ ಒಂದು ಕೆಯಿಲಿ ಹಿಡ್ಕೆಂಡ್, ಇನ್ನೊಂದು ಕೈಲಿ ಒಂದು ಸಣ್ಣ ಜೋಲು ಹಿಡ್ಕಂಡ್ ಹೂಡಿಕೆ ಸುರುಮಾಡುವೊ. ಗದ್ದೆನ ಒಂದು ಮುಣಿಂದ ಇನ್ನೊಂದು ಮುಣಿಗೆ, ಸೂರೂತ ಸಾಲ್ ಹಿಡ್ಕೆಂಡ್ ಹೂಳಿ ಕೆಟ್ಟಿಕೆಂಡ್ ಪೊರ್ಲುರ್ ಹೂಡುವೊ. ಹೂಡೊವ್ಕ ಉತ್ಸಾಹ. ಎತ್ತ್-ಕೋಣಗೆಳಿಗೂ ಹುರುಪು. ಹೂಡೊವ್ರ ರಾಗ ಎಳ್ಕೆಂಡ್, "ಓವ್ರೋ... ಬಯ್ಯ ಮುಟ್ಟ ಬಲ್ಲ ಮಗಾ. ಮೂಡಾಯಿಟ್ ಪುಟ್ಟ್‌ನ ಸೂರ್ಯ ದೇವೆರ್, ಬಾನೊತ ಕಂಡೊಗು ಅಡಪ್ಪರ ದತ್ತ್‌ತೆರ್; ಮೈದಿಂಜ ಜೋರು ಮೆತ್ತೊಣ್ಣ, ಜೇಲೆತ ಬಿರ್ಸೆ, ನಾಣಲಿ ಸಾಲ್ ಕೂಟ್‌ತ್‌ಜೆರ್- ಮಗಾ, ಓವ್ರೋ-ಯಾ ಓಂಗೆ ಹಾಡುವ ರಾಗಕೆ ಎತ್ತ್-ಕೋಣಂಗೆಳೂ ತಲೆ ಮುಕ್ಕುಡು ಹಾಕೆಂಡ್ ಒಳ್ಳ ಹುರುಪಲಿ ನೇಗ್‌ಲ್ ಎಳಿವೊ. ಇನ್ನೊಂದು ಗದ್ದೆಲಿ ಗೆಂಡಾಳ್ ಹೆಣ್ಣಾಳ್‌ಗ ನೇಜಿ ಕೀಳುವ ಕೆಲ್‌ಸ ಮಾಡಿಕೆಂಡ್ ಇರುವೊ. ನೇಜಿನ

ಬುಡ ತ್ತೊಳ್ಡ್, ಅವರ ಸೂಡಿ ಕಟ್ಟ್, ಅದರ ತಲೆ ತಿರ್‌ಂಟ್, ಮೇಲೆನ ಒಲಿಗಳ ತುಂಡು ಮಾಡಿ ಹಾಕುವೊ.

ಬೇರೊಂದು ಗದ್ದೆಲಿ, ಸೊಪ್ಪು, ಗೊಬ್ಬರ ಎಲ್ಲ ಹಾಕಿ, ಮೂರ್ನಾಲ್ಕ್ ಸರ್ತಿ ಪೊರ್ಲ್ ಹೂಡ್ಡ ಗದ್ದೆನ ಗೋರ್ಡ್ ಗದ್ದೆಂತ ಹೇಳುವೆ. ನೇಜಿ ತೆಗಿವ (ಕೀಳುವ) ಗದ್ದೆಲಿ ಇದ್ದಾಂಗೆ ಇದರ್ಲಿಯೂ ಗಣ್ಣ್ಕ, ಹೆಣ್ಕಂಗಳ ಗುಂಪು ಸಾಲ್ ಹಿಡ್ದ್ ಪೊರ್ಲ್ ನೇಜಿ ನೆಟ್ಟವೆ. ನೇಜಿ ತೆಗಿಯೊವೊ (ಕೀಳೊವೂ) ನೇಜಿ ನೆಡವೂ ತರತರದ ಪಾಡ್ದನಗಳ ಹಾಡುವೆ. ಜಿಟಿ ಜಿಟಿ ಮಳೆಲಿ ಕಿಡಿಂಜೊಳು ಸೂಡಿಕಂಡ್, ಬೊಗ್ಗಂಡ್ ಮಾಡುವ ಕೆಲ್ಸ ಎಲ್ಲ ಬೊಯಿಲ್ ತುಂಬ ನಡ್ಡದೆ. ನೋಡಿಕೆ ನಿಜವಾಗಿ ಪೊರ್ಲ್ ಕಂಡದೆ. ನಂಗೆ ಇನ್ನೂ ಹತ್ತ್ ದಿನ ಇಲ್ಲೆ ನಿತ್ತ್ ಬುಡೊನೊಂತ ಆಸೆ ಆದೆ. ತೀರ್ಥಯಾತ್ರನ ಒಂದು ವರ್ಸದ ಅವಧಿಗೆ ಇಸಿದ್ ಕಮ್ಮಿ ಆತ್‌ಂತ ಅರ್ಜುನ ನೆನ್ಸಿಕಂಡ್, ಮತ್ತೆ ಕೊಲ್ಲೂರು ಮುಕಾಂಬಿಕೆ ದೇವಿನ ದರ್ಶನ ಮಾಡಿ ಆ ಕ್ಷೇತ್ರಲಿ ಎರ್ಡ್ ಮೂರ್ ದಿನ ನಿತ್ತ್. ದೇವಿನ ಅನುಗ್ರಹಕ್ಕೆ ಪ್ರಾರ್ಥನೆ ಮಾಡ್ತ್.

ಮುಂದೆ ಇನ್ನೂ ಉತ್ತರ ದಿಕ್ಕಿಗೆ ನಡ್ಕಂಡ್ ಹೋತು. ಇಲ್ಲಿ ಕೆಲವು ಕಡೆ ಬೇಸಾಯ ಕೆಲ್ಸ ಮುಂದೇ ನಡ್‌ದಿದ್ದ್ ಪೈರೆಲ್ಲ ಮೊಣೆ ಮೊಣೆಯಾಗಿ ಬೆಳ್ದ್ ಚಿನ್ನದ ಬಣ್ಣಕ್ಕೆ ತಿರ್ಗಿ, ಐಸಿರಿ ಬಾಕನ ಬಾಗಿ ನಿಲ್ಲುದೇ ಯೋಗ್ಯರ ಗುಣಂತ ಹೇಳೂವಾಂಗೆ ಬೊಗ್ಗಿದ ಪೈರ್‌ಗ ಕಣ್ಣಿಗೆ ಆನಂದ ಕೊಡ್‌ತಿದ್ದೊ. ಬತ್ತನ ತಿಂಬಕೆ, ಕದ್‌ರ್‌ನ ಕಚ್ಚಿಕಂಡ್ ಹೋಕೆ ಹಕ್ಕಿಗ, ಗಿಣಿಗ ಎಲ್ಲ ಹಿಂಡ್ ಹಿಂಡಾಗಿ, ಬಾನಂದ ಬಾಣಗ ಬೀಳುವ ಹಾಂಗೆ ಬೀಳುತ್ತಿದ್ದೊ, ಇವರ ಬೆರ್ಲಿಕೆ, ಅಲ್ಲಲ್ಲಿ ಮಾಡ್ಕೋಳುಗಳ್ಲಿ, ಗೂಡೆಗ, ಒಂದಷ್ಟ್ ಕಲ್ಲ್‌ಗಳ ರಾಸಿ ಹಾಕಂಡ್ ಆ ಕಲ್ಲ್‌ಗಳ ಕವಣೆಲಿ ಇಸಿ ಬೀಸಿ ಇಟ್ಟ್ 'ಹೋ'ಂತ ಬೊಬ್ಬೆ ಹೊಡಿವೊ, ಹಕ್ಕಿಗೆಲ್ಲ ಹದ್‌ರಿ ಹಾರಿ ಹೋದರೂ ಮತ್ತೆ ಮತ್ತೆ ಬಂದ್ ಬೀಳ್‌ತಿದ್ದೊ. ಹಿಂಗೆ ಉಪದ್ರ ಕೊಡುವ ಹಕ್ಕಿಗಳ ಮೇಲೆ ಅವ್ಕೆ ಕೋಪ ಬಂದ್ ಅವರ ಹೊಳಿಯುವ ಕಣ್ಣ್, ಕೆಂಪು ಕೆಂಪಾಗಿ ಬೆಗ್‌ರ್‌ಂದ ಕೂಡ್ದ ಮೋರೆ, ಕವಣೆ ಬೀಸಿ ಇಡ್‌ಕನ ಮುಂದೆ ಅಲ್ಲಾಡುವ ದುಂಡು ಮೊಲೆಗಳ ನೋಡ್‌ಕನ ದಾರಿನಡಿವಂಗೆ ಮುಂದೆ ಹೆಜ್ಜೆ ಎತ್ತಿಕೆ ಆತಿತ್ಲೆ. ಹಿಂಗೆ ನಿದಾನಲಿ ನಡ್ಕಂಡ್ ಅರ್ಜುನ ಬನವಾಸಿಗೆ ಬಂದೆತ್ತಿತ್. ಅಲ್ಲಿನ ತೊಂಪುನ ಗಾಳಿ, ಅಲ್ಲಿ ಪೊರ್ಲ್ ಪೊರ್ಲ್‌ನ ಹೈದಂಗಳ ಗೂಡೆಗಳ ಜೋಡಿ, ಹಿರಿಯರ ಕಣ್ಣ್ ತೊಪ್ಪುಸಿ, ಕಾಡ್ ಗುಡ್ಡೆಗಳ್ಲಿ, ಉದ್ಯಾನದ ಗುಟ್ಟ್ನ ಜಾಗೆಗಳ್ಲಿ ಸೇರುವ ಅವರ ಜಾಣ್ಮೆ, ಅವರ ಉದ್ದೇಸ ಫಲಿಸಿತ್‌ಂತಾಕನ ಅವರ ಮೋರೆಲಿ ಕಾಂಬ ಗೆಲುವು, ಆ ವನಸಿರಿ, ಆನೆ ಕಾಟಿ ಹುಲಿಂತೇಳ್ದ ಮೃಗ ಸಮೂಹ, ಹೂವು, ಹಣ್ಣ್, ಮಿಡಿ, ಕಾಯೆಗಳ್‌ಂದ ತುಂಬಿದ ಮಾಯನ ಮರಗ, ಮಲ್ಲಿಗೆ ಬೊಳ್ಳಿಗ ಎಳೆ ಮಾಯನ ಮರಗಳ ಹಬ್ಬಿ, ತೊಬ್ಬಿ, ಸಂತೋಸುನ ನೆಗೆ ನೆಗಾಡ್ದಾಂಗೆ ಹೂರ ಅರ್ಳಿ ನಿತ್ತ್ ಪರಿಮಳ ಸೂಸ್‌ಕನ, ಆ ಪರಿಮಳನ ಎಲ್ಲೊವ್ಕೂ ಪಾಲ್ ಕೊಡೊಕುಂತ ಹೊತ್ತ್ ಕಂಡ್ ಹೋವ ಎಳೆಗಾಳಿ, ತುಂಬಿಗ ಮಾಡುವ ಗುಂಜಾರವ, ಹಕ್ಕಿಗಳ ಚಿಲಿಪಿಲಿ, ಮಾಯನ ಮರದ ಕೊಡೀಲಿ ಕುದ್ದ್‌ಕಂಡ್, ಬನ್ನಿ ಬನ್ನಿ, ಈ

ಸಾಭಾಗ್ಯದ ನಾಡಿಗೆ ಬಸ್ಸಿಂತ ಕೂಗು ಹಾಕಿ ಕರಿವ ಕೋಗಿಳೆ, ಇದರೆಲ್ಲ ನೋಡ್‌ಕನ ಅರ್ಜುನನ ಎದೆ ಆನಂದಂದ ಉಬ್ಬಿತ್. ಇಲ್ಲಿ ಮೊಂಯಿಸ ಆಗಿ ಹುಟ್ಟೊಕೂರೆ ತುಂಬ ಪುಣ್ಯ ಮಾಡೊಕು. ಮೊಂಯಿಸ ಜೆನ್ಮ ಬಾರದಿದ್ದರೂ ಹೋಗಲಿ, ಒಂದು ತುಂಬಿಯಾಗಿ, ಇಲ್ಲೆ, ಒಂದು ಕೋಗಿಲೆಯಾಗಿ ಆದರೂ ಸಾಕ್. ಹೀಂಗೆ ನೆಸ್ಸಿಕಣಂಡ್ ಅರ್ಜುನ ಗೋಕರ್ಣ ದರ್ಶನಕ್ಕೆ ಹೋತು.

ರಾವಣ ಅವನ ಅವ್ವಂಗೆ ಪರಮೇಶ್ವರನ ಪೂಜೆ ಮಾಡಿಕೆ ಅನುಕೂಲ ಆವಾಂಗೆ ಶಿವನ ಆತ್ಮಲಿಂಗಕೇಳಿ ಪಡ್ಕಣಂಡ್ ಲಂಕೆಗೆ ಹೊರ್ಟತ್. ದಾರಿಲಿ ಅಂವ ಅದರ ಎಲ್ಲಿಯೂ ನೆಲದ ಮೇಲೆ ಇಸಿಕೆ ಆಗಲ್ದಂತ ಶಿವ ಅಪ್ಪಣೆ ಕೊಟ್ಟಿತ್ತ್. ಹಾಂಗೆ ಬಾಕನ ಗೋಕರ್ಣಕೆ ಎತ್ತ್‌ಕನ ಅವಂಗೆ ಉಚ್ಚೆ ಬಂದ್ ತಡಿಯಕೆ ಬೊತ್ತದಾತ್. ಆಗ ಅಲ್ಲಿ ಹಕ್ಕಲೇ ದನ ಮೇಪತರ ವೇಸಲಿದ್ದ ಗಣಪತಿ ಕಂಡತೆತ್. ಅವನ ಕೈಗೆ ಲಿಂಗನ ಕೊಟ್ಟ್, ನಾ ಬೇಗ ಬನ್ನೆ ಅಷ್ಟೊತ್ತು ಇದರ ಹಿಡ್ಕ ಎಲ್ಲ್ಯಾದರೂ ನೆಲದ ಮೇಲೆ ಇಸ್ ಬೇಡಂತ ಹೇಳಿ ರಾವಣ ಹಜ್ಜ ದೂರ ಹೋತು. 'ನಾ ಮೂರು ಸರ್ತಿ ನಿನ್ನ ಕರಿವೆ ಅಷ್ಟರೊಳಗೆ ನೀ ಬಾತ್‌ಲರೆ ನಾ ಇದರ ಇಲ್ಲಿಯೆ ಬುಟ್ಟ್ ಹೋವೆಂತ ಆ ದನಮೇಪತ ಹೇಳ್ತ್. ಹಾಂಗೆ ಹಜ್ಜ ಹೊತ್ತುಲಿ ಅಂವ 'ರಾವಣ', ರಾವಣ'ಂತ ಕರ್ತ್. ರಾವಣಂಗೆ ಬಂದ್ ಎತ್ತಿಕೆ ಆತ್‌ಲೆ. ಹಾಂಗೆ ದನ ಮೇಪತ ಆ ಲಿಂಗನ ಅಲ್ಲಿ ಇಸಿ ಮಾಯ ಆತ್. ರಾವಣ ಬಂದ್ ಎಷ್ಟ್ ಬಲ ಹಾಕಿ ಎಳ್ದರೂ ಹಜ್ಜ ಕೂಡ ಅಲ್ಗಿತ್‌ಲೆ. ಅದೊಂದು ಪವಿತ್ರ ಕ್ಷೇತ್ರಂತ ಪ್ರಸಿದ್ಧಿಗೆ ಬಾತ್. ಅರ್ಜುನ ಇಲ್ಲಿ ಬಂದ್, ಗೋಕರ್ಣೇಶ್ವರನ ದರ್ಶನ ಮಾಡಿ ಬಗೆ ಬಗೆಂದ ಸ್ತುತಿ ಮಾಡ್ತ್. ಎದ್‌ರ್‌ಲೇ ಇರುವ ಕಡಲ್‌ನ ನೋಡಿಕಣಂಡ್ ಸುಮಾರ್ ಹೊತ್ತ್ ಕುದ್ದ್‌ಕಣಂಡ್ ಇತ್ತ್. ಸಣ್ಣ, ದೊಡ್ಡ, ತೆರೆಗ, ಹೊಣ್ಕ್ಯಣಂಡ್, ಹೊರ್ಳಿಕಣಂಡ್ ಬಂದ್ ದಡಕ್ಕೆ ಬೊಡ್ದ್, ಚೆಲ್ಲಾ ಪಿಲ್ಲಿಯಾಗಿ ಹಿಂದೆ ಸುರುಳಿ ಸುತ್ತಿ ಹೋದರ ನೋಡ್ದಲೆಷ್ಟೂ ಎತ್ತಿಕಿಲೆಂತ ಹೇಳಿಕಣಂಡ್ ಮತ್ತೆ ಮನ್ಸಿಲ್ಲದ ಮನ್ಸ್‌ಂದ ಎದ್ದ್ ಮೊಯ್ಯಲಿ ಕಾಲೆಳ್ಕಣಂಡ್ ಹಿಂದೆ ಬಾತ್. ಅಲ್ಲಿಂದ ಮತ್ತೆ ಉತ್ತರ ದಿಕ್ಕಿಗೆ ಪ್ರಯಾಣ ಮಾಡಿ, ದ್ವಾರಕೆನ ಹೊರವಲಯಕ್ಕೆ ಬಾತ್. ಆಗ ಮುಂಗಾರ್ ಮಳೆ, ಗಾಳಿ ಸುರಾಗಿತ್ತ್. ಜೋರು ಸುರಿವ ಮಳೆಲಿ ಚೆಂಡಿ ಆಕಣಂಡ್, ಒಂದು ಮರದ ಅಡಿಲಿ ನಡ್ಗ್ಯಣಂಡ್ 'ಕೃಷ್ಣ ಕೃಷ್ಣ'ಂತ ಹೇಳಿಕಣಂಡ್ ನಿತ್ತಲೆತ್. ಇದ್ ಕೃಷ್ಣಂಗೆ ಗೊತ್ತಾತ್.

ಈಗ ಕೃಷ್ಣನ ಮನ್ಸ್‌ಗೆ ಕಿರಿ ಕಿರಿ ಮಾಡುವ ಒಂದು ಸಮಸ್ಯೆ ಎದ್ದಿತ್ತ್. ಅಂದರೆ ಪ್ರೀತಿನ ತಂಗೆ ಸುಭದ್ರೆನ ದುರ್ಯೋಧನಂಗೆ ಮೊದುವೆ ಮಾಡಿಕೊಡುದೂಂತ ಅಣ್ಣ ಬಲರಾಮ ಯೋಚನೆ ಮಾಡಿತ್ತ್. ಕಾರಣ, ದುರ್ಯೋಧನ ಗದಾಯುದ್ಧ ಕಲಿಯಕೆ ಬಲರಾಮಂಗೆ ಶಿಷ್ಯ ಆಗಿತ್ತ್. ಅವನ ಶಿಷ್ಯ ವಾತ್ಸಲ್ಯಂದಾಗಿ, ಸುಭದ್ರೆನ ಅವಂಗೆ ಕೊಟ್ಟ್ ಮೊದುವೆ ಮಾಡೊಕುಂತ ಅವನ ಆಸೆ. ಕೃಷ್ಣಂಗೆ ದುರ್ಯೋಧನನಂತ ಬಟಂಗೆ, ಮತ್ಸರಿಗೆ ತನ್ನ ತಂಗೆನ ಕೊಡಿಕೆ ಏನೇನೂ ಮನ್ಸಿಲ್ಲೆ. ಸುಭದ್ರೆನ ಮನ್ಸ್‌ನ ಪರೀಕ್ಷಿಸಿ ನೋಡ್‌ಕನ ಅದರ ಮನ್‌ಸ್‌ನ ಸೆರೆ ಹಿಡ್ದಂವ ಅರ್ಜುನನೇಂತ ಕೃಷ್ಣಂಗೆ ಗೊತ್ತಾತ್.

ಅವನ ಇಚ್ಛೆನೂ ಅದೇ ಆಗಿತ್ತ್. ಆದರೆ ಅಣ್ಣನ ಮನ್ಸಿಗೆ ಬೇನೆ ಆಗದ ಹಾಂಗೆ. ಏನಾರ್ ಒಂದು ತಂತ್ರ ಮಾಡೊಕುಂತ ಯೋಚಿಸಿಕಣ್ಡ್ ಇರ್‌ಕನ ಅರ್ಜುನ ಬಂದ್ ಸಿಕ್ಕಿದ್ ಒಳ್ಳೇದಾತ್. ಹಾಂಗೆ ಚೆಂಡಿಯಾದ ಗುಬ್ಬಚ್ಚಿ ನಾಂಗೆ ಇರುವ ಅರ್ಜುನನ ಹಕ್ಕಲೆ ಬಂದ್, ನೀ ಬಂದದ್ ಅನುಕೂಲ ಆತ್. ಈ ವೇಷನ ಬುಟ್ಟ್, ಸನ್ಯಾಸಿನಾಂಗೆ ಕಾವಿ ಬಟ್ಟೆ, ರುದ್ರಾಕ್ಷಿ ಮಾಲೆ, ಕುಂಕುಮದ ನಾಮ, ಉದ್ದ ಗಡ್ಡ ಮೀಸೆಗಳ ಅಂಟ್‌ಸಿ ಕಣ್ಡ್ ಬಾಯಿಲಿ ಮಣ ಮಣಂತ ಮಂತ್ರಗಳ ಹೇಳಿಕಣ್ಡ್ ಪದ್ಮಾಸನ ಹಾಕಿಕಣ್ಡ್, ಓ ಅಲ್ಲಿ ಕಾಂಬ ದೇವಿ ಗುಡಿನ ಜಗ್‌ಲಿಲಿ ಕುದ್ದ್‌ಕಂಡಿರ್. ನಿಂಗೆ ವೇಸಪಲ್ಲಟಕೆ ಬೇಕಾದ ಎಲ್ಲ ಸಾಮಾಗ್ರಿನೂ ಇಲ್ಲಿ ಉಟ್ಟು. ಬೇಗ ನೀ ಛದ್ಮವೇಸ ಹಾಕಿ ಅಲ್ಲಿ ಕುದ್ದುರು. ಮತ್ತೆ ನನ್ನ ಅಣ್ಣ ಬಲರಾಮ ಬಂದ್ ಏನ್ ಹೇಳ್ದನೋ ಹಾಂಗೇ ನಡ್ಕಂತ ಹೇಳಿ ಹೋತು.

ಅರಮನೆ ಜಗಲಿಲಿ ಕುದ್ದ್ ಹರ್ಟೆ ಹೊಡ್ಕಣ್ಡ್ ಇದ್ದ ಗುಪ್ತಚಾರರ ಕರ್ದ್, "ನೀವು ಇಲ್ಲಿ ಕುದ್ದ್‌ಕಣ್ಡ್ ಕಾಲ ಕಳ್ದರೆ. ನಮ್ಮ ಊರುಗೆ ಯಾರ್ ಬಂದವೆ ಯಾರ್ ಇಲ್ಲಿಂದ ಹೋದವೆಂತ ರಾಜಂಗೆ ಸುದ್ದಿ ಮುಟ್ಟ್‌ಸಿಯೊಳೊರಿಯೋ?"ಂತ ಜೋರು ಮಾಡಿ ಕೇಳ್ತ್. ಚಾರೆಲ್, "ತೊಪ್ಪಾತ್ ಯುವರಾಜ. ಮಳೆ ಜೋರು ಹೊಡಿಯತ್ತಿತ್ತ್. ಹಾಂಗೆ ಹಜ್ಜ ತಪ್ಪ್ ಬುಟ್ಟೊ. ಈಗಳೆ ಹೋಗಿ ನೋಡಿಕಣ್ಡ್, ಬಂದ್ ರಾಜರಿಗೆ ಬನ್ನೆ ಮಾಡುವೆ"ಂತ ಹೇಳಿ ಹೋದೊ.

ಅವು ಹಿಂದೆ ಬಂದ್ ಬಲರಾಮ ಇದ್ದಲ್ಲಿಗೆ ಹೋಗಿ ಏನೋ ಹೇಳ್ದೊ. ಬಲರಾಮ ಗಡಿಬಿಡಿ ಮಾಡಿಕೆ ಸುರುಮಾಡ್ತ್. ಅವನ ಕರ್‌ಸಿ, ಇವನ ಕರ್‌ಸೀಂತ ಗಟ್ಟಿ ದಣೀಲಿ ಕೇಳ್‌ತಿತ್ತ್. ಏ ಕೃಷ್ಣ ? ಎಲ್ಲಿ ಹೆಣ್ಮಕಳೊಟ್ಟಿಗೆ ಚಕ್ಕಂದ ಹೊಡ್ಕಣ್ಡ್ ಕುದ್ದೊಳ? ಬೇಗ ಬಾಂತ ಕರ್ದ್. ಕೃಷ್ಣ ಗಾಬ್ರಿಂದ ಬಂದಾಂಗೆ ಬಂದ್, "ಅಣ್ಣಾ! ಇಲ್ಲಿ ಒಳೆ. ಏನ್ ಸಮಾಚಾರ"ಂತ ಕೇಳ್ತ್. "ನಮ್ಮ ನಗರಕ್ಕೆ ಸರ್ವೋತ್ತಮಂತೇಳ್ವ ರುಸಿಗ ಬಂದ್ ನಗರದ ಹೊರೆಗಿರುವ ದೊಡ್ಡ ಆಲದ ಮರದ ಹಕ್ಕಲೆ ಇರುವ ದೇವಿಗುಡಿಲಿ ಒಳ್ಕಂಡೊಳೊ ಗಡ. ನೋಡ್ದ ಕೂಡ್ಲೇ ಎಲ್ಲ ಲಕ್ಷಣಗಳ ಹೇಳುವಂಥ ಜ್ಞಾನಿಗ ಗಡ! ನಾವು ಹೋಗಿ ಅವರ ಗೌರವಂದ ಅರಮನೆಗೆ ಕರ್ಕಣ್ಡ್ ಬಾವೊನೊ. ಅರಮನೆಲಿ ಅವ್ಕೆ ಬೇಕಾದ ಎಲ್ಲ ಸೌಕರ್ಯನೂ ಮಾಡಿಕೊಡೊಕು. "ಹೀಂಗೆ ಬಲರಾಮ ತುಂಬ ಉತ್ಸಾಹಲಿ ಹೇಳ್ತ್. ಕೃಷ್ಣ ಉದಾಸೀನ ತೋರ್ಸಿ, "ಅಣ್ಣ! ಕಾವಿ ಹಾಕಿದವೆಲ್ಲ ಸನ್ಯಾಸಿಗಂತ ನಂಬುದು ಹೇಂಗೆ? ನಾವು ಜಾಗ್ರತೆಲಿ ಇರೊಕು"ಂತ ಹೇಳ್‌ಕನ ಬಲರಾಮಂಗೆ ಕೋಪ ಬಾತ್. "ನೀ ದೊಡ್ಡವರ ವಿಚಾರಲಿ ಹೀಂಗೆಲ್ಲ ಮಾತಾಡಿಕಾಗದ್. ನಾವು ವಿನಯ ತೋರ್ಸಿರೆ ಅವು ಪ್ರಸನ್ನ ಚಿತ್ತರಾಗಿ ನಾವ್ಗೆ ಒಳ್ಳೊಳ್ಳೆ ವರಗಳ ಕೊಡುವೊ". ಅಷ್ಟ್ ವರಗಳ ತಕಣ್ಡ್ ನಾವೇನ್ ಮಾಡುದಣ್ಣಾ? ಸದ್ಯಕ್ಕೆ ನಾವ್ಗೆ ಬೇಕಾದ್ ಒಂದೆ ಒಳ್ಳೆ ವರ ಅಲ್ಲೊ? ಅಣ್ಣಾ"ಂತ ಕೃಷ್ಣ ಕೊಂಕು ನೆಗೆಲಿ ಹೇಳ್ತ್. ಬಲರಾಮಂಗೆ ಕೃಷ್ಣನ ಕೊಂಕು ಅರ್ಥ ಆಗದೆ ಗಲಿಬಿಲಿ ಆತ್. "ಸಾಕ್!ಸಾಕ್! ಬಾ ಹೋಯಿ, ಅವರ ಕರ್ಕಣ್ಡ್ ಬಾವೊನೊ ಕಳಸ ಕನ್ನಡಿ ಹಿಡ್ದೊವು. ಪೂರ್ಣ ಕುಂಭಗಳ ಹಿಡ್ಕಣ್ಡ್, ಪೊರ್ಲು ಪೊರ್ಲುನ ಗೂಡೆಗಳ ತಂದ,

ರುಷಿನ ಹೊತ್ತ್‌ಕಣ್ಂಡ್ ತಾಕೆ ಪಲ್ಲಕಿ ಹಾಂಗೂ ಅದರ ಹೊರೊವ್ರು ಮುಂದೆ ನಡ್ವ್ರೊ. ಅಣ್ಣ ತಮ್ಮ ಹಿಂದೆಂದ ನಡ್ದೊ.

ಬಲರಾಮ ನಿಜಸನ್ಯಾಸಿನೇಂತ ನೆನ್ಸಿ ಸನ್ಯಾಸಿಗೆ ಉದ್ದಕೆ ಅಡ್ಡಬಿದ್ದ್ ನಮಸ್ಕಾರ ಮಾಡ್ತ್. ಸನ್ಯಾಸಿ 'ಶುಭವಾಗಣ್ಲೀ"ಂತ ಆಶೀರ್ವಾದ ಮಾಡ್ತ್. ಮತ್ತೆ ಬಲರಾಮ ರುಷಿನೊಟ್ಟಿಗೆ, "ತಾವ್ರು ದಯಮಾಡಿ ನಮ್ಮ ಅರಮನೆಗೆ ಪಾದ ಬೆಳ್ಸೊಕು. ತಮ್ಮ ತಪೋನುಷ್ಠಾನಕ್ಕೆ ಬೇಕಾದ ಎಲ್ಲ ಅನುಕೂಲತೆಗಳ್ನೂ ಏರ್ಪಾಡ್ ಮಾಡುವೆ. ತಮ್ಮ ನೋಡಿ ನಮ್ಮ ಹೆಣ್ಮಕಮಕ್ಕ, ಕುಟುಂಬದ ಸರ್ವ ಸದಸ್ಯಣ್ರ್, ಪೊರಿಜನ ಸೇವಕರೆಲ್ಲ ನೋಡಿ ಪುಣ್ಯ ಪಡಿಯಣ್ಲೀಂತ ನನ್ನ ಆಸೆ. ತಾವ್ರು ಈ ಪಲ್ಲಕಿನ ಏರೋಕುಂತ ಬಲರಾಮ ವಿನಯಂದ ಕೇಳಿಕಣ್ಂಡಣ್ತ್. ಹಾಂಗೆ ಸನ್ಯಾಸಿ ತನ್ನ ದಂಡ ಕಮಂಡಲುಗಳ ಹಿಡ್ಕಂಡ್ ಪಲ್ಲಕಿಲಿ ಕುದ್ದಣ್ತ್. ಅದರ ಹೊರುವ ಬೋವಿಗ ಅದಿಕೆ ಹೆಗ್ಲ್ ಕೊಟ್ಟೊ. ಎರ್ಡ್ ಕಡೆಗಳ್ಲಿ ಚಾಮರ ಬೀಸೊವ್ರು. ಕಳಸ ಕನ್ನಟ ಹಿಡ್ಡೊವ್ರು, ಎದ್ರ್‌ಲಿ ಪೂರ್ಣ ಕುಂಭಗಳ ಹಿಡ್ದ ಹೂಂತಕಾರಿಗೂಡೆಗಳ ಹಿಂಡ್. ಅವರ್‌ಂದ ಮುಂದೆ ಕೊಂಬು ವಾಲಗದ ತಂಡ. ಎಡಪಾರ್ಶ್ವಲಿ ಕೃಷ್ಣ, ಬಲ ಪಾರ್ಶ್ವಲಿ ಬಲರಾಮ, ಹಿಂಗೆ ಇದ್ದ ವೈಭವದ ಮೆರವಣಿಗೆ ಅರಮನೆನ ಹೆಬ್ಬಾಗ್ಲ್ ಕಡೆಗ ಹೊಟರ್ಣತ್. ಬೀದಿಲಿ ಬಂದ್‌ಕಣ್ಂಡ್ ಇರ್‌ಕನ, ಎರ್ಡೂ ಕಡೆಲಿರುವ ಮನೆಗಳ ಉಪ್ಪರಿಗೆಗಳ ಸಾಲ್‌ಗಳ್ಲಿ ನಿತ್ತ್‌ಕಣ್ಂಡ್ ಹೆಣ್ಮಕ, ಅವರ ಮೇಲೆ ಹೂ ಮಳೆ ಸೂಸಿದೊ.

ಸನ್ಯಾಸಿನ ಅರಮನೆನೊಳಗೆ, ಆರತಿಯೆತ್ತಿ ಕರ್ಕಂಡ್ ಹೋಗಿ, ಪಾದಪೂಜೆ ಮಾಡಿ, ಚೆನ್ನಂದ ಮಾಡ್ದ ಆಸನಣ್ಲಿ ಜಿಂಕೆನ ಚರ್ಮನ ಹಾಸಿ ಕುದ್ರ್‌ಸಿದೊ. ಹಾಲ್ ಹಣ್ಣ್‌ಗಳ ಸಮರ್ಪಣೆ ಮಾಡ್ದೊ. ಬಲರಾಮ ಅವನ ಅಂತಃಪುರ ಪರಿವಾರನ ಮತ್ತೆ ಕೃಷ್ಣನ ಅಂತಃಪುರ ಪರಿವಾರನ ಕರ್ದ್ ಸನ್ಯಾಸಿಗೆ ನಮಸ್ಕಾರ ಮಾಡ್ಸಿತ್. ಮತ್ತೆ ಹೆಜ್ಜ ಹೊತ್ತು ಕಣ್ಲ್ದ ಮೇಲೆ ಸುಭದ್ರೆನ ಬಾಕೆ ಹೇಳ್ತ್. ಅದ್ ಗೂಡೆಗಣ್ಳಿಗೆ ಸಹಜವಾದ ನಾಚಿಕೆಂದ ಬಾತ್. ಆಗ ಬಲರಾಮ ಸನ್ಯಾಸಿನ ನೋಡಿ ಹೇಳ್ತ್: "ಸ್ವಾಮಿ, ಇದ್ ಚೆನ್ನದ ಕಣ್ದ್‌ರ್‌ನಾಂಗೆ, ಕೃಷ್ಣಂಗೂ ನಂಗೂ ಇರುವ ಒಂದೇ ಒಂದು ತಂಗೆ. ಅದಿಕೆ ಒಬ್ಬ ಒಳ್ಳೆ ವರನ, ವೀರನೂ ಧನಿಕನೂ ಸೊಬಗನೂ ಆದವನ ನೋಡಿ ಅವಂಗೆ ಇದರ ಮದುವೆ ಮಾಡಿಕೊಡುಕುಂತ ನನ್ನ ಆಸೆ. ನನ್ನ ಲೆಕ್ಕಣ್ಲಿ ಈಗ ಅಂಥ ಯೋಗ್ಯಂದರೆ ಕುರುಕುಲದ ದುರ್ಯೋಧನ ಒಬ್ಬನೇಂತ ನನ್ನ ಅಭಿಪ್ರಾಯ. ಅಂಥಾ ಯೋಗ್ಯವರ ಈ ಕನ್ನಿಕೆನ ಕೈ ಹಿಡಿವಾಂಗೆ ನೀವೇ ಆಶೀರ್ವಾದ ಮಾಡೋಕುಂತ ಬಿನ್ನಹ ಮಾಡ್ತ್. ಮತ್ತೆ ಸುಭದ್ರೆನ ನೋಡಿ, "ತಂಗೇ! ನೋಡು ಇವ್ರು ಸರ್ವೋತ್ತಮಂತ ಹೆಸ್‌ರಿರುವ ಮಹಿಮಾವಂತ ರುಸಿಗ. ಅವ್ರು ನಮ್ಮ ಅರಮನೆಲಿ ಇದ್ದ್, ಹೆಜ್ಜ ಕಾಲದವರೆಗೆ, ಅವರ ತಪೋನುಷ್ಠಾನಗಳ ನಡ್ಸೋಕುಂತ, ನಮ್ಮ ಪುಣ್ಯ ವಿಶೇಷಂದ ದಯಮಾಡ್ಸ್ಯೊಳೊ ನಿನ್ನ ಕನ್ಯಾಂತಃ ಪುರ ಪ್ರಶಾಂತವಾಗಿದ್ದ್ ಅವರ ಜಪ ತಪಗ ಎಲ್ಲ ಪೊರ್ಲುರ್ಣ ನಡಿಯುಕೆ ಯೋಗ್ಯ ಜಾಗಂತ. ಅಪ್ಪೆ ನಿನ್ಲಿಕೆ ಅಲ್ಲಿ ಏರ್ಪಾಡ್ ಮಾಡಿ ಕೊಟ್ಟನೆ. ಅವ್ಕೆ ಬೇಕಾದ ಪೂಜಾ ಸಾಮಾಗ್ರಿಗಳ

ಎಲ್ಲ ಆಯಾ ಸಮಯಲಿ ನೀ ಮಾಡಿಕೊಡೊಕು. ಯತಿಗಳ ಸೇವೆ ಮಾಡಿರೆ ಅವ್ರ ಮೆಚ್ಚಿ, ನಿಂಗೆ ವರಗಳ ಕೊಟ್ಟ್ ಆಶೀರ್ವಾದ ಮಾಡುವ್ರೋ. ನೀ ಉದಾಸೀನ ಮಾಡದೆ ನಡ್ಕ ಬಲ"ಂತ ಪ್ರೀತಿಲಿ ಹೇಳ್ತ್.

ಮತ್ತೆ ಕೃಷ್ಣ ಒರೆ ನೆಗೆ ನೆಗಾಡಿಕಣ್ಡ್ ಇದ್ದಂವ, "ಅಣ್ಣ! ಇತ್ತ ಬಾ. ನಿನ್ನೊಟ್ಟಿಗೆ ಒಂದು ಮಾತುಟ್ಟು"ಂತೇಳಿ, ಬಲರಾಮನ ಪಕ್ಕದ ಕೋಣೆಗೆ ಕರ್ಕಣ್ಡ್ ಹೋತು. "ಎಂತಣದಣ್ಣ ಯಾವ ಧೈರ್ಯಲಿ ಇಂಥ ಯತಿಗಳ ಕನ್ಯಾಂತಃ ಪುರಣಲಿ ಬುಡ್ದು? ನಾಳೆನ ದಿನ ಏನಾರ್ ಹೆಚ್ಚಿಕಮ್ಮಿ ಆದರೆ ಏನ್ ಮಾಡುದು? ನೀ ಇದರೆಲ್ಲ ಅವನ ಎದ್‌ರೇ ಹೇಳಿ ಬುಟ್ಟ. ನನ್ನೊಟ್ಟಿಗೆ ಒಂದು ಮಾತ್ ಮುಂದೇ ಕೇಳಿಕೆ ಬೊತ್ತಾಯ್ತೊ?. ಮುಂದೆ ಏನಾರ್ ಬೇಡದ್ ನಡ್ದರೆ ನಂಗೆ ಗೊತ್ತ್‌ಲೆ. ಎಲ್ಲಣದಿಕೂ ನೀನೆ ಹೊಣೆ. ನಾ ಹೇಳ್ತ್‌ಲಂತ ಬೇಡಂ"ತ ಹೇಳಿ ನೆಗಾಡ್ತ್. ಬಲರಾಮಂಗೆ ಕೋಪಬಾತ್. "ನೀ ಬಾಯಿ ಮುಚ್ಚುನೇ. ನಾ ಮಾಡ್ದ ಎಲ್ಲಣದಿಕೂ ನಿನ್ನ ಕೊಂಕು ಕೊಸ್‌ರ್ ತೊಪ್ಪಿಕಿಲೆ. ನಂಗೆ ಅಷ್ಟ್ ಗೊತ್ತ್‌ಲೆನೊ? ಕೃಷ್ಣ ಮಾತಾಡದೆ ನೆಗಾಡಿಕಣ್ಡ್ ಕುದ್ದಣ್ತ್. ಬಲರಾಮನ ಅಪ್ಪಣೆ ಪ್ರಕಾರ ಕನ್ಯಾಂತಃಪುರಣಲಿ ಒಂದು ಪ್ರತ್ಯೇಕ ಕೋಣೆ. ಯತಿ ಶ್ರೇಷ್ಠಂಗೆ ಬುಟ್ಟ್ ಕೊಟ್ಟೊ. ಹೊರೆಗೆನ ಜನ ಆಗಾಗ ಹೋಗಿ ಅವರ ಜಪ ತಪಕ್ಕೆ ತೊಂದರೆ ಕೊಡಿಕೆ ಬೊತ್ತ್‌ಂತ ರಾಜಾಜ್ಞೆ ಆತ್.

ಹಜ್ಜ ದಿನ ಹೀಂಗೇ ಕಣ್ತ್. ಯತಿನ ಜಪತಪಗ ಎಲ್ಲ ಸರಾಗ ನಡಿಯತ್ತಿತ್ತ್. ಸುರು ಸುರುನ ಸಂಕೋಚ ಕಮ್ಮಿ ಆಗಿ ಸಲಿಗೆ ಆರಂಭ ಆತ್. ಹಾಂಗೆ ಒಂದು ದಿನ ಬೊಳ್ಪಿನ ಪೂಜೆ ಎಲ್ಲ ಮುಗ್ದ್ ಆರಾಮಲಿರ್‌ಕನ ಯತಿ ಸುಭದ್ರೆನ ಕರ್ದ್ ಅದರೊಟ್ಟಿಗೆ ಮಾತಿಗೆ ಸುರುಮಾಡ್ತ್. "ಶಿಷ್ಯೆ! ನಾ ಒಂದು ವಿಷಯ ಕೇಳ್ನೆ. ಅದ್ಕೆ ನೀ ಮನ್ಸ್ ಬಿಚ್ಚಿ ಉತ್ತರ ಕೊಡೊಕು. ನಿನ್ನ ದೊಡ್ಡಣ್ಣ ಹೇಳ್ದ ವಿಚಾರನ ನೀ ಕೇಳ್ಯೊಳ ತಾನೆ? ನಿಂಗೆ ದುರ್ಯೋಧನನಂಥಾ ಯೋಗ್ಯ ವರ ಬೇರೆ ಇಲ್ಲೆ ಗಡ! ನೀ ಅಂವನ ಒಪ್ಪಿಕಂಡ್ಯೊನೋ?". "ದೊಡ್ಡಣ್ಣ ಹೇಳ್ದ ಮಾತ್‌ಲೇ ಅವಂಗೆ ಗೊತ್ತಿಲ್ಲದೆ ಒಂದು ಸತ್ಯಾಂಶ ಹೊಳ್ದದೆ ಸ್ವಾಮಿ. ಅವನಂಥಯೋಗ್ಯಂತ ಹೇಳಿರೆ ಅವನಂಥ ಅಯೋಗ್ಯಂತ ಅರ್ಥ ಆದೆ ಸ್ವಾಮಿ"- ಸುಭದ್ರೆ ಹೇಳ್ತ್. ಇದರ ಕೇಳಿ ಯತಿಗೆ ಸಂತೋಸಾತ್. 'ಗೂಡೆ ಜಾಣೆ'ಂತ ಮನ್ಸ್‌ಲಿ ಮೆಚ್ಚಿಕಣಂಡಣ್ತ್. "ಅದ್ ಹೇಂಗೆ ಅಂವ ಅಯೋಗ್ಯ?"ಂತ ಯತಿ ಕೇಳ್ತ್. ಸುಭದ್ರೆ "ಸ್ವಂತ ಚಿಕ್ಕಪ್ಪನ ಮಕ್ಕಳ ಕೊಲ್ಲೊಕುಂತ ಅಂವ ಏನೇನೆಲ್ಲ ಉಪಾಯ ಮಾಡ್ತ್‌ಲೆ? ಅಂತ ಮತ್ಸರ ಮತ್ತೆ ಕ್ರೂರ ಬುದ್ಧಿಯವನ ಯೋಗ್ಯಂತ ಯಾರ್ ಹೇಳುವ್ರೊ ಹೇಳಿ"ಂತ ಹೇಳ್ತ್. "ಹಾಂಗಾರೆ ನೀ ಬೇರೆ ಯಾರ್‍ನಾರ್ ಮೆಚ್ಚಿಕಂಡೊಳನೋ ಹೇಂಗೆ?" ಸುಭದ್ರೆಗೆ ನಾಚಿಕೆ ಆತ್. ಹಾಂಗೆ ಅತ್ತ ಇತ್ತ ನೋಡ್ತ್. ಆಗ ಯತಿ "ನನ್ನೊಟ್ಟಿಗೆ ಹೇಳಿಕೆ ನಾಚಿಕೆ ಮಾಡ್‌ಬೇಡ. ನೀ ಮೆಚ್ಚಿದವನೊಟ್ಟಿಗೇ ನಿನ್ನ ಮೊದುವೆ ಮಾಡಿ ಕೊಡುವ ಹಾಂಗೆ ನಿನ್ನ ಬಲರಾಮಣ್ಣಂಗೆ ನಾ ಹೇಳಿನೆ. ಆಗ ಅಂವ ನನ್ನ ಮಾತ್‌ನ ಮೀರಿಕಿಲ್ಲೆ." "ನಮ್ಮ ದೊಡ್ಡಣ್ಣ ಯಾರ ಮಾತ್‌ನೂ ಕೇಳಂವ ಅಲ್ಲ. ಒಮ್ಮೆ ಕೃಷ್ಣಣ್ಣನೂ ರುಕ್ಮಿಣಿ ಅತ್ತಿಗೆನೂ

ಮಾತಾಡಿಕಲಂಡ್ ಇರ್‌ಕನ ನಮ್ಮ ಅತ್ತೆ ಮಜ್ಜ ಅರ್ಜುನ ಭಾವನ ಪರಾಕ್ರಮನ ತುಂಬ ಹೊಗ್‌ಳಿಕಲಂಡ್ ಇದ್ದೊ. ಅಂವನೇ ನಮ್ಮ ಸುಭದ್ರೆಗೆ ಸಲರಿಯಾದ...ಂತ ಹೇಳುವಷ್ಟರ್ಲಿ ನಾ ಹೋದರ ನೋಡಿ ಮಾತ್ ನಿಲ್ಸಿದೊ"ಂತ ಸುಭದ್ರೆ ನಾಚಿಕಲಂಡ್ ಹೇಳ್ತ್. ಆಗ ಯುತಿ ನೆಗಾಡಿಕಲಂಡ್, "ಗೊತ್ತಾತ್ ಬುಡು. ನಿಂಗೆ ಅರ್ಜುನನ ಮೇಲೆ ಮನ್ಸಾಗುಟುಂತಾತ್. ನೀ ಅವನ ನೋಡಿಯೊಳೊನೊ?"ಂತ ಕಲಣ್ಣ್ ಮಿಣ್ಕ್‌ಸಿತ್.

ಅದ್‌ಕೆ ಸುಭದ್ರೆ ಪ್ರತ್ಯಕ್ಷ ಇದ್‌ವರೆಗೆ ನೋಡ್‌ತ್ಲೆ. ನಮ್ಮ ಸಣ್ಣಣ್ಣ ಮಾತ್ ಮಾತಿಗೆ ಅವರ ಹೆಗ್ಗಳಿಕೆನ ಹೊಗ್‌ಳಿ ಹೇಳ್‌ಕನೆಲ್ಲ ನನ್ನ ಮನ್ಸಿಗೆ ತುಂಬ ಕುಸಿ ಆತಿತ್ತ್. ಯಾಗಾರೊಮ್ಮೆ ಕನ್ಸ್‌ಲಿ, ಒಬ್ಬ ದೃಡಕಾಯದ ಯುವಕನ ಬಿಂಬ ಅಸ್ಪಷ್ಟ ರೀತಿಲಿ ಕಂಡ್ ಮಾಯ ಆತಿತ್ತ್. ನಾ ಏನೇನೋ ಮಾತಾಡಿ ಬುಟ್ಟೆ. ನೀವು ಯಾರಿಗೂ ಹೇಳಿ ಬುಡ್ಬಡಿ. ಸುಭದ್ರೆನ ಮಾತಿಗೆ ಯತಿ ನೆಗಾಡಿಕಲಂಡ್ ಹೇಳಿಕೆ ಸುರು ಮಾಡ್ತ್. "ಏನೂ ತೊಪ್ಪಿಲ್ಲೆ. ಹೇಳೋಕಾದವರೊಟ್ಟಿಗೆ ಎಲ್ಲ ಹೇಳ್ದು ಒಳ್ಳಲದ್. ನಿನ್ನ ಬಯ್ಕೆ ಬೇಗ ಕೈಗೂಡ್ದು, ನನ್ನ ನಂಬು. "ಆದರೆ ಒಂದು ವಿಷಯ. ಅಂವ ಈಗಲಳೇ ಎರ್ಡ್ ಮೂರು ಮೊದುವೆ ಆಗುಟು. ದ್ರೌಪದಿನ ಯಾರಿಗೂ ತೀರದ ಮತ್ಸ್ಯ ಯಂತ್ರನ ಭೇದ್‌ಸಿ ಮೊದ್‌ವೆ ಆತ್. ಆದರೆ ಅದ್ ಅವಂಗೊಬ್ಬಂಗೇ ಹೆಣ್ಣಾಗಿ ಒಳ್ತ್ಲೆ. ಮತ್ತೆ ಪಾತಾಳ ಲೋಕಲಲಿ ಉಲೂಪಿಂತೇಳ್ವ ನಾಗಕನ್ಯೆನ ಮೊದುವೆ ಆತ್. ಅದರ್ಲಿ ಇರಾವಂತಂತೇಳ್ವ ಕೂಸು ಹುಟ್ಟಿತ್. ಮಣಿಪುರಕ್ಕೆ ಹೋತು, ಅಲ್ಲಿ ಚಿತ್ರಾಂಗದೆನ ಮೊದುವೆ ಆತ್. ಅದರ್ಲಿ ಬಭ್ರುವಾಹನಂತೇಳ್ವ ಮಜ್ಜನ ಪಡ್ತ್. ಹೀಂಗೆ ಹೂವುಂದ ಹೂವುಗೆ ಹಾರುವ ತುಂಬಿನಾಂಗೆ ಇರಂವನ ನೀ ಒಪ್ಪಿಕಂಡಿಯನೋಂತ ಕೇಳ್ತ್ ಓರೆ ನಗೆ ನೆಗಾಡಿಕಲಡ್. ಅದ್ಕೆ ಸುಭದ್ರೆ "ಅದರ್ಲೇನ್ ಕೊರತೆ? ನಮ್ಮ ಕೃಷ್ಣಣ್ಣ ಹೋದಲಲ್ಲಿಂದ ಬಂದಲ್ಲಿಂದ ಹೆಣ್ಮಕಳ ತಂದ್ ತಂದ್ ಅವನ ಅಂತಃಪುರನ ತುಂಬ್‌ಸಿಟು. ಅವಂಗೇನ್ ಕೊರತೆ ಆತ್? ಅವನ ಗೌರವಕ್ಕೆನಾರ್ ಕುಂದು ಆಗುಟೋ"ಂತ ಕೇಳ್ತ್. "ಓ! ನಿಂಗೆ ಒಳ್ಳ ಮಾದರಿನೇ ಸಿಕ್ಕಿಟ್ಟು ಮೋಸ ಇಲ್ಲೆ"ಂತ ಮೆಲ್ಲ ಅದರ ಹಕ್ಕಲೆ ಬಂದ್ ಅದರ ಹೆಗ್‌ಲಿಗೆ ಕೈ ಹಾಕಿತ್. ಸುಭದ್ರೆಗೆ ಕೋಪ ಬಾತ್. ಇದೆಂತಲದ್ ಸ್ವಾಮಿ ನಿಮ್ಮ ಕೆಲ್ಸ? ನಾ ದೊಡ್ಡಣ್ಣನೊಟ್ಟಿಗೆ ಹೇಳ್ನೆಂತ ಎದ್ದಲತ್. ಹಾಂಗೆ ಮಾಡ್ಬಡ ದಮ್ಮಯ್ಯಂತೇಳಿ ಅದರ ನಿಲ್ಸಿತ್.

ಎಲ್ಲ ಶಾಂತ ಆದ ಮೇಲೆ

ಯತಿ ಮಾತಿಗೆ ಸುರು ಮಾಡ್ತ್: "ನಾ ನನ್ನ ತಪಶ್ಶಕ್ತಿಂದ ಅವನ ನಿನ್ನೆದ್‌ರಿಗೆ ತಂದ್ ನಿಲ್ಸಿರೆ ನೀ ಏನ್ ಮಾಡುವ?"

"ನಾ ಅವ್ಕೆ ನಮಸ್ಕಾರ ಮಾಡುವೆ."

"ಆಗ ಅಂವ ನಿನ್ನ ನೇಚಿ ಅವನ ಎದೆಗೆ ಒತ್ತಿಕಂಡರೆ ಏನ್ ಮಾಡುವ?"

"ನಾ ಅಲ್ಲೆ ಮುದ್ದೆ ಆಗಿ ಅವರ ಹೆಗ್‌ಲ್‌ಲಿ ನನ್ನ ತಲೆ ಇಸಿ ಕಲಣ್ಣ್ ಮುಚ್ಚಿಕಂಬೆ."

"ಅಷ್ಟೆನೋ, ನಾಳೆ ನನ್ನ ಬೊಳ್ಪಿನ ಪೂಜೆ ಮುಗ್ಸ್ಟ್, ನಿನ್ನ ಕನ್ಯಾಂತಃ ಪುರಕ್ಕೆ ಸೇರ್ದ ಪುಷ್ಪೋದ್ಯಾನ ಉಟ್ಟೊಲೆ ಅಲ್ಲಿಗೆ ಅವನ ಬಾಕೆ ಹೇಳ್ನೆ. ಮತ್ತೆ ನಾಳೆ

ನೋಡೊನೊಂತ ಹೇಳಿ ಯತಿ ಅವನ ಕೋಣೆ ಒಳಗೆ ಹೋತು".

ಮಾರ್ನೆ ದಿನ ಹೊತ್ತಿನ ಪೂಜೆನ ಯತಿ ಗಡ್ಬಲಿ ಮಾಡ್ತ್. ನಮಸ್ಕಾರ ಮಾಡ್ದ ಸುಭದ್ರೆಗೆ "ಶೀಘ್ರಮೇವ ಕಲ್ಯಾಣಂಪ್ರಾಪ್ತಿರಸ್ತು"ಂತ ಆಶೀರ್ವಾದ ಮಾಡ್ತ್. ಪೂಜೆ ಮುಗ್ದ ಮೇಲೆ ನೀ ಪುಷ್ಪೋದ್ಯಾನಕ್ಕೆ ಹೋಗು. ಅರ್ಜುನ ಬಾವ ಹೊತ್ತಾತ್. ಅಂವ ಒಬ್ಬನೇ ಬಂದರೆ ಸಾಕಲೆ. ನಾನೂ ಬಂದರೆ ನೀವ್ಗೆ ರಗಳೆ ಕಾಂಬೊದು"ಂತ ಕಪಟ ನಗೆಲಿ ಹೇಳ್ತ್. ಸುಭದ್ರೆನ ಮೋರೆ ನಾಚಿಕೆಲಿ ಕೆಂಪಾತ್. ಅದ್ ಮಾತಾಡದೆ ಯೋಚಿಸಿಕಣಂಡ್ ಕುದ್ದಲತ್. ಅರ್ಜುನ ಹೇಂಗಿದ್ದನಂತ ನಾನಾ ರೀತಿನ ಕಲ್ಪನೆ ಮಾಡಿಕಣಂಡ್, ಹಜ್ಜ ತವಕಂದಲೆಳೇ ಉದ್ಯಾನಕ್ಕೆ ಹೋತು. ಅಲ್ಲಿ ಯಾರೂ ಕಂಡಲತ್‌ಲೆ. ಈ ರುಸಿ ಎಲ್ಲಿಯಾರ್ ನಂಗೆ ತಕ್ಕ್ ಮಾಡ್ತೊ? ಎಲ್ಲಿಯೋ ತೀರ್ಥಾಟನೆಗೆ ಹೋದ ಅರ್ಜುನ ಬಾವ ಈಗ ಎಲ್ಲೊಳ್ಳನೋ ಏನೋ? ಈ ರುಸಿನ ಮಂತ್ರಕ್ಕೆ ಅಷ್ಟ್ ಬಲ ಇರುದೋ? ಯಾರಿಗ ಗೊತ್ತು. ನಾ ಸುಮ್ಮನೆ ಕುದ್ದುರುವ ಬದ್‌ಲ್ ಈ ಹೂಗಳ ಕೊಯ್ದ್ ಮಾಲೆ ಕಟ್ಟನೆ. ರುಸಿ ಒಂಬೊತ್ ನಡ್ದುವ ಪೂಜೆಗಾರ್ ಆದು. ಹೀಂಗೆ ನೆನ್ಸಿಕಣಂಡ್, ಹೂಗಳ ಕೊಯ್ದ್ ತಂದ್ ಮಾಲೆ ಕಟ್ಟಿಕಣಂಡ್ ಕುದ್ದಲತ್.

ಅಷ್ಟರ್ಲಿ ರುಸಿ ತನ್ನ ಉಡುಪುನೆಲ್ಲ ತೆಗ್ದ್ ಇಸಿ, ಗಡ್ಡ ಮೀಸೆನ ಎಲ್ಲ ಮಲ್ಲ ಎಳ್ಕಿಸಿ ಅಂಟ್‌ನೆಲ್ಲ ಪೊಲ್ಸಿ ತೊಳ್ದ್, ಪಚ್ಚೆ ಕರ್ಪೂರ ಬೆರ್ಸಿದ ಎಲೆ ಅಡಿಕೆನ ಅಕ್ಕಣಂಡ್, ಕಸ್ತೂರಿ ಮುಂತಾದ ಪೊರಿಮಳ ದ್ರವ್ಯಗಳ ಮೈಗೆಲ್ಲ ಉದ್ದಿಕಣಂಡ್ ಉಡಿಗ ತೊಡಿಗೆಗಳ ಹಾಕಿ ಕಣಂಡ್ ಪುಷ್ಪೋದ್ಯಾನಕ್ಕೆ ಹೊರ್ಟಲತ್. ಅಲ್ಲಿಗೆ ಬಂದಂವ ಸೀದ ಕಲ್ಲ್‌ಮಂಚಲಿ ಕುದ್ದ್‌ಕಂಡ್ ಹೂಮಾಲೆ ಕಟ್ಟಿಕಣಂಡಿರುವ ಸುಭದ್ರೆನಕ್ಕಲೆ ನಿತ್ತಲತ್. ಮನ್ಸ್‌ಲಿ ಏನೇನೋ ಯೋಚನೆ ಮಾಡಿ ಕಣಂಡ್, ತನ್ನ ಕೆಲ್ಸಲಿ ಮೈಮರ್ತಿದ್ದ ಸುಭದ್ರೆಗೆ ಅರ್ಜುನ ಬಂದ್ ನಿತ್ತಲದ್ ಗೊತ್ತೇ ಆತ್‌ಲೆ. ಆದರೆ ಅವನ ಮೈಗೆ ಉದ್ದಿಕಂಡ ಪೊರಿಮಳ ದ್ರವ್ಯಂಗ ಅದರ ಮೂಕುಗೆ ಎಚ್ಚರಕೊಟ್ಟೊ. ಹಾಂಗೆ ತಲೆ ನೇಚಿ ನೋಡ್ತ್. ಆಗ ಅರ್ಜುನ ಅದರ ಇಷ್ಟರವರೆಗೆ ನೋಡದವರ ಹಾಂಗೆ ತೋರ್ಸಿಕಂಬಕಾಗಿ, "ಸುಭದ್ರೆಂತೇಳರ ನೀನೋ?"ಂತ ಕೇಳ್ತ್. ಸುಭದ್ರೆ ಬುಟ್ಟ ಕಣ್ಣ್ ಬುಟ್ಟಾಂಗೆ ರೆಪ್ಪೆ ಹೊಡಿಯದೆ ನೋಡಿಕಣಂಡ್ ನಿತ್ತಲತ್. ನೋಡಿಕೆ ಇವಂಗೂ ಆ ರುಸಿಗೂ ತುಂಬ ತುಂಬ ಹೋಲಿಕೆ ಉಟ್ಟು. ಇಂವನೇ ಅಂವನೋ? ಅಂವನೇ ಇಂವನೋ?" ಹೀಂಗೆ ಗಲಿಬಿಲಿಲಿ ನಿತ್ತಲತ್. ನನ್ನ ಅರ್ಜುನ ಭಾವನೇ ವೇಸಮರ್ಸಿಕಣಂಡ್ ಇಷ್ಟ್ ದಿನ ನನ್ನ ಅಂತಃಪುರಲ್ ಇದ್ದ ತಕ್ಕ ಸನ್ಯಾಸಿ. ಎಷ್ಟ್ ಪೊಲ್ಸಿಯೇಸ ಹಾಕಿ ಬಂದಿಷ್ಟೂ ಗೊತ್ತಾಗದಾಂಗೆ. ನಟನೆ ಮಾಡ್ತೋ! ನನ್ನ ಗುಟ್ಟುನೆಲ್ಲ ನಂಗೆ ಗೊತ್ತೇ ಆಗದಾಂಗ ರಟ್ಟ್ ಮಾಡ್ಸಿಕಣಂಡೊ. ಹೀಂಗೆ ನಾಚಿಕಣಂಡ್ ಅವನ ಮಾತಿಗೆ ಅವನ ರೀತಿಲೇ ಉತ್ತರ ಕೊಟ್ಟಲತ್. 'ನಾ ಎಲ್ಲಿ? ರಾಜಕುಮಾರಿ, ಕೃಷ್ಣ ಬಲರಾಮರ ಕೊಂಡಾಟದ ತಂಗೆ ಸುಭದ್ರೆ ಎಲ್ಲಿ? ಅದರ ಪೊರ್ಲ್‌ನ್, ವೈಭವ ಏನ್? ನಾ ಗೊಲ್ಲರ ಗೂಡೆ, ಅದ್ಕೆ ಬಾಲ್ಯ ಸಖಿ."

"ಹಾಂಗೋ? ಹಾಂಗಾರೆ ಸುಭದ್ರೆನ ಎಲ್ಲಿ ನೋಡಲಕ್?" ಅರ್ಜುನ ಕೇಳ್ತ್.

"ಅದ್ ಅದರ ಬಲರಾಮಣ್ಣ ಇದ್ದಎಲ್ಲಿ. ಕಎಳ್ನ ಗುಂಬಂದ ಕಎಳ್ನ ಜೊಗ್ಗ್ಸಿ ಕೊಟ್ಟ್‌ಕಎಂಡ್ ಇರುದು."

"ಆ ಕೆಲ್ಸಕ ನಿಮ್ಮ ಅಣ್ಣಂಗೆ ದಾಸಿಗ ಸಿಗ್ತ್‌ಲೇನೋ?"

"ದಾಸಿಗ ಮಾಡುವ ಯಾವ ಕೆಲ್ಲಲಿಯೂ ನಯನುಣಾಪು ಇಲ್ಲೆಂತ ದೊಡ್ಡಣ್ಣಂಗೆ ಒಗ್ಗುದುಲೆ"

"ಹಂಗಾರೆ ನನ್ನ ಅಲ್ಲಿಗೆ ಕರ್ಕಎಂಡ್ ಹೋಗು. ನಂಗೆ ಸುಭದ್ರನ ಒಮ್ಮೆ ನೋಡಿಯೇ ತೀರೋಕು!"

"ಅದೇನ್ ನೀವ್ಗೆ ಅಷ್ಟ್ ಆತುರ?"

"ಏಕೆಂದರೆ ನಾ ಅದರ ಅತ್ತೆ ಮುಜ್ಜ. ಹಾಂಗೆ ನಂಗೆ ಸೋದರದ ಹಕ್ಕುಟ್ಟು. ನಂಗೆ ಅದರ ಮೊದುವೆ ಮಾಡಿ ಕೊಡೀಂತ ಕೇಳೋಕು. ಬಾ ನನ್ನ ಅಲ್ಲಿಗೆ ಕರ್ಕಎಂಡ್ ಹೋಗು."

"ನೀವು ಅದರ ಮೊದುವೆ ಆದರೆ ನನ್ನ ಗೆತಿ ಏನ್?"

"ಏನ್ ನಿಂಗೆ ನನ್ನ ಮೊದುವೆ ಆಕುಂತ ಆಸೆ ಉಟ್ಟೋ?"

ಪಕ್ಕನೆ ಮಾಯನ ಮರದ ಹಿಂದಂದ ಪ್ರತ್ಯಕ್ಷ ಆಗಿ ಕೃಷ್ಣ ಮಾತಾಡ್ತ್.

"ನಿಮ್ಮ ಎಲ್ಲ ಆಸೆಗಳನ್ನೂ ನಾ ಪೂರೈಸಿನೆ. ನಮ್ಮ ಅಣ್ಣನ ಅಭಿಪ್ರಾಯನ ನಾ ಒಪ್ಪುದುಲೆ. ಕ್ಷತ್ರಿಯರ ನಡತೆಗನುಸರ್ಸಿ, ಈ ಮುಹೂರ್ತವೇ ಶುಭ ಮುಹೂರ್ತಾಂತ ನೆನ್ಸಿಕಎಂಡ್. ನನ್ನ ರಥ, ಶೈಬ್ಯ, ಬಲಾಹಕ, ಮೇಘವರ್ಣ, ಸುಗ್ರೀವಂತೇಳ್ವ ನಾಲ್ಕ್ ಕುದುರೆಗಳೂ ದಾರುಕಂತೇಳ್ವ ನನ್ನ ಸಾರಥಿನೂ, ಚೂತಲತಿಕಂತೇಳ್ವ ದಾಸಿನೂ ತಯಾರಾಗಿ ಒಳೊ. ಸುಭದ್ರನ ರಥಎಲಿ ಕುದ್ದ್ರಿಸಿ ಕಎಂಡ್ ಸೀದಾ ಇಂದ್ರಪ್ರಸ್ಥಕ್ಕೆ ಹೋಗಿ ಸೇರ್. ನಮ್ಮ ಅಣ್ಣ ಕೋಪಎಲಿ ನಿನ್ನ ಹಿಂದಂದ ಸೈನಿಕರ ಕಎಳ್ಸುದು. ಅವ್ಕೆ ನೀರ್ ಕುಡ್ಸಿಕೆ ನಿಂಗೆ ಗೊತ್ತುಟು. ಮತ್ತೆ ಅಣ್ಣನ ಕೋಪದ ಕಿಚ್ಚಿನ ಹೇಂಗೆ ಕೆಡ್ಸುದುಂತ ನಂಗೆ ಗೊತ್ತುಟು. ಹೋಗಿ ಬನ್ನಿ. ನೀವ್ಗೆ ಒಳ್ಳೇದಾಗಎಲಿ. ಮತ್ತೆ ಒಂದು ಮಾತ್. ಇಂದ್ರಪ್ರಸ್ಥಕ್ಕೆ ತಲ್ಪಿದ ಮೇಲೆ, ಪ್ರಸ್ತಕ್ಕೆ ಅವಸರ ಬೇಡ. ಒಂದು ಒಳ್ಳೆದಿನ ನೋಡಿ ಹೇಳಿ ಕಎಳ್ಸಿ. ನಾವೆಲ್ಲ ಬಂಧು ಬಳಗ ಬಂದ್ ಶಾಸ್ತ್ರ ಬದ್ಧವಾದ ಮೊದುವೆ ಮಾಡ್ತ ಮೇಲೆ ಎಲ್ಲ ನಡಿಯಎಲಿ" ಹಾಂಗೆ ಹೇಳಿ ಕೃಷ್ಣ ಅವರ ಕಎಳ್ಸಿತ್.

ಸನ್ಯಾಸಿ ವೇಸಎಲಿ ಬಂದ್ ನಾವ್ಗೆಲ್ಲ ಮೋಸ ಮಾಡಿ, ನಮ್ಮ ಮನೆ ಗೂಡೆನ ಮರುಳು ಮಾಡಿ ಹಾರ್ಸಿಕಎಂಡ್ ಹೋದಂವ ಅರ್ಜುನಂತ ಗೊತ್ತಾಗಿ ಬಲರಾಮಂಗೆ ಭಯಂಕರ ಸಿಟ್ಟ್ ಬಾತ್. ಆ ಹೆಣ್ಣ್ ಕಳ್ಳನ ಹಿಂಗಎಟ್ಟ್ ಮುಂಗಎಟ್ಟ್ ಕಟ್ಟಿ ಹಿಡ್ಕಂಡ್ ಬನ್ನಿಂತ ಅವನ ಕಾವಲ್ ಪಡೆಗೆ ಅಪ್ಪಣೆ ಮಾಡ್ತ್. ಅವನ ಇಡೀ ದಿನ ಬಿಸ್ಲ್‌ಲಿ ನಿಲ್ಸಿ ಮೈ ಮೇಲೆಲ್ಲ ಚೊಪ್ಪುಳಿನ ಕೊಡ್ಸಿ ಅವಂಗೆ ಶಿಕ್ಷೆ ಕೊಡೋಕು ಹೀಂಗೆ ಅಂದ ಯೋಚನೆ ಮಾಡಿಕಎಂಡ್ ಇರ್ಕನ, ಅರ್ಜುನನ ಸೆರೆ ಹಿಡ್ಕ್ ತಾಕಂತ ಬಲರಾಮ ಕಎಳ್ಸಿದ ಕಾವಲ್ ಪಡೆನೊವ್ರು ಒಬ್ಬೊನೂ ಒಳಿಯದೆ ಅರ್ಜುನನ ಬಾಣಕೆ ಗುರಿಯಾಗಿ ಸತ್ತ್ ಬಿದ್ದೊಂತ ವರ್ತಮಾನ ಬಾತ್. ಈಗ ಬಲರಾಮಂಗೆ ಭೂಮಿ ಆಕಾಶ ಒಂದಾಗುವಾಂಗೆ ಕೋಪ

ಕೆರ್‌ಳಿ, ತನ್ನ ಹಲಾಯುಧನ ಹಿಡ್ಕಂಡ್ ಅವನೇ ಹೊರ್ಟತ್. ಅದರ ನೋಡಿ ಕೃಷ್ಣ ಓಡಿ ಬಂದ್ ತಡ್ತ್. ಅಣ್ಣ! ಶಾಂತನಾಗ್. ಅರ್ಜುನ ಮಾಡ್ದ್ ಕ್ಷತ್ರಿಯ ಧರ್ಮಕ್ಕೆ ಸರಿಯಾಗಿಯೇ ಉಟ್ಟು. ಇನ್ನ್ ಅವನ ವಂಶನ ನೋಡುದಾದರೆ ಪ್ರಖ್ಯಾತವಾದ ಸೋಮವಂಶ. ರೂಪುಲಿ ಸಾಕ್ಷಾತ್ ಮನ್ಮಥನ ಮೀರ್‍ಸೊಂವ. ಅವನ ಬಲಪರಾಕ್ರಮನ ಹೇಳುದಾದರೆ ನಿನ್ನನೂ ಮೀರ್‍ಸುವ ಬಲವಂತ. ಬಿಲ್ಲ್‌ಗಾರಿಕೆಲಿ ಎಲ್ಲವರ್‍ನೂ ಮೀರ್‍ಸಿದಂವಂತ ದ್ರೌಪದೀ ಸ್ವಯಂವರ ಸಂದರ್ಭಲಿ ನೀನೇ ಕಣ್ಣಾರೆ ನೋಡ್ಯೊಳ. ನಮ್ಮ ತಂಗೆಗೆ ಇದರ್‌ಂದ ಒಳ್ಳ ಗಂಡ ಸಿಕ್ಕುದೋ? ಮತ್ತ ಈ ಕೆಲ್ಸಕೆ ನೀನೇ ಹೋಕೋ? ನೀ ಹೇಳಿರೆ ಮಾಡಿಕೆ ನಾ ಸಾಲಿಕಿಲ್ಲೆನೋ? ಈ ಮಾತ್‌ಗಳ ಕೇಳಿ ಬಲರಾಮನ ಕೋಪ ಶಾಂತ ಆತ್. ಅಂವ ಸುಮ್ಮನಾತ್.

ಎರ್‍ಡ್ ದಿನದ ಪ್ರಯಾಣ ಮಾಡಿ ಅರ್ಜುನ ಇಂದ್ರಪ್ರಸ್ತಕೆ ಬಂದ್ ಮುಟ್ಟಿತ್. ಅರಮನೆಂದ ಹಿಚ್ಚ ದೂರಲಿ ಸುಭದ್ರೆನ ರಥಂದ ಇಳ್ಸಿ ಹೀಂಗೇ ಅರಮನೆಗೆ ನಡ್ಕಂಡ್ ಹೋಗಿ ದ್ರೌಪದಿನ ನೋಡು. ನೀ ಯಾರ್‌ಂತ ಗುರ್ತು ಹೇಳದೆ ನಾ ಪಕ್ಕದ ಊರುನ ಗೊಲ್ಲರ ಪಾಳಯಂದ ಬಾವ ಗೂಡೆಂತೇಳ್. ಮತ್ತೆ ಸಂದರ್ಭಾನುಸಾರ ದ್ರೌಪದಿನ ಮನ್‌ಸ್‌ನ ಗೊತ್ತ್ ಮಾಡಿಕಂಡ್ ಮತ್ತೆ ನಿನ್ನ ಗುರ್ತು ಹೇಳ್. ಅಷ್ಟರ್‍ಲಿ ನಾನೂ ನನ್ನ ಅಣ್ಣ ತಮ್ಮಂದರ ಒಟ್ಟಿಗೆ ಬನ್ನೆಂತ ಹೇಳಿ ಕಳ್ಸಿತ್. ಹಾಂಗೆ ಸುಭದ್ರೆ ಅದ್ ಹಾಕಂಡಿದ್ದ ಆಭರಣಗಳೆಲ್ಲ ಮುಚ್ಚಿಕಂಡ್ ಒಂದು ಸಾಧಾರ್‍ಣ ಹಳ್ಳಿಗೂಡೆನಾಂಗೆ ಬಂದ್ ದ್ರೌಪದಿನ ಅಂತಃಪುರದ ಬಾಗ್‌ಲಿಲಿ ಬಂದ್ ನಿತ್ತತ್. "ಅವ್ವೋ"ಂತ ಕರ್ತ್. ದ್ರೌಪದಿ ಹೊರೆಗೆ ಬಾತ್. ಸುಭದ್ರೆ ಅದರ ಕಾಲಿಗೆ ನಮಸ್ಕಾರ ಮಾಡ್ತ್. ದ್ರೌಪದಿ "ಯಾರಮ್ಮ ನೀ"ಂತ ಕೇಳ್ತ್. "ನಂಗಿನ್ನೂ ಮೊದುವೆನೇ ಆತ್‌ಲೆ. ಹಾಂಗಿರ್ಕನ ನಾ ಯಾರಿಗೆ ಅಮ್ಮ ಆಕೆ ಹೇಂಗೆ ಸಾಧ್ಯ ತಾಯಿ? ನಾ ಕೊಂಕು ಮಾತಾಡ್ದೆಂತ ಕೋಪ ಮಾಡ್ಬಡಿ ತಾಯಿ, ನಾ ಇದ್ದ ಸಂಗ್ತಿ ಹೇಳ್ದೆ".

"ನಿನ್ನ ಮಾತ್‌ನ ಕೇಳಿರೆ ಕೋಪ ಬರೊಕೆ. ಆದರೆ ನಿನ್ನ ಮೋರೆ ನೊಡ್‌ಕನ ಒಂದು ಕೂಸುನ ಮೋರೆ ನೋಡ್ದಂಗೆ ಸಂತೋಸು ಆದೆ. ಹೋಗಲಿ ನಿನ್ನ ಹೆಸ್‌ರ್ ಏನ್? ಎಲ್ಲಿಂದ ಬಂದ? ನಿಂಗೆ ಬೇಕಾದೊವು ಯಾರಾರ್ ಒಳೊನೊ? ಯಾಕೆ ಬಂದ?

"ನನ್ನ ಹೆಸ್‌ರ್ ತಂಗಮ್ಮಾಂತ. ನನ್ನ ಅಣ್ಣಂದರ್, ತಂಗೆ, ತಂಗೆಂತ ಕೊಂಡಾಟಲಿ ಕರ್ದವೆ. ಅತ್ತಿಗೆಕ ತಮಾಸೆಲಿ, ತಂಗು ಮಂಗು, ಮಿಣ್ಕುಂತ ಕರ್ದ್ ಹಾಸ್ಯ ಮಾಡುವೆ. ನಾ ಪಕ್ಕದೂರುನ ಗೊಲ್ಲರ ಪಾಳ್ಯಂದ ಬನ್ನೆ. ಯಾರೋ ಹೇಳ್ದೊ, ದ್ರೌಪದಿ ಅಮ್ಮ ಐದ್ ಜೆನ ಗಂಡರ ಕಟ್ಟಿಕಂಡ್ ಅವರೆಲ್ಲರ ಸೇವೆ ಮಾಡಿಕೆ ಬಾರಿ ಬಂಗ ಬಂದವೆ. ಹಾಂಗೆ ಯಾರಾರ್ ಒಬ್ಬನ ಸೇವೆ ಮಾಡಿಕೆ ನಂಗೆ ಅವಕಾಶ ಕೊಟ್ಟವೆನೋಂತ ಕೇಳಿಕೆ ಬಂದೆ. ಅದಿಕೆ ದ್ರೌಪದಿ, "ಗಣ್ಮಕಳ ಸೇವೆಗೆ ಹೆಣ್ಮಕಳ ಇಸಿರೆ ಆವ ಕತನೇ ಬೇರೆ. ಬೇರೆ ಯಾವ ಕೆಲ್ಸ ನಿಂಗೆ ಗೊತ್ತುಟು?"ಂತ ಕೇಳ್ತ್. ಹಸ್-ಕರ್‌ಗಳಿಗೆ ಹುಲ್ಲು ನೀರ್ ಕೊಡುದು, ಕರ್‌ಗಳ ಮೇಸುದು ಇದೆಲ್ಲ ಮಾಡಿನೆ." "ನೋಡೊ- ನಿನ್ನ ಕೈ ತೋರು. ಅದಲ್ಲ-

ಎಡ್ಡ ಕೈ ತೋರ್ಸು! ನೋಡು ಈ ಗೆರೆ ಕಣ್ಣಿಲ್ಲಿ ಬರ್ದಾಂಗೆ ಹೇಳಿಕೊಟ್ಟದೆ. ನಿಂಗಿರುವ ರಾಜಲಕ್ಷಣನ. ಮತ್ತೆ ಈಗಣೇ ನೀ ಒಬ್ಬ ಮಹಾಪುರುಷನ ಕೈ ಹಿಡ್ದೂ ಆಗುಟು. ನಿನ್ನ ತಟವಟ ನನ್ನೊಟ್ಟಿಗೆ ನಡಿಯಕಿಲೆ. ನಿಜ ಹೇಳ್. ಯಾರ್ ಆ ನಿನ್ನ ಮನ್ಮಥ?" ದ್ರೌಪದಿ ಕೊಂಕು ನೆಗೆಲಿ ಕೇಳ್ತ್. ಆಗ ಸುಭದ್ರೆ ನಾಚಿಕೆಲಿ ಮೋರೆಲ್ಲ ಕೆಂಪಾಗಿ ಹೇಳ್ತ್–ಅಕ್ಕಾ, ನಾ ನೀವ್ಗೆ ತಂಗೆ ಆಕು. ನಮ್ಮ ಕೃಷ್ಣಣ್ಣನ ಅಪ್ಪಣೆ ಪ್ರಕಾರ ನಾ ಕುಂತಿ ಅತ್ತೆನ ಮೂರ್ನೇ ಮಜ್ಜ ಒಳೊಲೆ ಅವರೊಟ್ಟಿಗೆ ಬಂದೊಳೆ. ಅಣ್ಣ ಹಣ್ಣಾದಿನ ಕಣ್ಣಿಲ್ದ್ ದೊಡ್ಡ ಬಾವ ಹೇಳಿ ಕಣ್ಣಿಲ್ಸಿದ ಮೇಲೆ ಬಂದ್ ಒಳ್ದ ಕೆಲ್ಸನೆಲ್ಲ ನಡ್ಸಿಕೊಟ್ಟನೇಂತ ಹೇಳ್ಯೊಳೂ. "ಮತ್ತೆ ನೀ ಇಂಥ ಠಕ್ಕ್ ಎಲ್ಲ ಏಕೆ ಮಾಡ್ದ?" "ಮುಂದೆ ನಿಮ್ಮ ಮನ್ಸ್ ಹೇಂಗೇಂತ ನೋಡಿಕೆ ಹೀಂಗೆ ಮಾಡ್‌ಂತ ಅವೇ ಹಾಂಗೆ ಹೇಳಿ ಕಣ್ಣಿಲ್ಸಿದೊ."

"ಅದ್ ಹೋಗಣೆಲಿ, ಇಷ್ಟದಿನ ನಾ ಒಬ್ಬನೆ ಇದ್ದ್‌ನಂಗೆ ಬೇಜಾರಾಗಿತ್ತ್. ಸುಖದುಃಖ ಮಾತ್‌ಕತೆಗೆ ನನ್ನಾಂಗಿರೊವು ಯಾರೂ ಇಲ್ಲೇಂತ. ಈಗ ನೀ ನಂಗೆ ಸಿಕ್ಕಿ ತುಂಬ ಸಂತೋಸಾತ್. ಬಾ ನನ್ನ ಗಂಡ ತಂದ ಈ ನವ ನಿಧಿನ ನಾ ಒಮ್ಮೆ ಪೂರ್ಣ ತೊಬ್ಬಿಕಣೆಂ"ತ ಹೇಳಿ ಗಟ್ಟಿ ತೊಬ್ಬಿಕಣ್ತ್. ಅಪ್ಪರ್ಲಿ ಐದ್ ಜೆನ ಸೋದರರ್ ನೆಗಾಡಿಕಣ್ಣಿಂಡ್ ಬಂದೆತ್ತಿದೊ. ಸುಭದ್ರೆ ಯುಧಿಷ್ಠರಂಗೂ ಭೀಮಂಗೂ ಅವರ ಪಾದ ಮುಟ್ಟಿ ನಮಸ್ಕಾರ ಮಾಡ್ತ್. ನಕುಲ ಸಹದೇವಣ್ಣಿರ್ ಕೈ ಮುಗ್ದ್, 'ಹೊಸ ಅತ್ತಿಗೆಗೆ ಸ್ವಾಗತಂತೇಳಿ ನೆಗಾಡ್ದೊ. ಮತ್ತೆ ಎಲ್ಲಣ್ಣಿವೂ ಸಂತೋಸುಂದ ಕುಂತಿನ ನೋಡಿಕೆ ಹೋದೊ.

ಕುಂತಿ ಎಲ್ಲ ಸಮಾಚಾರ ಕೇಳಿ, ನೋಡಿ ಸಂತೋಸುಪಟ್ಟಣ್ತ್. ಹೆಣ್ಮಕಳಿಗೆ ತಮ್ಮ ತೊವ್ರುಮನೆ ಸಂಬಂಧ ಯಾಗೋಳೂ ನಡಿಯೊಕುಂತ ತುಂಬ ಆಸೆ. ಮದುವೆ ನಡಿಯಕನ ಮೊದ್‌ಮಕ್ಕ ಮನೆ ಒಳೆಗೆ ಹಸೆಲಿ ಕುದ್ದಣ್ಣಿವು ಅಲ್ಲಿಂದೆದ್ದ್ ಹೊರಗೆ ಬಾಕನ ಬಾಗಲ್ ತಡಿಯುದುಂತೇಳ್ವ ಒಂದು ಸ್ವಾರಸ್ಯದ ಕಾರ್ಯ ಕ್ರಮ. ಮೊದೋಳಿಗೆ ಗೂಡೆನ ಅಣ್ಣ ತಮ್ಮಂದಣ್ಣಿರೊ ಅಕ್ಕ ತಂಗೆಕಳೋ ಬಾಗ್‌ಲಿಲಿ ನಿತ್ತ್ 'ನಾವು ಕೇಳುದರ ಕೊಟ್ಟವೆ. ಅಥವಾ ನೀವು ಕೊಡುದರ ತಕಂಡವೆಂತೇಳುವ ಶರ್ತಕ್ಕೆ ಒಪ್ಪಿಕಂಡರ ಮಾತ್ರ ನಿಮ್ಮ ಹೊರೆಗೆ ಹೋಕೆ ಬುಟ್ಟವೆ. ಇಲ್ಲರೆ ಬುಡಿಕಲ್ಲೆಂತ ಹೇಳಿ ಅಡ್ಡ ನಿತ್ತವೆ. ಅವು ಅಂದರೆ ಹೊಸ ಮೊದ್‌ಮಕ್ಕ ಹೇಳಕಾದ್ದ್ ಇಷ್ಟ್. "ಹೆಣ್ಣ್ ಹುಟ್ಟಿರೆ (ನಾವು) ನೀವ್ಗೆ (ನಿಮ್ಮ ಮನೆನ ಗಣ್ಣಿಂಡ್‌ಗೆ) ಕೊಟ್ಟವೆ. (ನಾವ್ಗೆ) ಗಣ್ಣಿಂಡ್ ಹುಟ್ಟಿರೆ ನೀವು (ನಮ್ಮ ಗಣ್ಣಿಂಡ್‌ಗೆ) ನಿಮ್ಮ ಹೆಣ್ಣ್‌ನ ಕೊಡೊಕುಂತ ಹೇಳಿರೆ ತಡೆ ಬುಟ್ಟವೆ. ಹೊಸ್ಬರಿಗೆ ನಾಚಿಕೆಂದಾಗಿ ತುಂಬ ಹೊತ್ತು ಬಾಯೆ ಬುಡ್ದುಲೆ. ದೊಡ್ಡವು ಸಣ್ಣಣ್ಣಿವು ಎಲ್ಲ ಸೇರಿಕಣ್ಣಿಂಡ್, ಎರ್‌ಡ್ ಪಕ್ಷಗ ಆಗಿ, ವಾದ, ಪ್ರತಿವಾದಗ ನಡ್ದವೆ. ಇದೊಂದು ಬಾರಿ ವಿನೋದ ಪ್ರಸಂಗ ಆದರೂ ಹಿಂದೆ ಅದೊಂದು ವಾಗ್ದಾನ; ಸೋದರದ ಹಕ್ಕ್‌ಂತ ಮುಖ್ಯವಾಗಿತ್ತ್.

ಹಾಂಗೆ ತನ್ನ ಸೋದರ ಸೊಸೆನೇ ಈಗ ತನ್ನ ಮನೆಗೆ ಬಾವಾಂಗೆ ಆತಲೇಂತ ಹೇಳಿ ಕುಂತಿನ ಹೃದಯ ಹಿಗ್ಗಿತ್. ಎಲ್ಲ ಬಳಗದವೂ ಒಟ್ಟಿಗೆ ಸೇರಿಕಂಡ್ ಸಂತೋಸುಲಿ ಮಾತಾಟ್‌ಕ್‌ಂಡ್ ಇದ್ದೊ. ಕುಂತಿ ತೊವ್ರು ಮನೆವರ್ನೆಲ್ಲ ಒಬ್ಬೊಬ್ಬರ್ನೇ ನೆನ್ಸಿಕಣ್ಣಿಂಡ್

ಅವು ಹೇಂಗೊಳೊ ಇವು ಹೇಂಗೊಳೊಂತ ಕೇಳಿಕಣ್ಂಡ್ ಇತ್ತ್. ಯುಧಿಷ್ಠಿರ ಹೇಳ್ತ್. ಕೃಷ್ಣನ ದಯ ನಮ್ಮ ಮೇಲೆ ಯಾಗೋಳು ತುಂಬ ಇದ್ದಣೆದೇ. ಈಗ ಅವನ ತಂಗೆನೇ ನಮ್ಮ ಮನೆಗೆ ಸೇರ್ದ ಬಾಂಧವ್ಯಂದ ಅದ್ ಇನ್ನೂ ವೃದ್ಧಿ ಆತ್. ಇನ್ನ್ ಅರ್ಜುನಂಗೂ ಸುಭದ್ರೆಗೂ ಶಾಸ್ತ್ರೋಕ್ತವಾಗಿ ಮೊದುವೆ ಮಾಡೊಕು. ಹಾಂಗೆ ಮೊದುವೆಗೆ ಒಂದು ಒಳ್ಳೆ ದಿನ ನಿಶ್ಚಯ ಮಾಡಿ, ಬಲರಾಮ, ಕೃಷ್ಣ ಮತ್ತೆ ಯಾದವ ಪರಿವಾರಕ್ಕೆಲ್ಲ ಆಮಂತ್ರಣ ಕಳ್ಳೋನೊಂತ ಹೇಳ್ತ್. ಹಾಂಗೆ ಮಾಡ್ ಮಜ್ಜ. ಈ ಮಂಗಳ ಕಾರ್ಯ ಬೇಗ ನಡಿಯಣಲಿಂತ ಕುಂತಿ ಹೇಳ್ತ್.

ಯುಧಿಷ್ಠಿರ ಆಮಂತ್ರಣ ಪತ್ರಿಕೆ ಬರ್ದ್ ಬಲರಾಮ, ಕೃಷ್ಣ ಮತ್ತೆ ಸಮಸ್ತ ಬಂಧು ಪರಿವಾರದೊಷ್ಕೆ ದೂತರ ಮೂಲಕ, ಬಾಗಿನ ಸಮೇತ ಕಳ್ಳಿಕೊಟ್ಟಣತ್. ನಿಶ್ಚಿತ ದಿನದಂದ್ ಬಲರಾಮ, ಕೃಷ್ಣ ಇಬ್ರೂರೂ ಯಾದವ ಬಂಧು ಪರಿವಾರದೊಟ್ಟಿಗೆ ಬಂದ್ ಸೇರ್ದೊ. ಪಾಂಡಣವರ್ ಅವರ ಪ್ರೀತಿಂದ ಎದ್‌ರ್ ಹೋಗಿ ಹಿರಿ–ಕಿರಿಯ ತಾರತಮ್ಯಲಿ, ನಮಸ್ಕಾರ ಮಾಡಿ ಸ್ವಾಗತ ಮಾಡಿ ಅರಮನೆಗೆ ಕರ್ಕಂಡ್ ಬಂದ್, ಅವರ ಸ್ನಾನ, ಪಾನಾದಿಗಳಿಗೆ ಏರ್ಪಾಟ್ ಮಾಡ್‌ದೊ.

ಹತ್ತ್ ದಿನ ಬಂಧು ಬಳಗದೊವು ಎಲ್ಲ ಮಾತ್‌ಕತೆ, ಊಟೋಪಚಾರ, ಆಟ ವಿನೋದಂತ ಸಂತೋಸಲಿ ದಿನ ಕಳ್ದೊ. ಮತ್ತೆ ಜೋಯಿಸಣರ್ ಗ್ರಹಗತಿಗಳ, ವಧೂವರರ ತಾರಾಬಲನೆಲ್ಲ ನೋಡಿ ಮೊದುವೆಗ ದಿನ, ಮುಹೂರ್ತ ಎಲ್ಲ ನಿಶ್ಚಯ ಮಾಡ್ದೊ. ಆ ದಿನ ಬೊಳ್ಗನೆ ಜೋಯಿಸಣರ್ ರಂಗವಲ್ಲಿ ಬರ್ದ್. ಮಂತ್ರ ಹೇಳಿಕಣ್ಂಡ್ ಹೋಮ ಹವನಗಳ ಮಾಡ್ದೊ. ಮಂಗಳ ಸ್ನಾನ ಮಾಡಿ ಅಲಂಕಾರ ಮಾಡಿಕಣ್ಂಡ್ ಬಂದ ಮೊದ್‌ಮಕ್ಕ ಒಬ್ಬಂದೊಬ್ಬ ಹಾರ ಬದ್‌ಲ್ಸಿಕಣ್ಂಡ್ ಕುದ್ದೊವರ ಕೈಲಿ ಬೇರ ಬೇರೆ ತರದ ಆಹುತಿಗಳ ಹೋಮ ಕುಂಡಕ್ಕೆ ಹಾಕ್ಸಿದೊ. ಕೃಷ್ಣ ಧಾರೆಹೊಯ್ತ್, ಮಾಂಗಲ್ಯಧಾರಣೆ ಆತ್. ಇಬ್ಬರ ಸೆರ್‌ಂಗ್‌ಗೆ ಗಣ್ಂಟ್ ಹಾಕಿ, ಹೋಮ ಕುಂಡಕ ಸುತ್ತ್ ಬಂದ್, ಮನೆ ಒಳಗೆ ಹೋಗಿ, ಹಿರಿಯೊವು ಹಸೆ ಮೊಂದ್ರಲಿ ಕುದ್ದ್‌ರ್ಸಿದೊ. ಬೊಕ್ಕ ಬಾಯೆನ ಅಜ್ಜಿಕ ಕೆಲಣವು ಕೆಜಿನ ಓಲೆಗಳ ಆಡ್ಸಿಕಣ್ಂಡ್ "ಆರತಿಯೆತ್ತಿರೆ ನಾರಿಯರೆಲ್ಲರು ಮೂರುಲೋಕವ ಗೆದ್ದ ಧೀರ ಕುಮಾರಗೇ। ನಾರಿಯ ಕದ್ದು ತಂದವಗೆ॥ ಪುರುಷನ ಮೋಹಿಸಿ, ತವರಿಗೆ ತಿಳಿಸದೇ ಕದ್ದೋಡಿ ಬಂದಂಥ ರಾಜೀವ ಮುಖಿಗೆ॥ ಶೋಭಾನವೇ ಶುಭ ಶೋಭನವೇ॥ ಹೀಂಗೆ ಅವರ ಕೂರೊ ಕೂರೊ ದಣನಿಲಿ ಕೆಮ್ಮಿ ಕಣ್ಂಡ್ ಸೋಬನೆ ಹೇಳ್ದೊ. ಬುಟ್ಟರೆ ಈ ಅಜ್ಜಿಕ ನಮ್ಮ ಮಾನ ಮೊರ್ಯಾದೆ ತೆಗ್ದವೆಂತ ನೆನ್ಸಿ ಅರ್ಜುನ ಅವರ ಆರತಿ ತಟ್ಟೆಗೆ ನಾಲ್ಕೈದ್ ಚಿನ್ನದ ನಾಣ್ಯಗಳ ಹಾಕಿತ್. ಅಜ್ಜಿಕಳ ಬಾಯಿ ಅಷ್ಟಗಲ ಆತ್. ಎಷ್ಟಂತೇಳಿರೆ ಅವರ ಎರ್ಡ್ ಕಡೆ ತುಟಿಗ ಅವರ ಎರ್ಡ್ ಕಿವಿನಮುಟ್ಟುವಷ್ಟ್ ಗೋಂಕುರು ಕಪ್ಪೆಗ ಬಾಯಿ ಬುಟ್ಟಾಂಗೆ ಕಾಂಬತಿದ್ದೊ.

ಮತ್ತೆ ವಾಡಿಕೆನಾಂಗೆ ಬಾಗ್‌ಲ್ ತಡಿಯುವ ವಿನೋದದಾಟ ನಡ್ದ್ ಅವು ಹೊರಗೆ ಬಂದ್ ಎಲ್ಲವರೊಟ್ಟಿಗೆ ಸೇರ್ದೊ. ಮತ್ತೆ ಹಲ್ಲ ಹೊತ್ತುಲಿ ಆರತಕ್ಷತೆ ನಡ್ತ್. ಮೊದುವೆಗ

ಬಂದಿದ್ದ ನಂಟ್ರ್ ಇಷ್ಟರ್ ಎಲ್ಲ ಮೂದ್ ಮಕ್ಕಳಿಗೆ ಉಡಿಗೆರೆ ಕೊಟ್ಟ್. ಸೇಸೆ ಹಾಕಿ ಆಶೀರ್ವಾದ ಮಾಡ್ದೊ. ಇದೆಲ್ಲ ಮುಗ್ದ ಮೇಲೆ ಬಂದ್ ಸೇರ್ದ ಬಂಧು ಬಳಗವಕ್ಕೆಲ್ಲ ಭರ್ಜರಿ ಔತಣ ಆತ್. ಒಂದು ಕಡೆ ಬ್ರಾಹ್ಮಣರ ಪಜ್ತಿ ಕುದ್ದಿತ್ತ್. ಸೊಂಟಂದ ಮೇಲೆ ಬೋಳಾಗಿ ಬೆಗ್ರ್ ಉದ್ದಿಕಂಬಕೆ ಒಂದು ವಸ್ತ್ರನ ಹೆಗ್ಲ್‌ನ ಮೇಲೆ ಹಾಕಂಡ್, ಜನಿವಾರನ ಕೈಲಿ ಆಗಾಗ ಎಳ್ಕಣಂಡ್, ಹೊಟ್ಟೆ ತುಂಬಿತೋಂತ ಗೊತ್ತಾಕೆ, ಹೊಟ್ಟೆಸುತ್ತ ಒಳ್ಂಗಿದ ಒಂದು ಬಾಳೆನಾರ್‌ನ ಕಟ್ಟಿಕಣಂಡ್ ಅಕ್ಕಿ ಅಥವಾ ಭತ್ತದ ಮುಡಿ ಕಟ್ಟಿಕೆ ಕಲ್ಲೆ ಹಾಕಿದಾಂಗೆ ಉಂಬಕೆ ಸುರುಮಾಡುವೊ ಬಾಳೆಲೆಗೆ ಪಾಯ್ಸನ ಇಕ್ಕುದೇ ತಡ, ಸರ್ರ್ ಬುರ್ರ್‌ಂತ ಸುರ್ದ್ ಮಳೆಗಾಲಲಿ ಕಪ್ಪೆಗ ಸದ್ದ್ ಮಾಡ್ದಾಂಗೆ ಸದ್ದ್ ಮಾಡಿಕಣಂಡ್ ಊಟ ಸುರುಮಾಡುವೊ ಹೋಳಿಗೆ ಲಾಡ್‌ಂತ ಗಂಟ್ಲೆಗೆ ಬಾಕನ ಮುಟ್ಟ ತಿಂದ್, ಬಾಳೆನಾರ್ ಟಪ್ಪಂತ ತುಂಡಾಕನ ಊಟ ನಿಲ್ಸಿ ಕೈ ತೊಳಿವೊ. ಊಟ ಆದ ಮೇಲೆ ಬಾಳೆ ಹಣ್ಣ್ ತಿಂಬಕೆ ಕೊಟ್ಟರೆ ಇಷ್ಟ್ ಸೆರೆ ಇದ್ದಿದ್ದರೆ ನಾ ಆಗಳೇ ಇನ್ನೊಂದು ಹೋಳಿಗೆ ತಿಂದಿರುವೆಂತೇಳಿ ಹಕ್ಕಲಿದ್ದವರೆಲ್ಲ ನಗಾಡ್ಸುವೊ.

ಮೊದುವೆ ಸಮಾರಂಭ ಎಲ್ಲ ಮುಗ್ದ್ ಹಜ್ಜಾದಿನ ಕಳ್ದ್ ಬಲರಾಮನೂ ಅವನ ಪರಿವಾರವೂ ದ್ವಾರಕಗೆ ಹೊರ್ಟೊ. ಯುಧಿಷ್ಠಿರ ಅವುಕೆಲ್ಲ ತರತರದ ಉಡುಗೊರೆಗಳ ಕೊಟ್ಟ್ ಸಂತೋಸ ಪಡ್ಸಿ ಕಳ್ಸಿಕೊಟ್ಟತ್. ಕೃಷ್ಣ ಅವನ ಪರಿವಾರದೊಟ್ಟಿಗೆ ಇಂದ್ರಪ್ರಸ್ತಲೇ ನಿತ್ತತ್. ಇದರ್‌ಂದಾಗಿ ಸುಭದ್ರೆಗೂ ಒಮ್ಮೆಂದೊಮ್ಮೆಗೇ ತೊವ್ರುಮನೆನ ಸಂಪರ್ಕ ಪೂರ ನಿತ್ತ್ ಹೋಗದಾಂಗೆ ಆಗಿ ಸಂತೋಸುಲಿ ಇರುವಾಂಗೆ ಆತ್. ಅದೂ ಅಲ್ಲದೆ ಪಾಂಡವರಿಗೂ ಕೃಷ್ಣಂತೇಳಿರೆ ತುಂಬ ಇಷ್ಟ. ಕೃಷ್ಣಂಗೂ ಪಾಂಡವರ್‌ಂತೇಳಿರೆ ಇಷ್ಟ. ಓಂಗೆ ಕೃಷ್ಣ ಇಂದ್ರಪ್ರಸ್ತಲಿ ನಿತ್ತದ್ ಇತ್ತಂಡದವ್ಕೂ ಸಂತೋಸುನ ಪಿಸಯನೇ ಆತ್.

ಓಂಗೆ ಸಂತೋಸುಂದ ದಿನ ಕಳಿಯಕನ ಒಂದು ದಿನ ವನಪಾಲಕ ಬಂದ್ ಅರ್ಜುನಂಗೆ ಹೇಳ್ತ್. ಕಾಡ್‌ಲಿ ಮುರ್ಗಂಗ ತುಂಬಿ ಹೋಗೊಳೊ. ಇದರ್‌ಂದಾಗಿ ಕಾಡಿಗೂ ಹಾಳ್; ನಾಡಿಗೂ ಹಾಳ್. ಹಾಂಗಾಗಿ, ವರ್ಷವೂ ರಾಜರ್‌ಗ ಬೇಟೆಯಾಡಿಕೆ ಹೋಗಿ ಬೇಟೆಯಾಡಿ ಮುರ್ಗಗಳ ಸಂಖ್ಯೆನ ಹತೋಟಿಗೆ ತಾತಿದ್ದೊ. ಅದೂ ಅಲ್ಲದೆ ಓಡುವ ಮುರ್ಗಕ್ಕೆ, ಹಾರುವ ಹಕ್ಕಿಗೆ, ಗುರಿ ಹೊಡಿವ ಜಾಣ್ಮೆ, ಮತ್ತ ಮುರ್ಗಂಗಳ ಕೋಪ ತಾಪ ಸ್ವಭಾವಗಳ ಎಲ್ಲ ನೋಡಿಕಣಾಕ್. ಕಾಡ್‌ಲಿ ಇಳ್ದ್ ಹತ್ತಿ ಓಡಾಡುದರ್‌ಂದ ಸರ್‌ರದ ಕೊಬ್ಬು ಕರ್ಗಿ, ಸರ್‌ರಲಿ ಒಳ್ಳೆ ಲವಲವಿಕೆ ಉಂಟಾದು. ಅದೂ ಅಲ್ಲದೆ ಪ್ರಕೃತಿ ಸೌಂದರ್ಯನ ನೋಡಿ ಆನಂದ ಪಡಕ್. ಬೇಟೆನ ಒಂದು ವ್ಯಸನಂತ ಹೇಳೊವೂ ಒಳೊ. ಆದರೆ ಅದ್ ಪ್ರಯೋಜನ ಇರುವ ಒಂದು ವ್ಯಸನ. ಓಂಗಾಗಿ ನೀವು ಬೇಟೆಗೆ ಹೊರ್ಡ್ದು ಒಂದು ಅಗತ್ಯಂತ ನನ್ನ ಬಿನ್ನಹ. ಹಾಂಗೆ ನೀವು ಬಂದರೆ, ಮೃಗಗ ಎಲ್ಲೆಲ್ಲಿ ಇದ್ದವೆ, ಅವು ಹೋಪ ದಾರಿ, ದಾಟುವ ಪೂರಿ ಎಲ್ಲ ತೋರ್ಸಿಕೊಡುವಂತೆಲ್ಲ ಹೇಳ್ತ್. ಆಗ ಅರ್ಜುನ ನಾನೂ ನನ್ನ ಬಾವ ಕೃಷ್ಣನೂ ಬೇಟೆಗೆ ಬಂದವೆ. ನಮ್ಮ ಪರಿವಾರಕ್ಕೆ ತಕ್ಕ ಬಿಡಾರಗಳೂ, ಬೇಕಾಗುವ ಸಾಮಾನ್ ಸರಂಜಾಮುಗಳೂ ಎಲ್ಲ ಏರ್ಪಾಡ್

ಮಾಡ್‌ಂತ ಹೇಳ್. ಹಾಂಗೇ ಮಾಡಿ ಎಲ್ಲ ತಯಾರಾದ ಮೇಲೆ ಸುದ್ದಿ ಹೇಳಿಕಳೀಸ್ನೆಂತ ಹೇಳಿ ಅಂವ ಹೋತು.

ಮತ್ತೆ ಕೃಷ್ಣನೂ ಅರ್ಜುನನೂ ಅವರವರ ಅಂತಃಪುರ ಪರಿವಾರ, ಪರಿಜನ ಸಮೇತ ಬೇಟೆಗೆ ಪೊರ್ಟ್ರೊ. ಅಂತಃಪುರದ ಹೆಣ್ಮಕಳಿಗೆಲ್ಲ ವನವಿಹಾರ ಮಾಡುವ ಉತ್ಸಾಹಂದ ಬಾರಿ ಕುಸೀಲಿ ಹೊರ್ಟ್ರೊ. ಪಲ್ಲಕಿಗಳ ಸಾಲ್ ಸಾಲ್ ಹೊರ್ಟ್ರೊ ಕಾಡ್‌ಲಿ ಏರ್ಪಾಡ್ ಮಾಡ್ದ ಬಿಡಾರಗಳ್ಲಿ ಸಂಭ್ರಮಂದ ತಳವೂರ್‍ದ್ರೊ. ವನಪಾಲಕನ ಅಪ್ಪಣೆ ಪ್ರಕಾರ ಬೇಡರ ಪಡೆಗ ಎಲ್ಲೆಲ್ಲಿ ಮುರ್ಗಂಗ ಒಳೊಂತ ಗೂತ್ತ್ ಮಾಡಿ, ಅವರವರ ನಾಯಿಗಳ ಹಿಡ್ಕಳೆಂಡ್, ಅಲ್ಲಲ್ಲಿಂದ ಮುರ್ಗಂಗಳ ಎದ್ದ್‌ಬ್ಸಿ, ನಿಶ್ಚಯ ಮಾಡ್ದ ದಿಕ್ಕ್‌ಲಿ ಅವು ಓಡುವಾಂಗೆ ಮಾಡಿ, ಅವು ಬಾವ ಪೊರಿಲಿ, ಕುದುರೆಲಿ ಕುದ್ದ್‌ಕಳೆಂಡ್ ತಯಾರಾಗಿದ್ದ ಅರ್ಜುನಂಗೂ ಕೃಷ್ಣಂಗೂ ಬಾಣ ಹೊಡಿಯಕೆ ಅನುಕೂಲ ಆತ್.

**ಮಕ್ಕ:**

ತಾತ ! ಹೀಂಗೆ ಪಾಪದ ಮುರ್ಗಂಗಳ ಕೊಲ್ಲುದು ಭಾರಿ ಹಿಂಸೆ ಅಲ್ರೊ? ಆಯುಧ ಹಿಡ್ಕಂಡ ಮೊಂಯಿಸ ಆಯುಧ ಇಲ್ಲದ ಮೂಕ ಪ್ರಾಣಿಗಳ ಕೊಲ್ಲುದುಂತೇಳಿರೆ ದೋಸ ಅಲ್ಲೋ.

**ತಾತ:**

ನೀವು ಹೇಳುದು ಒಂದು ರೀತಿಂದ ಸರಿ. ಹಿಂದೆನ ಜೆನಕ್ಕೆ ಈ ಹಿಂಸೆನ ಬಗ್ಗೆ ಗೊಡವೆ ಇತ್ತ್‌ಲೆ. ಮುಖ್ಯವಾಗಿ ಈ ಬೇಟೆಗಳ ಉದ್ದೇಶ ಇದ್ದದ್ ಪ್ರಕೃತಿನ ಸಮತೋಲನ ಕಾದ್‌ಕಂಬಕೆ. ಮುರ್ಗಂಗಳ ಸಂಖ್ಯೆ ಹೆಚ್ಚಿರೆ, ಸಸ್ಯಾಹಾರಿ ಮುರ್ಗಂಗ ಆದರೆ ಒಂದು ಪ್ರದೇಶಲಿ, ಹುಲ್ಲು-ನೀರಿಗೆ ಕೊರತೆ ಉಂಟಾದೆ. ಆಗ ಆ ಪ್ರಾಣಿಗಳಿಗೆ ಆಹಾರ ಸಿಕ್ಕದೆ ಹೋದರೆ ಅವೇನು ಮಾಡುವೊ? ಅರೆ ಜೀವ ಆಕಂಡ್ ದಿನ ದಿನ ಸಾಯುವ ಬದ್‌ಲ್ ಒಮ್ಮೆಗೇ ಸಾಯುದು ಮೇಲಲ್ಲೊ?

**ಮಕ್ಕ:**

ಹಂಗರೆ ಜನ ಸಂಖ್ಯೆ ಅಧಿಕ ಆಗಿ, ತಿಂಬಕೆ ಆಹಾರ ಇಲ್ಲದೆ ಕುಡಿಯಕೆ ನೀರಿಲ್ಲದೆ ಅವ್ರು ನಿತ್ಯ ಸಾಯುತ್ತಿರುದರ್‌ಂದ ಒಮ್ಮೆಗೇ ಸಾಯಲೀಂತ ಬಾಂಬು ಹಾಕಿಯೋ, ವಿಷವಾಯು ಬುಟ್ಟೋ ಕೊಂದು ಬುಟ್ಟರೆ ಒಳ್ಳೆದ್‌ಂತ ನೆನ್ಸಿಕಾದೋ?

**ತಾತ:**

ಜನಸಂಖ್ಯೆ ನಿಯಂತ್ರಣಂತೇಳ್ದು ಇರಕಾದ್ದ್ ತುಂಬ ಅಗತ್ಯ. ಅದರ ಹೇಂಗೆ ಸಾಧ್ಯ ಸೋಕುಂತೇಳ್ದು ಮುಖ್ಯ. ಈ ಕೆಲ್ಸನ ತೀರ್ದ ಮಟ್ಟಿಗೆ ಪ್ರಕೃತಿನೇ ಮಾಡ್ತೆ. ಸಾಂಕ್ರಾಮಿಕ ರೋಗಗ ಹಬ್ಬುವೆ. ಜಲ ಪ್ರಳಯ, ತ್ಸುನಾಮಿ, ಅನಾವೃಷ್ಟಿ, ಭೂಕಂಪ, ಇಂತೊವೆಲ್ಲ ಜನ ಸಂಖ್ಯೆ ಕಡಿಮೆಯಾಗುವ ಹಾಂಗೆ ಕಾಲಂದ ಕಾಲಕ್ಕೆ ನಡ್ದವೆ. ಇದ್ ಪ್ರಕೃತಿ ಉಪಯೋಗಿಸುವ ತಂತ್ರ. ಇವಲ್ಲದೆ, ಮೊಂಯಿಸರೇ ಮಾಡಿಕಂಬ ಕೆಲವು ಘಟನೆಗಳೂ ನಡ್ದವೆ. ಮತ-ಪಂಥಗಳ ಭೇದಂದ, ಮೊಂಯಿಸ ಮೊಂಯಿಸರೊಳಗೆ ಕಲಹ-

ಹೊಡ್ದಾಟಗ ನಡ್ದ್ ರಕ್ತ ಪಾತ ನಡ್ದದೆ. ರಾಜಕೀಯ ದುರಾಸೆಂದ, ನೆಪೋಲಿಯನ್, ಹಿಟ್ಲರ್‌ನಂತವರ್‌ಂದಾಗಿ, ಯುದ್ಧಗ ನಡ್ದ್ ಕೋಟಿ ಕೋಟಿ ಸಂಖ್ಯೆಲಿ ಜೆನಂಗ ಸತ್ತೊ. ಕಾಡ್ ಕಿಚ್ಚ್ ಹಬ್ಬುಕನ, ಹಸಿ, ಒಳ್‌ಂಗೆಲ್ ಎಲ್ಲ ಹೊತ್ತಿದೆ. ಹಾಂಗೆ ಇಂಥ ಯುದ್ಧಲಿ ಒಳ್ಳೆವು, ಕೆಟ್ಟೆವುಂತಿಲ್ಲದೆ ಎಲ್ಲವೂ, ಏನೊಂದು ತೊಪ್ಪು ಮಾಡದದೆವೂ ಸಾಯಕಾದೆ. ಇದರ್‌ಲ್ಲಿ ಕರುಣೆಂತೇಳುದಕೆ ಎಡೆ ಇಲ್ಲೆ. ಎಷ್ಟೋ ಸಾವಿರ ಲಕ್ಷ ಸಂಖ್ಯೆಲಿ ಜ್ಯೂಜನಾಂಗದ ಜೆನರ ಗ್ಯಾಸ್ ಛೇಂಬರಿಗೆ ಹಾಕಿ ಹಿಟ್ಲರ್ ಕೊಲ್‌ಸಿತ್. ಈಗ ಭಯೋತ್ಪಾದಕರ್‌ಂತ ಒಂದು ವರ್ಗ ಸುರಾಗುಟು. ಇವ್ಕೆ ಅಮಾಯಕ ಜೆನಂಗಳ ಗೊತ್ತಾಗದ ಹಾಂಗೆ ಕೊಲ್ಲಿಕೆ ತುಂಬ ಆನಂದ. ಇದೀಗ ನಮ್ಮ ದೇಸಲಿ ಮಾತ್ರ ಅಲ್ಲ, ಜಗತ್ತ್‌ನ ಎಲ್ಲ ಕಡೆಲೂ ಉಟ್ಟು ಅದ್ ಹೊರೆಗೆನೊವ್ಕೆ ಗೊತ್ತಾದ್ದ್ ಒಸಾಮಾ ಬಿನ್ ಲಾಡೆನ್ ಮಾಡ್ದ ಅನಾಹುತಂದ. ಬಹುಶಃ ಹಿಂದೆನಾಂಗೆ ದೊಡ್ಡಯುದ್ಧ ಒಂದು ಪ್ರಪಂಚಲಿ ನಡ್ದರೆ, ಈ ಹಿಂಸಾನಂದರ ಕಿರುಕುಳ ಇಲ್ಲದಾದೆನೋಂತ ಒಂದು ಸಂಸಯ ನಂಗೆ. ಆದರೆ ಈಗ ಬೇರೆ ಬೇರೆ ರಾಜ್ಯಗ ತಯಾರ್ ಮಾಡಿ ಇಸಕಂಡಿರುವ ಮಾರಣಾಸ್ತ್ರಗಳ ಎಲ್ಯಾರ್ ಪ್ರಯೋಗಿಸಿ ಬುಟ್ಟರೆ ಇಡೀ ಮನುಕುಲ ಮಾತ್ರ ಅಲ್ಲ ಎಲ್ಲ. ಜೀವ ಜಗತ್ತೇ ನಾಶ ಆಗಿ, ಭೂಮಿ ಒಂದು ಸತ್ತ ಗ್ರಹ ಆಗಿ ಬುಡುದು.

**ಮಕ್ಕ:**

ಕೇಳಿಕನೇ ಎದೆ ನಡ್ಗಿದೆ ತಾತಾ. ಈ ಮೊಂಯಿಸರಿಗೆ ದೇವ್ರು ಒಳ್ಳ ಬುದ್ದಿ ಕೊಡಿಕಿಲೆನೋ?

**ತಾತ:**

ನಾವೂ ಹಾಂಗೇ ಪ್ರಾರ್ಥನೆ ಮಾಡೊನೊ. 'ಸರ್ವೇ ಜನಾಃ ಸುಖಿನೋ ಭವಂತು'ತೇಳ್ದು ಅನಾದಿ ಕಾಲಂದಲೇ ನಮ್ಮೊವು ಮಾಡ್ದ ಪ್ರಾರ್ಥನೆ. ಆದರೆ ಇನ್ನೂ ಅದಿಕೆ ಫಲಬಾತ್‌ಲೆ. ಜೆನಕ್ಕೆ ಮಾತ್ರ ಅಲ್ಲ ಸಕಲ ಜೀವ ಜಂತುಗಳಿಗೂ ಸುಖಸಿಕ್ಕಲೀಂತ ನಾವೊಂದು ಗೆರೆನ ಸೇರ್‍ವೊನೊ. ಇನ್ನ್ ಹಿಂದೆನ ವಿಷಯನ ನೋಡೊನೊ.

ಕೃಷ್ಣನೂ ಅರ್ಜುನನೂ ಹಲವು ಮುರ್ಗಂಗಳ ಬಾಣ ಹೊಡ್ದ್ ಕೊಂದ್ ಹಾಕಿದೊ. ಕ್ರೂರ ಮುರ್ಗಂಗಳೂ ಇದ್ದೊ. ಸಾದು ಮುರ್ಗಂಗಳೂ ಇದ್ದೊ. ಒಂದು ಸಾರೆಜಂಗೆ ಗುರಿ ಇಸ್‌ಕನ ಅದರ ಕಣ್ಣ್ ತನ್ನ ಪ್ರೇಯಸಿನ ಕಣ್ಣ್‌ನ ಹೋಲಿಕೆ ಉಟ್ಟುಂತ ಬಾಣನ ಇಳ್ಸಿತ್. ಕೋರೆ ಬಂದ ಕಾಡ್ ಹಂದಿಯೊಂದು ಬೇಡರ ಅತ್ತ ಇತ್ತ ಚದರ್‌ಸಿ, ಅವರ ನಾಯಿಗಳ ಕರ್‍ಳ್ ಹೊರೆಗೆ ಬಾವಾಂಗೆ ಸೀಳಿ ಇಟ್ಟ್ ಬಾಕನ ಅರ್ಜುನ ಒಂದೇ ಬಾಣಲಿ ಅದರ ತಲೆಂದ ಬೀಲದ ವರೆಗೆ ಸೀಳಿ ಬೀಳ್‌ಸಿತ್. ಅದಿಕೆ ಕೃಷ್ಣ 'ಶಭಾಸ್'ಂತ ಹೇಳ್ತ್. ಹುಲಿಯೊಂದು ಬಾಯಿ ಬುಟ್ಟ್‌ಕಂಡ್ ಗುರುಗುಟ್ಟಿಕಂಡ್ ಬಾಕನ ಕೃಷ್ಣ ಅದರ ಬಾಯೆಗೆ ಒಂದು ಬಾಣ ಹೊಡ್ತ್. ಅದರೊಟ್ಟಿಗೆ ಅರ್ಜುನ ಬುಟ್ಟ ಬಾಣ ಅದರ ಅಳ್ಳೆಗೆ ಒಂದು ಪಕ್ಕಂದ ತಾಂಗಿ ಇನ್ನೊಂದು ಪಕ್ಕಂದ ಹೊರ್‌ಟ್ ಹೋಗಿ ಒಂದು ಮರಕ್ಕೆ ತಾಂಗಿ ನಿತ್ತಿತ್. ಬೇಟೆಯಾಡಿದಣುವಾತ್. ಹಾಂಗೆ ಬೇಟೆನ ನಿಲ್ಸಿ ಕಾಡ್‌ಲಿ ಹಜ್ಜ ಅತ್ತ ಇತ್ತ ತಿರ್ಗಾಡಿ ತಮ್ಮ ಪೊರಿವಾರದವರಿದ್ದ ಬಿಡಾರಕ್ಕೆ ಬಂದೊ. ಬೇಡರ್‌ಗ ತಿಂಬಕೆ

ಆವ ಮುರ್ಗಂಗಳ ಹೊತ್ತ್ ಕಎಂಡ್ ಹೊಗಿ ಅಚ್ಚುಕಟ್ಟ್ ಮಾಡಿ ಒಳ್ಳೊಳ್ಳ ಮಾಸಕಂಡಗಳ ತಂದ್ ಇವರ ಅಡಿಗೆವ್ಕೆ ಕೊಟ್ಟೊ. ಅಡಿಗೆವ್ರು ಮುಂದೇ ತಯಾರ್ಲಿಕಎಂಡ್ ತಂದಿಪ್ಪ ಮಸಾಲೆ ಕಾರಗಳ ಹದಎಲಿ ಬೆರ್ಸಿ ಜೇಸಿ ಅಡಿಗೆ ಮಾಡ್ಡೊ. ಅಡಿಗೆ ಆದ ಮೇಲೆ ಕೃಷ್ಣಾರ್ಜುನರೂ ಅವರ ಅಂತಃಪುರಕ್ಕೆ ಸೇರ್ದ ಸ್ತ್ರೀಯರೂ ಊಟಕ್ಕೆ ಕುದ್ದೊ. ಅರಮನೆನ ವಾತಾವರಣಂದ ದೂರವಾದ ವನಭೋಜನ ಅವ್ಕೆಲ್ಲ ಕುಶಿಕೊಟ್ಟಎತ್. ಊಟ ಆದ ಮೇಲೆ ವಿಶ್ರಾಂತಿ ತಕಂಡ ಮೇಲೆ ಕೆಲವು ಜನ ಕಾಡ್ ತಿರ್ಗಕೆ ಹೋಯಿಂತ ಹೋಗಿ ತಿರ್ಗ್ರಂಡ್ ಬಂದೊ. ಮಾರನೆ ದಿನ ಯಮುನಾ ನದಿಲಿ ಜಲಕೇಳಿಗೆ ಹೋದುಂತ ಕೃಷ್ಣನೂ ಅರ್ಜುನನೂ ಅವರವರ ಪರಿವಾರದೊವ್ಕೆ ಹೇಳ್ಳೊ. ಅವೆಲ್ಲ ಭಾರಿ ಸಂತೋಸುಂದ ಅದರ ಆತುರಂದ ಎದ್ ಸೋರ್ಡಿ ಕಎಂಡ್ ಇದ್ದೊ.

ಮೊರ್ದಿನ ಹೊತ್ತು ನೆತ್ತಿಗೆ ಬಾವ ಹೊತ್ತಿಗೆ ಅವೆಲ್ಲವ್ರೂ ಹಳ್ಳದ ಕರೆಗೆ ಬಂದ್ ಸೇರ್ದೊ. ಇದ್ ಕೃಷ್ಣ ಸಣ್ಣ ಹುಡುಗ ಆಗಿದ್ದಾಗ ಅಂವ ಬಾಲಕ್ರೀಡೆ ಆಡ್ದ ಸ್ಥಳ ಗೋಪಾಲಕರೊಟ್ಟಿಗೆ, ಗೋಪಿ ಗೂಡೆಗಳೊಟ್ಟಿಗೆ ಸೇರಿ ನಾನಾ ತರದ ಆಟಗಳ ಆಡಿತ್ತ್. ಕಾಳಿಯ ಮರ್ದನದಂತಹ ಸಾಹಸ ಕಾರ್ಯಗಳ್ನೂ ಮಾಡಿತ್ತ್. ಅವನ ಕೊಲ್ಲೊಕುಂತ ಬಂದ ರಕ್ಕಸರೆಲ್ಲ ಮೊಣ್ಣ್ ಮುಕ್ಕಸಿತ್ತ್. ಎಷ್ಟೋ ವೊರ್ಷ ಕಎಳ್ದ ಮೇಲೆ ಈ ಜಾಗೆನ ನೋಡಿ ಅವಂಗೆ ತುಂಬ ಕುಶಿ ಆತ್.

ಹೆಂಗ್ಸ್‌ಗ ಹೆದ್ರಿ ಹೆದರಿ ನೀರಿಗೆ ಇಳಿಯಕೆ ನೋಡ್ದೊ. ಅರ್ಜುನ ಮುಂದೆ ಎಲ್ಲೆಲ್ಲಿ ಎಷ್ಟೆಷ್ಟ್ ಗುಂಡಿ ಉಟ್ಟುಂತ ಇಕ್ಟ್ ತೋರ್ಸಿತ್. ಕೆಲಎವು ಧೈರ್ಯದ ಗೂಡೆಗ ಗಂಟ್ಲಿಗೆ ನೀರ್ ಬಾವಷ್ಟ್ ಆಳ ಇರುವಲ್ಲಿಗೆ ಹೋದೊ ಹೆಚ್ಚಿನಎವು ಅವರವರ ಹೊಕ್ಕುಳ ಮಟ್ಟಕ್ಕಿರುವ ನೀರ್‌ಲಿ ನಿತ್ತ್ ಕಂಡೊ. ಇಷ್ಟಕ್ಕೆ ಇದ್ದರೆ ಒಬ್ಬಂದೊಬ್ಬಂಗೆ ನೀರ್ ಚೋಂಪಿಕೆ. ಅನುಕೂಲಂತ ಅಲ್ಲೆ ನಿತ್ತ್‌ಕಂಡೊ. ಅವರ ಮೈಗೆಲ್ಲ ಕುಂಕುಮ ಮಿಶ್ರ ಮಾಡ್ದ ಅರ್ಗಂಧನೂ, ಇನ್ನೂ ಏನೇನೋ ಪರಿಮಳ ದ್ರವ್ಯಗಳ್ನೂ ಲೇಪಿಸಿಕಎಂಡ್ ಬಂದಿದ್ದೊ. ಅವರ ಗುಂಪುಲಿ ನೋಡ್‌ಕನ ಇವೇನ್ ದೇವಲೋಕಂದ ಬಂದ ಅಪ್ಸರೆಗಳೋ ಅಲ್ಲ ಪಾತಾಳಂದ ಎದ್ದ್ ಬಂದ ಜಲದೇವತೆಗಳೋಂತ ಕಾಂಬತಿದ್ದೊ. ಕೆಲಎವು ಮೀಸಿಕೆ ಸುರುಮಾಡ್ದೊ. ಕೆಲವು ಜನ ಕಎಂತಿಕಎಂಡ್ ಹೋಗಿ ನಿತ್ತ್‌ಕಎಂಡ್ ಇದ್ದವರ ಕಾಲ್‌ನ ಹಿಡ್ದ್ ಎಳ್ದೊ. ಆಗ ಅವು ಬಳ್ಕಂತ ನೀರೊಳಗೆ ಬಿದ್ದ್, ನೀರ್ ಕುಡ್ದ್, ಸೆರೆ ಹತ್ತಿ, ಕೆಮ್ಮಿಕಎಂಡ್ ಮೇಲೆ ನೆಗ್ದೊ. ಇನ್ನ್ ಕೆಲಎವು ಜನ ಒಬ್ಬಂದೊಬ್ಬಂಗೆ ನೀರ್ ಚೋಂಪಿಕೆ ಸುರು ಮಾಡ್ದೊ. ಆಗ ಉಪಾಯ ಕಎಲ್ತಎವು ಬಿಚ್ಚಿದ ಅವರ ಕೂದೊಲುನ ಮೋರೆಮುಚ್ಚುವಾಂಗೆ ಆಗಲಕೆ ಹರ್ಂಡಿ. ಮೋರೆಗೆ ಬೀಳುವ ನೀರ್‌ನ ತೊಪ್ಪಿಕಂಡೊ. ಒಂದು ಬಪ್ಪನೆ ಅರ್ಜುನಂಗ ಹಕ್ಕಲೆ ನಿತ್ತ್‌ಕಎಂಡ್ ಇತ್ತ್. ಅಲ್ಲಿ ಹಚ್ಚ್ ನೀರ್‌ನ ಹೊಯ್ದ್ ಇದ್ದ್ ಉಟ್ಟ್ ಕಎಂಡ್ ಇದ್ದ ಅದರ ಸೀರೆ ಅಚೀಚೆ ಆಗಿತ್ತ್. ನೀರ್‌ನ ಅಡಿಲಿ ಯಾರಿಗೂ ಕಾಂಬೊದುಲೆಲಂತೇಳಿ ಅದ್ ಅಲಕ್ಷ್ಯಲಿರ್‌ಕನ, ಒಂದು ಮೀನ್ ಬಂದಎದ್ ಅದರ ನೊಡು ಭಾಗಕ್ಕೆ ಕುತೂಹಲಂದ ಕೊಡ್ಡಿತ್. ಆಗ ಅದ್ ಹೆದ್‌ರಿ ಅರ್ಜುನನ ಗಎಟ್ಟಿ ಹಿಡ್ದ್ ತಬ್ಬಿ ಹಿಡ್ಕಂಡಎತ್. ಅದರ

ಸಖಿಯಲೆರ್ ಅದಿಕ ಗೇಲಿ ಮಾಡಿಕಲೆಂಡ್ ನೆಗಾಡ್ರೊ.

ಇನ್ನೊಂದು ಕಡೆಲಿ ಕೃಷ್ಣನೂ ಅವನ ಪರಿವಾರದ ಸ್ತ್ರೀಯಲೆರೂ ಹೀಂಗೇ ಆಡಿಕಲೆಂಡ್ ಇದ್ರೊ. ಎರ್ಡ್ ಕಡೆನ ಹೆಣ್ಮಕಳ ಅಣ್ಣೆಣ ಕುಂಕುಮ ಲೇಪನಂಗ ಮೈಂದ ತೊಳ್ಡ್ ಹೋಗಿ ಅಪ್ಪಗಲಲೆಲಿ ಯಮುನೆನ ನೀರ್‌ನ ಬಣ್ಣ ಬದ್‌ಲಾತ್. ಮೀನ್‌ಗಲೆಳಿಗೆಲ್ಲ ಕಲೆಡು ಮುಟ್ಟಿದಾಂಗಾಗಿ ಅಡಿಮೇಲಾದೊ. ಆ ಹೆಂಗ್‌ಸ್‌ಗ ಲೇಪನ ಮೈಗೆ ಮೆತ್ತಿಕಲೆಂಡಲೆದಿಕೂ ಕಾರಣ ಉಟ್ಟು. ರತಿಕೇಳಿ ನಡಿಯಕನ ಹೆಣ್ಮಕಳ ಕೆಲಲೆವು ಭಾಗಗಳ್ಲಿ ನಖಕ್ಷತ, ದಂತಕ್ಷತಗಳ ಮಾಡುದುಟ್ಟು. ಅದ್ ಬೇರೆವ್ಕೆ ಗೊತ್ತಾದರೆ ನಾಚಿಕೆಗೇಡ್. ಜಲಕೇಳಿ ಗಿಳಿಯಕನ ಸೊಂಟದ ಮೇಲೇನೂ ಮುಚ್ಚುಮರೆ ಇಲ್ಲದಿರ್ಕನ ಇದೆಲ್ಲ ಹೊರೆಗೆನೊವ್ಕೆ ಗೊತ್ತಾಕೆ ಆಗಲೆದ್‌ಂತೇಳುವ ಕಾರಣಂದ ಆ ಲೇಪನ ಹಾಕಲೆಂಡಲೆದ್. ನೀರ್‌ಲಿ ತುಂಬ ಹೊತ್ತು ಇದ್ದದರ್‌ಂದ ಅವರ ಕಲೆಣ್ಣ್‌ಗೆಲ್ಲ ಕೆಂಪಾದೊ. ಮುಂದೆ ಕೆಂಪಿದ್ದ ಅವರ ತುಟಿಗ ಎಲ್ಲ ಬೆಳ್ಳಂಗಾದೊ. ನೀರಾಟ ಸಾಕ್. ಇನ್ನ್ ಹತ್ತಿಂತ ಅರ್ಜುನನೂ ಕೃಷ್ಣನೂ ಹೇಳ್ರೊ. ಹಾಂಗೆ ಎಲ್ಲ ಹತ್ತಿ. ತಲೆನ ನೀರ್ ಹಿಂಡ್‌ಸಿ ಕಲೆಂಡ್, ಸಲೆಂಡಿ ಸೀರೆಗಳ ಬಿಚ್ಚಿ ಬೇರೆ ಸೀರೆಗಳ ದಾಸಿಗ ತಂದಲೆವರ ಉಟ್ಟ್‌ಕಲೆಂಡ್. ಇರ್‌ಕನ, ನಿಮ್ಮ ಅಲಂಕಾರ ಎಲ್ಲ ಆಗಿ ನೀವು ಬಿಡಾರಕ್ಕೆ ಹೋಗಿ. ನಾವು ಹೀಂಗೇ ಹಜ್ಜ್ ತಿರ್ಗ್‌ಂಡ್ ಬಂದವೆಂತ ಅರ್ಜುನನೂ ಕೃಷ್ಣನೂ ಹೇಳಿ ಹಳ್ಳದ ಕರೇಲಿ ಮುಂದೆ ಹೋದೊ. ಅರ್ಜುನ ಹಜ್ಜ್ ಮುಂದೆ ಹೋತಿತ್ತ್. ಆಗ ಸಮಿಯ ನೋಡಿ, ಕೆಂಪು ಮೈಸ, ಕೆಂಚಿ ಕೂದೊಲುನ ಒಬ್ಬ ಹಾರಂವ ಅವಂಗೆ ಎದ್‌ರಾತ್. ವೇದ ಮಂತ್ರಗಳ ಹೇಳಿ ಆಶೀರ್ವಾದ ಮಾಡಿ ಅಕ್ಷತೆಗಳ ಕೊಟ್ಟಲೆತ್. ಒಂಟಿ ಹಾರಂವ ಹೀಂಗೆ ಬಾದು ಏನಾರ್ ಬೇಡಿಕೇಂತೇಂತ ಅರ್ಜುನಂಗೆ ಗೊತ್ತೆ. ಹಾಂಗೆ ನೀವ್ಗೆ ಏನ್ ಬೇಕುಂತ ಕೇಳ್ತ್. ಅದಿಕೆ ಆ ಹಾರಂವ 'ನಂಗೆ ನೀ ಊಟ ಕೊಡೊಕು'ಂತ ಹೇಳ್ತ್. 'ಆತ್, ಕೊಟ್ಟನೆ'ಂತ ಅರ್ಜುನ ಮಾತ್ ಕೊಟ್ಟಲೆತ್.

ಕೃಷ್ಣಂಗೆ ಸೊಂಸಯ ಬಾತ್. ಹಾಂಗೆ ಬೇಗ ಅರ್ಜುನನ ಹಕ್ಕಲೆ ಬಂದ್ "ಇಂವ ಏನ್ ಕೇಳ್ತ್ ನೀ ಏನ್ ಕೊಟ್ಟೆ"ಂತ ಕೇಳ್ತ್. ಅರ್ಜುನ ನಡ್ದ ಸಂಗತಿನ ಹೇಳ್ತ್. ಅದಿಕೆ ಕೃಷ್ಣ "ನೀ ತೊಪ್ಪು ಮಾಡ್ದೆ. ಇಂವ ವೇಸ ಮರ್ಸಿಕಲೆಂಡ್ ಬಂದ ಅಗ್ನಿ. ಅಂವ ಉಂಬಕೆ ಕೇಳ್ದ್ ಇಂದ್ರ ಬೆಳ್ಸಿ ಇಸಿದ ಖಾಂಡವ ವನ. ಹಿಂದೆ ಎಷ್ಟೊ ರಾಜರ ಹೀಂಗೇ ಮೋಸ ಮಾಡಿ, ಇಂದ್ರನೊಟ್ಟಿಗೆ ಯುದ್ಧ ಮಾಡ್ಸಿ ಅವರ ನಾಶಕ್ಕೆ ಕಾರಣ ಆಗುಟು. ಹಾಂಗಾಗಿ ಈ ಮೋಸಗಾರಂಗೆ ಕೊಡಿಕೆಲ್ಲಂತ ಹೇಳ್, ಬೇಗ"ಂತ ಹೇಳ್ತ್. ಅದಿಕೆ ಅರ್ಜುನ "ಕೊಟ್ಟ ಮಾತಿಗೆ ತೊಪ್ಪುದು ನನ್ನಂತ ಕ್ಷತ್ರಿಯಂಗೆ ಹೇಳ್ದಲ್ಲ. ಏನೇ ಆಗಲೆಲಿ ನಾ ಮಾತ್ ಕೊಟ್ಟ ಮೇಲೆ ಅದ್ ಕಲೆಲ್ಲ್‌ಲಿ ಬರ್ದ ಅಕ್ಷರದಾಂಗೆ ಅದರ ಅಳ್ಸಿಕೆ ಆಕಿಲೆ. ಏನು ಬೇಕರೂ ಆಗಲೆಲಿ."ಂತ ಗಟ್ಟಿ ಹೇಳ್ತ್.

ಆಗ ಅಗ್ನಿ ತನ್ನ ನಿಜರೂಪು ತೋರ್ಸಿ ಕೃಷ್ಣಾರ್ಜುನಲೆರಿಗೆ "ನೀವು ವಿಜಯಿಗ ಆಗೀಂತ ಆಶೀರ್ವಾದ ಮಾಡಿ, ಹಾಳ್ಗಡಲ್‌ಲಿ ಅಂವ ಅಡ್‌ಂಗ್‌ಸಿ ಇಸಿದ್ದ ಬಿಳಿಕುದುರೆಗಳ

ಜೋಡ್ಸಿದ್ದ ತೇರ್‌ನೂ ದಿವ್ಯಾಸ್ತ್ರಗ ತುಂಬಿದ ಎರ್ಡ್ ಅಕ್ಷಯ ಬಿತ್ತಳಿಕೆನ್ನೂ ಗಾಂಡೀವಂತೇಳ್ವ ಬಿಲ್ಲ್‌ನೂ ಒಬ್ಬ ಸಾರಥಿನ್ನೂ ತಕಡಂಡ್ ಬಂದ್ ಅರ್ಜುನಂಗೆ ಕೊಟ್ಟಿತ್. ಕೃಷ್ಣನ ಮಹಿಮೆಂದ, ಅವನ ತೇರೂ, ಕುದುರೆಗಳೂ, ದಾರುಕಂತೇಳುವ ಅವನ ಸಾರಥಿನೂ ಪ್ರತ್ಯಕ್ಷ ಆದೋ. ಅರ್ಜುನನೂ ಕೃಷ್ಣನೂ ಅವರ ರಥಗಳ ಹತ್ತಿದೊ. ಅರ್ಜುನ ಅಗ್ನಿಗೆ ಹೇಳ್ತ್. ನೀವು ಕೇಳ್ದ ಆಹಾರನ ಅಂದರೆ ಖಾಂಡವನನ ನೀವ್ಗೆ ಕೊಟ್ಟನೆ ನಿಮ್ಮ ಆಹಾರನ ಸ್ವೀಕಾರ ಮಾಡೀಂತ ಹೇಳ್ತ್. ಆ ಕೂಡ್ಲೆ ಅಗ್ನಿ ಧಗಧಗಂತ ಹೊತ್ತಿಕೆ ಸುರುಮಾಡ್ತ್. ಇಂದ್ರನ ಕಾವಲಾಳ್‌ಗ ತಡಿಯಕೆ ಬಂದೊ. ಆದರೆ ಅರ್ಜುನನ ಮತ್ತೆ ಕೃಷ್ಣನ ಬಾಣಗಳ ಪೆಟ್ಟ್ ತಡಿಯಕೆ ಬೊತ್ತದೆ ಅವೆಲ್ಲ ಚೆದ್‌ರಿ ಹೋದೊ. ಒಬ್ಬ ದೂತ ಓಡಿ ಹೋಗಿ ದೇವೇಂದ್ರಂಗೆ ಸುದ್ದಿ ಮುಟ್ಟ್‌ಸಿತ್. ತನ್ನ ಪ್ರೀತಿನ ಕಾಡ್‌ಗೆ ಕಿಚ್ಚಿಬೀತ್‌ಂತರ ಕೇಳಿ ಇಂದ್ರಂಗೆ ಕೋಪ ಬಂದ್, ಅದರ ಕಿಚ್ಚಿನ ಕೆಡ್ಸದೆ ಬುಡಿಕಿಲಂತ ನೆಸ್ಸಿ ತನ್ನ ಸ್ವಾಧೀನಲಿದ್ದ ಮುಗಲ್‌ಗಳ ಸೈನ್ಯನ ಕಳ್ಸಿತ್. ಆಗ ಅಗ್ನಿನ ಉಕ್ಕು ಕಮ್ಮಿ ಆಗಿ ಅರ್ಜುನಂಗೆ ದೂರ್ತ್. ನೀ ದಾನ ಕೊಟ್ಟ ಪುಣ್ಯನಿಂಗೆ ಇಲ್ಲದಾದೆ ನಂಗೆ ಹಸಿವು ತೀರ್ತ್‌ಲರೆ. ಆಗ ಕೃಷ್ಣ ಅರ್ಜುನಂಗೆ ಹೇಳ್ತ್. ಅರ್ಜುನ ಈ ಖಾಂಡವ ಪ್ರದೇಶದೊಳಗಿದ್ದ ಒಂದು ಸೊಳ್ಳೆನೂ ಹೊರಗೆ ಹೋತುಂತಾದರೆ ಅಗ್ನಿಗೆ ತೃಪ್ತಿ ಆಕಿಲೆ. ಅದ್ಕೆ ಬೇಕಾಗಿ, ನೀ ಬಾಣಬುಟ್ಟ್ ಮುಚ್ಚಳ ಮಾಡ್ದಾಂಗೆ, ಒಂದು ಸೊಳ್ಳೆನೂ ಹೊರಗೆ ಹೋಗದಾಂಗೆ ಒಂದು ಹನಿ ನೀರ್ ಒಳಗೆ ಬಿದ್ದ್ ಕಿಚ್ಚಿನ ಕೆಡ್ಸದಾಂಗೆ ಬೇಗ ಮಾಡ್‌ಂತ ಹೇಳ್ತ್. ಆ ಪ್ರಕಾರ ಅರ್ಜುನ ಬಾಣಗಳ ಬುಟ್ಟ್ ತಟ್ಟ ಮಡ್ದಾಂಗೆ, ಮೇಲ್ ಮುಚ್ಚಳದಾಂಗೆ ಮಾಡಿಕಡಂಡ್ ಇರ್‌ಕನ ಒಂದು ಕಡೆಲಿ, ತಕ್ಷಕನ ಮಕ್ಕ, ಅಶ್ವಸೇನಂತ ಒಂದು ಸರ್ಪ ಇತ್ತ್. ಅದರೊಟ್ಟಿಗೆ ಅದರ ಅಯ್ಯೆನೂ ಇತ್ತ್. ಕಿಚ್ಚಿ ಹೊತ್ತಿಕಕಡಂಡ್ ಬಾಕನ ಅದರ ಅಯ್ಯೆನೊಟ್ಟಿಗೆ ತನ್ನ ಬಾಲನ ಕಚ್ಚಿ ಹಿಡ್ಕಂಬಕೆ ಹೇಳಿ ಅದ್ ಆಕಾಶಕ್ಕೆ ಹಾರಿ ಕಿಚ್ಚಿನ ದಾಟಿ ಹೋಕೆ ಪ್ರಯತ್ನ ಮಾಡ್ತ್. ಅದರ ಕೃಷ್ಣ ನೋಡಿ, ಅರ್ಜುನಂಗೆ ತೋರ್‌ಸಿತ್. ಅರ್ಜುನ ಬಾಣಂದ ಅದರ ಅರ್ಧ ಸರ್‌ತ ತುಂಡಾಗಿ, ಅದರ ಬೀಲ ಸಮೇತ ಅದರ ಅಯ್ಯೆನೂ ಉರಿವ ಕಿಚ್ಚಿಗೆ ಬಿದ್ದ್, ಅದ್ ಪಟ ಪಟಂತ ಹೊಣ್ಕ್ಯಾಡಿ ಕರ್‌ಂಟ ಸಾಯುದರ ನೋಡಿ ಆ ಸರ್ಪ ಅರ್ಜುನನ ನೋಡಿ, ಎಂದಾದರೊಂದು ದಿನ ನಿನ್ನ ಕೊಲ್ಲದೆ ಇರಿಕಿಲಂತ ಶಪಥ ಮಾಡ್ತ್. "ಸರಿ ಯಾರೊಟ್ಟಿಗಾರ್ ಸೇರಿ ನಿನ್ನ ಹಗೆನ ತೀರ್‌ಸಿಕ. ಈಗ ನಾ ನಿನ್ನ ಕೊಲ್ಲುದುಲೆ ಹೋಗುಂತೇಳಿ ಬುಟ್ಟಿತ್. ಅದ್ ಹಾಂಗೆ ಹೇಳಿ, ಅರ್ಜುನನ ಹಗೆಯಾದ ಕರ್ಣನ ಬತ್ತಳಿಕೆಲಿ ಅರ್ಧಾವಳಿಕಂತೇಳ್ವ ಬಾಣಆಗಿ ಸೇರಿಕಡಂಡ್ ಸಮಯ ಕಾದ್‌ಕಡಂಡ್ ಇತ್ತ್. ಮತ್ತೆ ಇತ್ತ ಅರ್ಜುನ ಅಗ್ನಿಗೆ ಅನುಕೂಲ ಆವಾಂಗೆ ಬಾನಕ್ಕೆ ಬಾಣಂದ ಮಾಡ್ ಮಾಡುವ ಕಾರ್ಯಲಿ ಇತ್ತ್. ನೂರುಯೋಜನ ಉದ್ದ ಮತ್ತೇ ಅಷ್ಟೇ ಅಗಲ ಇದ್ದ ವಿಸ್ತಾರವಾದ ಜಾಗೆಗೆಲ್ಲ ಕೊಡೆ ಹಿಡ್ದಾಂಗೆ ಮಾಡಿ ಒಂದು ಹನಿ ಮಳೆ ನೀರೂ ಕೆಳೆಗೆ ಬೀಳದಾಂಗ ಅರ್ಜುನ ಬಾಣಗಳ್‌ಂದಲೇ ಮಾಡ್ತ್. ಈಗ ಅಗ್ನಿ ಇಟ್ಟಿಗೆ ಗೂಡುನೊಳಗೆ ಗವ್ರುಲವ ಕಿಚ್ಚಿನಾಂಗೆ ಒಳಗೊಳಗೆ ಹೊತ್ತಿಕಡಂಡ್ ಇತ್ತ್. ಆ ಕಾಡ್‌ಲಿದ್ದ ಆನೆ, ಕರ್ಡಿ, ಹುಲಿ,

ಹಂದಿ ಸಿಂವಂಗಂತೇಳ್ವ ಮುರ್ಗಂಗಳೂ, ಕಡೆ, ಕಾಟಿ, ಸಾರೆಜ, ಮೊಲ, ಬೊರಿಕ, ಹೊಳಿಕೆಂತೇಳುವ ಸಾಧು ಮುರ್ಗಂಗಳೂ, ಕುಂಡತ, ಕುದ್ಕಂತೇಳ್ವ ಕ್ಷುಲ್ಲಕ ಮುರ್ಗಂಗಳೂ, ಕುರೆ, ಮುಚ್ಚಂತೇಳ್ವ ಮರದ ಮೇಲೆ ವಾಸ ಮಾಡುವ ಮುರ್ಗಂಗಳೂ, ಕೋಗಿಲೆ, ಚೋರೆ, ಹಂಸ, ಚಕೋರ, ಚಿಟ್ಟೆ ತೆಕ್ಕಟೆ, ಕಾಡ್ ಕೋಳಿ, ಕುಂಡಕೋಳಿಂತೇಳುವ ಹಕ್ಕಿ ಸಂತತಿಗಳೂ, ಎಲ್ಲ ಸುಟ್ಟ್, ಕಣ್‌ಂಟಿ ಬೊಸ್ಮ ಆಗಿ ಹೋದೊ. ಆ ವನದೊಳಗೆ ಅಲ್ಲಲ್ಲಿ ವಿಹಾರ ಗೃಹಂಗ ಇದ್ದೊ. ಅದರ್ಲಿ ವಿಹರ್ಸಿಕೆ, ಸಂತೋಸುಪಡಿಕೆ ಬಂದ ಎಳೆದಂಪತಿಗ, ಒಬ್ಬರೊಬ್ಬರ ತೋಳುಗಳ್ಲಿ ಬಂಧಿಸಿ ಹಿಡ್ದ್ ಪರಸ್ಪರ ತುಟಿಗೆ ತುಟಿ ಸೇರ್ಸಿ ಮುತ್ತು ಕೊಟ್ಟ್‌ಕಣಂಡ್ ಮೈ ಮರ್ತ್ಕಿರ್ಣನ ಸುತ್ತ ಹೊಗೆ ತುಂಬಿ ಉಸುರು ಕಟ್ಟ್‌ಕನ, ಗಟ್ಟಿಯಾಗಿ ಹಿಡ್ಕಣಂಡಿದ್ದ ತೋಳುಗಳ ಸಡ್ಲ್ ಮಾಡದೆ, ಬಿಗಿಯಾಗಿ ತೊಬ್ಬಿಕಣಂಡೇ, ಕಿಚ್ಚಿನ ಬೇಗೆ ಹೆಚ್ಚಾಗಿ ಸುಡ್‌ಕನ ಒಬ್ಬಂದೊಬ್ಬಂಗೆ ಮುತ್ತು ಕೊಟ್ಟ್‌ಕಣಂಡೇ, ಒಟ್ಟಗೇ ಜೀವ ಬುಟ್ಟೊ ಗಡ. ಪುಣ್ಯಂತೇಳ್ದು ಇದಲ್ಲೋ? ಇಂಥ ಅದೃಷ್ಟ ಯಾರಿಗಾರ್ ಸಿಕ್ಕುದೋ?

ತನ್ನ ಜೀವಂದ ಹೆಚ್ಚ ಪ್ರೀತಿಲಿ ನೋಡಿಕಣಂಡಿದ್ದ ಅಷ್ಟ್ ದೊಡ್ಡ ಖಾಂಡವ ವನ ಸರ್ವನಾಶ ಆವಾಂಗೆ ಅಗ್ನಿಗೆ ಬೊಲಿಕೊಟ್ಟೊವು ಒಬ್ಬ ನಂಗೆ ಮಜ್ಜಂತ ಹೇಳಿಕಂಬ ಅರ್ಜುನ. ಇನ್ನೊಬ್ಬ ಲೋಕೈಕ ಗುರುಂತೇಳ್ವ ಕೃಷ್ಣ. ಇವರ ದಂಡ್‌ಸದೆ ಸುಮ್ಮನೆ ಬುಟ್ಟರೆ ಸಸಾರ ಆನೆ. ಅವ್ಕೆ ಶಿಕ್ಷೆ ಕೊಡದೆ ಬುಡಿಕಿಲ್ಲಂತ. ಗರ್ಜನೆ ಮಾಡಿ, ವಜ್ರಾಯುಧನ ಹಿಡ್ಕಣಂಡ್ ಐರಾವತನ ಏರಿ ಹೊರ್ಟಣತ್. ಆಗ ಬ್ರಹ್ಮ ಎದ್‌ರ್ ಬಂದ್ ಇಂದ್ರಂಗೆ ವಿವೇಕ ಹೇಳ್ತ್. ಖಾಂಡವ ವನ ಸುಟ್ಟ್ ಭೊಸ್ಮ ಆತ್. ಅದರ ಬಗ್ಗೆ ನೀ ಇನ್ನ್ ಏನ್ ಮಾಡಿರೂ ಯಾವ ಪ್ರಯೋಜನವೂ ಇಲ್ಲೆ. ನಿನ್ನನೂ ಮೀರ್ಸುವ ಸಾಹಸ ಕಾರ್ಯ ಮಾಡ್ದ ಸಾಹಸಿ, ನಿನ್ನ ಮಜ್ಜಂತ ಪ್ರಸಿದ್ಧನಾದ ಅರ್ಜುನ. ನಿನ್ನನೇ ಮೀರ್ಸಿದಂವ ನಿನ್ನ ಮಜ್ಜಂತೇಳಿರೆ, ಅದ್ ನಿಂಗೆ ಹೆಮ್ಮೆ, ಹಾಂಗೆ ಅವನ ವಿಜಯನ ಕೊಂಡಾಡ್. ಮತ್ತೆ ಕೃಷ್ಣ ಎಲ್ಲಣದಿಕೂ ಆದಿ ಪುರುಷ. ಅಂವನ ನಾವ್ಗೆ ಎದ್‌ರ್ಸಿಕೆ ಎಂದಾದರೂ ಸಾಧ್ಯ ಉಟ್ಟೊ? ಯೋಚನೆ ಮಾಡ್‌ಂತ ಉಪದೇಶ ಮಾಡ್ತ್.

ಇಂದ್ರಂಗೆ ವಿವೇಕ ಮೂಡ್ತ್. ಬ್ರಹ್ಮನ ಮಾತೇ ಸಣರಿಂತೇಳಿ ಅರ್ಜುನನ ತಲೆಮೇಲಿ ದೇವಲೋಕದ ಕಲ್ಪವೃಕ್ಷಗ ಹೂಮಾಲೆ ಸುರ್ಸುವಾಂಗ ಮಾಡಿ, ಒಂದು ಕಿರೀಟನ ಹಿಡ್ಕಂಡ್ ಹೋಗಿ ಅವನ ತಲೆಗೆ ಇಸಿ, ಇನ್ನ್ ನೀ ಕಿರೀಟಿಂತ ಕರ್ದ್ ಕೃಷ್ಣಂಗೂ ಗೌರವ ತೋರ್ಸಿ, ಹಿಂದೆ.ಬಾತ್.

ಖಾಂಡವ ವನ ಹೊತ್ತ್‌ಕನ ಅದರೊಳಗಿದ್ದ. ಪ್ರಾಣಿ, ಪಕ್ಷಿಗಳ್ನೊ, ಮೊಂಯಿಸದ್ನೊ ಕೂಡ ಬುಡದೆ ಸುಟ್ಟ್ ಬೊಸ್ಮ ಮಾಡಿರೂ, ಲಾವಗಂತ ಹೇಳುವ ಹಕ್ಕಿಗ ಅಗ್ನಿ ಮಂತ್ರನ ಹೇಳಿಕಣಂಡ್ ಅಗ್ನಿನ ಒಲ್ಸಿಕಣಂಡ್ ತನ್ನ ವಂಶದೊವ್ಕಲ್ಲ ಅಗ್ನಿ ತೊಂಪಾಗಿಯೇ ಇರೂಕುಂತೇಳ್ವ ವರ ಪಡ್ದ್ ಬೊದ್ಕ್ಯಂಡೊ ಹಾಂಗೆನೆ ಮಯಂತೇಳ್ವ ರಾಕ್ಷಸ ಶಿಲ್ಪಿ, ನಂಗೆ ಅರ್ಜುನನ ಪಾದಗಳೇ ಶರುಣುಂತ ಹೇಳಿಕನ ಅವಂಗೆ ಅರ್ಜುನನ ಬಾಣಗಳ್‌ಂದಾಗಣಲೀ, ಕೃಷ್ಣನ ಚಕ್ರಂದಾಗಣಲೀ ಅಗ್ನಿಂದಾಗಣಲೀ ಏನೂ ತೊಂದರೆ

ಆಗದೆ ಅಂವ ಬೊದ್ಕಿ ಅಲ್ಲಿಂದ ಹೊರೆಗೆ ಬಾತ್.

ಹಾಂಗೆ ಬಂದ ಮಯ, ಅರ್ಜುನ ನನ್ನ ಜೀವ ಒಳ್ಸಿದಂವ ಅಂವಂಗೇನಾರ್ ಒಳ್ಳೆ ಕಾಣಿಕೆಕೊಡೊಕುಂತೇಳಿ, ಕೃಷ್ಣನ ಸೂಚನೆನಪ್ರಕಾರ ಅದ್ಭುತವಾದ ಒಂದು ಸಭಾಭವನನ ನಿರ್ಮಾಣ ಮಾಡಿ, ಒಂದು ಲಕ್ಷ ರಾಕ್ಷಸರ್‌ಂದ ಅದರ ಹೊರ್ಸಿಕಣ್ಂಡ್ ಇಂದ್ರ ಪ್ರಸ್ಥಕ್ಕೆ ತಂದ್, ಯುಧಿಷ್ಠಿರಂಗೆ "ಅರ್ಜುನ ನಂಗೆ ಜೀವದಾನ ಮಾಡ್ದಂವ ಅದಿಕೆ, ನನ್ನ ಕೃತಜ್ಞತೆನ ತೋರ್ಸಿಕೆ ಈ ಸಭಾಭವನನ ಮಾಡಿ ನಿಂಗೆ ಒಡ್ಪೋಲಗೆ ಕೊಡಿಕೆ ಇರ್ಲಿಂತ ನಿಂಗೆ ಒಪ್ಪ್‌ಸಿನೆ. ನೀ ಇದರ ಸ್ವೀಕಾರ ಮಾಡಿರೆ ನಂಗೆ ತುಂಬ ಸಂತೋಸು ಆದ್"ಂತ ಹೇಳ್ತ್. ಧರ್ಮರಾಯ ಸಂತೋಸುಂದ ಒಪ್ಪಿಕಂಣ್ಡತ್. ಮತ್ತೆ ಮಯ ಭೀಮಂಗೆ 'ರುಧಿರಮುಖಿ'ಂತ ಹೆಸ್‌ರಿರುವ ಗದೆನ ಕೊಟ್ಟಣ್. ಅರ್ಜುನಂಗೆ ಇದರ ದೇವೇಂದ್ರ ನಿಂಗೆ ಕಣ್ಸಿಟುಂತ, ಅದರ ಕಣ್ಟ್‌ನ ಬಿಚ್ಚಿ, ಇದರ ಹೆಸ್‌ರ್ 'ದೇವದತ್ತ'ಂತ ಹೇಳಿ ಅರ್ಜುನಂಗೆ ಕೊಟ್ಟಣ್. ಮತ್ತೆ ಪಾಂಡವಣ, ಮಯಂಗೆ ಬೇಕಾದ ಮೊರ್ಯಾದೆ ಮಾಡ್ದೊ. ಹಾಂಗೆ ಸಂತೋಸುಲಿ ಹಿಂದೆ ಹೋತು.

ಒಂದು ರೀತಿಲಿ ತೊಂದರೆಗ ಎಲ್ಲ ಮುಗ್ದ್, ಪಾಂಡವರ ಜೀವನಣಲಿ ನೆಮ್ಮದಿ ಇರುವ ಕಾಲ ಇದಾಗಿತ್ತ್. ಬಹುಶಃ ಆಗ ಎಲ್ಲ ಬೇರೆ ರಾಜ್ಯಗಳ್ಲಿಯೂ ಕ್ಷೋಭೆಯಿಲ್ಲದೆ ನೆಮ್ಮದಿಯೇ ಇದ್ದಾಂಗೆ ಕಂಡದೆ. ಸುಭದ್ರೆನ ಅರ್ಜುನ ಮೊದುವೆ ಆಕೆ ಮುಂದೆ, ಯಾದವರಿಗೂ ಕೌರವರಿಗೂ ಒಂದು ಸಣ್ಣ ಘರ್ಷಣೆ ಆಗಿ ಮತ್ತೆ ತಣ್ಣಂಗಾತ್. ಕೃಷ್ಣಂಗೆ ಜಾಂಬವತಿಲಿ ಹುಟ್ಟದ ಮಣ್ಣ ಸಾಂಬ ಅಂವ ಯೌವ್ವನಕ್ಕೆ ಬಂದ್, ಅರ್ಜುನನ ಹಕ್ಕಲೆ ಶಸ್ತ್ರಾಭ್ಯಾಸ ಮಾಡಿ ಅದರ್ಲಿ ಪರಿಣತಿ ಪಡ್ತ್. ಆ ಸಮಿಯಲಿ ದುರ್ಯೋಧನ ಅವನ ಮಗ ಲಕ್ಷಣೆಗೆ ಸ್ವಯಂವರ ಏರ್ಪಾಡ್ ಮಾಡ್ತ್. ಆದರೆ ಯಾದವಣಿಗೆ ಅಂದರೆ ಕೃಷ್ಣ ಅಥವಾ ಬಲರಾಂಗೆ ಆಮಂತ್ರ ಕೊಟ್ಟಣ್‌ಲೆ. ಯಾದವರಂದರೆ ಕ್ಷತ್ರಿಯಣ್ ಅಲ್ಲಂತ ಎಲ್ಲಣವೂ ಆಗ ಸಸಾರ ಮಾಡ್‌ತಿದ್ದೊ. ಶಸ್ತ್ರಾಭ್ಯಾಸ ಆದ ಮೇಲೆ ಸಾಂಬ ದಿಗ್ವಿಜಯಕ್ಕೆ ಹೊರ್ಟಣ್. ಅಂವ ಪರಾಕ್ರಮ ಶಾಲಿಯಾಗಿಯೂ ಇತ್ತ್. ನಾರದ ಅವನ ನೋಡಿ, ಹಸ್ತಿನಾವತಿಲಿ ಸ್ವಯಂವರ ನಡಿವ ಸುದ್ದಿ ಅವಂಗೆ ಹೇಳ್ತ್. ಅದರ ಕೇಳಿ ಸಾಂಬ ನಾ ಹೋಗಿ ದುರ್ಯೋಧನನ ಮಗಳ ಎಳ್ಕಣ್ಂಡ್ ಬನ್ನೆಂತ ಹೇಳಿ ಹೊರ್ಟಣ್. ಸ್ವಯಂವರ ಸಾಲೆಗೆ ಹೋಗಿ, ಹುಗ್‌ಕನ ಇವನ ಉದ್ಧಟತನಕ್ಕೆ ದುರ್ಯೋಧನಾಧಿಗ ಜೋರು ಮಾಡ್‌ಕನ ಇಂವ ಸಮ್ಮೋಹನಾಸ್ತ್ರನ ಬುಟ್ಟಣ್. ಎಲ್ಲೊವು ನಿತ್ತಣ್ಲೆ ಏನೂ ಗೊತ್ತಾಗದಾಂಗೆ ನಿತ್ತೋ. ಇಂವ ಅವರ ಎದ್‌ರ್‌ಂದಲೇ ಲಕ್ಷಣೆನ ಕೈ ಹಿಡ್ದ್ ಎಳ್ಕಣ್ಂಡ್ ಹೊರೆಗೆ ಬಂದ್, ರಥನ ಹತ್ತಿ ಹೊರ್ಡ್ ಸುಮಾರ್ ದೂರ ಬಾಕನ ಎಚ್ಚಣಿಕೆ ಆದ ದುರ್ಯೋಧನ, ಕರ್ಣ, ದುಶ್ಯಾಸನ ಎಲ್ಲ ಅವನೊಟ್ಟಿಗೆ ಯುದ್ಧಕ್ಕೆ ಬಂದೊ. ಸಾಂಬ ಎಲ್ಲರೊಟ್ಟಿಗೂ ಪರಾಕ್ರಮುಂವಳೇ ಯುದ್ಧ ಮಾಡ್ತ್. ಕಡೆಗೆ ಕರ್ಣ ಅವನ ಬಿಲ್ಲ್‌ನ ತುಂಡು ಮಾಡ್ತ್. ಮತ್ತೆ ಬಾಣ ಬುಟ್ಟ್ ಅವನ ಸುತ್ತು ಕಬ್ಬಿಣದ ಒಂದು ಪಂಜರದಾಂಗೆ ಮಾಡಿ, ಸಾಂಬ ಕೈಲಿ ಆಯುಧ ಏನೂ ಇಲ್ಲದೆ ಏನೂ ಮಾಡಿಕೆ ತೀರದೆ ಅಂವ ಸುಲಭಣಲಿ ಅವರ

ಸೆರೆಯಾಳಾತ್. ಭೀಷ್ಮ, ದ್ರೋಣಾದಿ ಹಿರಿಯೊವು ಏನ್ ಹೇಳಿದೂ ಕೇಳದೆ ದುರ್ಯೋಧನ ಅಂವ ನಮ್ಮ ಮಗಳ ಸ್ವಯಂವರನ ಕೆಡ್ಸಿದ ತೊಪ್ಪಿತಸ್ಥ. ಅಂವಂಗ ಶಿಕ್ಷೆ ಆಗಿಯೇ ತಿರೊಕುಂತ ಹಟಮಾಡಿ ಸೆರೆಮನೆಗೆ ಹಾಕಿತ್.

ಹೀಂಗೆ ನಡ್ದ ಸಂಗತಿನೆಲ್ಲ ನಾರದ ಹೋಗಿ ಕೃಷ್ಣಂಗೂ ಬಲರಾಮಂಗೂ ವರದಿ ಮಾಡ್ತ್. ಇದರ ಕೇಳಿ ಜಾಂಬವತಿ 'ನನ್ನ ಮಜ್ಜನ ಏನ್ ಮಾಡುವೆನೋ'ಂತ ಗೋಳಾಡಿಕೆ ಸುರುಮಾಡ್ತ್. ಕೃಷ್ಣ ಯಾದವ ಸೈನ್ಯನ ಕರ್ಕಂಡ್ ಹಸ್ತಿನಾವತಿಗೆ ಮುತ್ತಿಗೆ ಹಾಕಿನಂತ ಹೊರ್ಟಿತ್. ಅದರ ನೋಡಿ ಬಲರಾಮ ಕೃಷ್ಣನ ಸಮಾಧಾನ ಮಾಡಿ, 'ನಿನ್ನ ಬದ್ಲ್ ನಾ ಒಬ್ಬನೇ ಹೋಗಿ ನಿನ್ನ ಮಜ್ಜನ್ನೂ ಸೊಸೆನ್ನೂ ಕರ್ಕಂಡ್ ಬಂದರೆ ಸಾಲದೋ? ನೀ ಇಲ್ಲಿಯೇ ಇರ್. ಜಾಂಬವತಿನ ಸಮ್‌ದಾನ ಮಾಡ್‌ಂತೇಳಿ, ರಥ ಹತ್ತಿ ಹೋತು. ಹಸ್ತಿನಾವತಿನ ಹೊರವಲಯಕೆ ಎತ್ತಿ ದುರ್ಯೋಧನಂಗೆ ಹೇಳಿ ಕಳ್ಸಿತ್. ದುರ್ಯೋಧನ, ಕರ್ಣ, ದುಶ್ಯಾಸನ ಇವು ಮೂರು ಜೆನ ಬಂದೊ. ಬಲರಾಮ ತನ್ನ ಗಧಾಯುದ್ಧದ ಗುರುಂತ ನೋಡದೆ ಹಾಂಕಾರಂದ ಅವಂಗೆ ಅವಮಾನ ಆವಾಂಗೆ ಮಾತಾಡ್ತ್. ಅವನ ಜೊತೆವೂ ಹಾಂಗೆ ಮಾತಾಡ್ದೊ. ಸಾಂಬನ್ನೂ, ಲಕ್ಷಣೆನ್ನೂ ತಂದ್‌ಸಂಗೆ ಒಪ್ಪುಸುಂತೇಳ್‌ಕನ, ನಿಂಗೆ ಸಾಮರ್ಥ್ಯ ಇದ್ದರೆ ನೀನೇ ಬುಡ್ಸಿಕಂತ ಸವಾಲ್ ಹಾಕಿ ಹಿಂದೆ ಹೋದೋ. ನನ್ನ ಬಲನ ತೋರ್ಸ್ನೆ, ನೋಡಿಂತೇಳಿ, ನಿಮ್ಮ ಅರಮನೆ, ಸಂಪೊತ್ತ್, ಆಳ್, ಕಾಳ್, ಎಲ್ಲದನ್ನೂ ಗಂಗೆಲಿ ಕಳ್‌ಂತ್‌ಸಿ ಬುಟ್ಟನಂತ ರೋಷಲಿ ಹೇಳಿ ತನ್ನ ಹಲಾಯುಧನ ಕೊಡಿನ ಭೂಮಿನ ಒಳಗೆ ಹೋಗುವಷ್ಟ್ ಹಾಕಿ, ಮೀಂಡಿ ಕುಲುಕಿತ್. ಆಗ ಇಡೀ ಹಸ್ತಿನಾವತಿ ನಗರವೇ ಅಡಿ ಮೇಲೆ ಆಗುವಾಂಗೆ ಗಡಗಡಂತ ಭೂಕಂಪ ಆದಾಂಗೆ ನಲ್‌ಗಿತ್. ಅರಮನೆ ಅತ್ತಿತ್ತ. ಮಾಲಿಕೆ ಸುರಾತ್, ಸಿಂಹಾಸನಗ ಮೊಗ್‌ಚಿ ಬಿದ್ದೊ. ಧೃತರಾಷ್ಟ್ರ ಕೆಳೆಗೆ ಬಿದ್ದ್ ಒಮ್ಮೆ ಅಷ್ಟ್ ದೂರ ಒಲಿ ಮೊಂದ್‌ರಿ ಮೊಡ್ಸಿಕಂಡಾಗೆ ಹೊಣ್ಕ್ಯಂಡ್ ಹೋದು, ಮತ್ತೆ ಇತ್ತ ಬಾದು, ಅವನ ಕಿರೀಟ ರಟ್ಟಿ ಅಷ್ಟ್ ದೂರಕೆ ಹೊಣ್ಕ್ಯಂಡ್ ಹೋತು. ಧೃತರಾಷ್ಟ್ರ ಬೊಬ್ಬೆ ಹಾಕಿತ್. ಭೀಷ್ಮ ಒಂದು ಕಂಬನ ಗಟ್ಟಿ ಹಿಡ್ಕಂಡ್ ಹೇಂಗೋ ನಿತ್ತ್‌ಕಂಡ್, ಈ ಅನಾಹುತಕ್ಕೆ ಏನ್ ಕಾರಣಂತ ಗಟ್ಟಿಯಾಗಿ ಕೇಳ್ತ್. ಆಗ ವಿದುರ ಬಲರಾಮನ ಕೋಪ ಇದ್ಕೆ ಕಾರ್ಣ. ದುರ್ಯೋಧನನೂ ಕರ್ಣನೂ ದುಶ್ಯಾಸನನೂ ಸೇರಿ ಅವಂಗೆ ಅವಮಾನ ಆಗುವಾಂಗೆ ಮಾತಾಡ್ಡೊಂತ ಹೇಳ್ತ್. ಅಷ್ಟ್ರಲ್ಲಿ ಆ ಮೂರು ಜೆನನೂ ಬಲರಾಮ ಇರುವಲ್ಲಿಗೆ ಓಡಿ ತೊಪ್ಪಾತ್‌ಂತ ಬಲರಾಮನ ಕಾಲಿಗೆ ಬಿದ್ದ್, ನೀವು ಹೇಳ್ದಾಂಗೆ ನಡ್ಕಂಡವೆ ಶಾಂತರಾಗಿಂತ ಬೇಡಿಕಂಡೊ. ಬಲರಾಮನ ಕೋಪ ತಣ್ಣಂಗಾತ್. ಎಲ್ಲ ಸಮಸ್ಥಿತಿಗೆ ಬಾತ್.

ಮತ್ತೆ ಬಲರಾಮನ ಗೌರವಂದ ಅರಮನೆಗೆ ಕರ್ಕಂಡ್ ಹೋಗಿ ಅವರಿಗೆ ಸತ್ಕಾರ ಮಾಡಿ ಸಂತೋಸು ಆವಾಂಗೆ ನಡ್ಕಂಡೊ. ಸಾಂಬನ ಬೇಗ ಸೆರೆಮನೆಂದ ಬುಡ್ಸಿ ಕರ್ಕಂಡ್ ಬಂದೊ. ಬಲರಾಮನ ಅಪೇಕ್ಷೆನಾಂಗ ಸಾಂಬಂಗೂ ಲಕ್ಷಣೆಗೂ ಶಾಸ್ತ್ರ ಕ್ರಮಲಿ. ಮೊದುವೆ ಮಾಡ್ಸಿದೊ ಯಾರೊಟ್ಟಿಗೆ ಹಿಂದೆ ಯುದ್ಧ ಮಾಡ್ತೋ, ಈಗ ಮೊದ್‌ಮಜ್ಜ

ಆಗಿ, ಅವರ ಕಾಲಿಗೆ ನಮಸ್ಕಾರ ಮಾಡಿ ಅವರ ಆಶೀರ್ವಾದ ಪಡ್ತ್. ದುರ್ಯೋಧನ ಅಳಿಯಂಗೂ ಮಗಳಿಗೂ ಬೆಲೆ ಬಾಳುವ ಉಡುಗರೆಗಳ ಕೊಟ್ಟ್, ಬಲರಾಮಂಗೂ ಬೇಕಾದ ಸನ್ಮಾನ ಮಾಡಿ, ಮೊದ್‌ಮಕ್ಕಳ ಪದ್ಧತಿ ಪ್ರಕಾರ ಅವನ ಕೈಗೆ ಒಪ್ಪ್‌ಸಿ ಕೊಟ್ಟ್, ಅವರೆಲ್ಲರ್ನೂ ವೈಭವಂದ ದ್ವಾರಕೆಗೆ ಕಳ್ಸಿ ಕೊಟ್ಟಳಿತ್. ಬಲರಾಮ ದ್ವಾರಕೆಗೆ ಬಾಕನ, ಕೃಷ್ಣನೂ ಜಾಂಬವತಿಗೂ ಅವರ ಮಜ್ಜನ ಹಂಬಲಲೇ ಮೈ ಮರ್ತ್ ಕುದ್‌ಕಳಿಂಡ್ ಇವು ಹೋಗಿ ಹಕ್ಕಲೆ ನಿತ್ತರೂ ಅವ್ಕೆ ಗೊತ್ತೇ ಆತ್‌ಲೆ. ಬಲರಾಮ ಕರಿಯಕನ ಹದ್ಕಿ ಬಿದ್ದೊ. ಮಜ್ಜನ್ನೂ ಸೊಸೆನ್ನೂ ನೋಡಿ ತುಂಬ ಆನಂದಳಿಲಿ ಅವರ ತೊಬ್ಜಿಕಂಡೊ, ಮತ್ತೆ ಬಲರಾಮಂಗೆ ಕಾಲ್‌ಮುಟ್ಟಿ ನಮಸ್ಕಾರ ಮಾಡ್ದೊ.

## ರಾಜಸೂಯ ಯಾಗ

ಇಂದ್ರಪ್ರಸ್ತಳಿಲಿ ಪಾಂಡವರ ರಾಜ್ಯ ಭಾರಿ ಸಂತೋಸುಲಿ ನಡಿಯತ್ತಿತ್ತ್. ಪ್ರಜೆಗ ಎಲ್ಲ ಸಂತುಷ್ಟಿಂದ ಇದ್ದೊ. ಇದ್ ಪಾಂಡವರ ರಾಜ್ಯಳಿಲಿ ಮಾತ್ರ ಅಲ್ಲ. ಎಲ್ಲ ಕಡೆಗೂ ಶಾಂತಿ ಸಮೃದ್ಧಿಗ ನೆಲ್ಸಿತ್ತ್. ಇದ್ ಕಾಲದ ಮಹಿಮೆಂತ ಹೇಳಳಿಕ್. ಒಂದು ದಿನ, ತ್ರಿಲೋಕಸಂಚಾರಿಯಾದ ನಾರದ ಆಕಾಶ ಮಾರ್ಗಂದ ಭೂಮಿಗೆ, ಪಾಂಡವರ ಅರಮನೆನ ಅಂಗಳಳಿಲಿ ಇಳ್ತ್. ಇವು ಐದ್ ಜೆನ ತುಂಬ ಭಕ್ತಿಂದ ಎದ್‌ರ್ ಬಂದ್, ಅವನ ಒಂದು ಸುಂದರ ಆಸನಳಿಲಿ ಕುದ್ದ್‌ರ್ಸಿ, ಅವನ ಪಾದ ತೊಳ್ದ್, ಆ ನೀರ್‌ನ ತಾವು ಐದು ಜೆನಂಗಳೂ ತಲೆಗ ಕೊಡ್ಕ್ಯಂಡ್ ಭಕ್ತಿ ತೋರ್ಸಿದೊ. ಮತ್ತೆ ಯುಧಿಷ್ಠಿರ ನಾರದನೊಟ್ಟಿಗೆ ಮಾತಾಡಿಕೆ ಸುರುಮಾಡ್ತ್. ಈಗ ಎಲ್ಲಿಂದ ಬಂದಳಿರೀಂತ ಕೇಳ್ದೈಕೆ, ಸ್ವರ್ಗಂದ, 'ದೇವೇಂದ್ರನ ಆಸ್ಥಾನಂದ ಬನ್ನೆ 'ದೇವೇಂದ್ರ ಸೊವ್ರುಕ್ಯಳಿಲಿ ಉಟ್ಟೊ? ಅಲ್ಲಿರುವ ನಮ್ಮ ಅಪ್ಪನ ಕತೆ ಏನ್? ಹೇಂಗೊಳೊ'ಂತ ಯುಧಿಷ್ಠಿರ ಕೇಳ್ತ್. ಅದರ ಹೇಳೊಕುಂತಳೆ ನಾ ಬಂದಳಿದ್. ದೇವೇಂದ್ರನ ಸೊವ್ರುಕ್ಯಕೇನೂ ಕಮ್ಮಿ ಇಲ್ಲೆ. ನಿಮ್ಮ ಅಪ್ಪಪಾಂಡುನ ಸ್ಥಿತಿ ಲಾಯ್ಕಿಲ್ಲೆ ಅಂವ ಎಲ್ಲ ರಾಜರ್‌ಂದ ನಿಕೃಷ್ಟವಾದ ಸ್ಥಾನಳಿಲಿ ಉಟ್ಟು. ಮುಂದೆ ನಿಲ್ಲಿಕೆ ಧೈರ್ಯ ಇಲ್ಲೆ. ಏನ್ ಹೇಳ್‌ವೆನೋ. ಏನ್ ಹೇಳುವೆನೋಂತ ಹೇಳುವ ಅಂಜಿಕೆ. ಹೀಂಗೆ ಅವನ ಸ್ಥಿತಿನ ನೋಡಿಕೆ ತೀರದೆ ನೀವ್ಗೆ ಹೇಳೊಕುಂತ ಬಂದೆ ನಿಮ್ಮಂತ ಐದ್ ಜೆನ ಬಲವಂತ ಮಕ್ಕಳ ಪಡ್ದೂ ನನ್ನ ಅವಸ್ಥೆ ಹೀಂಗಾತಲೇಂತ ಅವಂಗೆ ತುಂಬ ಬೇಜಾರ್ ನನ್ನ ಮಕ್ಕ ರಾಜಸೂಯ ಯಾಗ ಮಾಡಿಕೆ ನೀವೊಮ್ಮೆ ಹೇಳೀಂತ ನನ್ನೊಟ್ಟಿಗೆ ಹೇಳ್ತ್. ಅಂವ ಅಲ್ಲಿ ಪಡುವ ಅವಮಾನನ ನೋಡಿಕೆ ಬೊತ್ತದೆ ನಾ ಸೀದಾ ನಿಮ್ಮ ನೋಡಿಕೆ ಬಂದೆ. ಆದಷ್ಟು ಬೇಗ ನೀವು ಈ ಕಾರ್ಯನ ಮಾಡಿರೆ ನಿಮ್ಮ ಅಪ್ಪ ಅಲ್ಲಿ ಎಲ್ಲರೊಟ್ಟಿಗೆ ಸಮಾನ ಗೌರವಂದ ಇರುವಾಂಗೆ ಆದುಂತ ಹೇಳಿ ರುಸಿ ಮಾತ್ ನಿಲ್ಸಿತ್. ಯುಧಿಷ್ಠಿರ ಯೋಚನೆಲಿ ಮೈಮರ್ತ್ ಹೋತು. ಭೀಮಾರ್ಜುನಳಿರೆಲ್ಲ ರಾಜಸೂಯ ಯಾಗ ಮಾಡಿಯೇ ತೀರೊಕು. ನಮ್ಮ ಅಪ್ಪಂಗೆ ಒಳ್ಳೆ ಗೌರವ ಸಿಕ್ಕುವಂತ ಕಾರ್ಯನ ನಾವು ಮಾಡಿಯೇ ತೀರೊಕುಂತ ಅವವೇ

ಮಾತಾಡಿಕಂಡೊ. ಅಂವನ ಮೌನನ ನೋಡಿ ನಾರದ "ಯಾಕೆ ನೀ ಏನೂ ಹೇಳ್‌ದುಲೆ. ನಿಂಗೆ ಒಪ್ಪಿಗೆ ಇಲ್ಲೆನೊ"ಂತ ಕೇಳ್ತ್. "ಹಾಂಗಲ್ಲ ರುಸಿಗಳೇ. ಯಾಗ ಮಾಡೊಕುಂತ ನಾ ಒಪ್ಪಿನೆ. ಆದರೆ ಹೇಂಗೆ ಮಾಡುದು? ಎಲ್ಲ ರಾಜರ್‍ನ್ನಾ ಗೆಲ್ಲೊಕು. ಅವರ್‌ಂದ ಕಪ್ಪ ಕಾಣಿಕೆ ಪಡಿಯೊಕು. ಅವಾಗಿ ಕೊಡದಿದ್ದರೆ ಯುದ್ಧ ಮಾಡೊಕು. ಅದ್‌ಕೆ ನನ್ನ ತಮ್ಮಂದಳೇ ಹೋಕು. ನನ್ನ ಸಾರ್ವಭೌಮಂತ ಮಾಡಿಕೆ, ಅವೆಲ್ಲ ಕಷ್ಟ ಪಡೊಕು. ಅಪಾರ ಸಂಪೊತ್ತ್ ಸಂಗ್ರಹ ಆಕು. ಇದೆಲ್ಲ. ನಮ್ಮಂದ ತೀರ್ದೋಂತ ಯೋಚನೆ ಮಾಡಿಕಳಂಡ್ ಇದ್ದೆ." ಹೀಂಗೆ ಯುಧಿಷ್ಠಿರ ಹೇಳ್ತ್. ಅದಿಕೆ ನಾರದ ಕಿಚ್ಚಿಗೇ ಚಳಿ ಹಿಡ್ದಾಂಗಾತ್ ನಿನ್ನ ಮಾತ್. ದಿಗ್ಗಜಗಳದಾಡನ ಹಿಡ್‌ದ್ ಆಡ್ಸುವ ಸಾಮರ್ಥ್ಯದ ನಾಲ್ಕ್ ತಮ್ಮಂದಳ್ ನಿಂಗೆ ಒಳೊ. ಅವರ ದೇಶದ ನಾಲ್ಕ್ ಕಡೆಗೆ ನಿನ್ನ ದಿಗ್ವಿಜಯಕ್ಕೆ ಕಳ್ಸ್. ಅವರ ಪ್ರತಾಪನ ಆಗ ನೋಡು ಭಂಡಾರಕ್ಕೆ ನೆರೆ ಬಂದಾಂಗೆ ಸಂಪೊತ್ತ್ ಬಂದ್ ತುಂಬಿದೆ. ಮತ್ತೆ ಮಹಾಲಕ್ಷ್ಮಿನ ತನ್ನ ಎದೆ ಮೇಲೇ ಇಸಿಕಂಡ ಮಹಾವಿಷ್ಣುವೇ ಕೃಷ್ಣನ ರೂಪುತಾಳಿ ಬಂದ್, ನಿಂಗೆ ಹಕ್ಕಲೆನ ನಂಟ ಆಗಿ ಇರ್‌ಕನ ನೀ ಯಾಕೆ ಯೋಚನೆ ಮಾಡೊಕು? ಅಂವ ನಿಮ್ಮ ಪಕ್ಷಲಿ ಇರ್‌ಕನ ಎಂಥ ಬಲಶಾಲಿ ಶತ್ರುವೇ ಆಗಲಿ ಅವನ ಒಂದು ಸೊಳ್ಳೆನ ಪುಡಿಕೆದಾಂಗೆ ಮಾಡುವ ಸಾಮರ್ಥ್ಯ ಅವಂಗೆ ಉಟ್ಟುಂತೇಳ್‌ಕನ ನೀ ಯಾದೊಕೆ ಹೆದ್‌ರೊಕು? ನೀ ಅಂವನೊಟ್ಟಿಗೆ ಒಂದು ಮಾತ್ ಕೇಳುದು ಒಳ್ಳೆದ್‌ಂತ ಹೇಳಿ ನಾರಾಯಣ ನಾರಾಯಣಂತ ಕೈತಾಳ ಹೊಡ್ದ್ ಅಲ್ಲಿಂದ ಮಾಯ ಆತ್.

ಭೀಮ, ಅರ್ಜುನ, ನಕುಲ ಸಹದೇವ ಎಲ್ಲರೂ ರಾಜಸೂಯ ಯಾಗನ ಮಾಡಿಯೇ ತೀರೊಕುಂತ ಏಕಕಂಠಲಿ ಹೇಳ್ದೊ. ಆಗ ಯುಧಿಷ್ಠಿರ, ಎಲ್ಲದಿಕೆ ಮುಂದೆ ನಾವು ಕೃಷ್ಣನೊಟ್ಟಿಗೆ ವಿಚಾರ್ಸಿ ಮತ್ತೆ ಎಲ್ಲ ನಿರ್ಧಾರ ಮಾಡೊನೊಂತ ಹೇಳ್ತ್. ಹಾಂಗೆ ಅವನ ಇಂದ್ರಪ್ರಸ್ತಕ್ಕೆ ಬರೊಕುಂತ ಕರಿಯಕೆ ಒಬ್ಬ ದೂತನ ಯುಧಿಷ್ಠಿರ ಕಳ್ಸಿತ್.

ಈಗ ಕೃಷ್ಣ ಒಂದು ಸಂಧಿಗ್ಧಲಿ ಇತ್ತ್. ಗಿರಿವ್ರಜ ನಗರಲಿ ಜರಾಸಂಧ ರಾಜನಾಗಿತ್ತ್. ಅಂವ ಈಶ್ವರಂಗೆ ಬೊಲಿಕೊಡಿಕೆಂತ ರಾಜರ್ಗಳೆಲ್ಲ ಯುದ್ಧಲಿ ಸೋಲ್ಸಿ ಸೆರೆಮನೆಗೆ ಹಾಕಿತ್ತ್. ಅವರ ಸಂಖ್ಯೆ ಹನ್ನೆರ್‌ಡ್ ಸಾವಿರ ಆದ ಕೂಡ್ಲೆ ಅವರ ಬೊಲಿಕೊಡುದುಂತ ಅವನ ಸಂಕಲ್ಪ. ಅದ್ಕೆ ಇನ್ನೂ ಹದ್ನಾಲ್ಕ್ ಜೆನ ಕಮ್ಮಿಯಾಗಿತ್ತ್. ಸೆರೆಲಿದ್ದ ರಾಜೆರ್ಗೆಲ್ಲ ಮಾತಾಡಿಕಳಂಡ್ ಒಬ್ಬ ಗುಪ್ತಚಾರನೊಟ್ಟಿಗೆ ನೀನೇ ನಮ್ಮ ಬಚಾವ್ ಮಾಡೊಕುಂತ ಕೃಷ್ಣಂಗೆ ಹೇಳಿ ಕಳ್ಸಿದೊ. ಏನ್ ಮಾಡ್ದುಂತ ಕೃಷ್ಣ ಯೋಚನೆ ಮಾಡಿಕಳಂಡ್ ಇರ್‌ಕನನೇ, ಯುಧಿಷ್ಠಿರನ ದೂತನೂ ರಾಜಸೂಯದ ವಿಚಾರ ಎತ್ತಿಕಳಂಡ್ ಬಾತ್. ಜರಾಸಂಧ ಬೊದ್ಕಿದ್ದರೆ ಅಂವ ರಾಜಸೂಯ ಯಾಗ ನಡಿಯಕೆ ಬುಡಿಕಿಲ್ಲೆ. ಅಂವನ ಉಪಾಯಂದಳೇ ಕೊಲ್ಲೊಕು ಹೊರ್ತು ಬೇರೆ ದಾರಿ ಇಲ್ಲೆ. ಹಾಂಗೆ ಭೀಮ ಅರ್ಜುನ ಮತ್ತೆ ತಾನೂ ಗಿರಿವ್ರಜಕ್ಕೆ ಹೋಗಿ, ಜರಾಸಂಧನ ಕತೆನ ಮುಗ್ಸುದುಂತ ನಿಶ್ಚಯಮಾಡ್ದ ಮೇಲೆ ಅಲ್ಲಿಂದ ಬಂದ ಗುಪ್ತಚಾರ ನೊಟ್ಟಿಗೆ ಸೆರೆಲಿರುವ ರಾಜೆರಿಗೆ ಅಭಯ ಸಂದೇಶ ಕಳ್ಸಿತ್.

ಗಿರಿವ್ರಜದ ಬೆಟ್ಟದ ಮೇಲೆ ಜರಾಸಂಧ ಎರ್ಡ್ ದೊಡ್ಡ ಭೇರಿಗಳ ಮಾಡಿ ಇಸಿತ್ತ್.

ಅವನೊಟ್ಟಿಗೆ ಯುದ್ಧಕ್ಕೆ ಬಾವ ಧೈರ್ಯ ಇದ್ದೊವು ಆ ಭೇರಿಗಳ ಬಾರ್‍ದೊಕುಂತ. ಯಾರ್‌ಂದಳೂ ಅವನ ಜಯ್ಸಕೆ ಬೊತ್ತ್‌ಂತ ಅಂವ ನಂಬಿತ್ತ್. ಬಹುಮಟ್ಟಿಗೆ ಅದ್ ನಿಜವೇ ಆಗಿತ್ತ್. ಕೃಷ್ಣ, ಭೀಮಾರ್ಜುನರೊಟ್ಟಿಗೆ ಮೂರು ಜೆನನೂ ಬ್ರಾಹ್ಮಣ ವೇಷ ಹಾಕಲಂಡ್ ಹೋಗಿ ಬೆಟ್ಟಲಿದ್ದ ಭೇರಿಗಳ ಬಾರ್ಸಿ ಅದರ ಒಡ್ದ್ ಹಾಕಿ ಅರಮನೆನ ಹಿಂದೆನ ಬಾಗ್‌ಲ್‌ಲಿ ಪ್ರವೇಶಿಸಿ ನಡೀರ್ಲ್‌ಲಿ, ನಾವು ಯುದ್ಧಾಪೇಕ್ಷಿಗಳಾಗಿ ಬಂದೊಳಂತ ಜರಾಸಂಧಂಗೆ ಹೇಳ್ತ್. ಇವು ವೇಷಧಾರಿಗ, ನಿಜವಾದ ಬ್ರಾಹ್ಮಣರಲ್ಲಂತ ಜರಾಸಂಧಂಗೆ ಗೊತ್ತಾತ್. ಅವಂಗೆ ಕೃಷ್ಣನ ಮೇಲೆ ಕಡು ಹಗೆ, ಕಾರಣ, ಜರಾಸಂಧನ ಎರ್ಡ್ ಹೆಣ್ಣ್ ಮಕ್ಕಳ್ನ ಕಂಸಂಗೆ ಮೊದುವೆ ಮಾಡಿ ಕೊಟ್ಟಿತ್ತ್. ಕೃಷ್ಣ ಕಂಸನ ಕೊಂದಿತ್ತ್. ಹಾಂಗೆ ಮಥುರೆಲಿ ಕೃಷ್ಣ ಇಲ್ಲದಿರುವ ಸಮಿಯನೋಡಿ ಇಂವ ಮಥುರೆಗೆ ಮುತ್ತಿಗೆ ಹಾಕಿ ಬೇಕಾವಷ್ಟ್ ಸರ್ತಿ ಹಾನಿ ಮಾಡ್‌ತ್ತಿತ್ತ್. ಇವನ ಈ ಉಪಟಳ ತಡಿಯಕೆ ಬೊತ್ತದ ಕೃಷ್ಣ ರಾಜಧಾನಿನ ಸೊಮುದ್ರದ ನೊಡುಲಿ ದ್ವಾರಕಂತೇಳುವ ನಗರ ನಿರ್ಮಾಣ ಮಾಡಿ ಯಾದವರಿಗೆಲ್ಲ ಅದೇ ನೆಲಮನೆ ಆಗಿರುವಾಂಗೆ ಮಾಡಿತ್ತ್.

ಭೀಮನೊಟ್ಟಿಗೆ ಜರಾಸಂಧ ಮಲ್ಲಯುದ್ಧ ಮಾಡುದುಂತ ನಿಶ್ಚಯ ಆತ್. ಇಬ್ರೂರೂ ಸಮಬಲದೊವು. ಹೀಂಗೆ ಏಳ್‌ದಿನ ಇವರ ಯುದ್ಧ ನಡ್ತ್. ಕಡೆಗೆ ಭೀಮ ಜರಾಸಂಧನ ನೆಲಕ್ಕೆ ಕುಕ್ಕಿ ಒಂದು ಕಾಲ್‌ಲಿ ಅವನ ಕಾಲ್‌ನ ಮೆಟ್ಟಿ, ಇನ್ನೊಂದು ಕಾಲ್‌ನ ಮೇಲೆ ಸರಕ್ಕನೆ ಎಳಿಯಕನ ಜರಾಸಂಧನ ಸರೀರ ಸರೀ ಎರ್ಡ್ ಹೋಳಾತ್. ತನ್ನ ಕೈಲಿದ್ದ ತುಂಡುನ ಭೀಮ ಹರ್ಕಿ ಕರೆಗೆ ಇಟ್ಟತ್. ಆ ಎರ್ಡ್ ಹೋಳುಗ ಅನುಲೋಮವಾಗಿ ಅಂದರೆ ತಲೆಭಾಗಗಳೂ, ಕಾಲ್‌ನ ಭಾಗಗಳೂ ಒಂದೇ ಕಡೆಗೆ ಇರುವ ಹಾಂಗೆ ಬಿದ್ದವರ್‌ಂದ, ಅವರ್ಡ್ ಹೋಳುಗಳೂ ಹಿಂದೆ ಬಂದ್ ಸೇರಿಕಲಂಡ್ ಜೀವ ಬಂದ್ ಹಿಂದೆನಾಂಗೆ ಯುದ್ಧ ಮಾಡ್‌ತಿತ್ತ್. ಭೀಮಂಗೆ ಸುಸ್ತಾಕೆ ಸುರಾತ್. ನಾಲ್ಕೈದು ಸರ್ತಿ ಹೀಂಗಾದ ಮೇಲೆ ಕೃಷ್ಣ ಒಂದು ಸಣ್ಣ ಕೋಲುನ ಸೀಳಿ, ಆ ಎರ್ಡ್ ಭಾಗಂಗಳೂ ಹಿಂದೆ ಮುಂದೆ ಆವಾಂಗೆ ಹಿಡ್ದ್ ಅಂದರೆ ವಿಲೋಮವಾಗಿ ಇರುವಾಂಗೆ ಮಾಡಿ ಭೀಮಂಗೆ ತೋರ್ಸಿತ್. ಅವಂಗೆ ಕೆಣಿ ಗೊತ್ತಾಗಿ, ಒಂದು ಹೋಳುನ ಕಾಲ್‌ನ ಕಡೆಗೆ ಇನ್ನೊಂದರ ತಲೆ ಬಾವಾಂಗೆ ಹರ್ಕಿ ಇಟ್ಟತ್. ಅಲ್ಲಿಗೆ ಜರಾಸಂಧನ ಅಂತ್ಯ ಆತ್.

ಜರಾಸಂಧನ ಮಕ್ಕ ಸಹದೇವಂತೇಳಂವ ಯುವರಾಜ ಆಗಿತ್ತ್. ಜರಾಸಂಧನ ವಧೆ ಆತ್‌ಂತ ಕೇಳಿ ಅಂವ ತನ್ನ ಏನಾರ್ ಮಾಡಿಬುಟ್ಟವೆನೋಂತ ಹೆದ್‌ರಿಕಲಂಡೇ ಇತ್ತ್. ಕೃಷ್ಣ ಅವಂಗೆ ಅಭಯ ಕೊಟ್ಟ್, ನಿನ್ನ ಆಗಲಿ, ನಿನ್ನ ರಾಜ್ಯ ಭಂಡಾರ ಕೋಶ ಆಗಲಿ ನಾವುಗೆ ಯಾದೂ ಬೇಡ. ನಾವ್ಗೆ ಸೆರೆಲಿರುವ ರಾಜರ್‌ಗಳ ಬುಡ್ಸುದು ಮುಖ್ಯ. ಹಾಂಗೆ ನೀ ಅವರ ಕೂಡ್ಲೆ ಬುಡುಗಡೆ ಮಾಡ್ಸ್. ಮತ್ತೆ ನಿನ್ನ ರಾಜ್ಯ ಮಗಧ ದೇಶನ ನೀನೆ ಆಳಿಕಲಂಡ್ ಇರ್. ಹೀಂಗೆ ಅವಂಗೆ ರಾಜ್ಯಾಭಿಷೇಕ ಮಾಡಿ, ಯುಧಿಷ್ಠಿರ ಇಂದ್ರಪ್ರಸ್ಥಲಿ ರಾಜಸೂಯ ಯಾಗ ಮಾಡ್ತ್. ಅದ್ಕೆ ನೀ ಬರೊಕು. ಅಲ್ಲದೆ ಎಲ್ಲ ರೀತಿನ ಸಹಾಯನೂ ಕೊಡೊಕುಂತ ಕೃಷ್ಣ ಹೇಳ್ತಿಕೆ ಅಂವ ಸಂತೋಸುಂದ ಒಪ್ಪಿಕಲಂಡತ್.

ಸೆರೆಮನೆಂದ ಹೊರೆಗೆ ಬಂದ ರಾಜೆರ್ಗೆಲ್ಲ ಕೃಷ್ಣಂಗೆ ಶರಣಾಗಿ ಕೃತಜ್ಞತೆಗಳ ಹೇಳ್ರೊ. ಅವ್ಕೊ ಕೃಷ್ಣ 'ನೀವು ನಿಮ್ಮ ನಿಮ್ಮ ರಾಜ್ಯಗಳೀಗೆ ಹೋಗಿ ಸುಖ ಸಂತೋಸುಂದ ರಾಜ್ಯ ಆಳಿಕಳೆಂಡ್ ಇರಿ ಮತ್ತೆ ಯುಧಿಷ್ಟಿರ ನಡ್ಸುವ ರಾಜಸೂಯ ಯಾಗಕ್ಕೆ ನೀವು ಬರೋಕು. ನಿಮ್ಮಂದ ಸಾಧ್ಯವಾದ ಎಲ್ಲ ಒತ್ತಾಸೆನೂ ಕೊಡುಕುಂತ ಹೇಳ್ತ್. ಅದಿಕೆ ಎಲ್ಲೀವೂ ಒಪ್ಪಿಕಳೆಂಡೊ. ಮತ್ತೆ ಕೃಷ್ಣ ಭೀಮಾರ್ಜುನರೊಟ್ಟಿಗೆ ಇಂದ್ರಪ್ರಸ್ತಕ್ಕೆ ಬಾತ್. ಅಲ್ಲಿದ್ದೊವೆಲ್ಲ ಭಾರಿ ಸಂಭ್ರಮಂದ ಅವರ ಸ್ವಾಗತ ಮಾಡ್ರೊ.

ಕೃಷ್ಣ ಯುಧಿಷ್ಟರಂಗೆ ಹೇಳ್ತ್: ರಾಜಸೂಯ ಯಾಗ ನಡಿಯಕೆ ಇದ್ದ ದೊಡ್ಡ ಬಂಡೆಕಲ್ಲ್‌ನಾಂಗಿದ್ದ ಅಡ್ಡಿನ ಭೀಮ ಪೊರಿಹಾರ ಮಾಡ್ತ್. ಇನ್ನ್ ಬೇಗನೇ ನೀ ಆ ಕಾರ್ಯಕೆ ಇಳಿಯಕ್. ಮುಂದೆ ದೊಡ್ಡ ರುಸಿಗಳ ಕರ್ಸ್. ಅವರ ಸಲಹೆ ಪ್ರಕಾರ ಯಾಗಕ್ಕೆ ಯೋಗ್ಯವಾದ ಭೂಮಿನ ಆಯ್ಕೆಮಾಡೊಕು. ಎಷ್ಟೋ ಲಕ್ಷ ಲಕ್ಷ ಜೆನ ಬಾವುಕೆ ಊಟದ ವ್ಯವಸ್ಥೆ ಆಕು. ಅದಿಕೆ ಬೇಕಾದ ಸಾಮಾನ್ ಸರಂಜಾಮುಗಳ ಜೋಡ್ಸ್. ಬಂಧು ಬಾಂಧವರಿಗೆ ಆಮಂತ್ರಣ ಕಳ್ಸಿ ಅವರೆಲ್ಲ ಆದರಂದ ಬರಮಾಡಿ, ಅವ್ಕೆಲ್ಲ ಯೋಗ್ಯ ವಸತಿಗಳ ಏರ್ಪಾಡ್ ಮಾಡೊಕು.

ಯುಧಿಷ್ಟಿರ ಕೇಳ್ತ್. ಹಸ್ತಿನಾವತಿಗೆ ಆಮಂತ್ರಣ ಕಳ್ಸಿರೆ. ಭೀಷ್ಮ, ದ್ರೋಣ. ವಿದುರ, ಕೃಪಾಚಾರ್ಯ ಇವೆಲ್ಲ ಸಂತೋಷಂದ ಬಾವ್ರೊ. ಆದರೆ ದೊಡ್ಡಪ್ಪ ಧೃತರಾಷ್ಟ್ರ, ದುರ್ಯೋಧನ, ಅವನ ತಮ್ಮಂದೀರ್, ಕರ್ಣ, ಇವೆಲ್ಲ ಬಾರದೆ ಇದ್ದರೆಂತ ಯೋಚನೆ ನಂಗೆ. ಪ್ರೀತಿ ಗೌರವಂದ ಅವರೆಲ್ಲ ಕರಿಯಕನ, ಈ ಕಾರ್ಯನಡಿದೂ ನಮ್ಮ ಕುಲದವರ್‌ಂದಳೇ. ಹಾಂಗಿರ್ಕನ ನಾವು ಅದರ್ಲಿ ಸೇರದಿದ್ದರೆ ಮೊರ್ದು ಇರ್ಲೆಂತೇ ಬಾರದೆ ನಿಲ್ಲಿಕಿಲೆ. ಹಾಂಗೆ ಬಂದೊವ್ಕೆ ಅವು ನಾವೂ ಇದಿಕೆ ಸೇರ್ದೊವೇಂತ ಭಾವನೆ ಬಾವಾಂಗೆ ಏನಾರ್ ಜವಾಬ್ದಾರಿಯುತ ಕೆಲ್ಸನ ಅವುಕೇ ಒಪ್ಪಿಸಿಕೊಡೊಕುಂತೊನೂ ಸಲಹೆ ಮಾಡ್ತ್. ಹಾಂಗೆ ಆಮಂತ್ರಣ ಎಲ್ಲ ಕಡೆಗೂ ಕಳ್ಸಿ ಆದ ಕೂಡ್ಲೆ ನಿನ್ನ ನಾಲ್ಕ ಜೆನ ತಮ್ಮಂದರ ನಾಲ್ಕ್ ಕಡೆಗೂ ದಿಗ್ವಿಜಯಕೆ ಕಳ್ಸ್. ಅವು ಅಲ್ಲಿನ ರಾಜರ್ಗಳ್‌ಂದ ಕಪ್ಪ ಕಾಣಿಕೆಗಳತಂದ್ ಭಂಡಾರಕ್ಕೆ ಸೇರ್ಸೊಕು. ರಾಜೆರ್ಗೆ ಯಾರಾರ್ ವಿರೋಧಿಸಿರೆ ಯುದ್ಧ ಮಾಡಿ ಅವರ ಸೋಲ್ಸಿ ಅವು ಕಪ್ಪ ಕಾಣಿಕೆನ ಕೊಡುವಾಂಗೆ ಮಾಡಕಾದು.

ಈ ಮಾತ್‌ನ ಯುಧಿಷ್ಟಿರ ಕೇಳಿ, ಕೃಷ್ಣನ ಅಪ್ಪಣೆ ಪ್ರಕಾರ ಮುಂದೆ ವೇದವ್ಯಾಸ ರುಸಿನ ಧ್ಯಾನ ಮಾಡಿ ಬರ್ಸಿತ್. ಯುಧಿಷ್ಟಿರನ ಕಾರ್ಯನ ಕೇಳಿ ಅವಂಗೆ ಸಂತೋಸಾತ್. ನಾ ಈ ಯಜ್ಞಲಿ ಏನೂ ಲೋಪ ಆಗದಾಂಗೆ ಮೇಲ್ವಿಚಾರ ನೋಡಿಕಣೆಂತ ಹೇಳಿ ಯಜ್ಞದ ಬೇರೆ ಬೇರೆ ಕಾರ್ಯಕೆ ಅಗತ್ಯವಾದ ರುಸಿಗ ಎಲ್ಲ ಅಲ್ಲಿಗೆ ಬೇಗ ಬಂದ್ ಸೇರುವಾಂಗೆ ಹೇಳಿಕಳ್ಸಿತ್. ಎರ್ಡ್ ಮೂರುದಿನಲಿ ಪ್ರಮುಖ ರುಸಿಗ ಎಲ್ಲ ಬಂದ್ ಸೇರ್ದೊ. ಯಜ್ಞ ಮಾಡುವ ಪ್ರಶಸ್ತ ಭೂಮಿನ ಆಯ್ಕೆ ಮಾಡ್ರೊ. ಮತ್ತೆ ಒಂದು ಶುಭದಿನಲಿ, ಬೊಳ್ಪಿನ ಒಂದು ಶುಭಮುಹೂರ್ತಲಿ, ಒಂದು ಜೊತೆ ಎತ್ತ್ ಕಟ್ಟಿ, ಯಜ್ಞದೀಕ್ಷಿತನಾದ ಯುಧಿಷ್ಟಿರ ಆ ಜಾಗೆನ ನೇಗ್‌ಲ್‌ಲಿ ಹೂಡ್ತ್. ಎರ್ಡ್ ಎತ್ತ್‌ಗಳ ಪಕ್ಕಲಿ ನಕುಲ ಸಹದೇವರ್

ನಿತ್ತ್‌ಕಣ್ಡ್. ರುಸಿಗ ತೋರ್ಸಿದ ಜಾಗೆಲಿ ಎತ್ತ್‌ಗ ಹೋವಾಂಗೆ ತಿರ್ಗೋಕಾದ ಕಡೆ ತಿರ್ಗುವಾಂಗೆ ಮಾಡಿಕಣ್ಡ್ ಬಂದೊ. ಒಂದು ಐದ್ ನೇಗ್‌ಲ್‌ನ ಬರೆ ಆವಾಂಗೆ ಸಣ್ಣ ಸಣ್ಣ ಹೊಳಿಕಟ್ಟಿ ಹೂಡಿನಿಲ್ಸಿದೊ. ನಮ್ಮಣಲ್ಲಿ ಬೇಸಾಯ ಕೆಲ್ಸ ಸುರು ಆಕೆ ಮುಂದೆ ಗದ್ದೆಗೆ ಎತ್ತ್ ಕಟ್ಟ್‌ವ ಮುಹೂರ್ತಮಾಡುವ ಕ್ರಮ ಇದ್‌ಕೆ ತುಂಬ ಹೋಲಿಕೆ ಕಂಡಣೆದೆ. ಬೇಸಾಯನೂ ಯಜ್ಞದಾಂಗೆ ಒಂದು ಪವಿತ್ರ ಕಾರ್ಯನೇ.

ನಾಲ್ಕ್ ವೇದಗಳ ಪ್ರತಿನಿಧಿಸುವಾಂಗೆ ನಾಲ್ಕ್ ಕಡೆ ನಾಲ್ಕ್ ಯಜ್ಞ ಕುಂಡಂಗ, ಮತ್ತೆ ಇವೆಲ್ಲವ್ಕೂ ಮೂಲ ಎಂಬಂಥ ಒಂದು ದೊಡ್ಡಯಜ್ಞಕುಂಡ ನೊಡುಲಿ ಇರುವಾಂಗೆ ಸ್ಥಾಪನೆ ಮಾಡ್‌ದೊ. ಪ್ರತಿಯೊಂದು ಕಡೆನೂ ಅದಿಕೆ ಬೇಕಾದ ಪ್ರಧಾನ ಪುರೋಹಿತಣರ್, ವೇದ ಮಂತ್ರಗಳ ಹೇಳೊವು, ಕುಂಡಣಲಿ ಅಗ್ನಿ ಸ್ಥಾಪನೆ ಮಾಡೊವು ಅದಿಕೆ ಆಗಾಗ ಆಹುತಿಗಳ ಕ್ರಮ ಪ್ರಕಾರ ಹಾಕೊವು ಹೀಂಗೆ ಬೇರೆ ಬೇರೆ ಕಾರ್ಯ ನಿರ್ವಹಿಸುವಂಥ ರುಸಿಗ ಅವರವರ ಸ್ಥಾನಗಳ್ಲಿ ಕುದ್ದ್‌ಕಣ್ಡ್ ಇದ್ದೊ. ಇವೆಲ್ಲಣವ್ಕೂ ಪ್ರಧಾನ ರುಸಿಯಾಗಿ ವ್ಯಾಸ ಮಹರ್ಷಿಗ ಇದ್ದೊ. ಎಷ್ಟೊ ಅಂಡೆಗಳ್‌ಲಿ ತುಪ್ಪ, ಹಾಲ್, ಮೊಸರ್, ಕಬ್ಬುನ ನೀರ್, ಬೆಂಡದ ನೀರ್, ಎಷ್ಟೋ ಚೀಲ ಸಕ್ಕರೆ ಹೀಂಗೆ ಲೆಕ್ಕ ಇಲ್ಲದಷ್ಟ್ ಒಳ್ಳೊಳ್ಳ ಸಾಮಾನ್ ಸರಂಜಾಮುಗಳ ಹೋಮಕುಂಡಕೆ ಹಾಕಿ ಅಗ್ನಿನ ಮೂಲಕ ದೇವತೆಗಣಳಿಗೆ ಪ್ರೀತಿಯಾಗಣಲಿಂತ ಅರ್ಪಿಸಿದೊ. ಹೋಮಂದ ಹೊರ್ಟ ಹೊಗೆ, ಈ ವಸ್ತುಗಳ ಹೊರಿಕೆ ಬೊತ್ತದೆ. ಪೊತ್ತ್‌ಕಣ್ಡ್ ಬಾನಣಲಿ ಅಟ್ಟೊಳಿಕೆ ಹಾಕಂಡ್ ಇದ್ದ ಮುಗಣಲ್‌ನ ಮೇಲೆ ಇಳ್ಸಿ ಕುದ್ದ್‌ಕಂಡೊ. ದಾರಿ ಕರೆಲಿ ಅಂಗ್‌ಡಿ ಇಸಿ ಕುದ್ದ ವ್ಯಾಪಾರಿಗಳ ಹಾಂಗೆ. ಇನ್ನ್ ನಮ್ಮಂದ ಆಕಿಲಿಪ್ಪ ಈ ಹೊರ ಹೊರಿಕೆಂತೇಳಿಕಂಡ್ ನಿದ್ದೆ ತೂಗ್ಯಂಡ್ ಅಲ್ಲಿಯೇ ಕಾಲ್ ನೀಂಡಿಮಲ್ಗಿದೊ. ಗಾಳಿ ಬೀಸಿದ್, ಮುಗಣಲ್ಗಳ ಆಚೀಚೆ ಚಲಿಸುವಾಂಗೆ ಮಾಡ್‌ಕನ ತೊಟಿಗಿಲ್ ತೂಗಿದಾಂಗೆ ಆಗಿ ಅಷ್ಟೆಲ್ಲ ಗಾಢನಿದ್ದೆಬಾತ್. ದೇವತೆಗ ಇವರ ಹಂಗ್‌ಲೇನೂ ಇತ್ತ್‌ಲೆ. ಅವು ಕೆಳೆಗಿದ್ದ ರುಸಿಗ ಮಂತ್ರ ಹೇಳಿ ಕರಿಯಕನೇ ಬಂದ್ ಒಳ್ಳೊಳ್ಳ ವಸ್ತುಗಳ ಸ್ವೀಕಾರ ಮಾಡಿ, ಹೊಟ್ಟೆತುಂಬ ತೃಪ್ತಿಂದ ತಿಂದ್‌ಕಂಡೊ.

ಈ ಯಜ್ಞದ ಪುಣ್ಯಕಾರ್ಯನ ನೋಡಿಕೆ, ಕುರುಸಾಮ್ರಾಜ್ಯದ ಪ್ರಜೆಗ ಗಣ್ಣ್ಕ ಹೆಣ್ಣ್ಕ ಮಕ್ಕಂತೇಳದೆ ದಿನೋಳು ಲಕ್ಷ ಲಕ್ಷಲೆಕ್ಕಣಲಿ ಬೇರೆ ರಾಜ್ಯಕ್ಕೆ ಸೇರ್ದೂವೂ ಬಾತಿದ್ದೊ ಹಾಂಗೆ ಲಕ್ಷ ಲಕ್ಷದ ಲೆಕ್ಕಲಿ ರಾಜಣರ್‌ಗಳೂ ಮತ್ತು ರತ್ನ ವಜ್ರ ವೈಡೂರ್ಯ ಕಾಣಿಕೆನ ಹರಿವಾಣನ ತಾತಿದ್ದೊ. ಬಂದೊವು ಊಟೋಪಚಾರ ಮುಗ್‌ಸಿ ಹಿಂದೆ ಹೋಕನ ಅವ್ಕೂ ಅವು ಕಾಣಿಕೆ ತಂದಾಂಗೆ ಅವ್ಕೂ ದಾನ ಸನ್ಮಾನ ಮಾಡಿ ಕಣಳ್ಸಿತಿದ್ದೊ. ಊಟೋಪಚಾರದ ಮೇಲ್ವಿಚಾರಣೆನ ದುಶ್ಶಾಸನ ನೋಡಿಕಂಬತಿತ್ತ್. ಭಂಡಾರದ ಉಸ್ತುವಾರಿ ದುರ್ಯೋಧನ ನೋಡಿಕಂಬತ್ತಿತ್ತ್. ತಂದ ಕಾಣಿಕೆಗಳ ಭಂಡಾರಣಲಿ ಇಸಿಕೆ ಜಾಗೆ ಇತ್ತ್‌ಲೆ. ಹೋವುಕೆ ಕೊಡುವ ದಾನ ಸತ್ಕಾರಕ್ಕೆ ಅಷ್ಟೇ ಲೆಕ್ಕಣಲಿ ಭಂಡಾರಂದ ತೆಗಿಯುತ್ತಿದ್ದರೂ ಭಂಡಾರ ಯಾಗೋಳೂ ತುಂಬಿಕಣಂಡೇ ಇತ್ತ್. ದುರ್ಯೋಧನಂಗೆ ಆಶ್ಚರ್ಯ ಆತಿತ್ತ್. ಬಂದ ಕಾಣಿಕೆಗಳ ಕೈನೀಂಡಿ ತಕಣಂಡ್. ತಕಣಂಡ್ ಅವನ ತೋಳುಗಳ್ಲಿ

ಬೇನೆ ಆತಿತ್ತ್ ಗಡ. ಕರ್ಣಂಗೂ ದಾನ ದಕ್ಷಿಣೆ ಕೊಟ್ಟೂಕೊಟ್ಟ್ ಅವನ ಕೈಗಳಿಗೂ ಬೇನೆ ಆತಿತ್ತ್ ಗಡ. ದುಃಶ್ಶಾಸನನ ಕತೆನೂ ಹೀಂಗೇ. ಆದರೆ ಇವೆಲ್ಲ ತಮ್ಮ ಮನೆ ಕೆಲ್ಸಂತ, ಮನಸ್ ಕೊಟ್ಟ್ ಎಲ್ಲದರ ನೋಡಿಕಂಡೊ. ಕೃಷ್ಣ ಯಜ್ಞಕ್ಕೆ ಬಂದ ಬ್ರಾಹ್ಮಣರ ಪಾದ ತೊಳಿಯುವ ಕೆಲ್ಸ ಮಾಡ್‌ತಿತ್ತ್ ಗಡ!

ಈ ಯಾಗ ಮೂವತ್ತಾರ್ ದಿನಗಳವರೆಗೆ ಭಾರಿ ವೈಭವಂದ ನಡ್ತ್. ದೇವ, ಮಾನವ, ದಾನವಂತ ಸಮಸ್ತರಿಗೂ ಸಂತೋಸಾತ್. ಇದಿಕೆ ಬಂದ್ ಸೇರ್ದ ಎಲ್ಲ ರಾಜೆರ್‌ಗಳ್ಗೂ, ಯುಧಿಷ್ಠಿರ ಅವರವರ ಸ್ಥಾನ ಮಾನಕ್ಕನುಸರ್‍ಲಿ ಗೌರವಿಸಿ ಕಾಣಿಕೆ ಕೊಟ್ಟ್ ಸನ್ಮಾನ ಮಾಡ್ತ್. ಹಾಂಗೆ ಬಂದ್ ಸೇರ್‌ದವರ್‍ಲಿ ಅಗ್ರಪೂಜೆ ಯಾರಿಗೆ ಕೊಡೋಕುಂತ ಹಿರಿಯೊವು ಹೇಳೊಕುಂತ ಯುಧಿಷ್ಠಿರ ಸಭೆನ ಪ್ರಾರ್ಥಿಸಿಕಂಡಕೆತ್. ಅದ್ಕೆ ಉತ್ತರವಾಗಿ ಭೀಷ್ಮ ಕೃಷ್ಣ ಅವತಾರ ಪುರುಷ. ಈ ಲೋಕೋದ್ಧಾರಕ್ಕೆ ಬೇಕಾಗಿ ಅಂವ ಬೇಕಾದಷ್ಟ್ ಲೋಕ ಕಂಟಕ ರಾಕ್ಷಸರ ನಿರ್ಮೂಲ ಮಾಡಿ, ಲೋಕಶಾಂತಿ ಉಂಟು ಮಾಡ್ದಂವ. ಭೂಮಿನ ಪಾತಾಳಕೆ ತಕಂಡ್ ಹೋದ ರಕ್ಕಸನ ವರಾಹವತಾರ ತಾಳಿ ಕೊಂದ್, ಭೂಮಿನ ಮೇಲೆ ತಂದಂವ. ಸಮುದ್ರ ಮಥನ ಮಾಡ್‌ಕನ ಸಮುದ್ರಲಿಕೆಲಂತಿ ಹೋದ ಪರ್ವತನ ಕೂರ್ಮಾವತಾರ ತಾಳಿ, ಮಂದರ ಪರ್ವತನ ಎತ್ತಿ ಹಿಡ್ದ ಸಮರ್ಥ, ಭೂಮಿ ಆಕಾಶನ ಎರ್ಡ್ ಪಾದಗಳ್ಲಿ ಅಳ್ದ್, ಮೂರ್ನೆ ಹೆಜ್ಜೆನ ಬಲಿ ಚಕ್ರವರ್ತಿನ ತಲೆ ಮೇಲೆ ಇಸಿ, ಮೆಟ್ಟಿ ಅಂವನ ಪಾತಾಳಕ್ಕೆ ಇಳ್ಸಿದಂವ. ಇಂಥ ಲೋಕ ಗುರು ಕೃಷ್ಣನೇ ಅಗ್ರಪೂಜೆಗೆ ಅರ್ಹನಾದ ಮಹಾಪುರುಷ. ಅದ್ಕಾರ್ ಅಂವ ನೀ ಅಂವಂಗೇ ಅಗ್ರಪೂಜೆ ಮಾಡುದು ನ್ಯಾಯಂತ ಹೇಳ್ತ್. ಯುಧಿಷ್ಠಿರಂಗೆ ಕುಸಿ ಆತ್. ಸಹದೇವನ ಕರ್ದ್ ಇದ್ಕೆಲ್ಲ ತಯಾರ್ ಮಾಡ್‌ಂತ ಹೇಳ್ತ್. ಹಾಂಗೆ ನಕುಲನೂ ಸಹದೇವನೂ ಕೃಷ್ಣನ ಎರ್ಡ್‌ಪಕ್ಕಕ್ಕೆ ನಿತ್ತ್‌ಕೆಂಡ್ ಅವನ ಕೈಗಳ ಹಿಡ್ಕೆಂಡ್ ಸಭಾಭವನದ ನೊಡುಲಿ ಎತ್ತರಕೆಲಿದ್ದ ವೇದಿಕೆಗೆ ಕರ್ಕೆಂಡ್ ಹೋಗಿ, ಎತ್ತರದ ಸಿಂಹಾಸನಲಿ ಕುದ್ದ್‌ರ್ಸಿ, ಅವನ ಪಾದ ತೊಳಿಯಕೆ ಚಿನ್ನದ ಗಿಂಡಿಲಿ ನೀರ್ ಹಿಡ್ಕೆಂಡ್ ಪಾದ ತೊಳಿಯಕೆ ಸುರು ಮಾಡಕೆಕ್‌ಂತ ಹೊರ್ಟಗೆಳಿಗೆಲಿ ಗುಡುಗು ಗುಡ್ಗಿದಾಂಗ ಸದ್ದಾತ್. ಸಭೆ ಎಲ್ಲ ಬೆರ್ಗ್‌ಲಿ ನೋಡ್‌ಕನ ಶಿಶುಪಾಲ ಎದ್ದ್‌ನಿತ್ತ್. ಯುಧಿಷ್ಠಿರ ಅಗ್ರಪೂಜೆಗೆ, ಎತ್ತಿ ಹಿಡ್ದ ಅರ್ಘ್ಯನ, ಎತ್ತಿ ಚರಂಡಿಗೆ ಸೂಸು–ಮುಂದೆ! ಕುಲವೃದ್ಧ, ಅನುಭವಿ, ಗೌರವಸ್ಥಂತ ನಾವು ನಂಬಿಕಂಡ ಈ ಭೀಷ್ಮನ ನೋಡಿರೆ, ನರೆತುಂಬಿ, ತಿಂಗ ತುಂಬಿದ ಹೆಣ್ಣಕಳ ಹೊಟ್ಟೆನಾಂಗೆ, ದೊಳ್ಳು ಹೊತ್ತ್‌ಕೆಂಡ್ ತಲೆಲಿ ಸೆಟೆಯಾದ್, ತೊಪ್ಪುಯಾದ್‌ಂತ ವಿವೇಚನೆ ಇಲ್ಲದ ಮುದಿಯ ಏನೋ ಬಾಯಿಗೆ ಬಂದಾಂಗೆ ಪೊಳ್ಳುಕುದ್ದನಾಂಗೆ ಒದ್‌ರಿಬುಟ್ಟಕೆತ್‌ಂತ ನೀನೂ ಹೀಂಗ ಮಾಡ್ದೊ. ಇಷ್ಟ್ ಜನ ಕ್ಷತ್ರಿಯ ವೀರರ್ ಸೇರ್ದ ಇಂಥ ಪವಿತ್ರ ಸಭೆಲಿ ಅವರೆಲ್ಲ ಲೆಕ್ಕಕ್ಕೆ ತಾರದೆ ಈ ಗೊಲ್ಲಂಗೆ ಅಗ್ರಪೂಜೆ ಕೊಡಿಕೆ ನೀನೂ ಹೊರ್ಡಕೆ? ನಿಂಗೆ ಇಂವ ನಂಟ ಆಗಿರ್ದು. ನಿಮ್ಮೊಳಗೆ ಸ್ನೇಹ ಇರ್ದು. ಹಾಂಗೆ ನಿಂಗೆ ಅವಂಗೆ ಮನ್ನಣೆ ಮಾಡುವ ಬಯಕೆ ಇದ್ದರೆ ನಿನ್ನ ಮನೆಲಿ ಮಾಡ್. ಅದಲ್ಲದೆ ಲೋಕರಂಜನೆಗೆ, ಆಜನ್ಮ ಬ್ರಹ್ಮಚಾರಿಂತ ಹೇಳಿಕಂಬ ಪ್ರಪಂಚ ಜೀವನದ ಪೂರ್ಣ

ಅನುಭವ ಇಲ್ಲದ ಈ ನಪುಂಸಕ ಮುದಿಯನ ಮಾತಿಗೆ ಬೆಲೆಕೊಟ್ಟ್, ಈ ಬೆಣ್ಣೆ ಕಳ್ಳಂಗೆ, ಹೆಣ್ಮಕಳ ಸೀರೆ ಕಲ್ಲವಂಗೆ ಇಲ್ಲಿ ಮನ್ನಣೆ ಮಾಡ್ತುಂತೇಳಿರೆ ಅಮೃತನ ಉಂಡಮೇಲೆ ಗೋಮೂತ್ರಂದ ಬಾಯಿ ಮುಕ್ಕುಳಿಸಿದಾಂಗೆ.

ಈ ಮಾತ್‌ನ ಕೇಳಿ ಒಳ್ಳೆ ಪಾಂಡವರಿಗೆ ಕೋಪ ಕೆರ್ಳಿತ್. ಭೀಮ ಅವನ ಗದೆನ ಗಟ್ಟಿಯಾಗಿ ಮುಷ್ಟಿಲಿ ಹಿಡ್ಕಂಡತ್. ಅರ್ಜುನ ಗಾಂಡೀವನ ಕೈಲಿ ನೇವರ್ಸಿತ್. ನಕುಲ ಸಹದೇವರ್ ಒರೆಲಿದ್ದ ತಮ್ಮ ಖಡ್ಗಗಳಿಗೆ ಕೈ ಹಾಕಿದೊ. ಯುಧಿಷ್ಠಿರಂಗೆ ಇದರೆಲ್ಲ ನೋಡಿ ತುಂಬ ಆತಂಕ ಆತ್. ಪೊರ್ಲುಲಿ ನಡ್ದ ಯಾಗ ಕಾರ್ಯ, ಕಡೇ ನಿಮಿಷಲಿ ಹೀಂಗೆ ಹಾಳಾದೆಲಿ. ಪಿತಾಮಹಂಗೆ ಅವಮಾನ ಆತ್. ಕೃಷ್ಣಂಗೂ ಅವಮಾನ ಆತ್. ಏನ್ ಮಾಡುದೂಂತ, ಅಂವ ಶಿಶುಪಾಲನ ಸಮಾಧಾನ ಮಾಡಿಕೆ ನೋಡ್ತ್. ಇಂವನ ಸಮಾಧಾನದ ಮಾತ್‌ನ ಕೇಳಿ, ಕೊದಿವ ಎಣ್ಣೆಗೆ ತಣ್ಣೀರ್ ಸಿಡ್ಕಿರೆ, ಚಟ ಚಟಂತ ಸದ್ದ್ ಮಾಡಿಕೊಂಡ್ ಮೇಲೆ ಉರ್ದದ್ದುರುವ ಹಾಂಗೆ ಶಿಶುಪಾಲ ಇನ್ನಷ್ಟ್ ಉಗ್ರ ಆತ್. ಆಗ ಭೀಷ್ಮ ಯುಧಿಷ್ಠಿರಂಗೆ ಹೇಳ್ತ್: 'ನೀ ಸುಮ್ಮಂಗಿರ್. ಅವಂಗೆ ತಕ್ಕ ಮೊದ್ದ್ ಕುಡ್ಲಿಕೆ, ಕೃಷ್ಣಂಗೆಗೊತ್ತಿರ್ದು. ಅದಿಕದಿಕೆ ಬೇಕಾದ ಸಮಯ ಬಾಕನ ಮುಟ್ಟ ಮಾತಾಡದೆ ಕಾಯುದು ಅವನ ಕ್ರಮಂತ ಭೀಷ್ಮ ಹೇಳ್ತ್.

ಇದಾದ ಮೇಲೆ ಕೃಷ್ಣ ಮಾತಾಡಿಕೆ ಸುರುಮಾಡ್ತ್. "ಶಿಶುಪಾಲ! ನೀ ಹುಟ್ಟ್‌ಕನ ನಿನ್ನ ಸ್ರ್ರ್‌ರ ವಿಕಾರ ಆಗಿತ್ತ್. ನಿಂಗೆ ನಾಲ್ಕ್ ಕೈಗಳೂ ಹಣೆಲಿ ಒಂದೂ ಕಣ್ಣೂ ಇತ್ತ್. ನಿನ್ನ ಅವ್ವ ಸಾತ್ವತಿ ನಮ್ಮ ಯದುವಂಶಕೇ ಸೇರ್ದಾಗಿತ್ತ್. ನಂಗೆ ಅದ್ ನೇರತೆಲಿ ಅತ್ತೆ ಆಕು. ನಿನ್ನ ವಿಕಾರ ರೂಪುನ ನೋಡಿ ಅದಿಕೆ ತುಂಬ ವ್ಯಥೆ ಆಗಿತ್ತ್. ಈ ವಿಕಾರ ರೂಪು ಹೋಗಿ ಎಲ್ಲ ಮಕ್ಕಳ ಹಾಂಗೇ ನೀನೂ ಆಕುಂತ ಎಷ್ಟೋ ದೇವ್ರುಗಳಿಗೆ ಪ್ರಾರ್ಥನೆ ಸಲ್ಲ್‌ಸಿತ್. ಆಗ, ಈ ಕೂಸುನ ಯಾರ ತೊಡೆ ಮೇಲೆ ಮಲ್ಗ್‌ಸ್‌ಕನ ಇವನ ವಿಕಾರಾಂಗಗ ಮಾಯ ಆದವೆನೊ ಅಂತವನ ಕೈಲೇ ಆವಂಗೆ ಮರಣಂತ ಆಕಾಶವಾಣಿ ಆತ್. ಅದರ ಕೇಳಿ ಸಾತ್ವತಿ ಸಿಕ್ಕಿದವರ ತೊಡೆ ಮೇಲೆಲ್ಲ ಕೂಸುನ ತಕಂಡ್ ಹೋಗಿ ಮಲ್ಗ್‌ಸಿ ನೋಡ್ದು. ಹೇಂಗಾರ್ ಕೂಸೊಮ್ಮೆ ಸರಿಯಾಗಲಿಂತ ಅದರ ಆಸೆ. ಆದರೆ ಎಷ್ಟೋ ಜನರ ತೊಡೆ ಮೇಲೆ ಮಲ್ಗಿಸಿ ನೋಡಿರೂ ಕೂಸುನ ವಿಕಾರ ಹೋತ್‌ಲೆ. ನಾ ಆಗ ಎಳೆಯುವಕ ಆಗಿದ್ದೆ. ಒಂದು ದಿನ ಸಾತ್ವತಿ ನಿನ್ನ ತಂದ್ ನನ್ನ ತೊಡೆ ಮೇಲೆ ಮಲ್ಗ್‌ಸಿತ್. ಆ ಕೂಡ್ಲೆ ನಿನ್ನ ವಿಕಾರಾಂಗ ಮಾಯ ಆಗಿ ನೀ ಎಲ್ಲರ ಹಾಂಗೆ ಇರುವ ಪೊರ್ಲುನ ಕೂಸಾಗಿರುದರ ನೋಡಿ ಸಂತೋಸೂ ಆತ್. ಒಟ್ಟಿಗೆ ಬೇಜಾರನೂ ಆತ್. ಬೇಜಾರಾಕೆ ಕಾರಣ ನಿನ್ನ ಮೃತ್ಯು ನನ್ನ ಕೈಲಿಂತ ಹೇಳ್ದರ ಕೇಳಿ. ಹಾಂಗೆ ನನ್ನೊಟ್ಟಿಗೆ ಒಂದು ವರ ಕೇಳ್ದಾಂಗ ಕೇಳ್ತ್. ನನ್ನ ಈ ಮಜ್ಜ ನಿನ್ನ ವಿಷಯಲಿ ನೂರು ತೊಪ್ಪು ಮಾಡ್‌ಕನ ಮುಟ್ಟ ನೀ ಅವಂಗೆ ಕ್ಷಮೆ ಕೊಡೊಕುಂತ. ನಾನೂ ಅದಿಕೆ ಮಾತ್ ಕೊಟ್ಟೊಳೆ 'ಅಂವ ನನ್ನ ವಿಷಯಲಿ ನೂರು ತೊಪ್ಪು ಮಾಡ್‌ಕನ ಮುಟ್ಟ ನಾ ಅವಂಗೇನೂ ಮಾಡಿಕಿಲ್ಲೆ. ಅದರ ದಾಟರೆ ಮಾತ್ರ ನಾ ಸಹಿಸಿಕಿಲ್ಲೇಂತ'. ಈ ಸಭೆಲಿ ಯಾರೂ ಆತಂಕ ಪಟ್ಟ್‌ಕಣದ

ಸಮಾಧಾನಲ್ಲೇ ಇರಿ. ಈ ವಿಷಯ ಅವಂಗೆ ಗೊತ್ತಿರಿಕಿಲೆ. ಪಿತಾಮಹರಂಥ ಹಿರಿಯಲ್ವುಕೆ, ದುರ್ಯೋಧನನ ಹಾಂಗಿರೊವ್ರುಕು ಸಹ ಈ ಸಂಗತಿ ಗೊತ್ತುಟು ಬೇಕರೆ ವಿಚಾರ್ಸಲ್ಲಿ ಹೀಂಗೆ ಹೇಳಿ ಕೃಷ್ಣ ಮೌನ ತಾಳ್ತ್.

ಈ ಮಾತ್‌ಗಳ ಕೇಳ್ದ ಶಿಶುಪಾಲ ಇನ್ನಷ್ಟ್ ಕೋಪ ತಾಳ್ತ್. “ಅಗ್ರ ಪೂಜೆನ ಕೊಡಿಕೆ ಹೇಳಂವ್ರೊನ, ಕೊಡಿಕೆ ತಯಾರಾದಂವನ ಯೋಗ್ಯತೆನ ಒಂದು ಕರೆಲಿ ಇಸೊನೊ. ಆದರೆ ತಕಂಬವನ ಹಣೆಬರನ ನೋಡಿಕಾಗದೊ? ಅಗ್ರ ಪೂಜೆಂತ ಹೇಳುದೇ ತಡ. ಓಡಿ ಹೋಗಿ ಹೇಂಗೆ ಪೀಠಲಿ ಕುದ್ದ್‌ಕಂಡಲ್ತ್ ನೋಡಿ! ಎಲಾ ಕೃಷ್ಣ ! ಹಿಂದೆ ನೀ ಮೀನಾಗಿ, ಏಮೆ ಆಗಿ, ಹಂದಿಯಾಗಿ ನಾನಾ ತರದ ಡೊಂಬ ವಿದ್ಯೆಗಳಾಡಿ ಹೆಸರ್‌ಪಡ್ಕಂಡ. ಕಾರಣ ಆಗ ನನ್ನಂಥ ಸಮರ್ಥ ಬಲಶಾಲಿ ಇತ್ತ್‌ಲೆ. ನಿನ್ನ ರಕ್ಕಸವ್ವೆರಿಂತ ಕೆಲಲ್ವು ಜೆನ ಕರ್ದವೆ ಗಡ. ಆ ಕಾಲಲ್ಲಿ ನಾ ಇತ್ತ್‌ಲೆ. ಹಾಂಗೆ ನೀ ಬಚಾವಾದ. ನೀ ಜೆನ್ಮ ಕೊಟ್ಟ ಅಯ್ಯೆನ ಮೊಲೆ ತಿನದಂವ. ಯಾದೋ ಬೇರೆ ಹೆಂಗ್‌ಸ್‌ನ ಮೊಲೆ ತಿಂದಂವ. ಸಣ್ಣಂವಾಗಿರ್‌ಕನ ಮೊಲೆ ಕೊಡಿಕೆ ಬಂದ ಹೆಂಗ್‌ಸ್‌ನ ಎದೆ ಮೇಲೆ ಮಲ್ಕ್ಯಂಡ್, ಆ ಮೊಲೆಗಳ್ಲಿ ಹಾಲ್ ಮುಗ್ದ್ ನೆತ್ತ್‌ರ್ ಬಂದರೂ ಬುಡದೆ ಯಾವ ಹೇಸಿಕೆನೂ ಇಲ್ಲದೆ ಅದರ ರಕ್ತನೇ ಕುಡ್ದ್ ಅದರ ಕೊಂದ ಸ್ತ್ರೀ ಹತ್ಯೆ ಮಾಡ್ದ ಪಾಪಿ ನೀ. ಒಂದು ಗಾಡಿನ ಮುರ್ದ್ ಹಾಕಿದ ಗಡ! ಅದೇನ್ ದೊಡ್ಡಲ್ದ್? ಆಟಲ್ಲಿ ಸಣ್ಣ ಮಕ್ಕ ಗಾಡಿಗಳ (ಆಟದ ಸಾಮಾನ್) ಮುರ್ದ್ ಹಾಕುವೆ. ದೊಳ್ಳ್ ಹೊಟ್ಟೆನ ಬ್ರಾಂಬ್ರ್ ಕವಿಗೆಲ್ಲ ಇಷ್ಟ್ ಸಣ್ಣ ವಿಷಯನ ಭೂತ ಕನ್ನಡಿಲಿ ನೋಡ್ದ ಹಾಂಗೆ ದೊಡ್ಡಲ್ದ್ ಮಾಡಿ, ಶಕಟಾಸುರ ಮರ್ದನಂತ ಅದರ್ನ ಒಂದು ಪುರಾಣ ಕಥೆನಾಂಗೆ ವರ್ಣಿಸಿದೊ. ವಿಚಾರ ಶಕ್ತಿ ಇಲ್ಲದ, ಅಜ್ಞಾನದ ಕತ್ತಲೆಲಿ ಕೊಳಿಯುತ್ತಿದ್ದ ಜೆನಂಗ ಅದರ ನಂಬಿದೊ. ಮೆಚ್ಚಿಕಂಡೊ. ನೀ ಒಂದು ಕೊಕ್ಕರೆನ ಕೊಂದ ಗಡ. ನಾವ್ರು ಸಣ್ಣಿರ್ಕನ, ಮುಡ್ಕಣೆ ಇಸಿ, ಸಿಡಿ ಇಸಿ, ಇನ್ಸ್ ನೇಜಿಗದ್ದೆಗಳ್ಲಿ ಕಪ್ಪೆಗಳ ತಿಂಬಕೆ ಸಾರುವ ಕೊಕ್ಕರೆಗಳ, ಒಂದು ಸಣ್ಣಕಪ್ಪೆನ ಜೆನ್ಸ್‌ನ ಚೆರ್ಮನ ಗಾಳಕೆ ಚುರ್ದ್ ಇಸಿ ಎಷ್ಟ್ ಸಲ್ತಿ ಕೊಕ್ಕರೆಗಳ ಹಿಡ್ದ್ ಕೊಂದಲ್ತ್‌ಲೆ? ಇದರೆಲ್ಲ ವರ್ಣಿಸಿಕೆ, ಹಾಡಿ ಹೊಗ್‌ಳಿಕೆ, ಈ ದೊಳ್ಳು ಹೊಟ್ಟೆನ ಬ್ರಾಂಬ್ರು ಕವಿಗಲ್ಳಿಗೆ ಸಮಯ ಸಿಕ್ಕಿತಿಲೆನೊ? ನೀ ಒಂದು ಕೊಕ್ಕರೆನ ಕೊಂದ್‌ಲ್ದ್. ಬಕಾಸುರನ ವಧೆಂತೇಳ್ದ ದೊಡ್ಡ ವಿಷಯ ಆಗಿ ಹೋತೋ? ಇದರ್‌ಂದ ನಿನ್ನ ಜೆನ್ಸ್‌ನ ನೀನೇ ತಲ್ಟ್‌ಕಂಡಿಯನೋ?

ನೀ ಗೊಲ್ಲರ ಪಾಳ್ಯಲ್ಲಿ ಬೆಳ್ದಂವ. ಅವರ ಮಕ್ಕಳೊಟ್ಟಿಗೆ ಸೇರಿಕಲ್ಂಡ್ ಇದ್ದವರ ಮನೆಗೆಲ್ಲ ಹುಗುದು. ಅವು ನೆಲುಲಿಸಿದ ಬೆಣ್ಣೆ, ಮೊಸ್‌ರ್ ಕಲ್ದ್ ತಿಂಬೊದು ಅದರ ಬೆಣ್ಣೆ ಕಳ್ಳಂತೇಳಿರೆ ಮೊರ್ಯಾದೆಗೆ ಕಮ್ಮಿ ಆದಂತ, ನಿನ್ನ ದೇವ್ರೆಂತ ನಂಜಿದ ಕವಿಗ ಯಾರಿಗೂ ಅರ್ಥ ಆಗದ ಬಾಸೆಲಿ ‘ನವನೀತ ಚೋರಂತ’ ವರ್ಣನೆ ಮಾಡ್ದೊ. ನೀ ಗೊಲ್ಲ ಆದ್ದರ್‌ಂದ ಅದರ ಅರ್ತ ನಿಂಗೆ ಅತ್‌ಲೆ. ಈ ರಾಜ ಸಭೆಲಿ ಸೇರ್ದ ರಾಜೆರ್ಗಳ್ಲಿ ಯಾರಿಗಾರ್ ಒಬ್ಬಂಗೆ ಬೆಣ್ಣೆಕಳ್ಳಂತ ಕರ್ದರೆ, ಅಂವ ಸುಮ್ಮನಿರ್ದೊ? ಹಾಂಗೆ ಹೇಳ್ದವಂಗೆ ಏರ್ದ್ ತದಿಕೆ ಹಾಂಗೆ ಹೇಳ್ದಂವನ ನಾಲಿಕೆನ ಎಳ್ದ್ ಕೊಯ್ದ್ ಇಡಿಕಿಲೆನೋ? ನಿಂಗೆ

ಮಾನ ಮೊರ್ಯಾದೆಂತೇಳ್ದು ಇಲ್ಲೆ. ಹಾಂಗೆ ನೆಗಾಡಿಕಳೆಂಡ್ ಹಲ್ಲ್ ಬುಟ್ಟೆಯ! ಜಯದೇವಂತ ಹೇಳುವ ಕವಿ ನಿನ್ನ ಹಾದರದಾಟನ ಹೇಂಗೆ ಹೇಳಿಟುಂತ ನಿಂಗೆ ಗೊತ್ತುಟೋ? ಯಮುನಾ ನದೀ ತೀರಲೆಲಿ 'ಗೋಪೀ ಪೀನ ಪಯೋಧರ ಮರ್ದನ ಚಂಚಲ ಕರಯುಗ ಶಾಲೀ' ಕೇಳಿಕೆ ಈ ಮಾತ್ ಇಂಪಾಗಿ ಕೇಳ್ಟ್. ಆದರೆ, ಎಲ್ಲೊವ್ರುಕೆ ಅರ್ಥ ಆವ ಬಾಸೆಲಿ, ಆದರ ಅರ್ಥ ಬುಡ್ಸಿ ಹೇಳಿರೆ, ಗೋಪಿಗೂಡೆನ ತೋರ ಆಗಿದ್ದ ಎರ್ಡ್ ಮೊಲೆಗಳ್ನೂ ನಿನ್ನ ಎರ್ಡ್ ಕೈಗಳ್ಲಿ ಹಿಡ್ದ್ ಪಿಣ್ಜಿಕಳೆಂಡ್ ಇದ್ದ ಗಡ! ಸಾಕೊ ನಿಂಗೆ ಮೊರ್ಯಾದಿ? ರಾಧೆಂತೇಳ್ವ ಗೂಡೆನ ಅದರ ಗಂಡಂದ ಬೇರೆ ಮಾಡಿ, ನಿನ್ನ ವಶ ಮಾಡಿಕಂಡ. ಇದ್ ಯಾವ ನ್ಯಾಯ? ತ್ರೇತಾಯುಗಲೆಲಿ ಸೀತೆನ ಕಳ್ದ್‌ಕಳೆಂಡ್ ಹೋದ ರಾವಣನ ರಾಮ ಏನ್ ಮಾಡ್ತ್? ಅದೇ ಶಿಕ್ಷೆ ನಿಂಗೂ ಆಕಯ್ತ್ ಅಲ್ಲಾ?

ನೀ ನಿನ್ನ ಸ್ವಂತ ಸೋದರ ಮಾವನ್ನೇ ಕೊಂದಂವ. ಕಣ್ಣ್‌ಲಿ ನೀರ್ ನೆತ್ತ್‌ರ್ ಇಲ್ಲದಂವ. ನಿಷ್ಕರುಣಿ, ನಿಲ್ಲ್, ನಾ ನಿಂಗೆ ಮೊದ್ದ್ ಅರ್ದನೆ. ಜರಾಸಂಧಂಗೆ ಹೆದ್ರಿ ಓಡಿ, ದ್ವಾರಕೆಲಿ ಅಡ್‌ಂಗ್ಯಂಡ ಹೇಡಿ. ನನ್ನ ಅವ್ವ ನಿನ್ನ ನೂರು ತಪ್ಪುನ ಹೇಳ್‌ಕನ ಮುಟ್ಟ ನೀ ನಂಗೆ ಪ್ರತೀಕಾರ ಮಾಡಿಕೆ ಬೊತ್ತ್‌ಂತ ವರಕೇಳ್ತ್ ಗಡ. ಅದ್ ಅಷ್ಟನ್ನೇ ಕೇಳಿ ನಿಂಗೆ ಉಪಕಾರ ಮಾಡ್ತ್. ತನ್ನ ಅಳಿಯನ ಕೆಟ್ಟ ನಡ್ತೆಗ ಲೋಕಕ್ಕೆ ಗೊತ್ತಾಗದಿರ್ಲಿಂತೇಳುವ ಕಾರ್ಣಕ್ಕೆ ಅದ್ ಹಾಂಗೆ ಕೇಳ್ದಾಗಿರ್ದು. ನಂಗೆ ನಿನ್ನ ಬಗ್ಗೆ ಹೇಳಿಕೆ ಸಾಪಿರ ಉಟ್ಟು. 'ನನ್ನಲೆದ್ ತೊಪ್ಪಾತ್ ತಿಳಿವಳಿಕೆ ಇಲ್ಲದೆ ಅಗ್ರ ಪೂಜೆಂತೇಳ್ವ ಗೌರವ ಪಡಿಯಕೆ ತಯಾರಾದೆ. ನನ್ನ ಕ್ಷಮಿಸಿ ಬುಡು'ಂತ ಹೇಳಿ ನನ್ನ ಕಾಲಿಗೆ ಬೀಳ್. ಬುಟ್ಟನೆಂತ ಶಿಶುಪಾಲ ಗರ್ಜನೆ ಮಾಡ್ದು ಮುಗಿಯಕೆ ಮುಂದೆ ಅವನ ತಲೆನ ಕೃಷ್ಣನ ಚಕ್ರ ಹಾರ್ಸಿತ್. ಅವನ ಮುಂಡ ಧಡ್ಡನೆ ನೆಲಕ್ಕೆ ಬೀತ್ ಇದರ ನೋಡಿ ಶಿಶುಪಾಲನ ಕಡೆವ್ರು ಎಲ್ಲ ಕೃಷ್ಣನೊಟ್ಟಿಗೆ ಯುದ್ದಕ್ಕೆ ಬಂದ್ ಸತ್ರೊ. ಮತ್ತೆ ಯುಧಿಷ್ಠಿರ ಯಾಗ ಸಮಾಪ್ತಿ ಯಾದ ಬಗ್ಗೆ ಅವಭೃತ ಸ್ನಾನ ಮಾಡಿ, ಯಾಗಕ್ಕೆ ಬಂದ್ ಸೇರ್ದಲೆವ್ರುಕೆಲ್ಲ ಬೇಕಾದ ರೀತಿ ಮೊರ್ಯಾದೆ ಮಾಡಿ ಅವರವರ ಊರಿಗೆ ಕಳ್ಸಿ ಕೊಟ್ಟಲೆತ್. ಭೀಷ್ಮ ದ್ರೋಣಲೆರ್ ಎಲ್ಲ ಸಂತೋಸುಂದ, ಯುಧಿಷ್ಠಿರ ಚಕ್ರವರ್ತಿಯಾತ್‌ಂತ ಅಪಾರ ಐಶ್ವರ್ಯಕ್ಕೆ ಅಧಿಪತಿ ಆತ್‌ಂತ ಹೇಳಿಕಲೆಂಡ್ ನಮ್ಮ ಕುಲಕ್ಕೆ ಒಳ್ಳ ಹೆಸ್‌ರ್ ತಾತ್‌ಂತ ಹೆಮ್ಮೆ ಪಟ್ಟ್‌ಕಲೆಂಡ್ ಹಿಂದೆ ಬಂದೊ. ಆದರೆ ದುರ್ಯೋಧನ ಇನ್ನೂ ಹಜ್ಜ್‌ದಿನ ಇಂದ್ರಪ್ರಸ್ಥಲೇ ಶಕುನಿನೊಟ್ಟಿಗೆ ನಿತ್ತಲೆತ್. ಯಾಗದ ದಿನಗಳ್ಲಿ ಯಾಗೋಳು ಕೆಲ್ಸಲೇ ಇದ್ದದರ್‌ಂದ ಯಾದನ್ನೂ ಪೊರ್ಲು ನೋಡಿಕೆ ಆತ್‌ಲೆ. ಎಲ್ಲ ನೋಡಿ, ನಿಧಾನಂದ ಹಸ್ತಿನಾವತಿಗೆ ಬನ್ನೆಂತ ಹಿಂದೆ ನಿತ್ತಲೆತ್.

ಕೆಲಲೆವ್ರು ಘಟನೆಗ ಮುಂದೆ ನಡಿವ ದುರ್ಘಟನೆಗಲೆಗ ನಾಂದಿ ಹಾಡುವ ಹಾಂಗೆ ಇದ್ದವೆ. ಹಾಂಗೆ ದುರ್ಯೋಧನ ಇಂದ್ರಪ್ರಸ್ಥಲೆಲಿ ಇನ್ನೂ ಹಜ್ಜ್‌ದಿನ ಇದ್ದ್ ಹೋನೆಂತ ಅವನಾಗಿಯೇ ಹಿಂದೆ ನಿತ್ತ ಕಾರ್ಣವೇ ಮುಂದೆ ಬಾವ ದುರ್ಘಟನೆಗಲೆಗ ಕಾರಣ ಆತ್‌ಂತ ಹೇಳಲೆಕ್. ಅಂವ ಪಾಂಡವರ ರಾಜಭಂಡಾರಕೆ ಬೇರೆ ರಾಜೆರ್ಗ ತಂದ್ ಕೊಡುವ ಬೆಲೆ ಬಾಳುವ ಕಾಣಿಕೆಗಳ ತನ್ನ ಕೈಯಿಂದಲೇ ಸ್ವೀಕರಿಸಿ ಆ ಕೈಗ ನೋಯುವಷ್ಟು

ಅನುಭವಿಸಿ. ಎಷ್ಟು ಖರ್ಚ್ ಮಾಡಿರೂ ಇನ್ನೂ ತುಂಬಿಯೇ ಇರುವ ಭಂಡಾರನ ನೋಡಿ ಅವನ ಮನ್‌ಸಿಗೆ ಹೇಂಗಾಗಿರ್ದು? ಒಬ್ಬನ ಹೆಣ್ಣ್ ಬಾರಿ ಸುಂದರಿಯಾಗಿದ್ದರೆ ಬೇರೊಬ್ಬ ಅದರ ನೋಡಿರೆ ಅವಂಗೆ ಸಂತೋಸಾದೋ ಅಲ್ಲ ಮತ್ಸರ ಆದೊ? ಹಾಂಗೇ ಇಷ್ಟ್ ಐಶ್ವರ್ಯ ಪಾಂಡವರಿಗೆ ಇರುವರ ನೋಡಿ ದುರ್ಯೋಧನಂಗೆ ಆದ್ದ್ ಸಂತೋಸು ಅಲ್ಲ. ಸಹಜವಾದ ಮತ್ಸರ. ತಾವು ನೂರು ಜೆನ ಅಣ್ಣ ತಮ್ಮಂದರ್ ಇದ್ದೂ ನಾವ್ಗೆ ರಾಜಸೂಯ ಯಾಗ ಮಾಡಿಕ ಆತ್‌ಲೆ. ಆದರೆ ಯುಧಿಷ್ಠಿರಂಗೆ ಇದ್ದ ನಾಲ್ಕೇ ಜೆನ ತಮ್ಮಂದರ್ ಪ್ರಪಂಚದ ನಾಲ್ಕ್ ದಿಕ್ಕಿಗೂ ಹೋಗಿ, ಎಲ್ಲರಾಜರ್ಗಳ್‌ಂದಲೂ ಕಪ್ಪ ಕಾಣಿಕೆಗಳ ತಂದ್ ಈ ಯಾಗನ ನಡ್ಸಿದೊ. ನಮ್ಮಂದ ಮೇಲಾದೊ. ಸಾವಿದರ ಮಾಡುವೆಂತೇಳ್‌ಕನ ಭೀಷ್ಮ, ದ್ರೋಣ, ವಿದುರ ಎಲ್ಲ ನಿಮ್ಮಂದ ಇದ್ ಬೇಯಕಿಲ್ಲೇಂತ ನಮ್ಮ ಹೀನೈಸಿದೊ. ಹೀಂಗಿದೊಂದು ಯೋಚನೆ ಅವನ ಎದೆಲಿ ಮುಂದೆ ಬೇಯತ್ತಿತ್ತ್.

ಇನ್ನು ಮಯ ಕೊಟ್ಟ ಸಭಾಭವನ ಖ್ಯಾತಿನ ಕೇಳಿ ಅದರ ನೋಡೊಕುಂತೇಳ್ವ ಕುತೂಹಲ ಮುಂದಂದಲೇ ಇತ್ತ್. ಶಕುನಿನೊಟ್ಟಿಗೆ ಬಾಂತ ಕರ್ದರೆ ಅಂವ ಬಾತ್‌ಲೆ. ಯಾರಾರ್ ಒಬ್ಬ ಒಟ್ಟಿಗೆ ಇದ್ದಿದ್ದರೆ, ಅವಂಗ ಆದ ತೊಂದರೆಗಳೂ ಅವಮಾನನೂ ಅವಂಗೆ ಆಕೆ ಎಡೆ ಇತ್ತ್‌ಲೆ. ಇಂವ ಒಬ್ಬನೇ ಹೋತು. ಒಳೆಗೆ ಪ್ರವೇಶ ಮಾಡಿ ಪಕ್ಕದ ಕೋಣೆಗೆ ಹುಗ್‌ಕನ ಅಲ್ಲಿ ಪೊರ್ಲುನ ಹಂಗ್‌ಸ್‌ಗಳ ಬೊಂಬೆಗ ಇದ್ದೊ. ಅದರ ಮೆಚ್ಚಿ ಅದರ ಹಕ್ಕಲೆಂದ ಹಾದ್ ಹೋಕನ ಅವ್ಕೆ ಜೀವ ಬಂದ್ ಅವು ಪೊರ್ಲು ನರ್ತನ ಮಾಡಿಕೆ ಸುರು ಮಾಡಿ ಅವನ ಮನ್ಸಿಗೆ ಆಶ್ಚರ್ಯ ಉಂಟು ಮಾಡ್ದೊ. ಇದೇನ್ ದೆವ್ವ, ಪಿಶಾಚಿಗಳ ಕಾರ್‌ಬಾರನೋ ಏನ್‌ಂತ ಒಂದುಗಳಿಗೆ ಅಂವಗೆ ಸೂಂಸಯ ಬಾತ್. ಅವರ ದಾಟಿ ಮುಂದೆ ಹೋಕನ ಅವು ಹಿಂದೆನ್ನಾಂಗೆ ಸ್ತಬ್ಧ ಆದೋ. ಆಚೆಗೆ ಮೃದಂಗ, ತಂಬೂರಿ, ತಾಳ, ವೀಣೆಗಳ ಇಸಿಕಲೆಂಡ್ ಇತ್ತ್. ಇವು ಕೂಡ ಸಂಗೀತ ಬಾರ್ಸಿದೊ. ಅಂವ ದಾಟಿ ಹೋದ ಕೂಡ್ಲೆ ಮೌನವಾದೊ. ಇನ್ನೊಂದು ಕೋಣೆಗೆ ಹುಗ್‌ಕನ ಅದೊಂದು ನೀರ್ ತುಂಬಿದ ಕೊಳದಾಂಗೆ ಕಾಂಬತಿತ್ತ್. ಆ ಕಟ್ಟಡದ ಭಾಗದ ಪ್ರತಿಫಲನಗಳೂ ಕಾಂಬತಿದ್ದೊ. ಇಂವ ಕಾಲ್ ನೇಚಿ ಆಚೆ ಇಸ್‌ಕನ ಕಾಲ್‌ನ ಪ್ರತಿಬಿಂಬನೂ ಕಾಂಬತಿತ್ತ್. ಕಾಲ್‌ನ ಕೆಳೆಗೆ ಇಸ್‌ಕಲೆನ ಗಟ್ಟಿ ನೆಲ! ಅಂವ ಶಿಲ್ಪಿನ ಚಾತುರ್ಯನ ಮೆಚ್ಚಿಕಂಡಲೆತ್. ಮತ್ತೆ ಮುಂದೆ ಹೋತು. ಅದ್ ನಿಜವಾಗಿ ನೀರ್ ತುಂಬಿದ ಕೊಳ. ನೋಡಿಕೆ ಗಟ್ಟಿ ನೆಲದಾಂಗೆ ಕಾಂಬತಿತ್ತ್. ಹಾಂಗೆ ಕಾಲ್‌ನ ನೇಚಿ ಇಸ್‌ಕನ ಮುಂಗಲೆರ್ಸಿ ತೊಳ್‌ಂಕಂತ ನೀರಿಗೆ ಬಿದ್ದ್ ಬುಟ್ಟಲೆತ್. ದುರದೃಷ್ಟಂತೇಳುವಾಂಗೆ ಭೀಮ, ದ್ರೌಪದಿ, ಅರ್ಜುನ, ನಕುಲ, ಸಹದೇವ ಎಲ್ಲ ಅಲ್ಲಿಗೆ ಬಂದೊವು, ಕೈತೋರ್ಸಿಕಲೆಂಡ್ ನೆಗಾಡಿಕಲೆಂಡ್ ಅವನ ಗೇಲಿ ಮಾಡ್ದೊ. ಅದರ್ಲೂ ದ್ರೌಪದಿ ಬಿದ್ದ್ ಬಿದ್ದ್ ನೆಗಾಡ್ದರ್‌ಂದ ಅವಂಗೆ ನಾಚಿಕೆನೊಟ್ಟಿಗೆ ತುಂಬ ಕೋಪಬಾತ್.

**ಮಕ್ಕ :**

ಒಬ್ಬ ಎಲ್ಲಿಯಾರ್ ಜಾರಿ ಬೀಳ್‌ಕನ ನೋಡಿ ಮತ್ತೊಬ್ಬ ನೆಗಾಡುದಲ್ಲ ಮೊಂಯಿಸನ

ಸುಬಾವ್ರು. ಅದರ್ಲ್ಲಿ ಕೋಪ ಮಾಡುವಂತಇದೇನುಟ್ಟು ತಾತಾ? ಮತ್ತೆ ನಮ್ಮ ಸಮಾಜಇಲಿ. ಬಾವ-ಸಾದಿನಿ, ಅತ್ತಿಗೆ-ಮೈದುನ ಇವರ ನೊಡುವೆ ಸರಸ-ಹಾಸ್ಯ ಗೇಲಿಗ ಎಲ್ಲ ಸಹಜವಾಗಿ ನಡ್ತವೆ. ಇಲ್ಲಿ ದುರ್ಯೋಧನ ಹೀಂಗೆ ಕೋಪ ಮಾಡಿಕಇಂಬೊದು ಸಭ್ಯ ಗುಣ ಅಲ್ಲಂತ ಕಂಡದೆ.

**ತಾತ :**

ನೀವು ಹೇಳುವ ವಾಡಿಕೆ, ಸಾಮಾನ್ಯ ಸಮಾಜಇಲಿ ಇಂವ ರಾಜವಂಶದ ಗೌರವಸ್ಥ ವ್ಯಕ್ತಿ. ರಾಜಕುಟುಂಬಇಲಿ, ಅಯ್ಯೆ ಮಜ್ಜನೊಟ್ಟಿಗೆ ಮಾತಾಡ್‌ಕನೂ, ಅಯ್ಯೆ ರಾಜಕುಮಾರನ 'ನೀವು', 'ಬನ್ನಿ', 'ಹೋಗಿ'ಂತ ಬಹುವಚನಇಲೇ ಮಾತಾಡ್ಲುವ ಕೃತಕ ಕ್ರಮ. ಇಂಥ ವಾತಾವರಣಇಲಿ ಬೆಳ್ದವಂಗೆ ಎಷ್ಟ್ ದರ್ಪ, ಮತ್ತೆ ಎಷ್ಟ್ ಗಇರ್ವ ಇರೊಕು? ಹಾಂಗೆ ಅವಂಗೆ ಅಷ್ಟ್ ಕೋಪ ಬಾತ್. ಒಂದು ವೇಳೆ ಇವು ಅಷ್ಟ್ ಹಾಸ್ಯ ಮಾಡುವ ಬದ್‌ಲ್ ಹಜ್ಜಾ ಸೌಜನ್ಯಂದ ನಡ್ಕಇಂಡಿದ್ದರೆ ಅಂವ ಹಜ್ಜಾ ಶಾಂತ ರೀತಿಂದ ವರ್ತಿಸಿಕೆ ಸಾಧ್ಯ ಇತ್ತ್. ಈಗ ಮಾತ್ರ ಹಾವುನಾಂಗೆ ಮನ್‌ಸ್‌ನೊಳಗೇ ಹಗೆ ಹೊಕ್ಕಇಂಡ್, ತಕ್ಕ ಸಮಿಯಕೆ ಕಾದ್‌ಕಇಂಡೇ ಇದ್ದ್, ಹಸ್ತಿನಾವತಿಗೆ ಬಾತ್.

ಹಸ್ತಿನಾವತಿಗೆ ಬಂದ್ ಸೇರ್ದ ಮೇಲೆ ಅಂವಂಗೆ ಇಂದ್ರಪ್ರಸ್ಥದ್ದೇ ನೆಂಪು. ಪಾಂಡವರ್‌ಂದ ಅವಮಾನ ತನಿಗಾತ್‌ಂತ ಅವನ ಮನ್‌ಸಿಗೆ ಎಲ್ಲದರ್‌ಂದ ಮುಂದೆ ಬಂದರೂ ಅವನ ಕಂಣ್ಣ ಮುಂದೆ ಬಂದ್ ನಿತ್ತ್ ದೆವ್ವದಾಂಗೆ ಕಾಡುದು ಪಾಂಡವರ ತುಂಬಿದ ರಾಜ ಭಂಡಾರ. ಅದರ ನೆನ್ಪ್‌ಕನೆಲ್ಲ ಅವನ ಮನ್ಸ್‌ಲಿ ಉಕ್ಕುದು ಮತ್ಸರನೇ. ಹೇಂಗಾರ್ ಮಾಡಿ ಆ ಸಂಪೊತ್ತೆಲ್ಲ ತನ್ನಇದಾಕುಂತ ಒಂದು ದುರಾಸೆ. ಅದಿಕೆ ಸಇರಿಯಾಗಿ ಅವನ ಸೋದರಮಾವ ಶಕುನಿ ಅವರ ಸಂಪೊತ್ತ್, ರಾಜ್ಯ, ಕೋಶ, ಎಲ್ಲ ನಿನ್ನ ವಶವಾಗುವ ಹಾಂಗೆ ಮಾಡುವ ಉಪಾಯ ನಂಗೆ ಗೊತ್ತುಟ್ಟುಂತ ಹೇಳಿ ಹೇಳಿ ಅವನ ದುರಾಸೆನ ಕೆರ್‌ಳಿಸ್‌ತ್ತಿತ್ತ್. ಯುದ್ಧ ಮಾಡದೆ ಅದರೆಲ್ಲ ನಮ್ಮ ವಶ ಮಾಡಿಕಇಂಬೊದು ಹೇಂಗೆಂತ ಅವಂಗೆ ಹೊಳಿಯದೆ ಅವಂಗೆ ಗಲಿಬಿಲಿ ಆತಿತ್ತ್. ಆಕೇರಿಗೆ ಶಕುನಿ ಅವನ ಗುಟ್ಟುನ ಬಿಚ್ಚಿತ್. ಯುದ್ಧ ಇಲ್ಲದೆನೇ ಎದ್‌ರಾಳಿನ ಸೋಲ್ಲುವ ಸಾಧನ ಅಂದರೆ ಜೂಜು. ಅಂದರೆ ಪಗಡೆ ಆಟ. ಅದರ್ಲಿ ತನ್ನ ಯಾರಿಗೂ ಗೆಲ್ಲಿಕೆ ಬೊತ್ತ್‌ಂತ ಹೇಳಿ ಅವಂಗೆ ಧೈರ್ಯ ಕೊಟ್ಟಇಂತ್.

ಈಗ ದುರ್ಯೋಧನ ಚಂಡಿ ಹಿಡಿವ ಸಣ್ಣ ಮಕ್ಕಳ ಹಾಂಗೆ ಧೃತರಾಷ್ಟ್ರನ ಯಾಗೋಳು ಪೀಡಿಸಿಕೆ ಸುರುಮಾಡ್ತ್. ಯಾಗೋಳು ಅಂವ ಸುರುಮಾಡ್ದು ಇಂದ್ರಪ್ರಸ್ಥಲಿ ನಂಗೆ ತುಂಬ ಅವಮಾನ ಆತಪ್ಪಂತೇಳ್ದ ಮಾತ್‌ಂದಳೇ. ಅಪ್ಪ ಮುಂದೇ ಕುರುಡ. ಮಿತಿಮೀರ್ದ ಪುತ್ರ ವ್ಯಾಮೋಹ ಅವನ ವಿವೇಚನೆನ್ನೇ ಕುರುಡು ಮಾಡ್ತ್. ಅಪ್ಪ ತನ್ನ ಮೇಲೆ ತುಂಬ ಪ್ರೀತಿ ತೋರ್ಸ್ಲಿದೆಂತ ಗೊತ್ತಾದ ಮೇಲೆ ಹಜ್ಜದಿನ ಅಂವ ತನ್ನ ಸುರುನ ಅಸ್ತ್ರನ್ನೇ ಮತ್ತೆ ಮತ್ತೆ ಪ್ರಯೋಗ ಮಾಡಿಕೆ ಸುರುಮಾಡ್ತ್. ಅದಾದ ಮೇಲೆ ಪಾಂಡವರ ರಾಜಭಂಡಾರ ಸಂಪೊತ್ತ್ ಅಷ್ಟಿಷ್ಟಲ್ಲ. ಅವರೆದೆಲಿ ನಮ್ಮೊದೆಲ್ಲ ಯಾವ ಲೆಕ್ಕಕ್ಕೂ ಇಲ್ಲೆ. ಶಕುನಿ ಮಾವ

ಅದರೆಲ್ಲ ಪಗಡೆಯಾಟೇಲಿ ನಿಂಗೆ ಗದ್ದ್ ಕೊಟ್ಟನೇಂತ ಹೇಳಿಯೊಳೊ. ಕಲ್ತ್ರಿಯಿಲ್ಲದೆ ರಕ್ತಪಾತ ಇಲ್ಲದೆ ಅಹಿಂಸಾ ರೀತಿಲಿ ಗೆಲ್ಲುದು, ಯುದ್ಧಮಾಡಿ, ಕೊಲೆ ರಕ್ತ ಪಾತಂದ ಗೆಲ್ಲುದರ್‌ಂದ ಮೇಲಲ್ಲೋ? ಹಾಂಗೆ ನಿಮ್ಮಪ್ಪನೊಟ್ಟಿಗೆ ಹೇಳಿ, ಅವರ ಇಲ್ಲಿಗೆ ಕರ್ಸ್. ಮತ್ತೆ ಒಳ್ದದರ ನಾ ನೋಡಿಕಣಂತ ಶಕುನಿ ಮಾಂವ ಹೇಳುವೆ ಅಪ್ಪ. ಹಾಂಗೆ ನೀ ಯುಧಿಷ್ಠಿರಂಗೆ ಹೇಳಿ ಕಳ್ಸ್. ನೀ ಹೇಳ್ದ ಮಾತ್‌ನ ಯುಧಿಷ್ಠಿರ ಮೀರಿಕಿಲ್ಲೆ. ಅದರ್ಲೂ ವಿದುರ ಚಿಕಪನೇ ಹೋಗಿ ಬಾಕೆ ಹೇಳಿರೆ ಬಾರದೆ ಇರಿಕೇಲೆ.

ದುರ್ಯೋಧನ ತನ್ನ ಮಾತ್‌ನ ಯಾವ ರೀತಿಂದಲೂ ಅಲ್ಲಗಳಿಯಕೆ ಆಗದಂತ ಇಕ್ಕಟ್ಟ್‌ಲಿ ಸಿಕ್ಕುವಾಂಗೆ ಮಾಡ್ತ್. ಮಾತ್‌ನ ಚತುರ. ಹಗ್‌ಲೂ ಇರ್ಲೂ ಕೇಡ್ ಮಾಡ್‌ದೊಂದೇ ಚಿಂತೆಯಾಗಿರ್ಕನ ಇಂತಹ ಕುಹಕಚಾತುರ್ಯ ತಾನಾಗಿ ಬಂದದೆ. ಹಾಂಗೆ ಧೃತರಾಷ್ಟ್ರ ವಿದುರಂಗೆ ಹೇಳಿ ಕಳ್ಸಿ ಬರ್ಸಿತ್. ವಿದುರನ ಕುದ್ದ್‌ರಿಕೆ ಹೇಳಿ ಮಾತಿಗೆ ಸುರುಮಾಡ್ತ್. ನಾವೆಲ್ಲ ರಾಜಸೂಯ ಯಾಗದ ಸೆವನಲಿ ಇಂದ್ರಪ್ರಸ್ತಕೆ. ಪಾಂಡವರ ಆದರಾತಿಥ್ಯನ್ನೂ, ಗೌರವನ್ನೂ, ಪಡ್ದ್ ಬಂದೊ. ಅವರ ಮಯಭವನನ ನೋಡಿ ಅದರಷ್ಟ್ ವೈಭವ ಇಲ್ಲದ್‌ದ್‌ಂತಾದರೂ ತಕ್ಕಮಟ್ಟ್‌ನ ಒಂದು ಸಭಾಭವನ ನಿರ್ಮಾಣ ಮಾಡ್ಸಿಯೊಳೆ ಅವರ ವೈಭವನ ನಾಪ್ಗ ತೋರ್ಸಿ ಅವು ಸಂತೋಸುಪಟ್ಟಾಂಗೆ ನಾವೂ ಅವ್ಕೆ ನಮ್ಮದರ ತೋರಿಸಿ ಸಂತೋಸು ಪಡಕ್. ಇತ್ತಂಡದಲ್ವೂ ಒಟ್ಟಾಗಿ ಇರ್ಕನ ಎಷ್ಟ್ ಆನಂದ ಉಟ್ಟುಂತ ರಾಜಸೂಯ ಯಾಗಲಿ ಗೊತ್ತಾತಲೆ. ಅಲ್ಲದೆ ಯುಧಿಷ್ಠಿರ ಈಗ ಚಕ್ರವರ್ತಿ ನಮ್ಮ ವಂಶಲೇ ಇಂವ ಮಾತ್ರ ರಾಜಸೂಯ ಯಾಗ ಮಾಡಿ, ಚಕ್ರವರ್ತಿಂತ ಹೇಳ್ಸಿಕಂಡಂವ. ಹಾಂಗೆ ಅಂವ ಹಿರಿಯರ ರಾಜಧಾನಿಗೆ ಭೇಟಿ ಕೊಡಕಾದ್ದ್ ತುಂಬ ಸರಿಯಾದ್ದ್. ಹಾಂಗೆ ಅವೆಲ್ಲ ಇಲ್ಲಿಗೆ ಬಂದಿದ್ದ್, ಆಟ, ಕೂಟ ವಿನೋದಂತ ಹಜ್ಜ ಸಮಯ ಕಳ್ದ್ ಮತ್ತೆ ವಾಪಾಸ್ ಹೋಕ್. ಹೀಂಗೆ ನಾ ಹೇಳ್ದಂತೆ ಹೇಳಿ ಕರ್ಕಂಡ್ ಬಾಂತ ಧೃತರಾಷ್ಟ್ರ ವಿದುರಂಗೆ ಹೇಳ್ತ್. ವಿದುರಂಗೆ ಆಶ್ಚರ್ಯ ಆತ್. ಇದೇನಪ್ಪ, ವಿಸ ಅಮೃತ ಆದಾಂಗೆ, ಬಿಸ್‌ಲ್ ಬೆಳ್ದಿಂಗಳಾದಾಂಗೆ ಕಂಡದಂತ ನೆನ್ಸಿಕಂಡ್, ಹಜ್ಜ ಹೊತ್ತು ಮೂಕನಾಂಗೆ ಕುದ್ದಿತ್. ಧೃತರಾಷ್ಟ್ರ ಏಕೆ ವಿದುರ ಮಾತಾಡುದುಲೇಂತ ಕೇಳ್ತ್. ಏನಿಲ್ಲೆ ದೊಡಪಂಗೆ ತಮ್ಮನ ಮಕ್ಕಳ ಮೇಲೆ ಎಷ್ಟ್ ಪ್ರೀತಿಂತ ಆಶ್ಚರ್ಯ ಆತ್. ಸರಿ ನಾ ಹೋಗಿ, ಮಹಾರಾಜ ಹೀಂಗೆ ಹೇಳಿಯೊಳೊಂತ ಯುಧಿಷ್ಠಿರಂಗೆ ತಿಳ್ಸನೆಂತ ಹೇಳಿ ವಿದುರ ಎದ್ದ್ ಹೊರೆಗೆ ಬಾತ್.

ಏಕಾಗಿರ್ದು ಕೌರವರಿಗೆ ಪಾಂಡವರ ಮೇಲೆ ಇಷ್ಟ್ ಪ್ರೀತಿ ಉಕ್ಕಿ ಬಾಕೆ ಕಾರಣ? ಇಂದ್ರಪ್ರಸ್ತಂದ ಬಂದ ಮೇಲೆ ದುರ್ಯೋಧನ ಮಯಸಭಾಭವನಲಿ ಪಾಂಡವರ್‌ಂದ ಅವಂಗೆ ಅವಮಾನ ಆತ್‌ಂತ ಬುಸುಗುಟ್ಟುತಿದ್ದದ್ ಅವಂಗೆ ಗೊತ್ತಿತ್ತ್. ದುರ್ಯೋಧನ, ದುಶ್ಶಾಸನ, ಕರ್ಣ ಮತ್ತೆ ಶಕುನಿ ಈ ನಾಲ್ಕ್ ಜನ ಯಾಗೋಳು ಹೊರೆಗೆ ಕಾಂಬತಿತ್ತ್‌ರೆ. ಏನೋ ಮಂತ್ರಾಲೋಚನೆ ಮಾಡಿಕಂಡ್ ಇರುವಾಂಗೆ ಕಾಂಬತಿತ್ತ್. ಹಾಂಗೇನಾರ್ ಕೆಟ್ಟ ಕಾರ್ಯಕೆ ಅಡಿಹಾಕುವನೋಂತ ವಿದುರಂಗೆ ಸೊಂಸಯ ಬಾತ್. ಆದರೆ ಅಂವ

ಅದರ ಹೊರೆಗೆ ತೋರ್ಸಿಕಣದೆ ಇಂದ್ರಪ್ರಸ್ಥಕೆ ಹೊರ್ಟಣೆತ್. ಪಾಂಡವರ ನೋಡಿ. ಸುಖದುಃಖ ವಿಚಾರ್ಸಿ ಧೃತರಾಷ್ಟ್ರ ಹೇಳ್ದ ವಿಚಾರನ ತಿಳ್ಸಿತ್.

ವಿದುರ ಹೇಳುವರ ಕೇಳಿ ಯುಧಿಷ್ಠಿರಂಗೆ ಸಂತೋಸು ಆತ್. ಮತ್ತೆ ಎರ್ಡ್ ದಿನ ಕಳೆಳ್ದ್, ಯುಧಿಷ್ಠಿರ ತಮ್ಮಂದರ್ನೂ ಪರಿವಾರದವರ್ನೂ, ದ್ರೌಪದಿನೂ ಕೂಡಿಕಣೆಂಡ್ ರಾಜವೈಭವಣೆಲಿ ಹಸ್ತಿನಾವತಿಗೆ ಹೊರ್ಟಣೆತ್. ಹೊರ್ಡ್ತನ ಕಂಡ ಅಪಶಕುನಗಳ ಕಡೆಗೆ ಗಮನ ಕೊಟ್ಟಣೆತ್‌ಲ. ಹಾಂಗೆ ಎರ್ಡ್ ದಿನದ ಪಯಣಣೆಲಿ ಹಸ್ತಿನಾವತಿನ ಹೊರವಲಯಕೆ ಅವರ ಪರಿವಾರ ಬಂದ್ ಮುಟ್ಟತ್. ಕೌರವಣೆರ್ ಬಾರಿ ಸಂಭ್ರಮಂದ ಅವರ ಸ್ವಾಗತಕೆ ತಯಾರಾಗಿ ಹೋದೊ. ಭೀಷ್ಮ, ದ್ರೋಣ, ಕೃಪಾಚಾರ್ಯರ್ ಎಲ್ಲ ನಿಷ್ಕಪಟ ಬುದ್ಧಿಂದ ಸಂತೋಸುಲಿ ಬಂದೊವು ಆದರೆ ಒಳ್ದೊವೆಲ್ಲ ಕಪಟ ಸೌಜನ್ಯ ತೋರ್‍ರೊವು. ಪಾಂಡವಣೆರೆಲ್ಲ ಪ್ರೀತಿ ಗೌರವಂದ ಹಿರಿಯೊವ್ಕೆ ಅವರ ಪಾದ ಮುಟ್ಟಿ ನಮಸ್ಕಾರ ಮಾಡ್ದೊ. ದುರ್ಯೋಧನ ಯುಧಿಷ್ಠಿರನ ಕಾಲಿಗೆ ನಮಸ್ಕಾರ ಮಾಡ್ತ್. ಭೀಮನ ಆಲಿಂಗನ ಮಾಡ್ತ್. ತನ್ನ ತಮ್ಮಂದರ ಎಲ್ಲರ ಕರ್ದ್ ಪಾಂಡವಣೆರಿಗೆ ನಮಸ್ಕಾರ ಮಾಡ್ಸಿತ್. ಕಳಸ ಕನ್ನಟಿ, ಪೂರ್ಣಕುಂಭಗಳ ಹಿಡ್ದ ಗೂಡೆಗ ಎದ್‌ರ್‌ಂದ ನಡ್ದೊ. ವಾದ್ಯ ಮೇಳಗಳೊಟ್ಟಿಗೆ, ನಾನಾ ಪತಾಕೆ ನಿಶಾನಿಗಳ ಹಿಡ್ಕಂಡಣೆವು ಎಲ್ಲ ಸೇರಿ-ವೈಭವದ ಮೆರವಣಿಗೆಲಿ ಪಟ್ಟಣ ಪ್ರವೇಶ ಮಾಡ್ದೊ. ಪಾಂಡವಣೆರಿಗೆ ಪ್ರತಿಯೊಬ್ಬಂಗೂ ಬೇರೆ ಬಿಡಾರಗಳ ಏರ್ಪಾಡಾತ್. ಹಸ್ತಿನಾವತಿನ ಪ್ರಜಾ ಪ್ರಮುಖರ್ ಬಂದ್ ಚಕ್ರವರ್ತಿ ಆಗಿರುವ ಯುಧಿಷ್ಠಿರಂಗೆ ಪಾದ ಕಾಣಿಕೆ ಅರ್ಪಿಸಿ ನಮಸ್ಕಾರ ಮಾಡ್ದೊ.

## ಕಪಟ ದ್ಯೂತ

ಪಾಂಡವರಲ್ಲಿದ್ದ ಅಪಾರ ಸಂಪೊತ್ತುನ ಹೇಂಗಾರ್ ಮಾಡಿ ಅಪಹರ್ಸಿ ತಮ್ಮಣೆದಾಗಿ ಮಾಡಿಕಣೊಕುಂತ ದುರ್ಯೋಧನ, ದುಃಶಾಸನ, ಶಕುನಿ ಮತ್ತೆ ಕರ್ಣ, ಇವರ ಹುನ್ನಾರ. ಏನಾರೊಂದು ಕಾರಣ ತೆಗ್‌ದ್, ಯುದ್ಧ ಮಾಡಿ, ಅದರೆಲ್ಲ ಎಳ್ಕ ಮೊನೋಂತೇಳಿರೆ, ಅವರ ಮಿಾರ್ರುವ ಬಲ, ಪರಾಕ್ರಮ ತಮ್ಮ ಹಕ್ಕಲೆ ಇಲ್ಲೆ. ಇದಿಕೆ ಶಕುನಿನ ತಂತ್ರ ಅಂದರೆ, ಒಂದೇ, ಕಣೆತ್ತಿ ಇಲ್ಲದೆ, ರಕ್ತ ಹರ್ಸದೆ, ಶತ್ರುನ ಗೆಲ್ಲಿಕೆ, ಜೂಜಾಟಂದ ಮಾತ್ರ ಸಾಧ್ಯ. ಜೂಜಾಟ, ಬೇಟೆ, ಮದ್ಯಪಾನ, ಸ್ತ್ರೀಲೋಲುಪತೆಂತೇಳ್ದು ಎಲ್ಲ ಒಂದು ವ್ಯಸನಗ. ಇದಿಕ್ಕೆ ಬೊಲಿಬಿದ್ದಂವ ಯಾವ ಕಾಲಕ್ಕಾದರೂ, ಉದ್ಧಾರ ಆಕಿಲ್ಲೆ. ತಮ್ಮ ಸರ್ವಸ್ವನ ಕಳ್ಕಂಡರೂ ಅಷ್ಕೆ ಬುದ್ಧಿ ಬಾಕಿಲ್ಲೆ. ಪಾಂಡವರ ಪೈಕಿ, ಯುಧಿಷ್ಠಿರಂಗೆ ಜೂಜುನ ಹುಚ್ಚಿತ್ತ್. ಅದೂ ಅಲ್ಲದೆ. ಜೂಜಿಗೆ, ಯುದ್ಧಕ್ಕೆ ಕರ್ದರೆ, ಕ್ಷತ್ರಿಯ ಹಿಂದೆ ಸರಿದು ಅವಮಾನಂತೇಳುವ ಪೊಳ್ಳು, ಅಭಿಮಾನ ಒಂದು ಆಗ ವಾಡಿಕೆಲಿತ್ತ್. ಮತ್ತೆ ಯುಧಿಷ್ಠರ, ಒಳ್ಳಣೆವ್ರುಕೆ ಹಿರಿಯಣ್ಣ. ಒಳ್ಳೆಣೆದಾಗಲಿ, ಕೆಟ್ಟಣೆದಾಗಣೆಲಿ, ಹಿರಿಯವಂಗೆ ವಿಧೇಯತೆ ತೋರ್ರುದು ಮೀರಿಕೆ ಪೊತ್ತದ ನಿಯಮ. ಅಪರೂಪಣೆಲಿ ವಿಭೀಷಣ, ಸುಗ್ರೀವನಂತ ಕೆಲಣೆವ್ರು ಜೆನ ಮೀರ್ದಣೆವ್ರೂ ಇದ್ದೊ.

ಆವರೆ ಪಾಂಡವರ ಒಗ್ಗಟ್ಟ್ ಮುರಿಯದೆ ಇತ್ತ್. ಸಿಡಿದೆದ್ದುರುವ ಜ್ವಾಲಾಮುಖಿನಾಂಗೆ ಒಮ್ಮೊಮ್ಮೆ ಕೌರವರ ಮೇಲ ಕೋಪ ಕೆರಳಿರೂ ಯುಧಿಷ್ಠಿರ ಕಣ್ಣ್ ಸನ್ನೆ ಮಾಡ್ದ ಕೂಡ್ಲೆ ಭೀಮ ಶಾಂತ ಆತಿತ್ತ್. ಯುಧಿಷ್ಠಿರ ತುಂಬ ಬುದ್ಧಿವಂತ, ದಋರ್ಮವಂತನೇ ಅದರೂ, ಯಾವ ಕಾಲಕ್ಕೆ ಯಾರೊಟ್ಟಿಗೆ ಹೇಂಗೆ ನಡ್ಕಣೊಕುಂತ ವಿವೇಚನೆ ಇಲ್ಲದಾಂಗೆ ನಡ್ಕಂಬದರ್ಂದಾಗಿಯೇ ತನಿಗೂ ತನ್ನ ಪರಿವಾರದಋವ್ಕೂ ಬೇಕುಂತಳೇ ತೊಂದರೆ ಮಾಡಿಕಾಂಬಾಂಗೆ ಕಾಂಬತ್ತಿತ್ತ್. ಈ ಜೂಜಾಟದ ಏರ್ಪಾಡೇ ಮೋಸದ್ದ್ಂತ ಗೊತ್ತಿದ್ದ ವಿಷಯ. ಅದರ್ಲೂ ಜೂಜಾಡುದಾದರೆ ಯುಧಿಷ್ಠಿರನೊಟ್ಟಿಗೆ ದುರ್ಯೋಧನನೇ ಆಡೊಕುಂತ ಹೇಳುದು ನ್ಯಾಯ ಆತಿತ್ತ್. ಈ ನ್ಯಾಯನ ಹೇಳಿಕೆ, ದೊಡ್ಡೊವಾದ, ಭೀಷ್ಮ, ದ್ರೋಣರಿಗೂ ಹೊಳ್ತ್‌ಲೆಲೇಂತೆಳ್ದು, ಆಶ್ಚರ್ಯ ಕಂಡದೆ. ಯುಧಿಷ್ಠಿರ, ತನ್ನ ಸತ್ಯಧರ್ಮನ್ನೇ ನಂಬಿಕಋಂಡ್ ಕಪಟಿಗಳ ಸವಾಲ್‌ನ ಎದ್‌ರ್ಸಿಕೆ ಹೊರ್ಟಋದ್, ತಮ್ಮಂದರ ವಿವೇಕದ ಮಾತ್‌ಗಳ ಧಿಕ್ಕರ್ಸಿದ್ ದೊಡ್ಡ ತೊಪ್ಪಾತ್. ಹಿಂದೆನ ಕಾಲಋಲಿ ನಳ ಚಕ್ರವರ್ತಿನೂ ಅವನ ತಮ್ಮನೊಟ್ಟಿಗೆ ಜೂಜಾಡಿ. ಸರ್ವಸ್ವನ್ನೂ ಸೋತ್ ಕಾಡಿಗೆ ಹೋಗಿ ಬಾರದ ಬಂಗ ಬಂದಋದ್ ಯುಧಿಷ್ಠಿರಂಗೆ ಗೊತ್ತಿದ್ದ ವಿಷಯವೇ ಆಗಿರ್ದು. ಅದರೂ ಕ್ಷತ್ರಿಯ ಧರ್ಮನ ಒಂದೇ ದೃಢವಾಗಿ ನಂಬಿಕಋಂಡ್, ಜೂಜಾಟಂತೇಳಿರೆ, ಸೋಲು ಗೆಲುವುಂತೇಳ್ದು ಇದ್ದಋದೇಂತ ಹೇಳುವ ಭಾವನೆಲಿ ಆಡ್ತ್. ನ್ಯಾಯವಾದ ಆಟ ಆದರೆ ಒಮ್ಮೆ ಒಂದು ಆಟಋಲಿ ಒಬ್ಬ ಸೋಲುದು, ಮತ್ತೊಂದಾಟಋಲಿ ಎದ್‌ರಾಳಿ ಗೆಲ್ಲುದು, ಹೀಂಗೆ ಆದು ಇದ್ದಋದೇ. ಒಟ್ಟು ಆಟಗಳ್ಲಿ ಹೆಚ್ಚಿನ ಸಂಖ್ಯೆನ ಆಟಗಳ ಗೆದ್ದವನೇ. ಜಯ ಶಾಲಿಯಾದ. ಆದರೆ ಇವರ ಆಟಋಲಿ, ಪ್ರತಿಯೊಂದು ಆಟಋಲಿಯೂ, ಸೋಲುದು ಯುಧಿಷ್ಠಿರನೇ, ಗೆಲ್ಲುದು ಶಕುನಿಯೇ. ಶಕುನಿಗೆ ಯಾವ ಸಂಖ್ಯೆನ ಗರ ಬೀಳೊಕುಂತ ಅಂವ ಹೇಳ್ದೆನೋ, ಅದೇ ಬೀಳ್‌ತಿತ್ತ್. ಒಮ್ಮೆ ಸಾ ತೊಪ್ಪುತಿತ್ತ್‌ಲೇಂತೇಳ್ದರ್ಂದ, ಹೀಂಗಾದೊರ ಹಿಂದೆ ಏನೋ ಕುತಂತ್ರ ಉಟ್ಟುಂತ ಸ್ಪಷ್ಟ ಆದ್ದೆ. ಇಂತ ಆಟಋಲಿ, ಒಂದೊಂದಾಗಿ ಯುಧಿಷ್ಠಿರ, ಧನ, ಕನಕ, ಆಪತ್ತಧನದ ನಿಧಿಗಳ. ರಾಜ ಭಂಡಾರನ, ರಾಜ್ಯನ, ತನ್ನ ಸಾಮಂತ ರಾಜರ, ದಾಸ, ದಾಸಿಯರ, ಆನೆ. ಕುದುರೆ, ರಥ, ಹೀಂಗೆ ಅವನ ಸರ್ವಸ್ವನ ಸೋತಋತ್. ಇನ್ನ್ ಪಣ ಇಸಿಕೆ ಅವನ ಹಕ್ಕಲಿ ಏನೂ ಒಳ್ತ್‌ಲೆ. ಬೆರಿ ಕೈಲಿ ಏನ್ ಮಾಡಿಕೂ ದಾರಿ ಕಾಣದಾತ್. ಎದ್‌ರಾಳಿ ಶಕುನಿ ಹಂಗುಸುವ ದಋನಿಂದ, ಇನ್ನಾಡಿಂಯನೋ ಇಲ್ಲೆನೋ?ಂತ ಕೇಳಿಕಋಂಡೇ ಇರ್‌ತಿತ್ತ್. ಅವಮಾನಂದ ಕೊದಿಯುತ್ತಿರುವ ಮನ್‌ಸಿಗೆ ಹುಣ್ಣುನ ಮೇಲೆ ಬರೆ ಹಾಕಿದಾಂಗೆ ಮತ್ತೆ ಮತ್ತೆ ಚುಚ್ಚಿ ಮಾತಾಡ್‌ತಿತ್ತ್. ಕೈಲಿ ಏನೂ ಇಲ್ಲದಾಕನ ನಾ ಏನೂ ಇಲ್ಲದಂವ ಆತ್‌ಲೆ, ನಂಗೆ ಇನ್ನೂ ಸಂಪೊತ್ತಾಗಿಯೇ ಇರುವ ನನ್ನ ತಮ್ಮಂದರೊಳೋಂತ ಹೇಳಿ, ಸಹದೇವ, ನಕುಲ ಅರ್ಜುನ, ಭೀಮಂತ ಒಬ್ಬೊಬ್ಬರ್ನೇ ಪಣಂತ ಇಸಿ ಅವನ್ನೂ ಸೋತಋತ್. ಇನ್ನೂ ಶಕುನಿನ ಛರ್ತ್ಸನೆ ತಡಿಯಕಾಗದೆ ತನ್ನನೆ ಪಣ ಆಗಿ ಇಸಿ ಆಗಋಳೂ ಸೋತಋತ್. ಹೀಂಗೆ ಪ್ರತಿ ಆಟಋಲಿಯೂ ಅಂವ ಸೋಲ್‌ಕನ ದುರ್ಯೋಧನೂ. ಅವನ

ಕೊಟಾಳಿಗಳೂ ಪಾಂಡವರ ಕಡೆ ಕೈ ತೋರ್ಸಿಕಣಿಂಡ್ ಗೇಲಿ ಮಾಡಿಕಣಿಂಡ್ ಅಟ್ಟಹಾಸ ಮಾಡ್‌ತಿದ್ವೊ. ಅದರೆಲ್ಲ ತಡಿಯಕೆ ನಿಜವಾಗಿ ಯಾರ್‌ಂದೂಳೂ ಆಕಿಲ್ಲೆ. ಯುಧಿಷ್ಠಿರ ಮುಂದೇ ತಮ್ಮಂದಣಿರಿಗೆ ಎಚ್ಚರಿಕೆ ಕೊಟ್ಟಿತ್ತ್ ಕೌರವಣಿರ್ ಎಷ್ಟೆ ಅವಮಾನ ಮಾಡಿರೂ ನೀವು ಯಾವ ರೀತಿಲೂ ಅದಿಕ್ಕೆ ಪ್ರತಿಕ್ರಿಯೆ ತೋರ್ಸಿಕೆ ಆಗಣಿವ್‌ಂತ. ತೀರ್ದ ಮಟ್ಟಗೆ ಅವೂ ಕೌರವರ ಕುಚೋದ್ಯಗಳ ಹಲ್ಲ್‌ಕಣಿಚ್ಚಿ ಸಣಿಯಿಸಿಕಂಡೊ. ಆದರೂ ಮಧ್ಯೆ ಮಧ್ಯೆ ಕೋಪಗಾರ ಭೀಮಂಗೆ ತಡಿಯಕೆ ಬೊತ್ತದೆ ಚಡಪಡಿಸ್‌ತಿತ್ತ್. ಆಗ ಅರ್ಜುನನೇ ಅವನ ತಡ್ಡ್ ಹಂಗಾರ್ ಸಮಾಧಾನ ಮಾಡ್‌ತಿತ್ತ್. ಕೌರವರ ತಂತ್ರ ಇದ್ದಣಿದ್ ಇದೇ. ಪಾಂಡವರೊಳಗೇ ಒಡಕುಂಟುಮಾಡೊಕುಂತ. ಯುಧಿಷ್ಠಿರ ಮಾಡ್ದ ಎಲ್ಲ ಅಕಾರ್ಯಗಳನ್ನೂ ತಮ್ಮಂದಣಿರ್ ಮಾತಿಲ್ಲದೆ ಸಹಿಸಿಕಣಿಡ್ ಕುದ್ದೊ. ಎಲ್ಲೊವ್ಕು ಸಮಪಾಲಾದ ಸೊತ್ತುಂತೇಳಿರೆ ದ್ರೌಪದಿ ಒಂದೇ. ಶಕುನಿನ ಪ್ರಚೋದನೆಂದ ಯುಧಿಷ್ಠರ ಅದರ್‍ನೂ ಪಣಕ್ಕಿಸಿ ಬುಟ್ಟಣಿತ್. ಯಥಾಪ್ರಕಾರ ಅದರ್‍ನೂ ಸೋತಣಿತ್.

**ಮಕ್ಕ :**

ತಾತಾ! ಯುಧಿಷ್ಠಿರ ಮುಂದೇ ಸೋತಂವ, ಅಲ್ಲದೆ ಯುಧಿಷ್ಠಿರಂಗೆ ದ್ರೌಪದಿನ ಮೇಲೆ ಇರುವ ಅಧಿಕಾರ ಐದನೇ ಒಂದಂಶ ಹೀಂಗಿರ್ಕನ, ದ್ರೌಪದಿನ ಪಣಕ್ಕಿಡುವಂತ ಹೇಸಿಗೆನ ಕೆಲ್ಸ ಬೇರೆ ಇಲ್ಲೆ. ಅಂಥ ಕ್ಷತ್ರಿಯ ರಾಜ ಸಭೆಲಿ, ಭೀಷ್ಮ, ದ್ರೋಣರಂಥ ಹಿರಿಯಣಿವೂ ಇರ್‌ಕನ ಈ ಅನ್ಯಾಯ ಹೇಂಗೆ ನಡ್ಡ್ ಹೋತುಂತ ಆಶ್ಚರ್ಯ ಆದೆ.

**ತಾತ :**

ನೀವು ಹೇಳುದು ಖಂಡಿತ ಸಣಿರಿ. ಅದ್ ರಾಜ ಸಭೆ. ಕುರುಸಾಮ್ರಾಟ ಧೃತರಾಷ್ಟ್ರನೇ ಅಧ್ಯಕ್ಷ ಪೀಠಣಿಲಿ ಕುದ್ದುಟು. ಏನ್ ಆಕರೂ ಹೋಕರೂ ಅವನ ಅಪ್ಪಣೆಂದಳೇ ಆಕು. ಅವನೇ ಮಾತಾಡದೆ ಕೌರವರ ಅಟ್ಟಹಾಸಕೆ, ಅನುಮೋದನೆ ಕೊಟ್ಟದಂತಾಕನ, ನಾವೇನ್ ಮಾಡಕಾದೆಂತ ಒಳ್ಳೊವೆಲ್ಲ ಸುಮ್ಮನೆ ಕುದ್ದೊ.

**ಮಕ್ಕ :**

ಅಂವ ಕುರು ಸಾಮ್ರಾಟ ಅಲ್ಲ, ಕುರುಡು ಸಾಮ್ರಾಟ, ತನ್ನ ಆಸ್ಥಾನಣಿಲಿ ಒಂದು ಸಾಮಾನ್ಯ ಹೆಣ್ಣ್‌ನಾದರೂ ಅವಮಾನ ಮಾಡುದ್ಯಕೆ ರಾಜ ಸಭೆಲಿ ಆಸ್ಪದ ಕೊಡುದುಂತೇಳಿರ ಅದರ್‌ಂದ ಬೇರೆ ಪಾಪಕಾರ್ಯ ಇನ್ನ್‌ಲ್ಲೆ. ಎಲ್ಲಿ ಸ್ತ್ರೀಯರ ಪೂಜಿಸುವನೂ ಅಲ್ಲಿ ದೇವತೆಗ ಪ್ರಸನ್ನರಾದವೇಂತೇಳ್ವ ದೇಶಣಿಲಿ, ಒಬ್ಬ ಮಹಾರಾಣಿನ ಕೂದೊಲುನ ಹಿಡ್‌ದೆಳ್ದ್, ಅದೂ ಅದಿಕೆ ತಿಂಗಳ ಸೂತಕದ ಸರದಿ ಬಂದಿರ್‌ಕನ, ರಾಜಸಭೆಗೆ ಎಳ್ಕಣಿಂಡ್ ಬಂದ್, ಅದರ ಸೀರೆನ ಸೆಳಿವಂತ ಅಕಾರ್ಯನ ಯಾವ ಕಾಡ್ ಜೆನಂಗಳೂ ಮಾಡಿಕಿಲೆ. ನಮ್ಮ ದೇಶದ ಎರ್ಡ್ ಪವಿತ್ರ ಕಾವ್ಯಗಳ್ಲಿ ಪರಮ ಪತಿವ್ರತೆಯರಾದ ಸೀತೆ ಮತ್ತೆ ದ್ರೌಪದಿ ಇಬ್ಬೊರಿಗೂ ಆದ ದೈಹಿಕ-ಮಾನಸಿಕ ಹಿಂಸೆಂತೇಳ್ವು, ಭಾರತೀಯರಾದೊವೆಲ್ಲ ಪ್ರಪಂಚದೆರ್ದ್ ತಲೆ ತಣಿಗ್ಗ್‌ಸ ಬೇಕಾದ ನಾಚಿಕೆನ ವಿಷಯ. ಇದಿಕ ನೀವೇನ್ ಹೇಳಿರ ತಾತಾ?

**ತಾತ :**

ನಿಮ್ಮ ಮಾತ್‌ನ ಒಪ್ಪೊಕಾದೆ. ಸೀತೆನ ವಿಷಯ ಮೂಲ ಕವಿಯೇ ಹಾಂಗೆ ಬರ್ದಿರೊಕುಂತ ಕಂಡದೆ. ಅದರ್ಲಿ ಸೀತೆನ ಬಹಿರಂಗ ಅವಮಾನ ಮಾಡುವ ಪ್ರಸಂಗಂತ ಹೇಳಿಕೆ ಆದುಲೆ. ರಾಮಂಗೆ ಸೀತೆನ ಪಾತಿವ್ರತ್ಯದ ಮಹಿಮೆ ಗೊತ್ತುಟು. ಒಳ್ಳೊವುಕೆ ಅಂದರೆ ಲೋಕದ ಜೆನಿಗೆ ಗೊತ್ತಿರಿಕಿಲೆ. ಅವರ ದೃಷ್ಟಿಗೂ ಅದರ ಪವಿತ್ರತೆ ಗೊತ್ತಾಗಲಿಂತೇಳುವ ಉದ್ದೇಶಂದಳೇ ರಾಮ ಸೀತೆ ಅಗ್ನಿ ಪ್ರವೇಶ ಮಾಡುವಾಂಗೆ ಮಾಡ್ತ್‌ಂತ ಕಂಡದೆ. ರಾಮಂಗೆ ಸಾಯ ಮಾಡ್ದೊವು ವಾನರರೇ. ವಾನರರ ಸಮಾಜ ಜೀವನಲಿ ಬಿಗಿಯಾದ ಕಟ್ಟ್‌ಪಾಡ್ ಇತ್ತ್‌ಲೇಂತ ಕಂಡದೆ. ವಾನರರ ರಾಜನಾದಂವ ಅತ್ಯಂತ ಬಲಶಾಲಿಯಾದ ವಾಲಿ ಇವನ ಹೆಣ್ಣ್ ತಾರೆ, ವಾಲಿನ ತಮ್ಮ ಸುಗ್ರೀವನ ಪ್ರೇಯಸಿಯಾಗಿ ಅವನೊಟ್ಟಿಗೆ ಎಡೆ ತಡೆಯಿಲ್ಲದೆ. ನಯ ನಾಜೂಕು ಇಲ್ಲದೆ ಕಾಮಜೀವನಲಿ ಮುಳುಗಿತ್ತ್. ವಾಲಿಗೂ ಇದರ ಬಗ್ಗೆ ಕೋಪ ಆಗಲೀ– ವಿರೋಧ ಆಗಲೀ ಇಲ್ಲದಾಂಗೆ ಇತ್ತ್. 'ಯಥಾ ರಾಜಾ ತಥಾ ಪ್ರಜಾ'ಂತ ಹೇಳುವ ಮಾತ್‌ನಾಂಗ, ಅವನ ಪ್ರಜೆಗಳೂ ಹೀಂಗೆ ಭಾರಿ ಸಡಿಲಾದ ಸಾಮಾಜಿಕ ಜೀವನ ನಡ್ಸ್‌ತಿದ್ದೊನೋ ಏನೋ. ರಕ್ಕಸನೊಟ್ಟಿಗೆ ಹೋರಾಡಿಕೆ ಗುಹೆನ ಒಳಗೆ ಹೋಕನ, ನಾ ಬಾವವರೆಗೆ ಕಾದ್‌ಕಂಡ್ ಇರ್‌ಂತ ಹೇಳಿ ಹೋದ ವಾಲಿ ಪ್ರೋರ್ಸ ಆದರೂ ಬಾತ್‌ಲೆಂತ ಹಿಂದೆ ಬಂದ್ ಸುಗ್ರೀವ ಕಿಷ್ಕಿಂಧೆನ ಸಿಂಹಾಸನಲಿ ಕುದ್ದಿತ್. ತಾರೆನೊಟ್ಟಿಗೆ ಅವನ ವಿಲಾಸ  ಜೀವನ ಜೋರಾಗಿ ನಡಿಯತಿತ್ತ್. ತಾನ್ ಹಿಂದೆ ಬಾವವರೆಗೆ ಕಾಯದೆ ಆತುರಂದ ತಾನೇ ರಾಜ ಅತ್‌ಂತ ಸುಗ್ರೀವ ಆತುರ ಪಟ್ಟಿತ್‌ಂತ ವಾಲಿಗೆ ಸುಗ್ರೀವನ ಮೇಲೆ ಕೋಪ ಉಂಟಾತ್. ಹಾಂಗೆ ಅವನ ಹೊಡ್ದ್ ಓಡ್ಸಿತ್. ತನ್ನ ಹೆಣ್ಣ್‌ನ ಅಂವ ಉಪಯೋಗ್ಸಿದ್ದಕೆ ಪ್ರತಿಯಾಗಿ ಅವನ ಹೆಣ್ಣ್ ರುಮನ ವಾಲಿ ತನ್ನ ವಶಕ್ಕೆ ತಕಂಡತ್. ಇಂತ ಪದ್ಧತಿನ ಜೆನಕ್ಕೆ ಪತಿವ್ರತಾ ಧರ್ಮ, ಹೆಣ್ಣ್‌ನ ಪಾವಿತ್ರ್ಯಂತೇಳಿರೆ ಏನ್‌ಂತ ಗೊತ್ತಿಲ್ಲದೊವು, ಸೀತೆನ್ನೂ ತಮ್ಮ ಹಾಂಗೇಂತ ನೆನ್ಸಿ ಬುಡುವೋಂತೇಳುವ ಅಳ್ಕಂದ ರಾಮ, ಸೀತೆ ತನ್ನ ಪಾವಿತ್ರ್ಯನ ಲೋಕಕ್ಕೆ ತೋರ್ಸಲಿಂತ ಅಗ್ನಿ ಪ್ರವೇಶ ಮಾಡುವಾಂಗೆ ಮಾಡ್ತ್.

ಆದರೆ ದ್ರೌಪದಿನ ಕತೆ ಹಾಂಗಲ್ಲ. ಐದ್ ಜೆನ ಅಣ್ಣ ತಮ್ಮಂದರ ಹೆಣ್ಣಾದರೂ. ಅದರ ಪತಿವ್ರತಾ ಧರ್ಮಕ್ಕೆ ಏನೂ ಕುಂದಿಲ್ಲದೆ ಇದ್ದ್, ಯುಧಿಷ್ಠಿರನೊಟ್ಟಿಗೆ ಇಂದ್ರಪ್ರಸ್ಥಲಿ ಮಹಾರಾಣಿಯಾಗಿ ಮರ್ದ ಮಹಿಳೆ. ಅದ್ ಧರ್ಮರಾಯಂಗೂ ಹೆಣ್ಣಾದ್ದರ್‌ಂದ ಒಳ್ಳ ಕೌರವರೆಲ್ಲ ಯುಧಿಷ್ಠಿರಂಗೆ ಕಿರಿಯವು ಆಗಿರ್ಕನ, ಅದ್ ಅಣ್ಣನ ಹೆಣ್ಣಾದ್ದರ್‌ಂದ ಮಾತೃ ಸ್ಥಾನಲೇ ಉಟ್ಟು. ಅಂತದರ ರಾಜ ಸಭೆಗೆ ಎಳ್ಕಂಡ್ ಬಾದು ಮಹಾ ಅಪರಾಧ. ಇದರ್ಲಿ ಸಂದೇಹವೇ ಇಲ್ಲೆ.

**ಮಕ್ಕ:**

ಅದರ್ಲೂ ರಾಜ ಸಭೆಲಿ ಅದರ ಬೆತ್ತಲೆ ಮಾಡೊಕುಂತ ಅದರ ಸೆರ್‌ಂಗ್‌ನ ಎಳೀದುಂತೇಳ್ದು ಜಗತ್ತ್‌ಲೇ ಪರಮ ಶ್ರೇಷ್ಠಂತ ಹೆಸ್‌ರಾದ ನಮ್ಮ ಸಂಸ್ಕೃತಿ ಯಾವ ಮಟ್ಟಕ್ಕೆ ಇಳ್ತ್.

ಇಂಥದೊಂದು ಘಟನೆನ ಚಿತ್ರಿಸಿದ ಭಾರತದ ಮೂಲ ಕವಿಗೆ ಧಿಕ್ಕಾರ ಹಾಕೊಕುಂತಾದೆ.

**ತಾತ :**

ಮೂಲ ಮಹಾಭಾರತದ ಕವಿ ಈ ವಿಷಯನ ಬರ್ದ್‌ಲೆಂತ ಸಂಶೋಧಕೆಕರ್ ಹೇಳುವೆ. ಅಷ್ಟ್ ಮಾತ್ರವಲ್ಲ. ಮೂಲರೂಪಕೆಲಿ ಮಹಾಭಾರತದ ಕಥೆ ಇಷ್ಟ್ ದೊಡ್ಡಕೆದಿತ್ತ್‌ಲೆ ಗಡ. 'ಜಯಂ'ತ ಹೆಸ್‌ರಾಗಿದ್ದ ಸಣ್ಣ ಕಾವ್ಯ ಆಗಿತ್ತ್ ಗಡ.

**ತಾತ :**

ಹೌದು ಆ ಅಭಿಪ್ರಾಯ ಸಂಶೋಧಕರ್ಲಿ ತುಂಬ ಪ್ರಬಲವಾಗುಟ್ಟು, ಕಾಲಕ್ರಮಕೆಲಿ ಜೆನಗ ತಮ್ಮ ಮತ– ಪಂಥಕ್ಕೆ ಅನ್ವಯಿಸಿ, ಅವ್ಕೆ ಪ್ರಾಶಸ್ತ್ಯ ಬರೊಕುಂತೇಳ್ವ ಉದ್ದೇಸನ ಇಸಿಕಕೆಂಡ್ ಕೆಲಕೆವು ಭಾಗಗಳ ಬರ್ದ್ ಸೇರ್ಸಿದೊ. ದ್ರೌಪದಿನ ವಸ್ತ್ರಾಪಹರಣ, ಮತ್ತೆ ಕೃಷ್ಣ ಮಾಡುವ ಅಕ್ಷಯ ವಸ್ತ್ರ ಪ್ರದಾನದಂತಹ ಕತೆಗಳ, ವೈಷ್ಣವ ಪಂಥದ ಮೇಲ್ಮೆನ ಸಾರಿಕೆ ಬೇಕಾಗಿ ಮತ್ತೆನಕೆವು ಯಾರೋ ಬರ್ದ್ ಸೇರ್ಸಿದೊ. ಜೆನಗಳ ಮನ್ಸ್‌ನ ಕದಡಿ ಮತ್ತೆ ಪೊರಿಹಾರ ಕೊಟ್ಟರೆ ಎಲ್ಲರ ಮನ್ಸಿಗೆ ಪೊರ್ಲು ನಾಟಿದೆಂತೇಳುವ ಕಾರಣಂದ ದ್ರೌಪದಿನ ಕರುಣಾಜನಕ ಸ್ಥಿತಿನ ವರ್ಣಿಸಿ ಮತ್ತೆ ಕೃಷ್ಣ ಅದಿಕೆ ಅಕ್ಷಯ ವಸ್ತ್ರದ ವರ ಕೊಡುದುಂತೇಳುವ ರಮ್ಯ ಕಥನ ಸೇರ್ಪಡೆ ಮಾಡ್ದೊ.

**ಮಕ್ಕ :**

ಅಂಥ ಸರ್ವ ಶಕ್ತ ಕೃಷ್ಣ ಪಾಂಡವರ ಕಡೆಗೆ ಇದ್ದೂ ಅಂವ ಏಕೆ ಕಪಟ ದ್ಯೂತನ ತಡ್ತ್‌ಲೆ?

**ತಾತ :**

ಆಶ್ಚರ್ಯಂತೇಳಿರೆ ಪಾಂಡವಕೆರ್ ಪ್ರತಿಯೊಂದು ಕಾರ್ಯನೂ ಕೃಷ್ಣನೊಟ್ಟಿಗೆ ಆಲೋಚಿಸಿಯೇ ಎಲ್ಲ ಕೆಲ್ಸನೂ ಮಾಡೊವು ಈ ದ್ಯೂತಕೆ ಬಾಕನ ಅವನ ನೆನ್ಸಿತಲೆ ಅಂವನೂ ಹಾಂಗೆ ವಿಧಿ ಸಂಕಲ್ಪಲಿ ನಡಿವಂತದರ ಯಾರ್‌ಂದೊಳೂ ತೊಪ್ಪುಸಿಕೆ ಆಕಿಲೆ ಆಗಕೆದ್‌ಂತ ತಟಸ್ಥದೋರಣೆ ತಾಳ್ತ್. ಅಲ್ಲದೆ. ಅದೇ ಸಮಯಲಿ ದ್ವಾರಕೆನ ಮೇಲೆ ಶತ್ರುಗ ಮುತ್ತಿಗೆ ಹಾಕಿದ್ದದರ್‌ಂದ ಅವಂಗೂ ಇತ್ತ ಪೂರ್ಣಗಮನ ಕೊಡಿಕೆ ಸಾಧ್ಯ ಇತ್ತ್‌ಲೆ. ದುಶ್ಶಾಸನ ದ್ರೌಪದಿನ, ಅದ್ ಮುಟ್ಟಾಗಿದ್ದರೂ. ಬಲಾತ್ಕಾರಂದ ಕೂದೊಲುನ ಹಿಡ್ದ್ ಎಳ್ಕಂಡ್ ಬಾತ್. ಒಂದು ಅಬಲೆ ಹೆಂಗ್‌ಸ್‌ನ ಮೇಲೆ ಗಂಡ್‌ಸ್ ಪೌರುಷ ತೋರ್ಸುವ ಕಾರ್ಯ ಹೀನಾಯವಾದ್. ರಾಜಾಂತಃಪುರದ ಸ್ತ್ರೀಯರ ಸೂರ್ಯನ ಕಿರಣಗಕೆಳೂ ನೋಡಿಕೆ ಅವಕಾಶ ಇಲ್ಲೇಂತ ಹೇಳುದು ವಾಡಿಕೆ. ಇದರ ಪಾಲ್ಸುವ ಜನ ಈಗೊಳೂ ನಮ್ಮೆದ್‌ರಿಗೇ ಒಳೊ. ತಲೆಂದ ಕಾಲಿಗೆ ಮುಟ್ಟು ಕಕೆಪ್ಪು ಸೀರೆನ ಮುಸುಕು ಹಾಕಕೆಂಡ್ ಇರುವ ಒಂದು ಪಂಗಡದೊವು ಇದ್ದರೆ, ಹೀಂಗಿಲ್ಲದಿದ್ದರೆ ತಮ್ಮ ಗಕೆಣ್ಮಕ್ಕಳ್‌ಂದ ತಮ್ಮ ಜೀವಕ್ಕೆ ಅಪಾಯ ಬಾದುಂತೇಳ್ವ ಹೆದ್‌ರಿಕೆಂದ ಹೀಂಗ ನಡ್ಕಂಡವೆ. ಇನ್ನೊಂದು ವರ್ಗದೊವು ಒಳೊ. ಪರದೇಸದ ಹೆಣ್ಮಕಳ ಅನುಕರಣೆ ಮಾಡೊವು ತಮ್ಮ ತೊಡೆ ಬುಡಂದ ಕೆಳಗೆ ಮತ್ತೆ ಸೊಂಟಂದ ಮೇಲೆನ ಉಬ್ಬು ತಗ್ಗ್‌ಗಳ ಎಷ್ಟ್ ತೋರ್ಸಿಕೆ ಸಾಧ್ಯ ಉಟ್ಟೊ ಅಷ್ಟರ ಕಷ್ಪಟ್ಟ್ ಪ್ರದರ್ಶನ ಮಾಡುವೆ. ಹಿಂದೆನ

ಕಾಲಲ್ಲಿ ನಮ್ಮ ದೇಸಲಿ ಹೀಂಗೇ ಇತ್ತೊ ಏನೋಂತ ಸೊಂಸಯ ಬಂದದೆ. ದೇವಸ್ಥಾನಗಳ ಹಳೇ ಶಿಲ್ಪಗಳ ನೋಡಿರೆ. ಅದಿರ್ಲಿ ಈಗ ನಾವ್ಗೆ ಪ್ರಸ್ತುತವಾದ್ದ್ ದ್ರೌಪದಿನ ಅವಸ್ಥೆ. ಅದ್ ಚಕ್ರವರ್ತಿನ ರಾಣಿ. ಆಗ ಅದರ ಸ್ಥಾನ ಗೌರವ ಎಷ್ಟ್ ದೊಡ್ಡದ್. ಅದರ ಯುಧಿಷ್ಠಿರ ಪಣಕ್ಕೆ ಇಸಿದ್ ದೊಡ್ಡ ತೊಪ್ಪು. ಅದೂ ತಾನ್ ಸೋತ ಮೇಲೆ, ಸ್ವತಂತ್ರವಾಗಿದ್ದ ಇನ್ನೊಂದು ವ್ಯಕ್ತಿನ ಒತ್ತೆ ಇಸುವ ಅಧಿಕಾರ ಅವಂಗೆ ಇಲ್ಲವೇ ಇಲ್ಲೆ. ಈ ವಿಷಯನ ಎತ್ತಿ ಅಷ್ಟ್ ದೊಡ್ಡರಾಜ ಸಭೆಲಿ ಪ್ರಶ್ನೆ ಮಾಡ್‌ಕನ. ಲೋಕಕ್ಕೇ ಉಪದೇಶ ಕೊಡುವ ಭೀಷ್ಮ, ದ್ರೋಣರಂತದವೂ ಮೌನ ತಾಳ್ದೊ. ಕೆಲವು ರಾಜೆರಿಗೆ ದ್ರೌಪದಿನ ವಾದ ಸರಿಂತ ಕಂಡರೂ ಅಧಿರಾಜರ ಅಟ್ಟಹಾಸದೆದ್‌ರ್, ಮಾತಾಡಿಕೆ ಧೈರ್ಯ ಇಲ್ಲದೆ ಚಡಪಡ್ಸಿಕಂಡ್ ಮೌನವಾದೊ. ನೂರುಜನ ಕೌರವರ ಪೈಕಿ ಒಬ್ಬ, ದುರ್ಯೋಧನನ ತಮ್ಮನಾಗಿರುವ ವಿಕರ್ಣಾಂತೇಳಂವ ಮಾತ್ರ, ದ್ರೌಪದಿನ ಯುಧಿಷ್ಠಿರಂಗೆ ಜೂಜಾಟಲ್ಲಿ ಒತ್ತೆ ಇಸಿಕೆ, ಅಂವ ಮುಂದೇ ಸೋತದ್ದರ್‌ಂದ, ಅಧಿಕಾರ ಇಲ್ಲೆ. ದ್ರೌಪದಿನ ದಾಸೀಂತ ಕರಿಯಕೆ ಸಾಧ್ಯವೇ ಇಲ್ಲೆ. ಅದ್ ಸ್ವತಂತ್ರ ಹಂಗ್‌ಸ್‌ಂತ ಅದರ ಪರವಾಗಿ ವಾದ್‌ಸಿತ್. ಅಷ್ಟಾಕನ ಕರ್ಣ ದುರ್ಯೋಧನ ಎಲ್ಲ ಸೇರಿಕಂಡ್ ಅವನ ಹಂಗ್‌ಸಿ ಬಾಯಿ ಮುಚ್ಚಿಸಿದೊ. ವಿಕರ್ಣ ನಾ ಕೌರವರ ಒಡಹುಟ್ಟು ಆದರೂ ಅವು ಮಾಡುವಂತ ಪಾಪಕಾರ್ಯಲ್ಲಿ ನಾ ಭಾಗಿ ಅಲ್ಲಂತ ಹೇಳ್ತ್ ಆ ಪಾಪಿಗಳ ಎಡೆಲಿ ಇಂವ ಒಬ್ಬ ಯೋಗ್ಯ ಹೇಂಗೆ ಹುಟ್ಟಿತ್‌ಂತ ಆಶ್ಚರ್ಯ ಆದೆ. ಮಹಾಭಾರತ ಯುದ್ಧಲ್ಲಿ ವಂಶಚ್ಛೇದ ಆಗಿ ಹೋದವರತೊಪ್ಪ್‌ಸಿಕೆ ಯುಯುತ್ಸನ ತನ್ನ ಪಕ್ಷಕ್ಕೆ ಯುಧಿಷ್ಠಿರ ಕರ್‌ಕಂಡ್ ಬಾದು ನ್ಯಾಯ ಆಗಿತ್ತ್‌ಂತ ಕಂಡದೆ. ಕುರುಡ ಧೃತರಾಷ್ಟ್ರನ ನೂರು ಜನ ಮಕ್ಕಳ್ನೂ ನಾ ಒಬ್ಬನೇ ಕೊಂದನೆಂತ ಶಪಥ ಮಾಡ್ದಾಂಗೆ ಹದ್ನಾಲ್ಕನೇ ದಿನದ ಯುದ್ಧಲ್ಲಿ ಇಂವನ ಭೀಮ ಕೊಂದದೆ. ಇಂವಂಗೆ ಗೌರವಾರ್ಪಣೆಯಾಗಿ ಎರ್ಡ್ ನಿಮಿಷದ ಮೌನ ಪ್ರಾರ್ಥನೆನೂ ಎರ್ಡ್ ಹನಿ ಕಣ್ಣೀರ್‌ನೂ ನಾವು ಹರ್ಸೊಕು.

"ನನ್ನ ಕಾಪಾಡಿ, ಕಾಪಾಡಿ"ಂತ ಅತ್ತ್‌ಕಂಡ್ ದ್ರೌಪದಿ ಎಷ್ಟ್ ಮೊರ್ಟರೂ ಆ ಕ್ಷತ್ರಿಯ ಸಭೆಲಿ ಯಾರೊಬ್ಬನೂ ಮೊಸ್ಗಿತ್‌ಲೆ. ಹಿಂದೆನ ವೀರರ್ಲಿ ಒಂದು ಆದರ್ಶ ಇತ್ತ್. ಪೆಣ್ಣುಯ್ಯಲೂಳ್, ತುರುಗೋಳೊಳ್, ನೆಂಟನೆಡರಿನೊಳ್- ಒಬ್ಬ ಹೋರಾಡಿ ಅವರ ರಕ್ಷಿಸೊಕು; ಇಲ್ಲರೆ ಸತ್ತ್ ಸ್ವರ್ಗ ಸೇರೊಕು. ಆದರೆ ಇಲ್ಲಿ ಕೌರವರ ಅಟ್ಟಹಾಸದೆದ್‌ರ್, ಎಲ್ಲೊವು ಜೀವಗಳ್ಳದಾಗಿ ಕುದ್ದೊ. ಅಂಥ ರಾಜ ಸಭೆಲಿ, ಹಿಂದೆ ಮಹಾರಾಣಿಯಾಗಿದ್ದ ಪತಿವ್ರತೆನ ಬೆತ್ತಲೆ ಮಾಡಿ ಕುಶಿ ಪಡೊಕುಂತ ಹೊರ್ಟವರ ನೀಚ ಮನೋವೃತ್ತಿನ ನೆನ್ಸಿ ನೋಡುದೇ ಕಷ್ಟ. ಅನಾಥ ರಕ್ಷಕನಾದ ಶ್ರೀಕೃಷ್ಣ ಅಕ್ಷಯ ವಸ್ತ್ರ ಪ್ರದಾನ ಮಾಡಿ ಅದರ ಕಾಪಾಡ್ತ್.

ಅದಾದ ಮೇಲೆ ದ್ರೌಪದಿ ಕೋಪಲ್ಲಿ ಶಪಥ ಮಾಡ್ತ್. "ರಾಜಸೂಯ ಯಾಗಲ್ಲಿ ಪವಿತ್ರ ತೀರ್ಥಜಲಂಗಳ್‌ಂದ ಸ್ನಾನ ಮಾಡ್ದ ಈ ತಲೆಕೂದೊಲುನ ಈ ನೀಚ ದುಃಶ್ಯಾಸನ ಒಡ್ಡೆಳ್ದ್ ನಂಗೆ ಅವಮಾನ ಮಾಡ್ತ್. ಇದ್ಕೆ ಪ್ರತೀಕಾರವಾಗಿ ಅವನ ನೆತ್ತರ್‌ಲಿ ಈ

ಕೂದ್ಲುಗಳ ನಸ್ನಿ, ಅವನ ಹಲ್ಗ್ಗಳ್ನೇ ಬಾಚಣಿಗೆ ಮಾಡಿ ಬಾಚಿದ ಮೇಲೆ ತಲೆಕಟ್ಟುದು ಹೊರ್ತು ಅದಿಕೆ ಮುಂದೆ ಈ ಕೂದ್ಲುನ ನಾ ಕಟ್ಟಿಕಿಲೆಂತ ಪ್ರತಿಜ್ಞೆ ಮಾಡ್ತ್. ಇಷ್ಟ್ ಹೊತ್ತು ತಡ್ಕಣಂಡ್ ಸಾಕಾಗಿದ್ದ ಭೀಮ ಈಗ ಸಿಡ್ಲ್ ಹೊಡ್ದಾಂಗೆ ಹೇಳ್ತ್. ಈ ನೀಚ ದುಃಶ್ಯಾಸನ ದ್ರೌಪದಿಗೆ ಮಾಡ್ದ ಅವಮಾನಕ್ಕೆ ಪ್ರತಿಯಾಗಿ ಅವನ ಮೊಣ್ಣಲಿ ಹೊಣ್ಕಿಸಿ, ಅವನ ಎದೆನ ಎರ್ಡ್ ಭಾಗ ಮಾಡಿ ಅವನ ಬಿಸಿನೆತ್ತ್‌ರ್‌ನ ಕುಡಿವೆ. ಆ ಮೇಲೆ ಆ ನೆತ್ತ್‌ರ್‌ಂದ ದ್ರೌಪದಿನ ಕೂದ್ಲಿಗೆ ಅಭಿಷೇಕ ಮಾಡಿ ಅವನ ಹಲ್ಲ್‌ನ ಬಾಚಣಿಲಿ ಅದರ ಕೂದ್ಲುನ ಬಾಚಿ, ಅವನ ಕರ್ಲ್‌ನೇ ಹೂವುನಾಂಗೆ ಅದರ ತಲೆಗೆ ಮುಡ್ಸುವೆ. ಮತ್ತೆ ಅವನ ಅಣ್ಣ ದುಷ್ಟ ದುರ್ಯೋಧನ, ಕುಲೀನ ಸ್ತ್ರೀಯಾದ ದ್ರೌಪದಿಗೆ ತನ್ನ ತೊಡೆನ ತೋರ್ಸಿ ಅವಮಾನ ಮಾಡ್ತ್. ಆ ತೊಡೆಗಳ ನಸ್ನ ಗದೆಲಿ ಹೊಡ್ಡ್ ಅವನ ನೆಲಕ್ಕೆ ಬೀಳ್ಸಿ ದೂಳುಲಿ ಹೊಣ್ಕಿಸಿ ಅವನ ಕಿರೀಟನ ನಸ್ನ ಎಡ್ದ ಕಾಲ್‌ಂದ ಹೀಂಗೆ ಮೆಟ್ಟುವೆಂತ ಬಲವಾಗಿ ನೆಲನ ಒದ್ದಣತ್. ಆ ಒದೆತಕೆ ಇಡೀ ಸಭಾಭವನವೇ ಭೂಕಂಪ ಆದಾಂಗೆ ಗಡಗಡ ನಡ್‌ಗಿತ್. ಆಸನಲಿ ಕುದ್ದಿದ್ದವು ಎಲ್ಲ ಮುಂಗಣರ್ಸಿ ಬಿದ್ದೊ.

ಈ ವಿದ್ಯಮಾನಗಳೆಲ್ಲ ಕೇಳಿ ಆಕನ ಧೃತರಾಷ್ಟ್ರನ ಮನ್‌ಸ್‌ಲಿ ಹೆದರಿಕೆ ಕುದ್ದಣತ್. ದ್ರೌಪದಿನಂತ ಪತಿವ್ರತೆ ಸಾಪಕೊಟ್ಟರೆ ಅದರ್‌ಂದ ತನ್ನ ಮಕ್ಕಳ ಸರ್ವನಾಶ ಆದು ಖಂಡಿತ. ಇಷ್ಟಾದ ಮೇಲೆನೂ ಈ ಅವಿವೇಕಿಗ ತಮ್ಮ ಅಟ್ಟಹಾಸನ ಇನ್ನೂ ನಿಲ್ಸ್‌ದ್‌ಲೆಲೆಂತೇಳಿ, ದ್ರೌಪದಿನ ಹಕ್ಕಲೆ ಬಾಂತೇಳಿ, ನಾ ನಿಂಗೆ ವರಗಳ ಕೊಟ್ನೆ ಬೇಕಾದ್ದರ ಕೇಳಿಕಾಂತ ಹೇಳ್ತ್. ಅದಿಕೆ ದ್ರೌಪದಿ ನೀವು ವರಂತ ಕೊಡುದಾದರೆ ನನ್ನ ಗಂಡ ಯುಧಿಷ್ಠಿರ ದಾಸ್ಯ ಮುಕ್ತನಾಗಣಲಿಂತ ಕೇಳ್ತ್. ಅದಿಕೆ ಧೃತರಾಷ್ಟ್ರ "ತಥಾಸ್ತುಂ"ತ ಹೇಳ್ತ್. ಇನ್ನೊಂದು ವರ ಕೇಳ್‌ಂತ ಹೇಳ್ತ್. ಅದಿಕೆ ದ್ರೌಪದಿ ಒಳ್ದ ಪಾಂಡುಪುತ್ರಣರಿಗೆ ಅವರವರ ಆಯುಧಗ ಮತ್ತು ರಥಗಳ ಸಮೇತ ದಾಸ್ಯಂದ ಬಿಡುಗಡೆ ಮಾಡೊಕುಂತ ಕೇಳ್ತ್. 'ಹಾಂಗೇ ಆಗಣಲಿ'. ಇನ್ನೊಂದು ವರ ಕೇಳ್‌ಂತ ಹೇಳ್ತ್. ಅದಿಕೆ ದ್ರೌಪದಿ, ಕ್ಷತ್ರಿಯಣರಿಗೆ ಎರ್‌ಡರ್‌ಂದ ಹೆಚ್ಚಿ ವರಗಳ ಕೇಳಿಕೆ ಆಗಣದ್. ಹಾಂಗೆ ನಾ ಇನ್ನ್ ವರ ಕೇಳುವ ಹಾಂಗೆ ಇಲ್ಲೆಂತ ದ್ರೌಪದಿ ಹೇಳ್ತ್. ನನ್ನ ಮಕ್ಕಳ್‌ಂದ ನಿಂಗೆ ಅಪಮಾನ ಆಕನ ಅದರ ತಡಿಯಕೆ ಬೊತ್ತದ ನನ್ನ ನಿಸ್ಸಹಾಯಕತೆನ ನೀ ಕ್ಷಮಿಸೊಕು. ನೀ ನನ್ನ ಸೊಸೆಕಳ್ಳಿ ಸರ್ವ ಶ್ರೇಷ್ಠ ಸೊಸೆಂತೇಳ್ಳ ಗೌರವ ನಂಗೆ ಯಾಗೂಳೂ ಉಟ್ಟು. ನಮ್ಮ ಮೇಲೆ ಮನ್ಸ್‌ಲಿ ಕಂಯಿ ಇಸಿಕಣ್ಣಡ ಮಗಳೇಂತ ತುಂಬ ಪ್ರೀತಿಂದ ಹೇಳ್ತ್. ಮತ್ತೆ ಯುಧಿಷ್ಠಿರನ ಕರ್ದ್ ಇಲ್ಲಿ ಬಾ ಮಜ್ಜಂತ ಕೊಂಡಾಟಣಲಿ ಕರವಾಂಗೆ ಕರ್ತ್. ನೀವ್ಗೆ ನನ್ನ ಮಕ್ಕಳ್‌ಂದ ಬಾರಿ ತೊಪ್ಪು ನಡ್ದ್ ಹೋತು. ಅದಿಕ್ಕೆ ಪ್ರಾಯಶ್ಚಿತ್ತ ಆಗಿ ಜೂಜುಲಿ ಅವು ನಿಮ್ಮಂದ ಗೆದ್ದ್ ಕಂಡಣದರ ಸರ್ವಸ್ವನ್ನೂ ನೀವ್ಗೆ ಹಿಂದೆ ಕೊಟ್ಟನೆ. ನೀವು ಇಂದ್ರಪ್ರಸ್ಥಕ್ಕೆ ಹೋಗಿ. ಹಿಂದೆನಾಂಗೆ ಸುಖಲಿ ಬೊಪ್ಪ್ಯಂಡ್ ಇರಿಂತ ಆಶೀರ್ವಾದ ಮಾಡ್ತ್. ಮುಂದೆ ನನ್ನ ಮಕ್ಕಣಳಿಗೆ ಇವು ಪ್ರತೀಕಾರಕ್ಕೆ ಹೊರ್ಟರೆ ಇಷ್ಕೆ ಉಳಿಗಾಲ ಇರಿಕೆಲ್ಲೆಂತ ನೆನ್ಸಿ, ಸತ್ಯ ಸಂಧನಾದ ಯುಧಿಷ್ಠರಂದ ಮಾತ್‌ತಕಂಬ ಹಾಂಗೆ ನನ್ನ ಮಕ್ಕ ಹಾಡ್ದ ಅವಿನಯನ ಮನ್ಸ್‌ಲಿಸಿಕಣದೆ ಮನ್ಸ್‌ಲಿ ಕಂಯಿ ಇಸಿಕಣ್ಣಡ

ಬಲಂತ ಹೇಳ್ತ್. ಅದಿಕೆ ಯುಧಿಷ್ಠರ ಆಗೆಲಿದೊಡ್ಡಪ್ಪಂತ ಹೇಳ್ತ್.

ನಾವು ಕಷ್ಟಪಟ್ಟ್ ವಶಪಡ್ಸಿವ ಸರ್ವಸ್ವನ್ನೂ ಹಿಂದೆ ಕೊಟ್ಟ್ ಈ ಮುದಿಯು ನಮ್ಮ ಸಾಧನೆನೆಲ್ಲ ಹಾಳ್‌ಮಾಡ್ತ್‌ಂತ ಹೇಳಿಕಳೆಂಡ್ ದುರ್ಯೋಧನಾದಿಗ ಬುಸುಗುಟ್ಟಿದೊ. ಮತ್ತೆ ದುಷ್ಟ ಚತುಷ್ಟಯಳೆರ್‌ಂತ ಹೆಸರಾದ ದುರ್ಯೋಧನ, ದುಃಶ್ಶಾಸನ, ಕರ್ಣ, ಶಕುನಿಂತ ಹೇಳ್ವ ನಾಲ್ಕ್ ಜೆನ ತಿರ್‌ಗಿ ಒಟ್ಟು ಸೇರಿ ಮಂತ್ರಾಲೋಚನೆಗೆ ಸುರು ಮಾಡ್ವೊ. ಶಕುನಿನ ತಂತ್ರಗಾರಿಕೆನ ಹಾಂಗೆ ಅವನ ಮಾತ್‌ನ ಜಾಣ್ಮೆನೂ ಹಾಂಗೆನೇ ದ್ಯೂತಳೆಲಿ ಪಣಕ್ಕಿಸಿ ಗೆದ್ದ್‌ಕಳೆಂಡರೆ ಈ ಮುದಿಯಳೆರ್, ಅದರೆಲ್ಲ ಹಿಂದೆ ಕೊಡ್ಡಿ ಬುಟ್ಟವೆ. ಅದಿಕ್ಕಾಗಿ ಈ ಸಲ‌ರ್ತಿ ಒಂದೇ ಆಟ. ಸೋತೊವು ಹನ್ನೆರ್ಡ್ ವೊರ್ಸ ವನವಾಸ ಮಾಡೊಕು. ಮತ್ತೆ ಯಾದಾರ್ ಪಟ್ಟಣಲಿ ತಮ್ಮ ಗುರ್ತು ಸಿಕ್ಕದಾಂಗೆ ಒಂದು ವೊರ್ಸ ಅಜ್ಞಾತವಾಸ ಮಾಡೊಕು. ಇಷ್ಟರ ಜಯಶಾಲಿಗಾಗಿ ಮಾಡಿ ಮುಗ್ಸಿರೆ ಅವರ ರಾಜ್ಯಕೋಶ ಎಲ್ಲ ಅವ್ಕೇ. ಒಂದು ವೇಳೆ ಅಜ್ಞಾತ ವಾಸಕಾಲಳೆಲಿ ಅವರ ಗುರ್ತು ಹಿಡ್ದ್ ಬುಟ್ಟರೆ, ಅವು ಮತ್ತೆ ಹನ್ನೆರ್ಡ್ ವರ್ಸ ವನವಾಸ ಮತ್ತೆ ಒಂದು ವೊರ್ಸ ಅಜ್ಞಾತ ವಾಸ ಮಾಡೊಕುಂತ ಶರ್ತಂತ ನಿರ್ಣಯ ಮಾಡ್ವೊ. ಪಾಂಡವರ ಜೂಜಾಡಿಕೆ ಹಿಂದಕೆ ಕರ್‍ಲುದೊಂದೇ ಬಾಕಿ ಇದ್ದೆ ಕುರ್‍ಡ ದೊರೆ ಒಪ್ಪಿದೆನೊ ಇಲ್ಲೆನೋ ಹೇಂಗಾರ್ ಒಪ್ಸಿಯೇ ತೀರೊಕುಂತ ನಾಲ್ಕ್ ಜೆನನೂ ರಾಜನಕ್ಕಲೆ ಹೋದೊ.

ಸುರುಗೆ ಶಕುನಿನೆ ಅವನ ಕುಹಕ ಬುದ್ಧಿಗೆ ಅನುಗುಣವಾಗಿ ಮಾತಾಡಿಕೆ ಸುರುಮಾಡ್ತ್. ಪಾಂಡವರ ಹಿಂದೆ ಕರ್‍ಸಿ ಜೂಜಾಡಿಕೆ ಹೇಳೊಕುಂತ ಧೃತರಾಷ್ಟ್ರನ ಒತ್ತಾಯ ಮಾಡ್ವೊ ಯಾರ್ ಏನೇನ್ ಹೇಳಿರು ರಾಜ ಒಪ್ಪಿತೇಲೆ. ಕಡೆಗೆ ದುರ್ಯೋಧನ, ನಾವು ಹೇಳ್ದಾಂಗೆ ನೀ ಮಾಡ್ದ್‌ಲೇಂತ ಆದರೆ ನಾ ಇಲ್ಲೇ ನನ್ನ ಪ್ರಾಣ ಬುಡುದು ಖಂಡಿತಂತ ಹೇಳುದರ ಕೇಳಿ, ಅಯ್ಯೋ ದುರ್ಯೋಧನ ಹಾಂಗೆ ಹೇಳ್ಬಡಂತ ಆತುರಂದ ಹೇಳ್ತ್. ಅಂವ ಹುಟ್ಟ್‌ಕನೇ ಅಪಶಕುನಗ ಕಂಡ್, ಇಂವ ಕುಲಕಂಟಕ ಹಾಂಗಾಗಿ ಇವನ ಒಳ್ಳೆಲಂಬಕೆ ಆಗೇದ್, ಈಗಳೇ ನಾಶ ಮಾಡಿರೆ ಎಲ್ಲೊವ್ಕು ಕ್ಷೇಮ. ಒಂದು ಕುಲದ ರಕ್ಷಣೆಗಾಗಿ ಒಬ್ಬನ ತ್ಯಜಿಸೊಕು. ಒಂದು ಗ್ರಾಮದ ರಕ್ಷಣೆಗಾಗಿ ಒಂದು ಕುಲನ ಬೊಲಿಕೊಡೊಕು. ಒಂದು ರಾಜ್ಯದ ರಕ್ಷಣೆಗೆ ಒಂದು ಗ್ರಾಮನ ಕಳ್ಕಣಕ್‌ಂತ ನೀತಿ ಶಾಸ್ತ್ರ ಹೇಳ್ದ.

ಹಾಂಗಾಗಿ ಇವನ ಇಸಿಕಂಬಕೆ ಆಗೇದ್‌ಂತ ಭೀಷ್ಮ ವಿದುರ ಎಲ್ಲ ಹೇಳ್‌ಕನ ಧೃತರಾಷ್ಟ್ರ ಆ ಮಾತಿಗೆ ಒಪ್ಪಿತೇಲೆ. ದೋಷ ಕಂಡರೆ ಅದಿಕೆ ಹೋಮ ಹವನಗಳ ಮಾಡ್ಸಿ ಪೊರಿಹಾರ ಮಾಡ್ವೊನೊ. ಇಂಥ ಮುದ್ದಾದ ಕೂಸುನ ಕೊಲ್ಲುವಂತ ಪಾಪಕಾರ್ಯನ ಯಾವ ಕಟುಕಳೆರೂ ಮಾಡಿಕಿಲೆಂತ ಹೇಳಿ ಅವರ ಬಾಯಿ ಮುಚ್ಚಿಸಿತ್. 'ಹೆತ್ತಳೆವ್ಕೆ ಹೆಗ್ಗ ಮುದ್ದು'ಂತ ಗಾದೆನೇ ಉಟ್ಟು, ಆ ಹಿಂದೆನ ಮಾತ್‌ನ ವಿದುರ ಹಿಂದಕೆ ಧೃತರಾಷ್ಟ್ರಂಗೆ ಹೇಳ್ತ್. ಕಂಸ ಲೋಕ ಕಂಟಕ ಆಗಿರ್‌ಕನ, ಕೃಷ್ಣನೇ ಅವನ ಕೊಂದದ್. ಹಾಂಗೆ ಇವಂಗೂ ದಂಡನೆ ಕೊಡೊಕು. ಅಷ್ಟ್ ಮಾತ್ರ ಅಲ್ಲ ಧೃತರಾಷ್ಟ್ರ ಮತ್ತೆ ಗಾಂಧಾರಿ, ಏಕಾಂತಳೆಲಿ ಇರ್‌ಕನ, ನಿದ್ದೆಲಿ ಭೀಮ ಪ್ರತಿಜ್ಞೆ ಮಾಡ್‌ದ ಸಂದರ್ಭನ ಕನ್ಸ್‌ಲಿ ಕಂಡ್

ಹೆದ್ರಿ ಎದ್ದವನ ಸಮಾಧಾನ ಮಾಡಿ. ಗಾಂಧಾರಿನೂ ವಿದುರ ಹೇಳ್ದ ಮಾತ್ನೇ ಹೇಳ್ದಂತ ಹೇಳುವ ಮಾತ್ ಆಶ್ಚರ್ಯ ತಂದದೆ. ಒಂದು ಅಯ್ಯೆ ಹೇಳುವ ಮಾತ್ನೋ ಇದ್?ಂತ ನಾವು ಕಕ್ಕಾಬಿಕ್ಕಿ ಆದವೆ. ಅದ್ ಅಯ್ಯೆನೇ ಹೌದು. ನೂರರ್ಲಿ ಇಂವ ಒಬ್ಬನ ಕಳ್ಕಂಡರೂ, ಬಾಕಿ ಒಳ್ದತೊಂಬತ್ತೊಂಬೊತ್ತ್ ಜನನೂ ಒಳ್ಕಂಬೆಂತಾದರೆ ಆ ಪ್ರೀತಿ ತೊಂಬೊತ್ತೊಂಬೊತ್ತ್ ಪಾಲ್ ಹೆಚ್ಚಾದುಲೇನೋಂತ ಅದರ ಭಾವನೆ. ಅದ್ ನ್ಯಾಯ ಆಗಿಯೇ ಉಟ್ಟು. ಆದರೆ ಧೃತರಾಷ್ಟ್ರಂಗೆ ಅದ್ ಒಪ್ಪಿಗೆ ಆತ್‌ಲೆ. ಅವಂಗೆ ದುರ್ಯೋಧನನ ಸಂತೋಸೇ ಬೇಕಾದ್ದ್.

ಧೃತರಾಷ್ಟ್ರನ ಈ ದೌರ್ಬಲ್ಯನ ದುರ್ಯೋಧನ ಅವಂಗೆ ಬೇಕಾದ ಹಾಂಗೆ ಉಪಯೋಗ್ಸಿಕಂಡತ್. ಹಾಂಗೆ ವಾಪಾಸ್ ಹೋದ ಪಾಂಡವರ ಮತ್ತೆ ಜೂಜಾಟಕೆ ಬರೊಕುಂತ ಧೃತರಾಷ್ಟ್ರ ಹೇಳಿಕಳ್ಸುವಾಂಗೆ ಒತ್ತಾಯ ಮಾಡಿ ಒಪ್ಸಿಸಿತ್. ಪಾಂಡವರ್ ಎಲ್ಲಿದ್ದರೂ ಬಾವಾಂಗೆ ಹೇಳಿಕಳ್ಸಿನೆಂತ ಮಾತ್ ಕೊಟ್ಟತ್. ಪಾಂಡವರ್ ಒಂದೆ ಬಂದ್ ಮುಂದೆನಾಂಗೆ ಜೂಜಾಡಿರೆ ಅವ್ಕೆ ಸೋಲು ಕಂಡಿತ. ಅವರ ಎಲ್ಲ ಸಂಪೊತ್ತೊ ನಾವ್ಗೇ ಸಿಕ್ಕಿದೇಂತೇಳ್ದು ಕೌರವರಿಗೆ ನಿಶ್ಚಯ. ಜೂಜುನ ಫಲಿತಾಂಶ, ಹೀಂಗೆ ಆದೇಂತ ಎಲ್ಲೊವ್ಕೂ ಗೊತ್ತುಟು. ಅದಿಕೇ ಭೀಷ್ಮ, ದ್ರೋಣ, ಕೃಪಾಚಾರ್ಯರೆಲ್ಲ ಧೃತರಾಷ್ಟ್ರಂಗೆ ಹಿಂದೆ ಕರ್ಸುದು ಬೇಡಂತ ಒತ್ತಾಯ ಪೂರ್ವಕ ಹೇಳ್ರೊ. ಆದರೆ ಧೃತರಾಷ್ಟ್ರ ಅವರ ಮಾತ್‌ನ ಧಿಕ್ಕರ್ಸಿತ್. ತಾನ್ ರಾಜ. ತನ್ನ ಆಜ್ಞೆನ ಮೀರಿಕೆ ಸಾಧ್ಯ ಇಲ್ಲಂತ ಹೇಳುವ ಧೋರಣೆಲಿ ಅಧಿಕಾರಯುತ ಮಾತಾಡಿ ಅವರ ಬಾಯಿ ಮುಚ್ಚಿಸಿತ್.

ಮಧ್ಯದಾರಿಲೇ ಧೃತರಾಷ್ಟ್ರ ಕಳ್ಸಿದ ಮಂತ್ರಿ ಪಾಂಡವರ ಸಂಧ್‌ಸಿತ್. ಹಿಂದಕೆ ಜೂಜಿಗೆ ಹೋಕೆ ಬೊತ್ತ್ಂತ ತಮ್ಮಂದರೂ, ಹೆಣ್ಣೂ ಹೇಳಿರೂ ಯುಧಿಷ್ಠಿರ ಕೇಳ್ತ್‌ಲೆ. ಜೂಜಿಗೆ, ಯುದ್ಧಕ್ಕೆ ಕರಿಯಕನ ಹೋಕೆ ಹಿಂಜರಿದು ಹೇಡಿತನದ ಲಕ್ಷಣಂತ ಅವನ ಸಿದ್ಧಾಂತ. ಯುದ್ಧಮಾಡ್‌ಕನೂ ತನ್ನ ಜಾತಿ–ಅಂತಸ್ತಿಗೆ ಸರಿಯಾದವನೊಟ್ಟಿಗೆ ಯುದ್ಧ ಮಾಡೊಕುಂತೇಳ್ವ ನಿಯಮನ ಹಿಂದೆ ವಿದ್ಯಾಭ್ಯಾಸದ ಪರೀಕ್ಷೆನ ಸಂದರ್ಭಲಿ ಕರ್ಣ ಅರ್ಜುನನ ಯುದ್ಧಕ್ಕೆ ಕರಿಯಕನ ಅರ್ಜುನ ಕ್ಷತ್ರಿಯ ರಾಜಕುಮಾರ, ಕರ್ಣ ಹೀನ ಕುಲದ ಸೂತಪುತ್ರ. ಉತ್ತಮ ಕುಲದ ಅರ್ಜುನ ಹೀನ ಕುಲದ ಕರ್ಣನೊಟ್ಟಿಗೆ ಯುದ್ಧ ಮಾಡುದು ನಿಷಿದ್ಧಂತ ದ್ರೋಣಾಚಾರ್ಯರ್ ಕೃಪಾಚಾರ್ಯರ್ ಎಲ್ಲ ಹೇಳಿ ತಡ್ದೊ. ಈ ಸಂದರ್ಭಲೂ ರಾಜನಾದವನೊಟ್ಟಿಗೆ ರಾಜನೇ ಜೂಜಾಡೊಕು ಹೊರ್ತು ಅವನ ಪರವಾಗಿ ಬೇರೊಬ್ಬ ಆಡಿಕೆ ಆಗದ್ಂತ ಇವು ಈಗೇಕೆ ಹೇಳ್ತ್‌ಲೆಂತ ಆಶ್ಚರ್ಯ ಆದೆ. ಆದರೆ, ಹಾಂಗಾದರೆ ಮುಂದೆ ಬೆಳಿಯಕೆ ಅವಕಾಶ ಇಲ್ಲದಾದೆ. ವಿಧಿಯಾಟಂತ ಒಂದುಟ್ಟೊಲೆ. ಅದರ ಎದ್‌ರ್ ಯಾರೂ ಮಾತಾಡುವಾಂಗೆ ಇಲ್ಲೆ. ಅತಿ ಬುದ್ಧಿವಂತರ್ನೂ ಅದ್ ಕಡು ಮೂರ್ಖರನ್ನಾಗಿಯೂ ಮಾಡ್‌ದೆ. ಹಾಂಗೇ ಇಲ್ಲಿಯೂ ಸಂಬಂಧಪಟ್ಟವು ಎಲ್ಲೊವೂ ಈ ವಿಚಾರಲಿ ಮಾತಾಡ್‌ತ್‌ಲೆ.

ಹಿಂದೆನಾಂಗೆ ಜೂಜಾಟ ನಡ್ತ್. ಹಿಂದೆನಾಂಗೆ ಯುಧಿಷ್ಠಿರನೊಟ್ಟಿಗೆ ಶಕುನಿ ಆಡ್ತ್.

ಒಮ್ಮೆಗೇ ಎಲ್ಲದನ್ನೂ ಸೋತತ್. ಕೌರವರ ಅಟ್ಟಹಾಸ ಮೇರೆ ಮೀರ್‍ತ್. ಪಾಂಡವರ
ಮುಂದೇ ತಮ್ಮ ಸರ್ರಲಿ ಹಾಕಂಡಿದ್ದ ಅಲಂಕಾರದ ಒಡವೆಗಳ ಎಲ್ಲ ತೆಗ್‍ಟ್ ಕರೆಗೆ
ಇಸಿದೊ. ಕಿರೀಟಗಳನ್ನಂತೂ ಮುಂದೇ ತೆಗ್‍ಟ್ ಕೆಳೆಗಿಸಿದ್ದೊ. ದುರ್ಯೋಧನ, ದುಃಶ್ಶಾಸನ,
ಕರ್ಣ ಇವೆಲ್ಲ ಪಾಂಡವರ ಕಡೆ ಕೈ ತೋರ್‍ಸಿಕಂಡ್ ಅವರ ದೀನಾವಸ್ಥೆನ ಗೇಲಿ ಮಾಡ್ದೊ.
ಇಂತಹ ದೀನಾವಸ್ಥೆಲಿಯೂ ಯುಧಿಷ್ಠಿರ ಧೃತಿಗೆಟ್ಟತ್‌ಲೆ. ಅವನ ಮನಸ್ಥೈರ್ಯನ
ಮೆಚ್ಚೊಕಾದ್ದೆ. ಅದಿಕ್ಕೆ ಪಂಪಕವಿ ಅವನ 'ನಿರ್ಮಲ ಚಿತ್ತಂ ಧರ್ಮತನಯಂ'ತ ಕೊಂಡಾಡಿಟು.
ಭೀಷ್ಮ, ದ್ರೋಣ, ಕೃಪ, ವಿದುರ ಇವೆಲ್ಲ ತಡಿಯಕೆ ಬೊತ್ತದ ದುಃಖಲಿ ಮುಳುಗಿ
ಹೋದೊ. ಕುರುಡ ಧೃತರಾಷ್ಟ್ರನೆ ತನ್ನ ಮಕ್ಕ ಹೇಂಗಾರ್ ಸರ್ವಾಧಿ ಪತ್ಯನ ಸಾಧ್‌ಸಿ
ಕಂಡೊಲೆಂತ, ಸಂತೃಪ್ತಿ ಅವನ ಮೋರೆಲಿ ಕಂಡತ್.

ಊರುನ ಪ್ರಜೆಗಳಿಗೆ ಪಾಂಡವರ ಮೇಲೆ ತುಂಬ ಭಕ್ತಿ, ಪ್ರೀತಿ, ಗೌರವ, ಅವು
ಕೆಲವು ಜನ ನಾವೂ ಪಾಂಡವರೊಟ್ಟಿಗೆ ಕಾಡಿಗೇ ಪೋಯೀಂತ ಅವರ ಹಿಂದೆ ಪೊರ್‍ಟೊ.
ಅಂಥೊವ್ಕೆ ಯುಧಿಷ್ಠಿರ ಬುದ್ಧಿ ಹೇಳಿ ಹೇಂಗಾರ್ ಮಾಡಿ ಹಿಂದೆ ಕಳ್ಸಿತ್.

**ಮಕ್ಕ :**

ತಾತ! ನಮ್ಮ ಎರ್‍ಡ್ ಮಹಾಕಾವ್ಯಗಳ್ಲಿಯೂ ಕಾಡ್ ಮಹತ್ವದ ಪಾತ್ರವಹಿಸಿದೆ.
ರಾಜವಂಶದವೇ ಕಾಡಿಗೆ ಹೋದವೆ. ಇದಿಕೆ ಕಾರಣ ಏನಿದ್ದು?

**ತಾತ :**

ಒಳ್ಳೆ ಪ್ರಶ್ನೆನೇ ಕೇಳ್ದರಿ. ಒಂದು ಆ ಕಾಲಲಿ ನಮ್ಮ ದೇಸಲಿ ಕಾಡ್ ಸಮೃದ್ಧವಾಗಿತ್ತ್.
ನಾಡ್‌ಲಾದರೆ ನಾವ್ಗೆ ಬೇಕಾದ ಆಹಾರನ ನಾವೇ ಬೆಳ್ಸಿಕಣೊಕಾದೆ. ಕಾಡ್‌ಲಿ, ಗೆಂಡೆ
ಗೆಳ್ಸ್, ಹಣ್ಣ್ ಹಂಪಲುಗ ಧಾರಾಳವಾಗಿ ಆಗ ಸಿಗ್‌ತ್ತಿದ್ದೊ. ಹೀಂಗೆ ಊರುಂದ ಕಾಡಿಗೆ
ಬೆರ್‍ಸಿರೂ ಅವರ ಜೀವನ ನಿರ್ವಹಣೆಗೇನೂ ಮೋಸ ಇಲ್ಲೆ. ಹೀಂಗೆ ಹಿಂದೆ ಯಾರ್
ತಪ್ಪಿಗೆ ಯಾವ ರೀತಿಂದಾರ್, ಅಡ್ಡಿ ಮಾಡೊವಂತಾದರೆ, ತೊಂದರೆ
ಉಂಟುಮಾಡೊವುಂತಾದರೆ, ಅಂಥವರ ಏನಾರ್ ದುನ್ಯಾರ ತೆಗ್‌ದ್. ಕಾಡಿಗೆ
ನೂಕುತ್ತಿದ್ದೊ. ಈಗನ ಕಾಲಲಾದರೆ ಅಂಥವರ ಸೆರೆಮನೆಗೆ ಹಾಕುವೆ. ಇದ್ ಕಷ್ಟದ
ಕೆಲ್ಸ-ಅವ್ಕೆ ಬೇಕಾದ ಅನ್ನಾಹಾರ, ಬಟ್ಟೆಬರೆ ಕೊಡೊಕಾದೆ. ಕಾಡಿಗೆ ನೂಕಿರೆ ಆ ಜವಾಬ್ದಾರಿ
ಇಲ್ಲೆ. ಕಾಡ್‌ಲಿ ವಿಷಜಂತುಗ, ಹಿಂಸ್ರ, ಮುರ್ಗಂಗ ಅದೂ ಅಲ್ಲದೆ ಆಗನ ಕಾಲಲಿ
ನರಭಕ್ಷಕರಾದ ರಾಕ್ಷಸರೂ ಇದ್ದ್, ಹೆಜ್ಜೆ, ಹೆಜ್ಜೆಗೆ ಕಾಡ್ ಅಪಾಯಂದ ತುಂಬಿತ್ತ್.
ಹಾಂಗೆ ಕಾಡಿಗೆ ಹೋದೊವ್ಕೆ ಹಿಂದೆ ಬಾಕೆ ಕಾಲಾವಧಿ ನಿರ್ಧರಿಸಿದ್ದರೂ
(ರಾಮಾಯಣಲಿ ರಾಮಂಗೆ ಹದಿನಾಲ್ಕ್ ವೊರ್ಸ, ಮಹಾಭಾರತಲಿ ಪಾಂಡವರಿಗೆ,
ಹನ್ನೆರ್ಡ್ ವೊರ್ಸ ವನ, ಒಂದು ವೊರ್ಸ ಯಾದೋ ನಗರಲಿ ಅಜ್ಞಾತ ವಾಸಂತ
ಇದ್ದರೂ ಅವರ ಕಾಡಿಗೆ ಕಳ್ಸಿದವರ ಮನ್ಸ್‌ಲಿ ಅವು ಹಿಂದೆ ಬಾರದೇ ಹೋಗಲಿಂತೇ
ಇತ್ತ್. ಕೌರವರ ಅಭಿಪ್ರಾಯಲಿ ಹೀಂಗಿದ್ದದಂತೂ ನಿಶ್ಚಯ. ಅಜ್ಞಾತ ವಾಸಲಿರ್‌ಕನ
ಗುರ್ತ ಹಿಡ್ಟ್ ಬುಟ್ಟರೆ ಮತ್ತೆ ಹಿಂದಕೆ ಮುಂದೆನ ಅವಧಿನಷ್ಟೇ ಕಾಲ ಕಾಡಿಗೆ ಪೋಕುಂತ

ಬೇರೆ ಶರ್ತ ಹಾಕಿದ್ದೊ. ಹಾಂಗ ಕೌರವಟೆರ್, ಪಾಂಡಟೆವರ್ ಎಂದೂ ಹಸ್ತಿನಾವತಿಗೆ ಬಾಕಿಲ್ಲೆ. ಇಡೀ ಕುರುಸಾಮ್ರಾಜ್ಯ ನಮ್ಮದೇಂತ ಅವರ ಮನ್ಸ್‌ಲಿತ್ತ್.

ಪಾಂಡವಟೆರ್ ರಾಜ್ಯದ ಎಲ್ಲೆ ದಾಟ ಕಾಡಿಗೆ ಹೋಕನ ಮುಟ್ಟ ಕೌರವಟೆರಿಗೆ ಒಂದು ತರದ ಆತಂಕ. ಹಾಂಗೆ ಕಾವಲಿಗೆ ಅಲ್ಲಲ್ಲಿ ಜೆನ ಇಸಿ ವರ್ತಮಾನ ತರ್ಸಿ ಕಂಬತಿದ್ದೊ.

**ಮಕ್ಕ :**

ಅವು ಕಾಡಿಗೆ ಹೊರ್ಟ ಮೇಲೆನೂ ಕೌರವಟೆರಿಗೆ ಆತಂಕ ಪಡುವಂತಟೆದೇನುಟ್ಟು ತಾತಾ?

**ತಾತ :**

ಕಳ್ಳನ ಮನ್ಸ್ ಹುಳ್ಳ ಹುಳ್ಳಂಗೆಂತೇಳ್ವ ಗಾದೆ ಮಾತ್‌ನ ನೀವು ಕೇಳಿರುವಟೆರಿಂತ ನೆನ್ಸಿನೆ. ತಾವು ಮಾಡ್ದ ಅನ್ಯಾಯಂತ ದುರ್ಯೋಧನಾದಿಗಳ ಅಂತಃಸಾಕ್ಷಿಗೆ ಗೊತ್ತುಟು. ಪ್ರಜೆಗಳ ಹಾಂಗೆ ಬೇರೆ ಸಾಮಂತ ರಾಜೆರಿಗೂ ಪಾಂಡವರ ಮೇಲೆ ನಡ್ದ ಅನ್ಯಾಯನ ನೋಡಿ, ಅವರ ಮೇಲೆ ತುಂಬ ಸಹಸಂತಾಪ ಆಗಿದ್ದು. ಅದರೊಟ್ಟಿಗೆ, ದ್ರೌಪದಿ, ಭೀಮ, ಅರ್ಜುನ, ನಕುಲಸಹದೇವ ಇವೆಲ್ಲ ಕೌರವರ ಸರ್ವನಾಶ ಮಾಡುವಂಥ ಪ್ರತಿಜ್ಞೆಗಳ ಮಾಡಿಯೊಳೊ. ಹಾಂಗೆ ಅವೆಲ್ಲ ಸೈನ್ಯಗಳ ಸೇರ್ಸಿಕಟೆಂಡ್ ಬಂದ್ ಹಸ್ತಿನಾವತಿಗೆ ಮುತ್ತಿಗೆ ಹಾಕಿ ನಮ್ಮ ನಾಶಮಾಡಿ ಬುಡುವನೋಂತ ಹೆದ್‌ರಿಕೆ ಇದ್ದೇ ಇತ್ತ್. ಹೀಂಗಾಗುವ ಸಾಧ್ಯತೆನೂ ಇತ್ತ್. ಪಾಂಡಟೆವಟೆರಿಗಾದ ಅನ್ಯಾಯನ ಕೇಳಿ, ದ್ವಾರಕೆಲಿದ್ದ ಬಲರಾಮ ತುಂಬ ಕೋಪಟೆಲಿ ಉರ್ದದ್ದ್, ನಾ ಈಗಟೇಳೇ ಹೋಗಿ ಕೌರವರ ಸರ್ವನಾಶ ಮಾಡಿ ಬನ್ನೆಂತ ಹೊರ್ಡ್‌ಕನ ಕೃಷ್ಣ ಅವನ ಸಮಾಧಾನ ಮಾಡ್ತ್. ಇದ್ ಒಂದು ಕುಟುಂಬದವರೊಳಗೆ ನಡ್ದ ಕಲಹ. ಇದರ್ಲಿ ಹೇಳದೆ ಕೇಳದೆ ಮೂರ್ನೆವು ಪ್ರವೇಶ ಮಾಡ್ದು ಸಟೆರಿಯಲ್ಲ. ಪಾಂಡವರ ಅಭಿಪ್ರಾಯ ತಿಳ್ದ ಮೇಲೆ ಏನಾರ್ ಮಾಡುದು ಸಟೆರಿಂತ ಹೇಳಿ ಕೃಷ್ಣ ನಿಲ್ಸಿತ್. ನಾನೇ ಹೋಗಿ ಕಾಡ್‌ಲಿ ಇರುವ ಪಾಂಡವರ ನೋಡಿ ಬನ್ನೆಂತ ಹೇಳ್ತ್. ಬಲರಾಮ ಒಪ್ಪಿ ಸುಮ್ಮನಾತ್. ದ್ರುಪದಂಗೂ ಧೃಷ್ಟದ್ಯುಮ್ನಂಗೂ ಈ ಸುದ್ದಿ ಕೇಳಿ ಆಕನ ತುಂಬ ದುಃಖನೂ ಆತ್. ಕೌರವರ ಮೇಲೆ ತುಂಬ ಸಿಟ್ಟೂ ಬಾತ್. ಅವರ ಮಂತ್ರಿ ವಿವೇಕ ಹೇಳಿ ನಿಲ್ಸಿತ್.

ಇಷ್ಟೆಲ್ಲ ಅನ್ಯಾಯ ನಡಿಯಕನ ಕೌರವರ ಅಲ್ಲಿಯೇ ಧ್ವಂಸ ಮಾಡುವ ಸಾಮರ್ಥ್ಯ ಪಾಂಡವರಿಗೂ ಇತ್ತ್‌ಂತೇ ಹೇಳಟೆಕ್. ಯುಧಿಷ್ಠಿರ ಒಂದು ಕಣ್ಣ್ ಸನ್ನೆ ಮಾಡಿದ್ದರೆ ಸಾಕಾಯ್ತ್. ಭೀಮಾರ್ಜುನಟೆರ್ ಒಡನೇ ಕಾರ್ಯಾಚರಣೆ ಮಾಡಿ ಕೌರವರ ಅವು ಅವು ಕುದ್ದಟೆಲ್ಲೆ ಅವರ ಕೊಚ್ಚಿ ಹಾಕಿದ್ದೊ. ಇನ್ನ್ ಯುಧಿಷ್ಠಿರನ ಕೋಪ ಅಂದರೆ, ಜ್ವಾಲಾಮುಖಿನಾಂಗೆ. ಅಂವ ಆ ಕೋಪಟೆಲಿ ಕಣ್ಣ್ ತೆರ್ದರೆ ಎದ್‌ರಿಗಿದ್ದವರ ಸುಟ್ಟ್ ಬೊಸ್ಮ ಮಾಡುವ ಶಕ್ತಿ ಇದ್ದಟೆದ್. ಭಾರತ ಯುದ್ಧದ ಅಂತ್ಯಟೆಲಿ ಶಲ್ಯ, ಅವನ ಬಾಣಂದ ಮೂರ್ಛೆ ತೊಪ್ಪಿ ಬಿದ್ದವಂಗೆ ಎದೆಗೆ ಮೆಟ್ಟಿ ಅವಮಾನ ಮಾಡ್‌ಕನ ಆ ಕೋಪಟೆಲಿ ಕಟೆಣ್ಣ್ ಬುಟ್ಟ್ ಶಲ್ಯನ ನೋಡ್‌ಕನ ಶಲ್ಯ ಸುಟ್ಟ್ ಬೂದಿ ಆತ್. ಅಂವಂಗೆ ಇದೆಲ್ಲ ಗೊತ್ತುಟು. ಹಾಂಗ ಅಂವ ತಮ್ಮಂದಟೆರಿಗೆ, ಕೌರವರ್, ಎಷ್ಟೇ ಗೇಲಿ ಮತ್ತ್ ಅವಮಾನ ಮಾಡಿರೂ ನೀವು ಯಾರೂ ಸಂಯಮ ತೊಪ್ಪಿಕೆ ಆಗಟೆದ್‌ಂತ ಮುಂದೇ ಎಚ್ಚರಿಕೆ

ಕೊಟ್ಟುಟ್ಟು. ನಮ್ಮ ಸುತ್ತಿರುವ ಪ್ರಕೃತಿ ಮತ್ತೆ ಭೂಮಿ ಅಗಾಧ ಶಕ್ತಿ, ಸಾಮರ್ಥ್ಯನ ಹೊಂದಿಟು. ಅದ್ ತನ್ನ ಮಿತಿ ಮೇರೆಗಳ ಮೀರದೆ, ಈ ನಶ್ವರ ಜೀವಿಗಳ ಜೀವನದಾಟ ಸಾಗೇಲಿಂತ ನಾವ್ಗೆ ಒಂದು ಅವಕಾಶ ಕೊಟ್ಟುಟ್ಟು. ಅದ್ ತನ್ನ ಸಂಹಾರ ಶಕ್ತಿನ ಎಲ್ಲಿಯಾರ್ ತೆಗ್‌ದ್ ಬುಟ್ಟರೆ ಏನಾದುಂತ ಹೇಳಿಕೆ ಬೊತ್ತ್. ಭೂಮಿಂದ ಎತ್ತರದ ಮಟ್ಟೇಲಿರುವ, ಮುಕ್ಕಾಲ್ ಪಾಲ್ ನೀರೇ ಆಗಿರುವ ಸೊಪುಂದ್ರ ಅದರ ಗೇಡಿ ಮೀರಿ ಹರ್‍ದರೆ ಭೂಮಿನ ಜೀವ ಜಂತುಗ ಒಳಿಯಕಿಲ್ಲೆ. ಭೂಮಿನ ಅಡಿಲಿ ಕೊದ್‌ಕೆಂಡ್ ಇರುವ ಲಾವಾರಸ ಭೂಮಿನ ಪದರನ ಒಡ್ದ್ ಮೇಲೆದ್ದರ ಏನಾದು? ಒಂದೇ ಕಕ್ಷೆಲಿ ಸೂರ್ಯನ ಸುತ್ತ ತಿರ್ಗುವ ಭೂಮಿ ತನ್ನ ಕಕ್ಷೆನ ಮೀರಿ ಒಂದು ಸೆಂಟಿಮೀಟರ್‌ನಷ್ಟ್ ಆಚೆಗೆ ಹೋದರೆ ಏನಾದು. ಹೀಂಗೆ ಎಲ್ಲೇದಿಕೂ ಒಂದು ಮಿತಿಮೇರೆಂತೇಳುದು ಉಟ್ಟು. ಅದರ ಮೀರಿಕೆ ಬೊತ್ತ್. ಇಂಥ ಅಗಾಧ ಸಂಯಮ ಶಕ್ತಿ ಇರಂವ ಯುಧಿಷ್ಠಿರ ಅದಿಕ್ಕಾಗಿ ಅವನ ಮೆಚ್ಚೊಕು.

ಪಾಂಡವೇರ್ ಹಸ್ತಿನಾವತಿನ ಎಲ್ಲೆ ದಾಟಿಕಾಡಿಗೆ ಪ್ರವೇಶ ಮಾಡ್ದೊ. ಮುಂದೆ ಕಾಮ್ಯಕ ವನ ಪ್ರವೇಶ ಮಾಡಿಕೆ ಇನ್ನೂ ದೂರ ಉಟ್ಟು. ಹಾಂಗೆ ಅಂದ್‌ನ ರಾತ್ರೆನ ಅಲ್ಲಿಯೇ ಕಳೆಯೊನೋಂಥ ನಿಶ್ಚಯ ಮಾಡಿ ಅಲ್ಲಿಯೇ ಮಲ್ಗಿದೊ. ಅವರ ಪರಿವಾರೇಲಿ ಕೆಲೊವು ಬ್ರಾಹ್ಮಣರೂ ಬಂದಿದ್ದೊ. ಅವರ ಹಿಂದೆ ಹೋಕೆ ಕೇಳಿಕೆಂಡರೂ ಅವು ಒಪ್ಪಿತ್‌ಲೆ. ಅಷ್ಟ್ ಜೆನಕೆ ಆಹಾರ ಸಂಪಾದನೆಗ ತುಂಬ ಕಷ್ಟ ಹೇಂಗಲ್ಲ ಅವರ ಬೇಡಿಕೆಂಡ್ ಯುಧಿಷ್ಠಿರ ಅವರ ಹೇಳಿ ಒಪ್ಪ್‌ಸಿತ್. ಆದರೂ ಒಳ್ದವರ ಆಹಾರ ಸಮಸ್ಯೆನ ಪೂರೈಸುದು ಹೇಂಗೆಂತ ಯುಧಿಷ್ಠಿರಂಗೆ ಅದೊಂದು ಸಮಸ್ಯೆನೇ ಆಗಿತ್ತ್. ಹಾಂಗೆ ಅಂವ ಪುರೋಹಿತರಾದ ಧೌಮ್ಯರುಸಿಗಳ ಕೇಳ್ತ್. ಅವು ಹೇಳ್ದೊ. ಜಗತ್ತ್‌ನ ಜೀವರಾಶಿಗೇಳಿಗೆ ಆಹಾರ ಒದ್‌ಗ್‌ಸಂವ ಸೂರ್ಯ. ನಾ ನಿಂಗೆ ಆದಿತ್ಯಸ್ತವಂತ ಹೇಳುವ ಮಂತ್ರನ ಉಪದೇಶ ಮಾಡಿನೆ. ನೀ ಅದರ ಹೇಳಿಕೆಂಡ್ ಸೂರ್ಯನ ಸ್ತುತಿ ಮಾಡ್. ಅಂವ ನಿಂಗೆ ಪ್ರತ್ಯಕ್ಷ ಆಗಿ ವರಕೊಡುದುಂತ ಹೇಳ್ತ್. ಹಾಂಗೆ ಯುಧಿಷ್ಠಿರ ಆ ಮಂತ್ರನ ಹೇಳಿಕೆಂಡ್ ಸೂರ್ಯನ ಧ್ಯಾನ ಮಾಡಿಕೆಂಡ್ ತಪಸ್ಲಿ ನಿತ್ತೇತ್. ಕೆಲೇವು ಸಮಯೇಲಿ ಸೂರ್ಯ ಪ್ರತ್ಯಕ್ಷ ಆಗಿ ಬಂದ್ ಯುಧಿಷ್ಠಿರಂಗೆ "ನಿನ್ನ ಸಮಸ್ಯೆ ಏನ್‌ೀಂತ" ಕೇಳ್ದ್ರ್ಕೆ ಯುಧಿಷ್ಠಿರ ಏನ್‌ೀಂತ ಹೇಳ್ತ್. ಅದಿಕೆ ಸೂರ್ಯ ನಾ ನಿಂಗೊಂದು ಅಕ್ಷಯ ಪಾತ್ರನ ಕೊಟ್ಟನೆ. ಅದರ್ಲಿ ನೀವ್ಗೆ ಬೇಕಾದ ಎಲ್ಲ ಆಹಾರನೂ ಉಂಟಾದು. ಎಲ್ಲೇವ್ಕೂ ಬೇಕಾದ ಎಲ್ಲ ಭೋಜನ ವಸ್ತುಗೇಳೂ, ದ್ರೌಪದಿ ಊಟ ಮುಗ್ಸಿ ಅದರ ತೊಳ್ದ್ ಇಸ್‌ಕನ ಮುಟ್ಟ ಅಕ್ಷಯವಾಗಿ ಸಿಕ್ಕುವೊ. ಅದರ ಊಟ ಮುಗ್ದ್ ಆ ಪಾತ್ರನ ತೊಳ್ದ್ ಇಸಿದ ಮೇಲೆ, ಮತ್ತೆ ಆಹಾರ ಸಿಕ್ಕುದು ಮೊರ್ದಿನ ಮಾತ್ರಂತ ಹೇಳಿ, ಕೊಟ್ಟತ್. ಯುಧಿಷ್ಠಿರ ಅದರ ತಕೆಂಡ್ ಬಂದ್ ದ್ರೌಪದಿನ ಕೈಗೆ ಕೊಟ್ಟ್ ಎಲ್ಲ ಹೇಳ್ತ್. ಆ ಪ್ರಕಾರನೇ ದ್ರೌಪದಿ ಆ ಪಾತ್ರನ ಒಂದು ಕಲ್ಲ್‌ನ ಮೇಲೆ ಇಸಿ ಕೈ ಮುಗ್ದ್ ಸೂರ್ಯನ ಭಕ್ತಿಂದ ಧ್ಯಾನ ಮಾಡ್ತ್. ಆಗ ಪಾತ್ರ ತುಂಬ ಭೋಜನ ವಸ್ತುಗಳ್ಂದ ತುಂಬಿ ಬಾತ್. ಎಲ್ಲೊವ್ಕು ಸಂತೋಸಾತ್. ಆಗ ಯುಧಿಷ್ಠಿರ ದ್ರೌಪದಿಗೆ ಹೇಳ್ತ್. ನೀ ಎಲ್ಲೊವ್ಕೆ ಮುಂದೆ ಊಟ ಕೊಡು. ಅವ್ರೆಲ್ಲ

ಊಟ ಆದ ಮೇಲೆ ನಾನೂ ನೀನೂ ಕಡೆಗೆ ಉಮ್ಮೊನೋಂತ. ಹಾಂಗೆ ದ್ರೌಪದಿ ಎಲ್ಲೊಷ್ಕೆ ಇಕ್ಕಿ ಕೊಟ್ಟಳಿತ್. ಎಲ್ಲೊವೂ ತೃಪ್ತಿಲಿ ಉಂಡೊ. ಊಟ ಆದ ಮೇಲೆ ಯುಧಿಷ್ಠಿರ ಎಲ್ಲೊಷ್ಕೆ ತೃಪ್ತಿ ಆತೋಂತ ಕೇಳ್ತ್. ಎಲ್ಲೊವೂ ತೃಪ್ತಿ ಆತ್‌ಂತ ಹೇಳ್ದೊ. ಭೀಮ, ನೆಗಾಡಿಕಣೆಂಡ್ ನಂಗೆ ತೃಪ್ತಿ ಆತ್‌ಂತಾದರೆ ಬೇರೆವರ ಕೇಳೊಕುಂತೇಳಿಯೇ ಇಲ್ಲೆಂತ ಅವಂಗೆ ಅವನೇ ಹಾಸ್ಯ ಮಾಡಿಕಣೆಂಡ್ ಹೇಳ್ಟರ ಕೇಳಿ ಎಲ್ಲೊವೂ ನೆಗಾಡ್ದೊ.

ಈ ಪರಿಸ್ಥಿತಿ ವಿದುರನ ಮನೆಲಿದ್ದ ಕುಂತಿಗೆ ಗೊತ್ತ್‌ಲೆ. ಅಯ್ಯೆಕಣೆಗ ಯಾಗೋಳು ಮಕ್ಕಳ ಊಟದ್ದೇ ಚಿಂತೆ. ಕುಂತಿ ಕಾಡಿಗೆ ಹೋದ ತನ್ನ ಮಕ್ಕ ಊಟಕ್ಕಿಲ್ಲದೆ ಕಷ್ಟಪಟ್ಟವೆನೋ ಏನೋ. ಗೆಂಡೆ, ಗೆಲ್ಸ್, ಹಣ್ಣ್ ಹಂಪಲ್ ಬೇಕಷ್ಟ್ ಸಿಕ್ಕುವೆನೋ ಇಲ್ಲೆನೋ? ಭೀಮಂಗೆ ತುಂಬ ಹಸಿವು ಅವಂಗೆ ಸಾಕಷ್ಟ್ ಆಹಾರ ಇಲ್ಲದೆ ಬೊಚ್ಚಿ ಹೋಗಿ ಬುಟ್ಟದೆನೋ ಏನೋಂತ ಚಿಂತೆ ಮಾಡಿಕಣೆಂಡ್, ವಿದುರ ಊಟಕ್ಕೆ ಕರ್ದರೂ ನಂಗೆ ಹಸಿವೆ ಇಲ್ಲೆ ನನ್ನ ಮಕ್ಕ ಕಾಡ್‌ಲಿ ಹಸಿವೆಂದ ಕಂಗಾಲಾಗಿರ್ಕನ ನಾ ಹೇಂಗೆ ನನ್ನ ಹೊಟ್ಟೆ ತುಂಬುಸಿಕಂಬೊದು? ಹೇಳಿಕಣೆಂಡ್ ಅತ್ತಳಿತ್. ಹೆತ್ತ ಹೆಂಗರುಳುಂತೇಳ್ವುದ ಇದಿಕೆ. ಪ್ರಾಣಿ ಪಕ್ಷಿಗಳೂ ಮುಂದೆ ತಮ್ಮ ಮೊರಿಗಳಿಗೆ ತಿಂಬಕೆ ಕೊಟ್ಟ್ ತಾವು ಏನೂ ತಿನದೆ ಉಪಾಸ ಇರುದೂ ಉಟ್ಟು. ವಿದುರ ನಾನಾ ರೀತಿಂದ ಸಮಾಧಾನ ಮಾಡಿ, ನಿನ್ನ ಮಕ್ಕ ಕಾಡ್‌ಲಿ ಏನೂ ಕೊರತೆಯಾಗದೆ ತಿಂಬಂತಹ ಫಲಾಹಾರನಾದರೂ ನೀ ತಿನೊಕುಂತ ಹೇಳಿ ಒಪ್ಪ್‌ಸಿತ್.

ಕೌರವರ ಕಾರಾಸ್ತಾನ ಪಾಂಡವರ ಕಾಡಿಗೆ ಕಳ್ಸುವಷ್ಟಕೆ ನಿತ್ತಳಿತ್‌ಲೆ. ಪಾಂಡವರ ಮತ್ತೆ ಹಸ್ತಿನಾವತಿಗೆ ಬಾಕೆ ಬುಡಿಕೆ ಬೊತ್ತ್ ಹೇಳ್ವ ಉದ್ದೇಸಂದಳೇ ಕೂಡಿತ್ತ್. ಕಾಡ್‌ಲಿ ಸರಿಯಾದ ಆಹಾರ ಸಿಕ್ಕದೆ ಬೊಚ್ಚಿ ಬಸವಳ್ದ್ ಹೋಗಿ ನಿರ್ವೀರ್ಯರಾಗಿ ಯುದ್ಧ ಮಾಡಿಕೆ ಅವರ್‌ಂದ ಆಕಿಲೆ. ಸುಲಭಲಿ ಅವರ ಮುಗ್ಸಳಿಕ್. ಪಾಂಡವ ಪಕ್ಷಪಾತಿಗಳಾಗಿರುವ ಭೀಷ್ಮ, ದ್ರೋಣ, ಕೃಪ ಮುಂತಾದವರ ನಮ್ಮ ಪಕ್ಷಲೇ ಇದ್ದ್ ನಮ್ಮ ಪರವಾಗಿಯೇ ಹೋರಾಡುವ ಹಾಂಗೆ ಅವರ ಮನ್ಸ್‌ನ ಒಲ್ಸಿ ಕಣೊಕುಂತೆಲ್ಲ ದೀರ್ಘಾವಧಿನ ಯೋಜನೆ ಹಾಕಿದೊ. ಧೃತರಾಷ್ಟ್ರಂಗೆ ಈ ಹಿರಿಯರಿಗೆ ತನ್ನ ಮಕ್ಕಳ ಉದ್ಧಟ ನಡತೆಂದ ಬೇಜಾರಾಗುಟು. ನಯ, ವಿನಯದ ನಡೆ ನುಡಿಗಳ್‌ಂದ ಅವರ ಮರುಳು ಮಾಡಿ ತಮ್ಮ ಕಡೆಗೆ ಒಲ್ಸಿಕಣೊಕುಂತ ಧೃತರಾಷ್ಟ್ರ ಮುಂದಾಲೋಚನೆ ಕೊಟ್ಟಳಿತ್.

ಆ ಪ್ರಕಾರ ದುಷ್ಟಕೂಟದ ನಾಲ್ಕ್ ಜನನೂ ಸುರುಗೆ ಭೀಷ್ಮನಲ್ಲಿಗೆ ಬಂದೊ. ಎಲ್ಲೊವೂ ಅವನ ಕಾಲಿಗೆ ಬಿದ್ದೊ. ಭೀಷ್ಮಂಗೆ ಆಶ್ಚರ್ಯ ಆತ್. ಎದ್ದ್‌ರಿಂತ ಹೇಳ್‌ಕನ ದುರ್ಯೋಧನನೂ ದುಶ್ಯಾಸನೂ ಅಜ್ಜನ ಪಾದಗಳ ಗಟ್ಟಿಯಾಗಿ ಹಿಡ್ಕಣೆಂಡ್, ನೀವು ನಮ್ಮ ಪೂರ ಕ್ಷಮಿಸಿಯೊಳೆಂತ ಹೇಳ್‌ಕನ ಮುಟ್ಟ ನಿಮ್ಮ ಪಾದನ ಬುಡಿಕಿಲೆ. ನಮ್ಮಂದ ಸರ್ವ ತೊಪ್ಪಾತ್. ನಿಮ್ಮ ಮನ್‌ಸಿಗೆ ತುಂಬ ಬೇನೆ ಮಾಡ್ಡ್. ಇನ್ನೊಣದಿಗೂ ಹಾಂಗೆ ಮಾಡಿಕಿಲೆ. ಭೀಮ ಮತ್ತೆ ಅರ್ಜುನರ್, ಮತ್ತೆ ಅವರ ತಮ್ಮಂದಿರ್ ಮಾಡ್ದ ಶಪಥಗಳ ನೀವೇ ಕೇಳಿಯೊಳೊರಿ ಇದರ್‌ಂದ ನಮ್ಮ ಕಾಪಾಡೊವು ನೀವಲ್ಲದೆ ನಾಷ್ಟ ಯಾರೂ

ಇಲ್ಲೆಂತ ಅಳು ಮೋರೆ ಮಾಡಿಕಣ್ಡ್ ಹೇಳ್ದೊ ಇವರ ಮಾತ್‌ನ ಕೇಳಿ. ಭೀಷ್ಮನ ಮನ್‌ಸ್ ಕರ್ಗಿತ್. ಈಗಾದರೂ ಬುದ್ಧಿ ಬಾತಲೆ. ಹೆದ್‌ರ್ ಬೇಡಿ ಎದ್ದ್‌ರಿಂತ ಹೇಳಿ ಎದ್ದ್‌ರ್ಸಿತ್. ಹಾಂಗೆ ಎದ್ದ್ ನಿತ್ತ್, ಪಾಂಡವೆರ್ ವನವಾಸ ಮುಗ್ಸಿ ನಮ್ಮ ಮೇಲೆ ಯುದ್ಧಕ್ಕೆ ಬಂದರೆ, ದುರ್ಬಲರಾದ ನಾವ್ಗೆ ರಕ್ಷಣೆ ಕೊಡೊವು ಯಾರೂ ಇಲ್ಲೆ. ಪರಶುರಾಮನೊಟ್ಟಿಗೇ ಹೋರಾಡಿ, ಜಯಿಸಿದ ವೀರ ಶಿಖಾಮಣಿ ನೀವೆ ನಮ್ಮ ಕಾಪಾಡೊಕು. ನಿಮ್ಮ ಕಣ್ಣೆದ್‌ರೇ ಜೆಳ್ದ ನಿಮ್ಮ ಪಿಳ್ಳೆಕ ಮಿಡಿತೆಗ ಸತ್ತ್ ಬೀಳುವಾಂಗೆ ಬೀಳುದರ ಯಾವ ಅಜ್ಜನ ಹೃದಯನೂ ತಾಳಿಕೆ ಆಕಿಲೆ. ನೀವೇ ನಾವ್ಗೆ ಶರಣು. ಹೀಂಗೆ ನಾಟಿಕೆಲಿ ಹೇಳುವಾಂಗೆ ಬಿನ್ನಹ ಮಾಡ್ದೊ. ಭೀಷ್ಮ, ಹೆದ್‌ರ್ಬೇಡಿ ನಾ ಒಳೆ. ಏನೂ ಚಿಂತೆ ಮಾಡದೆ ನಿಮ್ಮ ನಿಮ್ಮ ಕೆಲ್ಸಗಳ ಪೊರ್ಲುಲಿ ಮಾಡಿಕಣ್ಡ್ ಇರಿಂತ ಹೇಳಿ ಕಳ್ಸಿತ್.

ದುಷ್ಟ ಕೂಟದೊವು ಗೆಲುವುಲಿ ಹೊರ್ಟ್ ಬಂದೊ. ದ್ರೋಣರಲ್ಲಿಗೆ ಬಂದ್ ಅಲ್ಲಿಯೂ ಭೀಷ್ಮನೊಟ್ಟಿಗೆ ಆಡ್ದ ನಾಟಕನೇ ಆಡಿ ಅವರ್‌ಂದಳೂ ಆಶ್ವಾಸನೆ ಪಡ್ಕಂಡೊ. ಮತ್ತೆ ಕೃಪಾಚಾರ್ಯ, ಅಶ್ವತ್ಥಾಮ ಎಲ್ಲವರ್‌ಂದೊಳೂ ಮಾತ್ ತಕಣ್ಡ್, ಇನ್ನ್ ಪಾಂಡವರೊಟ್ಟಿಗೆ ಯುದ್ಧ ಆದರೆ, ನಮ್ಮ ಪಕ್ಷಂದ ಹೋರಾಡುವ ಈ ನಿಸ್ಸೀಮರ ಗೆಲ್ಲಿಕೆ ಅವರ ಕನ್ಸಿಲೂ ನಡಿಯಕಿಲೆ. ಕುರು ಸಾಮ್ರಾಜ್ಯದ ಎಲ್ಲ ಸೌಭಾಗ್ಯಗಳೂ ನಮ್ಮ ಕೈಯೊಳಗೇಂತ ಓಗ್ಗಿ, ಧೃತರಾಷ್ಟ್ರಂಗೂ ಏನೆಲ್ಲ ನಡ್ತ್‌ಂತ ಹೇಳ್ತ್. ಅವಂಗೂ ನನ್ನ ಮಕ್ಕಳಿಗೆ ಇನ್ನ್ ಯಾವ ಹೆದ್‌ರಿಕೆನೂ ಇಲ್ಲೆಂತ ತುಂಬ ತೃಪ್ತಿ ಆತ್.

## ಕಾಮ್ಯಕ ವನ ಪ್ರವೇಶ

ಪಾಂಡವೆರ್ ಗಡಿಪ್ರದೇಶಲಿದ್ದ ಕಾಡ್‌ಲೇ ನಡ್ಕಣ್ಡ್ ಹೋತಿದ್ದೊವು ಇನ್ನ್ ಹಜ್ಜ ದೂರಲಿರುವ ಕಾಮ್ಯಕವನಂತೇಳುವ ದಟ್ಟಾರಣ್ಯದೊಳಗೆ ಹೋಕೆ ನಿಶ್ಚಯ ಮಾಡ್ದೊ. ವಿರಳ ಕಾಡ್‌ಗಳ್ಲಿ ಆಹಾರ ವಸ್ತುಗ ಅಂದರೆ ಗೆಂಡೆ, ಗೆಲ್ಸ್, ಹಣ್ಣ್, ಹಂಪಲ್‌ಗ ಸಿಕ್ಕುದು ವಿರಳ ಆ ಕಾಮ್ಯಕವನಂತೇಳ್ದು ಕಿಮ್ಮೀರಂತ ಹೇಳುವ ನರಭಕ್ಷಕ ರಾಕ್ಷಸನ ಅಧೀನಕ್ಕೆ ಒಳಪಟ್ಟಿತ್ತ್. ಅಂದರೆ ಅದೇನ್ ಸರ್ಕಾರ ಸರ್ವೆ ಮಾಡಿ ಅವನ ಹೆಸರಿಗೆ ರಿಜಿಸ್ಟರ್ ಮಾಡಿಕೊಟ್ಟಂಥದೇನೂ ಅಲ್ಲ. ಆ ಕಾಲಲಿ ವಿಸ್ತಾರವಾಗಿದ್ದ ಕಾಡ್‌ಗ. ಜನ ಸಂಖ್ಯೆನೂ ವಿರಳವಾಗಿದ್ದ ಕಾಲಲಿ ಈ ಕಾಡ್‌ಗ ಯಾರಿಗೂ ಬೇಡದೊವಾಗಿದ್ದದರ್ಲಿ ಬಲಶಾಲಿಗಾಗಿದ್ದ ರಕ್ಕಸೆರ್ ವಾಸ ಮಾಡಿಕಣ್ಡ್ ಇದ್ದೊ. ಪ್ರಾಪಂಚಿಕ ಜಂಜಡಂದ ದೂರಾಗಿ, ಮೋಕ್ಷ ಸಂಪಾದಿಸುದ್ಕೆ ಕೆಲವು ರುಸಿಗ ಆಶ್ರಮ ಕಟ್ಟಿಕಣ್ಡ್, ಹೋಮ, ಹವನ, ಯಜ್ಞ, ಯಾಗ, ಧ್ಯಾನ, ತಪಸ್ಸಂತ ಮಾಡ್‌ತಿದ್ದೊ. ರಕ್ಕಸೆರ್ ರುಸಿಗಳ ಯಜ್ಞ ಕಾರ್ಯಗಳಿಗೆ ತೊಂದರೆ ಕೊಟ್ಟರೂ ಅವರ ಜೀವಕೇನೂ ಅಪಾಯ ಮಾಡ್‌ತ್ತಿತ್ತ್‌ಲೇಂತೇಳ್ದು ಒಂದು ಆಶ್ಚರ್ಯದ ಸಂಗತಿ. ಅಂತಹ ಕಾಡ್‌ಗಳೊಳಗೆ ಜೇರೆ

ಸಾಧಾರಣ ಜೆನಂಗ ಎಲ್ಲಾರ್ ಹುಕ್ಕರೆ, ಅಂಥಾವು ಒಂದ ಹೋಕೆ ಈ ರಕ್ಕಸರ್ ಬುಡ್‌ತಿತ್ಲಿ. ಪಾಂಡವರ್ ಈ ವನನ ಪ್ರವೇಶ ಮಾಡುವ ಹೊತ್ತಿಗೆ ಕಿರ್ಮೀರ ನಿದ್ದೆ ಮಾಡಿಕಂಡ್ ಇತ್ತ್. ಅಂವ ನಿದ್ದೆಲಿರ್‌ಕನೇ ಅವನ ಮೂಕುಗೆ ಮೊಂಯಿಸರ ಪೊರಿಮಳ ಬೊಡ್ತ್. ಹಾಂಗೇ ಎಚ್ಚರಿಕೆನೂ ಆತ್. ಎದ್ದಂವ ಇವರ ಕಣ್ಣಿಗೆ ಬೀಳದಾಂಗೆ ಇದ್ದ್ ಕಟಕಟಂತ ನೆಗಾಡಿಕೆ ಸುರುಮಾಡ್ತ್. ಒಮ್ಮೆಂದೊಮ್ಮೆಗೆ ಈ ಸದ್ದ್ ಕೇಳಿ ಎಲ್ಲೊವ್ಕು ಹಜ್ಜಾಗಾಬ್ರಿ ಆತ್. ದ್ರೌಪದಿ ಸುಭದ್ರೆ ಮಕ್ಕಳ ಎಲ್ಲ ನೊಡುಲಿ ನಿಲ್ಲಿಕಂಡ್ ಗಣ್ಣಾಕ ಎಲ್ಲ ಸುತ್ತಿಕಂಡ್ ನಿತ್ತೊ. ಧೌಮ್ಯ ರುಸಿಗ ಎಲ್ಲರ್‌ಂದ ಮುಂದೆ ಇದ್ದೊ. ಮತ್ತೆ ಈ ಅಟ್ಟಹಾಸದ ನೆಗೆನೊಟ್ಟಿಗೆ ಸುತ್ತೋಳೂ ಧಗಧಗಂತ ಕಿಚ್ಚಿ ಹೊತ್ತಿತ್. ಆಗ ಧೌಮ್ಯರ್ ಕಮಂಡಲುಂದ ಹಜ್ಜಾನೀರ್ ತೆಗ್‌ದ್ ಮಂತ್ರಿಸಿ ಆ ಕಿಚ್ಚಿಗೆ ಸಿಡ್‌ಕಿದ ಕೂಡ್ಲೆ ಕಿಚ್ಚಿ ಎಲ್ಲ ಕೆಟ್ಟಲ್ತ್. ಕರಾಳ ರಕ್ಕಸ ಎದ್‌ರಾತ್.

"ನೀ ಯಾರ್?"ಂತ ಯುಧಿಷ್ಠಿರ ಕೇಳ್ತ್. ಅದಿಕೆ "ನಾ ಕಿರ್ಮೀರ, ಈ ವನಕ್ಕೆ ಅಧಿಪತಿ. ನೀವೆಲ್ಲ ಯಾರ್ ಯಾಕೆ ಇತ್ತ ಬಂದರಿ?"ಂತ ರಕ್ಕಸ ಕೇಳ್ತ್. "ನಾವು ಪಾಂಡು ಚಕ್ರವರ್ತಿನ ಮಕ್ಕ ಪಾಂಡವರ್. ದುರ್ಯೋಧನನೊಟ್ಟಿಗೆ ಜೂಜಾಟಲಿ, ನಮ್ಮ ರಾಜ್ಯ ಕೋಶಗಳೆಲ್ಲ ಸೋತ್ ವನವಾಸಕ್ಕೆ ಬಂದೊಳ"ಂತ ಯುಧಿಷ್ಠಿರ ಉತ್ತರ ಕೊಟ್ಟಲ್ತ್. ರಕ್ಕಸ ಅಟ್ಟಹಾಸ ಮಾಡಿ "ಒಳ್ಳೆದಾತ್. ನಾ ಕಾದ್‌ಕಂಡೇ ಇದ್ದೆ. ನನ್ನ ನಂಟರಾದ ಹಿಡಿಂಬ, ಬಕನೆಲ್ಲ ಕೊಂದ ಭೀಮ ಎಲ್ಲಿ ಸಿಕ್ಕಿದೇಂತ. ಇಂದ್ ಅವನೇ ಬಂದ್ ನನ್ನ ಬಾಯಿಗೆ ಬಿದ್ದಾಂಗೆ ಆತ್. ಅವನ ಕೊಂದ್ ಅವನ ಕೊಬ್ಬಿದ ಸರ್‍ನ ಭಾಗಗಳ ಮುರ್ದ್ ಮುರ್ದ್ ಬಾಯಿಗೆ ಹಾಕಂಡ್ ಚಪ್ಪಿ ಚಪ್ಪಿ ತಿಂಬೆ. ನೆನ್ಸ್‌ಕನೇ ಬಾಯಲಿ ನೀರ್ ಬಂದವೆ. ಆ!" ಹೀಂಗೆ ಹೇಳಿ ಒಂದು ದೊಡ್ಡ ಕಲ್ಲ್‌ನ ಹೊತ್ತ್‌ಕಂಡ್ ಬಂದ್ ಬೀಸಿ ಭೀಮನ ಕಡೆಗೆ ಇಟ್ಟಲ್ತ್. ಭೀಮ ತಡು ಮಾಡದೆ ಅವನ ಗದೆನ ಬೀಸಿ ಬಾವ ಕಲ್ಲ್‌ಗೆ ಇಟ್ಟಲ್ತ್. ಆ ಕಲ್ಲ್ ಪೊಡಿ ಪೊಡಿ ಆತ್. ಗದೆ ಕೆಳಗೆ ನೆಲಕೆ ಬೀತ್. ಅಷ್ಟೊತ್ತಿಗೆ ರಕ್ಕಸ ಅವನ ಆನೆನ ಸೊಂಡಿಲ್‌ನಾಂಗಿದ್ದ ಅವನ ಕೈಗಳ ಬೀರಿಕಂಡ್ ಭೀಮಂಗೆ ಗುದ್ದಿಕೆ ಬಾತ್. ಭೀಮ ಅವನ ಕೈಗಳ ಗಟ್ಟಿ ಹಿಡ್ದ್ ಅವನ ಎಳ್ದ್, ಅವನ ಮುಸುಂಡುನ ಒಂದು ಮರಕ್ಕೆ ತಾಂಟ್‌ಸಿತ್. ಹೀಂಗೆ ಸುಮಾರ್ ಹೊತ್ತು ಹೊಯ್ ಕೈ ನಡ್ದ್ ಕಡೆಗೆ ಭೀಮ ರಕ್ಕಸನ ಅಂಗಾತ ನೆಲಕ್ಕೆ ಬೀಳ್ಸಿ ಅವನ ಗಂಟ್‌ಲಿಗೆ ಮೆಟ್ಟಿ ಉಸುರು ಕಟ್ಟ್‌ಸಿ ಅವನ ಕತೆ ಮುಗ್ಸಿತ್.

ಆ ಮೇಲೆ ಪಾಂಡವರ್ ಅಲ್ಲಿಂದ ಮುಂದೆ ದೂರ ಹೊರ್ಟ್ ಹೋದೊ. ಹಕ್ಕಲೆ ಇದ್ದರೆ ಆ ರಕ್ಕಸನ ಹೆಣ ಕೊಳ್ತ್ ನಾರುವ ನಾತನ ತಡಿಯಕೆ ಆಕಲೆಂತ ಹೇಳಿ ದೂರ ಹೋಕನ ಅಲ್ಲಿ ಒಂದು ರುಸಿಗಳ ಆಶ್ರಮ ಸಿಕ್ಕಿತ್. ಅವು ಇವರ ಸಂತೋಸುಂದ ಸ್ವಾಗತ ಮಾಡ್ದೊ. ಕಿರ್ಮೀರನ ಭೀಮ ಕೊಂದವರ ಕೇಳಿ ಭೀಮನ ತುಂಬ ಹೊಗ್‌ಳ್ದೊ.

ಇತ್ತ ಹಸ್ತಿನಾವತಿಲಿ, ವಿದುರಂಗೆ, ಕುರುವಂಶದ ಭವಿಷ್ಯದ್ದೇ ಚಿಂತೆ ಆಗಿತ್ತ್. ಈಗ ನಡ್ದ ವಿದ್ಯಮಾನಗಳ ಯೋಚನೆ ಮಾಡಿರೆ, ಕೌರವರ ಉದ್ಧಟ ವರ್ತನೆಗೆ, ಪಾಂಡವರಿಗೆ ಆದ ಅನ್ಯಾಯ ಅಪಮಾನಗಳಿಗೆ ಪ್ರತಿಯಾಗಿ ಭೀಮಾರ್ಜುನಾದಿಗ ಮಾಡ್ದ ಶಪಥ

ಇವೆಲ್ಲ ಕಾರಣಂದ. ಕೌರವ ವಂಶದ ನಿರ್ಮೂಲನ ಇನ್ನ್ ಹದಿಮೂರು ವರ್ಸರ್ಲೇ ಆರಂಭ ಆವರ್ಲಿ. ಸಂಶಯನೇ ಇಲ್ಲೆ. ಇದರ ತಡಿಯೊಕುಂತಾದರೆ ಒಳ್ಳೆ ಒಂದೇ ಒಂದು ಮಾರ್ಗಂತೇಳಿರೆ ಪಾಂಡವರ ಹಿಂದೆ ಕರ್ಸಿ, ಅಪ್ಕೆ ಅವರ ಪಾಲ್‌ನ ರಾಜ್ಯ ಕೋಶಗಳೆಲ್ಲ ಹಿಂದೆ ಕೊಟ್ಟ್, ಅವರ ಹಿಂದಕೆ ಇಂದ್ರಪ್ರಸ್ಥಲಿ ಪ್ರತಿಷ್ಠಾಪಿಸುದು. ಈ ಅದ್ದು ಮನೆತನ ಒಳಿಯೊಕುಂತ ವಿದುರನ ಅಂತರಂಗದ ಬಯಕೆ. ಅದಿಕೆ ಪಾಂಡವರ ತಂಟೆಗೆ ಹೋಗದೆ ಅವು ಅವರಷ್ಟಕ್ಕೆ ಅವರ ಕಾರ್‌ಬಾರ್ ಮಾಡಿಕಣೆಂಡ್ ಇರಿಕೆ ಬುಟ್ಟರೆ ಎಲ್ಲ ಸರಿ ಹೋದು. ಅದ್ ಬುಟ್ಟ್ ಈ ಕೌರವರ್ ಅವ್ಕೆ ದ್ರೋಹ ಮಾಡಿಕಣೆಂಡೇ ಇದ್ದರೆ ಇವರ ಸರ್ವನಾಶ ಆದೆಂತೇಳ್ದು ಕಸ್ಣಟಿಲಿ ಕಂಡಾಂಗೆ ಸ್ಪಷ್ಟ ಆದೆ. ಮಕ್ಕ ತೊಪ್ಪು ದಾರಿಲಿ ಹೋದರೆ ಹಿರಿಯೊವು ತಿದ್ದೊಕಾದ್ ಅವರ ಧರ್ಮ. ಅದರ ಬುಟ್ಟ್ ಕುರುಡು ಮೋಹಂದ ತನ್ನ ಮಕ್ಕ ಮಾಡ್ದೇ ಸರಿಂತ ತಿಳ್ಕಂಡರೆ ಎಲ್ಲೊವು ಬೀಳುದು ಹೊಂಡಕ್ಕೆ. ಒಮ್ಮೆ ಜೂಜುಲಿ ಗದ್ದ ಪಾಂಡವರ ಸರ್ವಸ್ವನ್ನೂ ಹಿಂದೆ ಕೊಟ್ಟರ್‌ದ್ ದೇವ್ರು ಮೆಚ್ಚುವ ಔದಾರ್ಯ. ಅದರ ಮತ್ತೆ ಹಿಂದಕ್ಕೆ ತಕಂಡರ್‌ದ್, ಹಿಂದಕೆ ಜೂಜಾಡಿಕೆ ಅವರ ಕರ್ಸಿದ್, ಕಾಡ್‌ಪಾಲ್ ಮಾಡ್‌ದ್ ಘೋರ ಅನ್ಯಾಯ ಆತ್. ಆದರೆ ಇನ್ನೂ ತಡು ಆತ್‌ಲೆ. ಪಾಂಡವರ ಹಿಂದಕೆ ಕಾಡ್‌ಂದ ಕರ್ಸಿ, ಅವರ ರಾಜ್ಯ ಕೋಶಗಳೆಲ್ಲ ಅವ್ಕೆ ಹಿಂದಕೆ ಕೊಡುದೊಂದೇ ಮಾರ್ಗ. ಹಾಂಗೆ ನೀ ಬೇಗ ಮಾಡ್‌ಂತ ವಿದುರ ಹೇಳ್ತ್.

ಒಟ್ಟು ಕುಟುಂಬದ ಹಿತದೃಷ್ಟಿಂದ ಈ ಮಾತ್‌ನ ಆಗಾಗ ಧೃತರಾಷ್ಟ್ರಂಗೆ ಹೇಳ್ತಿತ್ತ್. ದುರ್ಯೋಧನನ ಕೂಟಕ್ಕೆ, ಹಿರಿಯರ್‌ಂತ ಹೇಳಿಕಂಬ ಮುದಿಯರ್ ಹೇಳಿ ರಾಜನ ಒಪ್ಪ್‌ಸಿ, ಎಲ್ಲದನ್ನೂ ಪಾಂಡವರಿಗೆ ಹಿಂದೆ ಕೊಡ್ಸಿ ಬುಡುವೊಂತ ಹೇಳುವ ಹೆದ್‌ರಿಕೆ ಹಿಂದೆಂದರ್ಳೇ ಇತ್ತ್. ಹಾಂಗೆ ಅವು ಬಂದ್ ದೃತರಾಷ್ಟ್ರಂಗೆ ಮುಂದೇ ಕಿವಿ ತುಂಬ್‌ಸಿ ಅವಂದ ಹಾಂಗೆ ಕೊಡಿಕಿಲೇಂತ ಬಾಸೆ ತಕಂಡೊಳೊ. ವಿದುರ ಮತ್ತೆ ಮತ್ತೆ ಹೀಂಗೆ ಪಾಂಡವರ್ ಪ್ರತಿಜ್ಞೆ ಮಾಡ್ದಾಂಗೆ, ಕೌರವರ ಇಸಿಕಿಲಿಂತ ಮತ್ತೆ ಮತ್ತೆ ಹೇಳುದರ ಕೇಳಿ ರಾಜಂಗೆ ಕೋಪ ಬಾತ್. "ನೀ ಪಾಂಡವ ಪಕ್ಷಪಾತಿ. ಅವರ ಒಳ್ಳೆದನ್ನೇ ನೀ ನೆನ್ಸುದೇ ಹೊರ್ತು ನನ್ನ ಮಕ್ಕಳಿಗೆ ಒಳ್ಳೆದಾಕುಂತ ಒಮ್ಮೆ ಆದರೂ ನೆನ್ಸಿಯೊಳನೋ? ಮಾತ್ ಮಾತಿಗೆ ಇವು ದುಷ್ಟರ್; ದುರ್ಬಲರ್‌ಂತ ಹಂಗ್‌ಸಿಕಣೆದೇ ಒಳ! ನಂಗೆ ನಿನ್ನ ಉಪದೇಶನೂ ಬೇಡ. ನೀನೂ ಬೇಡ. ನೀ ಎಲ್ಲಿಗೆ ಬೇಕರೂ ಹೋಗು. ಹಸ್ತಿನಾವತಿನ ಬುಟ್ಟ್ ಬೇರೆ ಎಲ್ಲಿಗಾದರೂ ಹೋಗು" ದೃತರಾಷ್ಟ್ರ ಕೋಪರ್ಲಿ ಹೇಳ್ತ್. ವಿದುರಂಗೆ ತುಂಬ ಬೇಜಾರ ಆತ್. ಕಂಡದರ ಹೇಳಿರೆ ಕೆಂಡದಂತ ಕೋಪಂತೇಳುವ ಗಾದೆ ಸರಿ. ನಾ ಇವ್ಕೆ ಒಳ್ಳೆದಾಗಲಿಂತೇಳಿರೆ ರಾಜಂಗೆ ಸಹಿಸುದ್‌ಲೆ. ಆಗಲಿ. ನನ್ನಂದ ಮುಂದೆ ನಾರದ ರುಸಿಗಳೂ ಬಂದೊವು ಪಾಂಡರ್‌ವ್ರಕೆ ಮಾಡ್ದ ಅನ್ಯಾಯದ ಪ್ರತಿಫಲವಾಗಿ ಅದರ ನೂರುಪಾಲ್ ವೇದನೆ ನೀವ್ಗೆ ಆಕೆ ಉಟ್ಟುಂತ ಹೇಳಿ ಹೋಗೊಳೊ. ಮೂರ್ಖರಿಗೆ ಎಚ್ಚರಿಕೆ ಬುದ್ಧಿಮಾತ್ ಹೇಳಿರೂ ಅವೆಲ್ಲ ಕಲ್ಗರ್ಲ್‌ನ ಮೇಲೆ ಮಳೆ ಹೊಯ್ದಾಂಗೆ. ಇನ್ನ್ ಇವರ ಸಹವಾಸ ಸಾಕ್. ನಾ ಪಾಂಡವರ್ ಇರುವ ಕಾಡಿಗೆ ಹೋನೆಂತ ವಿದುರ

ರಥನ ಹತ್ತಿಕಣಂಡ್, ಕಾಮ್ಯಕ ವನದ ಕಡೆಗೆ ಹೋತು.

ಒಂದು ದಿನ ಭೀಮ ಎತ್ತರದ ಜಾಗೆಲಿ ನಿತ್ತ್ ನೋಡ್‌ಕನ ಹಸ್ತಿನಾವತಿನ ಕಡೆಂದ ಒಂದು ರಥ ಬಾದರ ಕಂಡಣತ್. ಯಾರ್‌ದ್‌ಂತ ಸೂಕ್ಷ್ಮಲಿ ನೋಡ್‌ಕನ ಅದ್ ವಿದುರ ಚಿಕ್ಕಪ್ಪನ ರಥಂತ ಗೊತ್ತಾತ್. ಅಂವ ಬಂದ್ ಯುಧಿಷ್ಠಿರಂಗೆ ಹೇಳ್ತ್. ವಿದುರ ಹಿಂದಕೆ ಯಾಕೆ ಬಂದದೇಂತ ಇಬ್ಬೊರಿಗೂ ಆಶ್ಚರ್ಯ ಆತ್. ಹಿಂದಕೆ ಜೂಜಾಟಕೆ ಕರ್ದವೆನೋಂತ ಯುಧಿಷ್ಠಿರಂಗೆ ಸೂಂಸಯ ಬಾತ್. ಎಲ್ಯಾರ್ ಇನ್ನ್ ನಮ್ಮ ಆಯುಧಂಗಳ್ನೇ ಜೂಜಿಗೆ ಪಣ ಇಸೊಕುಂತೇಳಿ ಅವುಗಳೂ ಕಳ್ಕಂಬಾಂಗೆ ಆದರೇನ್ ಗಣತಿಂತ ಯುಧಿಷ್ಠಿರಂಗೆ ಆತಂಕ ಆದರೂ, ಜೂಜಿಗೆ ಕರ್ದವೆಂತಾದರೂ, ನಾ ಅದಿಕೆ ಅಂಜದೆ ಆಡುದು ಕಂಡಿತಂತಣಳೂ ಹೇಳ್ತ್. ಭೀಮನ ಮೋರೆಲಿ ಒಮ್ಮೆ ಕೋಪದ ಗೆರೆ ಮಿಂಚಿತ್. ಹಾಂಗೆ ಆಡುದಾದರೂ ಎದ್‌ರಾಳಿಯಾಗಿ ದುರ್ಯೋಧನನೇ ಆಡೊಕು ಹೊರ್ತು, ದುಷ್ಟ ಶಕುನಿ ಆಡಿಕೆ ಆಗಣದ್‌ಂತ ಶರ್ತ ಹಾಕೊಕುಂತ ಭೀಮ ಹೇಳ್ತ್. ಅದಿಕೆ ಯುಧಿಷ್ಠಿರ ಆಗ ನಾವು ಹೆದ್‌ರಿಕಂಡ ಹಾಂಗೆ ಆದೆ. ಏನಾದರಾಗಲಿ, ವಿದುರ ಬಂದ ನಿಜಕಾರಣ ಮುಂದೆ ತಿಳಿಯನೋಂತ ಹೇಳುವಷ್ಟರ್ಲಿ ಅವನ ತೇರೂ ಬಂದೆತ್ತಿತ್. ಪಾಂಡಣವಣರ್ ನಮಸ್ಕಾರ ಹೇಳ್ದೊವ್ಕ, ನೀವ್ಗೆ ಶುಭವಾಗಣಲಿಂತ ವಿದುರ ಮನಸಾರ ಆಶೀರ್ವಾದ ಮಾಡ್ತ್. ಏನ್ ಅವಸರಂದ ಬಂದ್ ಬುಟ್ಟಣರಿ. ಮಹಾರಾಜ ಎಲ್ಲ ಕ್ಷೇಮಣಲಿ ಒಳೊನೋಂತ ಯುಧಿಷ್ಠರ ಕೇಳ್ತ್. ಅದರ್ಲಿ ಯಾರಿಗೇನೂ ಕಣಮ್ಮಿಲ್ಲಂತ ಹೇಳ್‌ಕನ ಅಲ್ಲಿಗೆ ಮೈತ್ರೇಯಂತೇಳ್ವ ರುಸಿಗ ಬಂದೊ. ಅವ್ಕೆ ಎಲ್ಲೊವೂ ನಮಸ್ಕಾರ ಮಾಡ್ದೊ. ನಾ ತೀರ್ಥಾಟನೆಗೆ ಹೊರ್ಟಂವ. ಭೀಮ ಕಿಮ್ಮಿರನ ಕಾಮ್ಯಕವನಣಲಿ ಕೊಂದ ಸುದ್ದಿ ಕೇಳಿ ಇನ್ನ್ ಜನ ಓಡ್ಯಾಡಿಕೆ ಹೆದ್‌ರಿಕೆ ಇಲ್ಲೆ. ಹೀಂಗೆ ಲೋಕೋಪಕಾರ ಮಾಡ್ದ ನಿಮ್ಮ ನೋಡಿ, ಅಭಿನಂದ್‌ಸಿ ಹೋಯಿಂತ ಇತ್ತ ಬಂದೆ. ಲೋಕಕ್ಕೆ ಉಪಕಾರ ಆಗಣಲಿಂತೇಳುವ ಕಾರಣಂದಲೇ ವಿಧಿ ನಿಮ್ಮಂತಣವುಕೆ ವನವಾಸಂತೇಳುವ ಕ್ಲೇಶಗಳ ಉಂಟ್ ಮಾಡ್‌ದೇಂತ ಕಂಡದೇಂತ ಮೈತ್ರೇಯರ್ ನೆಗಾಡಿಕಣಂಡ್ ಹೇಳ್ದೊ. ಅದರೊಟ್ಟಿಗೆ ನಿಮ್ಮಂತವರ ದರ್ಶನ ಭಾಗ್ಯಣನೂ ಸಿಗುವ ಹಾಂಗಾಗಣಲಿಂತೇಳುವ ಉದ್ದೇಸನೂ ಇರುದುಂತ ಕಂಡೆದೆಂತ ಯುಧಿಷ್ಠಿರನೂ ನೆಗಾಡಿಕಣಂಡೇ ಹೇಳ್ತ್. "ಏನೇನೆಲ್ಲ ನಡ್ದ್‌ಂತ ನಂಗೆ ವಿವರ ತಿಳಿಯೊಕು"ಂತ ಮೈತ್ರೇಯಣರ್‌ಕೇಳ್ಬೈಕೆ "ಪೂಜ್ಯರೆ ನೀವು ದೂರಂದ ನಡ್ಕಂಡ್ ಬೊಚ್ಚಿ ಬಂದೊಳಣರಿ. ಮುಂದೆ ನೀವು ಮಿಯ್ಕಂಡ್ ಬನ್ನಿ. ಮತ್ತೆ ನಾವೆಲ್ಲ ಊಟ ಮಾಡಿಕಮೊನೊ. ಆ ಮೇಲೆ ಮಾತಾಡಣಕ್‌ಂತ ಹೇಳ್ಬೈಕೆ ರುಸಿ ಒಪ್ಪಿ ಮೀಯಕೆ ಹೋತು.

ಊಟ ಮುಗ್ಸಿ ಎಲ್ಲೊವು ಸುತ್ತ ಕುದ್ದ್‌ಕಣಂಡ್ ಎಲ್ಲ ವಿವರಗಳ್ನೂ ಮಾತಾಡ್ದೊ. ವಿದುರನೂ ಹಸ್ತಿನಾವತಿನ ವಿದ್ಯಮಾನನ, ಧೃತರಾಷ್ಟ್ರಂಗೆ ನನ್ನ ಹಿತೋಪದೇಶ ಅಹಿತವಾಗಿ ಕಂಡ್ ಕೋಪಂದ ನೀ ಎಲ್ಯಾರ್ ಹೋಗು. ನಂಗೆ ನಿನ್ನ ಉಪದೇಶನೂ ಸಾಕ್, ನೀನೂ ಸಾಕ್‌ಂತೇಳಿ ನನ್ನ ಬಹಿಷ್ಕರಿಸಿದ್ದರ್‌ಂದ, ನಾ ಆ ದುರಾತ್ಮರಿರುವ ಅರಮನೆಲಿರುದರ್‌ಂದ, ಮಹಾತ್ಮರಿರುವ ಕಾಡೇ ಮೇಲ್‌ಂದ್ ಪಾಂಡವರಿರುವ ಕಾಮ್ಯಕವನಕೆ ಬಂದೇಂತ

ಹೇಳ್ತ್, ಅದಿಕೆ ನೀವು ಬಂದದೀದ್ ನಾವ್ಗೆ ತುಂಬ ಸಂತೋಸು ಚಿಕ್ಕಪ್ಪ. ನಾವ್ಗೆ ಮಾರ್ಗದರ್ಶನ ಮಾಡಿಕೆ ಸಿಕ್ಕಿದ್ ನಮ್ಮ ಪುಣ್ಯಂತ ನಮ್ಮ ಭಾವನೆ ಚಿಕ್ಕಪ್ಪಂತ ಯುಧಿಷ್ಠಿರ ಹೇಳ್ತ್, ವಿದುರಂಗೆ ಸಂತೋಸಾತ್. ಅತ್ತ ಹಸ್ತಿನಾವತಿಲಿ ದುರ್ಯೋಧನ ಮತ್ತೆ ಅವನ ಕೂಟಾಳಿಗಳಿಗೆ ವಿದುರ ಪಾಂಡವರೊಟ್ಟಿಗೆ ಸೇರುದು ಅಪಾಯಂತ ಅಭಿಪ್ರಾಯಪಟ್ಟೊ. ಅದ್‌ಕೆ ಸರಿಯಾಗಿ ಧೃತರಾಷ್ಟ್ರಂಗೆ ಈಗ ವಿದುರ ಇಲ್ಲದೆ ಏನೇನೋ ಆಕೆ ಸುರಾತ್. ಕೋಪದಲಿ ತಾನ್ ವಿದುರಂಗೆ ಹೇಳ್ದೆಲ್ಲ ತೊಪ್ಪಾತ್‌ಂತ ಪಶ್ಚಾತ್ತಾಪ ಆತ್.

ಹಾಂಗೆ ಅಂವ ಸಂಜಯನ ಕರ್ದ್ "ವಿದುರಂಗೆ ಕೋಪಂದ ಏನೆಲ್ಲ ಹೇಳಿಬುಟ್ಟೆ. ನನ್ನದ್ ತುಂಬ ತೊಪ್ಪಾತ್. ನೀ ಹೋಗಿ ಅಂವನ ಕಾಲಿಗೆ ಬಿದ್ದ್ ದಮ್ಮಯ್ಯ ಹಾಕಿಯಾರ್ ಅಂವನ ಕರ್ಕಂಡ್ ಬಂದೇ ತೀರೊಕು. ಅಂವ ಇಲ್ಲದೆ ನಂಗೆ ತುಂಬ ಸಂಕಟ ಆದೆ. ನೀ ಬೇಗ ಹೋಗಿ ಅವನೊಟ್ಟಿಗೇ ಕರ್ಕಂಡ್ ಬಾಂತ ಒತ್ತಾಯ ಮಾಡ್ತ್. ಹಾಂಗೆ ಸಂಜಯ ಪಾಂಡವರಿದ್ದಲ್ಲಿಗೆ ಹೋಗಿ ವಿದುರಂಗೆ ಮತ್ತೆ ಪಾಂಡವರಿಗೆ ಎಲ್ಲ ವಿವರ್ಸಿ, ವಿದುರನ ಹಸ್ತಿನಾವತಿಗೆ ಕರ್ಕಂಡ್ ಬಾತ್. ಧೃತರಾಷ್ಟ್ರನ ನೋಡ್‌ಕನ ಅಂವ ತನ್ನನೇ ದೂಷಿಸಿಕಂಡ್ ಮನಃ ಪೂರ್ವಕ ಅವನೊಟ್ಟಿಗೆ ಕ್ಷಮೆ ಕೇಳ್ತ್.

ಇಷ್ಟೆಲ್ಲ ಒಂದು ಕಡೆಂದ ನಡಿಯಕನ ದುಷ್ಟಕೂಟದವು ಇನ್ನೊಂದು ಕಡೆಂದ ಬೇರೆನೇ ಹುನ್ನಾರ ಮಾಡಿಕಂಡ್ ಇದ್ದೊ. ಕರ್ಣನ ಮಂತ್ರಾಲೋಚನೆ ಯಾಗೋಳೂ ಒಂದೇ. ಅವನ ಮಿತ್ರನಾದ ರಾಜನ ಮೆಚ್ಚಿಸೊಕು. ಅವನ ಮನ್‌ಸಿಗೆ ಸಂತೋಸು ತರೊಕು. ಅದ್ ಆಕುಂತಾದರೆ, ಪಾಂಡವರ್ ಈ ಭೂಮಿ ಮೇಲೆ ಇಲ್ಲೆಂತಾಕು. ಅವು ಇಲ್ಲದಾಕೊರೆ ಇನ್ನ್ ಇರುದು ಒಂದೇ ದಾರಿ. ಅದ್‌ಂತೇಳಿರೆ ಈಗಳೇ ಹೋಗಿ ಯುದ್ಧ ಮಾಡಿ ಅವರ ಕೊಲ್ಲುದು. ಅಷ್ಟ್ ಮಾಡಿಕೆ ತನಿಗೆ ಸಾಧ್ಯ ಉಟ್ಟುಂತ ಅವನ ಮೇಲೆ ಭಾರೀ ನಂಬಿಕೆ. ಹಾಂಗೆ ದುಷ್ಟಕೂಟಕೆ ಸೇರ್ದ ನಾಲ್ಕೇ ಜನಗ ರಥಗಳ ಹತ್ತಿಕಂಡ್ ಕಾಮ್ಯಕ ವನಕೆ ಹೊಟ್ಟೊ. ಅವು ನೊಡುದಾರಿಗೆ ಒಂದು ಹಳ್ಳದ ಕರೆಗೆ ಎತ್ತ್‌ಕನ ಇವರ ಕೆಟ್ಟ ಆಲೋಚನೆ ಗೊತ್ತಾದ ವೇದ ವ್ಯಾಸ ರುಸಿಗ ಪ್ರತ್ಯಕ್ಷ ಆದೊ. ದುರ್ಯೋಧನಾದಿಗಳಿಗೆ ಏನೋ ಒಂದು ತರ ಆಗಿ ತಲೆ ತಗ್ಗ್‌ಸಿಕಂಡ್ ನಿತ್ತೊ. ವೇದವ್ಯಾಸರಿಗೆ ಸಿಟ್ಟ್ ಬಾತ್. ಎಲ್ಲಿಗೆ ಹೊಟದ್ದ್‌ಂತ ಹೇಳಿ. ಏಕೆ ಮೌನ? ಮತ್ತೊ ಯಾರೊಬ್ಬೊನೂ ಉತ್ತರ ಕೊಡದೆ ನೆಲ ನೋಡಿಕಂಡೇ ಇದ್ದೊ. ನೀವು ಹೇಳದಿದ್ದರೆ ನಂಗೆ ಗೊತ್ತಾಕಿಲೆಂತ ತಿಳಿಬೇಡಿ. ಮರ್ಯಾದೆಂದ ಹಿಂದೆ ಹೋಗಿ. ಇನ್ನ್ ಹದಿಮೂರ್ ವೊರ್ಸ ಕಳ್ದ್ ತೀರುವ ನಿಮ್ಮ ಆಯುಷ್ಯನ, ಇಂದೇ ಮುಗ್ಸಿ ಕಣ್ಣಡಿ. ನಡಿನಿ ಹಿಂದೇಂತ ಗದ್‌ರ್ಸಿದೊ. ಕೂಡ್ಲೆ ಇವು ತೇರ್‌ಗಳ ಹಿಂದೆ ತಿರ್ಗ್‌ಸಿದೊ.

ಮತ್ತೆ ವೇದವ್ಯಾಸರ್ ಹಸ್ತಿನಾವತಿಗೆ ಬಂದ್ ಧೃತರಾಷ್ಟ್ರನ ನೋಡಿ ಪಾಂಡವರೊಟ್ಟಿಗೆ ಶಾಂತಿ ಮಾಡಿಕಣೊಕು ಅವ್ಕಾದ ಅನ್ಯಾಯನ ಸರಿ ಮಾಡಿ ಇತ್ತಂಡವೂ ಒಗ್ಗಟ್ಟಾಗಿ ನಡ್ಕಂಡರೆ ಪ್ರಪಂಚಕ್ಕೆ ಒಳ್ಳೆದಾದು. ಇನ್ನ್ ಹಜ್ಜ ದಿನಲಿ ಮೈತ್ರೇಯ ರುಸಿಗಳೂ ಬಂದ್. ಅವು ಹೇಳುವ ಬದ್ಧಿಮಾತ್‌ಗಳ ನಿನ್ನ ಮಜ್ಜ ಸರಿಯಾಗಿ ಕೇಳಲಿ. ದುರಹಂಕಾರ

ತೋರ್ಸಿರೆ ಅವು ಸಾಪಕೊಡುವ್ರೊಂತ ಎಚ್ಚರಿಕೆ ಹೇಳಿ ವೇದವ್ಯಾಸರ್ ಹೊರ್ಟ್ ಹೋದೊ.

ಮೈತ್ರೇಯ ರುಸಿಗ ಪಾಂಡವರಲ್ಲಿ ಒಳ್ಳೆ ಸತ್ಕಾರ ಪಡ್ದೊ. ಮನ್ನಣೆ, ಗೌರವಗಳ ಪಡ್ದೊ. ಪಾಂಡವಾರಿಗಾದ ಅನ್ಯಾಯ ಅಪಮಾನಗಳ ಕೇಳಿ ತುಂಬ ಸಂಕಟ ಪಟ್ಟೊ. ಹಾಂಗೆ ತೀರ್ಥಾಟನೆಗೆ ಹೊರ್ಟವಾಗಿದ್ದರೂ, ನಾನೂ ಒಮ್ಮೆ ಹಸ್ತಿನಾವತಿಗೆ ಹೋಗಿ ಕೌರವರಿಗೆ ನಾಲ್ಕ್ ಬುದ್ಧಿಮಾತ್ ಹೇಳಿ ನೋಡ್ವೆ. ಕುರುಕುಲ ನಾಶ ಆಗಿ ಹೋದರ ಒಳ್ಳೆನೊ. ನಮ್ಮ ಪ್ರಯತ್ನಕ್ಕೆ ಮೀರ್ದ ಅನಾಹುತ ಆದಂತಾದರೆ ಅದ್ ಅವರವರ ಕರ್ಮಫಲಂತ ಹೇಳಿಕಂಡ್ ಸದುದ್ದೇಶಂದ ಹಸ್ತಿನಾವತಿಗೆ ಬಂದ್ ಧೃತರಾಷ್ಟ್ರನ ನೋಡಿ ಮಾತಾಡ್ದೊ. ಅನೇಕ ಹಿತೋಪದೇಶ ಮಾಡ್ದೊ. ಧೃತರಾಷ್ಟ್ರನೂ ಅವರ ಮಾತ್‌ನ ಒಪ್ಪಿಕಂಡತ್. ಪಾಂಡವಾರಿಗಾದ ಅನ್ಯಾಯನ ತಡಿಯಕೆ ನನ್ನಂದಾಗಲಿ, ಭೀಷ್ಮ, ದ್ರೋಣಾರ್‌ಂದಾಗಲಿ ದುರ್ಯೋಧನನ ಹಟನ ತಡಿಯಕೆ ಆತ್‌ಲೆ. ನೀವೇ ಅಂವಂಗೆ ಬುದ್ಧಿ ಹೇಳೊಕು ಮುನೀಂದ್ರಂತ ಕೇಳಿಕಂಡತ್.

ಹಾಂಗಾರೆ ಅವನ ಇಲ್ಲಿಗೆ ಕರ್ಸ್‌ಂತ ರುಸಿ ಹೇಳ್ತ್. ಧೃತರಾಷ್ಟ್ರ ಸಂಜಯನ ಕಳ್ಸಿ ದುರ್ಯೋಧನನ ಬಾಕೆ ಮಾಡ್ತ್. ಅಂವ ಬಾಕನೇ ಉರಿಮುಸುಂಡು ಮಾಡಿಕಂಡೇ ಬಾತ್. ರುಸಿಗೆ ಗೌರವ ತೋರ್ಸದೆ ಅಪ್ಪಂಗೆ ಮಾತ್ರ ನಮಸ್ಕಾರ ಹೇಳಿ ಏಕೆ ಕರ್ಸಿದ್‌ಂತ ಕೇಳಿ ಧಿಮಾಕ್‌ಲಿ ಕುದ್ದತ್. ಧೃತರಾಷ್ಟ್ರ, ಮೈತ್ರೇಯ ಮುನೀಂದ್ರರ್ ನಿನ್ನೊಟ್ಟಿಗೆ ಮಾತಾಡಿಕೆ ಬಂದೊಳೊ. ಅವ್ಕೆ ನಮಸ್ಕಾರ ಮಾಡಿ ಅವರ ಆಶೀರ್ವಾದ ಪಡ್ಕಂತ ಹೇಳ್ತ್. ವಕ್ರದೃಷ್ಟಿಲಿ ಅವರತ್ತ ನೋಡಿ, ಬೇಕೋ ಬೇಡೋಂತ ಅವ್ಕೆ ನಮಸ್ಕಾರ ಹೇಳ್ತ್. ಅವೂ ಅಷ್ಟೆ ಅಸಡ್ಡೆಂದ ಶುಭಕೋರ್ದೊ. ಮತ್ತೆ ತಾನ್ ಪಾಂಡವರ ಕಾಮ್ಯಕವನಲಿ ನೋಡಿ ಬಂದವದ್, ಅವರ ವನವಾಸದ ಬವಣೆನೆಲ್ಲ ವಿವರ್ಸಿದೊ. ನಿನ್ನಂದ ಅವ್ಕೆ ಬಾರಿ ಅನ್ಯಾಯ ಆತ್. ಅವಮಾನ ಆತ್. ಧರ್ಮಕೆ ಕಟ್ಟ್ ಬಿದ್ದ್ ಅವು ಅಂದಿಗೆ ತಡ್ಕಂಡೊ. ಗಾಂಡೀವಿ ತನ್ನ ಬಿಲ್ಲೆತ್ತಿರೆ ಭೀಮ ತನ್ನ ಗಧೆಯೆತ್ತಿರೆ ಅವರ ತಡಿವಂತ ವೀರರ್ ಮೂರು ಲೋಕಗಳ್ಲಿಯೂ ಇಲ್ಲಂತಿರ್ಕನ ನೀವಿನ್ನ್ ಯಾವ ಲೆಕ್ಕ? ಸೊವ್ರುಂದ್ರ ಮೇರೆ ಮೀರಿ ಭೋರ್ಗರ್ದರೆ ಭೂಮಿ ಬಿರ್ದ್ ಒಳಗೆ ಕೊದ್ದ್‌ಕಂಡ್ ಇರುವ ಲಾವಾರಸನ ಹೊರಗೆ ಸೂಸಿರೆ ಯಾರ್ ತಡಿವೊ? ಈ ರಾಜ್ಯ ಸುಖ ಸಂಪೊತ್ತ್‌ನ ಇನ್ನೂ ಅನುಭವಿಸುವಂತ ಆಸೆ ಇದ್ದರೆ, ಬೇಗ ನೀ ಪಾಂಡವರೊಟ್ಟಿಗೆ ಶಾಂತಿ ಸಂಧಾನ ಮಾಡಿಕ. ಅದಲ್ಲದಿದ್ದರೆ ನಿನ್ನ ಕುಲಸರ್ವಸ್ವ ನಾಶ ಆದ್ಕೆ ನೀನೇ ಕಾರಣಕರ್ತ ಆದಿಯಂತ ಹೇಳ್ದೊ.

ಈ ಮಾತ್‌ಗಳ ಕೇಳಿ ದುರ್ಯೋಧನಂಗೆ ಕಡು ಕೋಪ ಬಾತ್. ನೀವೆಲ್ಲೊವೂ ಪಾಂಡವ ಪಕ್ಷಪಾತಿಗ. ಪ್ರಪಂಚಲಿ ಅವು ಮಾತ್ರ ಶೂರರ್. ನಾವು ಮಾತ್ರ ಏನೂ ಅಲ್ಲಂತ ಸಸಾರ ಮಾಡಿರೆ. ನಾವೂ ಕ್ಷತ್ರಿಯ ವಿದ್ಯೆಗಳ ಕಲ್ತೊಳೆ. ದ್ರೋಣಾಚಾರ್ಯರೇ ಅವ್ಕೊ ನಾವ್ಕೂ ಶಸ್ತ್ರಾಭ್ಯಾಸ ಮಾಡ್ಸಿದ ಗುರುಗ. ಆ ಗುರುಗ ಅವ್ಕ ಪ್ರತ್ಯೇಕ ಹೇಳಿ ಕೊಟ್ಟೊಳೊನೊ? ಹಾಂಗೆ ಹೇಳಿರೆ ಅವ್ಕೆ ಅಪಚಾರ ಮಾಡ್ದಾಂಗೆ ಆದುಲೆನೋ. ನಾ ಗದಾಯುದ್ಧಲಿ ಪ್ರಸಿದ್ಧನಾಗಿರುವ ಬಲರಾಮಂದೊಳೂ ಗದಾಯುದ್ಧಲಿ ಹೆಚ್ಚಿನ ತರಬೇತಿ

ಪಡ್ಕೊಳಿ. ನಾವ್ರೂ ಯಾರಿಗೂ ಶೂರತನೞಲಿ ಕೞಮ್ಮಿ ಇಲ್ಲಂತ ಕೋಪೞಲಿ ಬಲ ತೊಡೆನ ತೋರ್ಲಿ ತೞಟ್ಟಿಕೞಪ್ ರೋಷಂದ ಗರ್ಜನೆ ಮಾಡ್ತ್. ಇದರ ನೋಡಿ ಮೈತ್ರೇಯರಿಗೆ ಭಯಂಕರ ಕೋಪ ಬಂದ್, "ಎಲವ್ರೋ ಮೂರ್ಖ ಮದಾಂಧನೇ ನೀ ನಂಗೆ ಅವಮಾನ ಮಾಡುವಾಂಗೆ ತೊಡೆ ತೞಟ್ಟಿ ತೋರ್ಲಿದ. ಈ ತೊಡೆನ ಭೀಮಸೇನ, ತನ್ನ ಗದೆಂದ ಹೊಡ್ಡ್ ಪುಡಿ ಪುಡಿ ಮಾಡೞಲಿ. ಇದ್ ನನ್ನ ಸಾಪ, ಸಾಪಂತ ಎರ್ಡ್ ಸರ್ತಿ ಹೇಳಿ, ಕಮಂಡಲುನ ನೀರ್‌ನ ಅಂಗೈಗೆ ಹೊಯ್ಡ್ ರೋಷೞಲಿ ಅವನ ಕಡೆಗ ಕೊಡ್ಡಿದೊ. ದುರ್ಯೋಧನ ಎದ್ದ್ ಹೋತ್. ತನ್ನ ಮಜ್ಜಂಗೆ ಒಳ್ಳೇದಾಗೞಲೀಂದ್ ಧೃತರಾಷ್ಟ್ರ ಬಯ್ಸಿದ್ದಾದರೂ ದುರ್ಯೋಧನನ ಉದ್ಧಟ ನಡವಳಿಕೆಂದ ಮೈತ್ರೇಯರ್‌ಂದ ಬಯಂಕರವಾದ ಶಾಪವೇ ಸಿಕ್ಕುವಾಂಗೆ ಆತಲೇಂತ ಧೃತರಾಷ್ಟ್ರಂಗೆ ತುಂಬ ವ್ಯಥೆ ಆತ್. ತಮ್ಮ ಮಕ್ಕೞಳಿಗೆ ಭವಿಷ್ಯಲಿ ಒಳ್ಳೇದಾಕಿಲೆ. ನಾರದರೂ ಹೇಳಿಯೊಳೊ. ಈ ಮೈತ್ರೇಯರೂ ಶಾಪ ಕೊಟ್ರೊ. ಸಾಲದ್ದಕ್ಕೆ ಇವರೆಲ್ಲ ಕೊಲ್ಲದಿರಿಕಿಲೆಂತ, ಪಾಂಡೞವೞರೂ ಪ್ರತಿಜ್ಞೆ ಮಾಡಿಯೊಳೊ ಇದರೆಲ್ಲ ನೆನ್ಸಿ ಧೃತರಾಷ್ಟ್ರಂಗೆ ತುಂಬ ವ್ಯಥೆ ಆತ್. ಹಾಂಗೆ ಅಂವ ಕಡೇ ಪ್ರಯತ್ನಂತೇಳಿ ದುರ್ಯೋಧನನ ತೊಟ್ಟಿಗೆ ತಾನೇ ಕ್ಷಮೆ ಕೇಳ್ತ್. ನೀವ್ರ ಕೊಟ್ಟ ಸಾಪನ ದಯಮಾಡಿ ಹಿಂದೆ ತಕಣಾೞಕುಂತ ಕೇಳಿಕಂಡೞತ್. ಅದಿಕೆ ಮೈತ್ರೇಯರ್ ಹೇಳ್ರೊ. ನಾ ಕೊಟ್ಟ ಸಾಪಕ್ಕೆ ಪ್ರತಿಶಾಪಂತೇನೂ ಇಲ್ಲೆ. ದುರ್ಯೋಧನ ಪಾಂಡವರೊಟ್ಟಿಗೆ ಶಾಂತಿ ಸಂಧಾನ ಮಾಡಿ ಒಳ್ಳೆದರ್ಲಿ ನಡ್ಕಂಡರೆ ಆ ಸಾಪ ತಾನಾಗಿ ಇಲ್ಲದಾದೆ. ಹಾಂಗೆ ಮಾಡಿಕೆ ಹೇಳ್. ನಾ ಹೋನೆಂತ ಹೇಳಿ ಮೈತ್ರೇಯರ್ ಹೊರ್ಟ್ ಹೋದೊ.

ಧೃತರಾಷ್ಟ್ರ ಮತ್ತೆ ದುರ್ಯೋಧನನ ಕರ್ಲಿ ಅವಂಗೆ ಹಿತಮಾತ್ ಹೇಳಿಕೆ ಹೊರ್ಟೞತ್. ಆದರೆ ದುರ್ಯೋಧನ ಆ ಮಾತ್‌ಗೆ ಒಪ್ಪಿತೇಲೆ. ನಮ್ಮೞಲ್ಲಿಯೂ ಅವರಾಂಗೇ ಒಳೊ. ಅವ್ರು ಮಾತ್ರ ವೀರರಲ್ಲ. ನೀವೇನೂ ಹೆದ್‌ರೊಕುಂತಿಲ್ಲೆ. ಹೀಂಗೆ ಹೇಳಿ ಅಂವ ಹೊರ್ಟ್ ಹೋತು. ಧೃತರಾಷ್ಟ್ರ ಬೇಜಾರ ಮಾಡಿಕೞಂಡ್ ಕುದ್ದೞತ್.

## ಕಾಮ್ಯಕ ವನಕ್ಕೆ ದ್ವಾರಕೆಂದ ಶ್ರೀಕೃಷ್ಣ ಪಾಂಚಾಲ ನಗರಂದ ಧೃಷ್ಟದ್ಯುಮ್ನ ಪಾಂಡವರ ನೋಡಿಕೆ ಬಂದದ್

ಒಂದು ದಿನ ಶ್ರೀಕೃಷ್ಣ ದ್ವಾರಕೆಂದ ಕಾಮ್ಯಕ ವನಕ್ಕೆ ಬಾತ್. ಅದರ ಮಾರ್ನೇ ದಿನ ಧೃಷ್ಟದ್ಯುಮ್ನನೂ ಬಂದೆತ್ತಿತ್. ಇವು ಬಾದೊರ ದುರ್ಯೋಧನನ ಗುಪ್ತಚಾರೆರ್ ಎಡೆ ದಾರಿಲಿ ನೋಡ್ದೊವು ರಾಜಂಗೆ ಸುದ್ದಿ ಮುಟ್ಟ್ಸಿದೊ. ನೀವು ಅಲ್ಲೇ ಇದ್ದ್. ಅವು ಏನೆಲ್ಲ ಮಾತಾಟವಂತ ಬಂದ್ ಹೇಳಿಂತ ಅಪ್ಪಣೆ ಮಾಡ್ತ್. ಕೃಷ್ಣನ ನೋಡಿ ಪಾಂಡವೆರಿಗೆ ಬಾರಿ ಸಂತೋಸು. ನಾನಾ ರೀತಿಂದ ಅವನ ಸ್ತೋತ್ರಮಾಡ್ದೊ ಜೂಜಾಟೆಲಿ ಏನೇನ್ ನಡ್ತ್ಂತ ಎಲ್ಲ ವಿವರ ಹೇಳೀಂತ ಕೃಷ್ಣ ಕೇಳ್ತ್. ಅದ್ಕೆ ಯುಧಿಷ್ಠಿರ ಮುಂದೆ ನಾವು ಊಟ ಮಾಡಿಕಮೊನೊ. ಮತ್ತೆ ಕುದ್ಕೆಂಡ್ ಎಲ್ಲ ನಿಧಾನಕ್ಕೆ ಮಾತಾಡೊನೊಂತ ಹೇಳ್ತ್. ಹಾಂಗೆ ಆ ಎಲ್ಲೊವೂ ಊಟಕೆ ಹೋದೊ. ಅದರ ಮೊರ್ದಿನ ದೃಷ್ಟಧ್ಯುಮ್ನನೂ ಪಾಂಡವರಲ್ಲಿಗೆ ಬಂದೆತ್ತಿತ್. ಅಂವ ಕೃಷ್ಣನೊಟ್ಟಿಗೆ ಹೇಳಿಕಂಡೆತ್ ಕೃಷ್ಣ! ಪಾಂಡವೆರಿಗೂ ನನ್ನ ತಂಗೆಗೂ ಕುರು ಸಭೆಲಿ ಆದ ಅವಮಾನ, ಹಿಂಸೆಗಳ ಬೇಕಷ್ಟ್ ಮಾಡಿ ಮತ್ತೆ ಕಾಡಿಗೆ ಬರ್ಲಿ ಈ ಅವಸ್ಥೆಗೆ ತಂದ್ ಬುಟ್ಟೊಲೆಂತ ನೆನ್ಸ್ಕನೆಲ್ಲ ಕೋಪ ಕೊದ್ದದೆ. ಅಲ್ಲಿ ಅಷ್ಟ್ ಹಿರಿಯ ಮೊಯಿಂಸೆರ್ಂತ ಹೇಳಿಕಂಬೊವು ಕುಲಮೊರ್ಯಾದೆಗೆ ಮೊಸಿ ಬೊಳಿವಂತೆ ಮಾಡ್ದೊಲಿ. ಇಷ್ಕೆ ಕೇಳೂವೆ ಇಲ್ಲೆಂತಾಗಿ ಹಾಂಗಾತಲೇಂತ ತುಂಬ ಬೇಜಾರ ಆತ್. ನಮ್ಮ ಸೈನ್ಯನೆಲ್ಲ ತಕೆಂಡ್ ಹೋಗಿ ಹಸ್ತಿನಾವತಿಗೆ ಮುತ್ತಿಗೆ ಹಾಕಿ ಅವರ ಸರ್ವಧ್ವಂಸ ಮಾಡಿ ಬುಡೊನೊಂತೆ ಕೋಪ ಕೆರ್ಳಿತ್. ಅದ್ಕೆ ನಮ್ಮ ಅಮಾತ್ಯೆರ್ ವಿವೇಕ ಹೇಳಿ ಪಾಂಡವರ ಅಭಿಪ್ರಾಯ ಕೇಳ್ದ ಮೇಲೆ ಏನ್ ಬೇಕೋ ಅದರ ಮಾಡುದು ಸೆರಿ. ಈಗಳೇ ದುಡುಕುದು ಸೆರಿ ಅಲ್ಲಂತ ಹೇಳಿ ನಿಲ್ಸಿದೊಂತ ಹೇಳ್ತ್.

ದ್ರೌಪದಿ ಕೆಣ್ಣೀರ್ ತುಂಬಿಕೆಂಡ್ ಎಲ್ಲ ವಿವರಗಳ್ನ ಕೃಷ್ಣಂಗೆ ಹೇಳ್ತ್. ನನ್ನ ಆಪತ್ಕಾಲಲಿ ನಾ ನ್ಯಾಯ ಕೇಳ್ಕನ ಆ ಕ್ಷತ್ರಿಯ ರಾಜಸಭೆಲಿ ನನ್ನ ಪರವಾಗಿ ಮಾತಾಡ್ದೊವು ಇದ್ದೊರೇ ಒಬ್ಬ ವಿದುರ ಮತ್ತೊಬ್ಬ ವಿಕರ್ಣ. ಮತ್ತೆ ಅಲ್ಲಿದ್ದ ಹಿರಿಯೊವು ಎಲ್ಲ ತಿಕ್ದೊವು. ಯಾರೊಬ್ಬೊನೂ ಬಾಯ ಬುಟ್ಟಿತ್ಲೆ. ಅದ್ ಕ್ಷತ್ರಿಯ ರಾಜಸಭೆ ಅಲ್ಲ. ಹಿಂಸ್ರ ಪ್ರಾಣಿಗಳ್ಂದ ತುಂಬಿದ ಕಾಡ್ಂದೊಳೂ ಕೀಳ್. ನಮ್ಮ ಈ ಪುಣ್ಯ ಭೂಮಿಲಿ ಹಿರಿಯೊವು ಹೇಳ್ದ ಆದರ್ಶಂತೇಳಿರೆ, ತುರುಗೋಳೊಳ್, ಪೆಣ್ಬುಯ್ಯಲೊಳ್, ಊರಳಿವೊಳ್ ನಂಟನೆದಿರಿನೊಳ್, ಯುದ್ಧ ಮಾಡಿ ಸತ್ತವಂಗೆ ಸ್ವರ್ಗ. ಜೈಸಿದವಂಗೆ ಕೀರ್ತಿಂತ ಹೇಳುವೆ. ಈ ಸಂದರ್ಭೆಲಿ ಹೋರಾಡೊವ ಕ್ಷತ್ರಿಯನೇ ಆಕುಂತಿಲ್ಲೆ. ಯಾವ ಗಂಡ್ಸೇ ಆಗೆಲಿ. ಅಂವ ಎದ್ರ್ಲಿ ಕಾದೊಕ್ಕಾದ್ದ್ ಅವನ ಧೆರ್ಮ. ಹಾಂಗಿರ್ಕನ ಆ ವೀರಾಧಿವೀರರ್ ಹೆಣ್ಣ್, ಒಬ್ಬ ಸಾಮ್ರಾಜ್ಞಿ, ರಾಜಸೂಯ ಯಾಗೆಲಿ ದೀಕ್ಷಾ ಬದ್ಧಳಾಗಿದ್ದ ಪಾವನಳಾದವಳು ಆದರೂ ರಜಸ್ವಲೆಯಾಗಿ ಶಾರೀರಕ ಕ್ಲೇಶ ತೊಂದರೆಗಳ್ಂದ ಅಬಲೆಯಾಗಿದ್ದ ನನ್ನ, ತುಂಬಿದ ರಾಜ ಸಭೆಲಿ ಎಳ್ಕೆಂಡ್ ಬಂದ್, ದಾಸಿ. ದಾಸಿಂತ ಕರ್ದ್, ಸೀರೆನ ಸೆಳಯುಕನ.

ನೀನಲ್ಲದಿದ್ದರೆ ನಂಗೆ ರಕ್ಷಕರ್ ಯಾರಿದ್ದೊ? ಇನ್ನ್ ಮುಂದೆಗಾದರೂ. ನಂಗೆ ನೀ ಹೊರ್ತು ರಕ್ಷಕರಿಲ್ಲೆ ನೀನೇ ಕಾಪಾಡೊಕುಂತೇಳಿ ಅವನ ಪಾದಗಳ ಗಟ್ಟಿ ಹಿಡ್ಕಂಡತ್.

ಕೃಷ್ಣ "ಸೋದರೀ, ಅಳ್ಬೇಡ. ಇನ್ನ್ ಅಳುವ ಸರದಿ ನಿಮ್ಮ ಶತ್ರುಗಳ ಹೆಣ್ಣ್‌ಕಳ್ದ್. ಹಸ್ತಿನಾವತಿಲಿ ಆ ಮೋಸದ ಜೂಜು ನಡಿಯಕನ ನಾ ದ್ವಾರಕೆಲಿ ಇತ್ತ್‌ಲೆ. ಯಾದವರ ವೈರಿಯಾಗಿದ್ದ ಶಾಲ್ವಂತೇಳಂವ ನಾ ದ್ವಾರಕೆಲ್ಲಿ ಇಲ್ಲದಿರುವ ಕಾಲರಲಿ ಅಲ್ಲಿಗೆ ಮುತ್ತಿಗೆ ಹಾಕಿ ಕೆಲೊವು ರಾಜಕುಮಾರರ ಕೊಂದ್ ಹೋಗಿತ್ತ್. ಅವನ ಇಸಿಕೆ ಆಗರದ್ಂತ ಅವನ ಮೇಲೆ ದಂಡೆತ್ತಿ ಹೋಗಿದ್ದೆ. ನಾ ದ್ವಾರಕೆಲಿ ಇದ್ದಿದ್ದರೆ ನಿನ್ನ ರಕ್ಷಣೆಗೆ ಓಡಿ ಬಂದ್ ಆ ದುಷ್ಟಕೂಟನ ನಾಶ ಮಾಡದಿರಿಕಿತ್ತ್‌ಲೆ. ವೀರಾಧಿವೀರರ್‌ಂತ ಹೆಸರ್ ಮಾಡ್ದ ನಿನ್ನ ಗಂಡಂದರೆ ಹಾಂಗೆ ಮಾಡಿಕೆ ಸಾಧ್ಯ ಇತ್ತ್. ಅದರೆ ಅವು ಏನೂ ಮಾಡದೆ ಕೈ ಕಟ್ಟಿಕಂಡ್ ಕುದ್ದೊ. ಹಾಂಗಿರ್ಕನ ಅವು ಹೇಡಿಗಂತ ನಿಂದೆಗೊಳಗಾಮಲೆನೊ? – ದ್ರೌಪದಿ ಕೇಳ್ತ್. "ಅವ್ಕೆ ಹಾಂಗೆ ಮಾಡಿಕೆ ಬೊತ್ತದೆ ಹಾಂಗೆ ಇದ್ದರದಲ್ಲ. ಧರ್ಮಕ್ಕೆ ಕಟ್ಟ್ ಬಿದ್ದ್ ಅವು ಹಾಂಗಿರಕಾತ್ಂತ" ಕೃಷ್ಣ ಹೇಳ್ತ್. ಇದೆಂಥ ಧರ್ಮ? ತನ್ನ ಹೆಣ್ಣ್‌ನ ಮೇಲೆ ಅನ್ಯ ಪುರುಷ ಕೈಮಾಡ್‌ಕನ ಸುಮ್ಮನೆ ನೋಡಿಕಂಡ್ ಕುದ್ದುರೊಂವ ಗಂಡ ಅಲ್ಲ ಅಂವ ದಂಡ. ಇಂಥ ಸಮಿಯಲಿ ಗಂಡಾದಂವ ತನ್ನ ಕೈ ಮೀರಿ ಹೋರಾಡುದೇ ಧರ್ಮಂತ ಧರ್ಮ ಶಾಸನಕ್ಕೆ ಈ ಒಂದು ಪಂಕ್ತಿನ ಹೊಸ್ತಾಗಿ ಸೇರ್‍ಸೊಕು. ಅಲ್ಲದೆ ಆ ರಾಜ ಸಭೆಲಿ, ಪ್ರಸಿದ್ಧ ಕುಲವಧುವೊಂದರ ಮಾನಹಾನಿಯಾದರ ನೋಡಿಕಂಡ್ ನಪುಂಸಕರ ಹಾಂಗೆ ಕುದ್ದಿದ್ದ ಸಮಸ್ತ ಗಂಡ್ ಜಾತಿಗೂ ಧಿಕ್ಕಾರ ಹಾಕೊಕು. ಒಬ್ಬೊಬ್ಬಂಗೆ ಸೀರೆ ಮತ್ತ ಬಳೆಗಳ ಕಾಣಿಕೆ ಕಳ್ಸೊಕು. ದ್ರೌಪದಿನ ದುಃಖ ಮತ್ತೆ ಕೋಪ ಬೆರ್‍ಸಿದ ಮಾತ್‌ಗಳ ಕೇಳಿ ಕೃಷ್ಣನ ಮನ್ಸಿಗೆ ತುಂಬ ಬೇನೆ ಆತ್. ಆ ಸಂಕಟಲಿ ಅವಂಗೆ ಕೌರವರ ಮೇಲೆ ಕೋಪ ಏರಿಕಂಡೇ ಬಾಕೆ ಸುರಾತ್. ದ್ರೌಪದಿನ ಕರ್ದ್ ಹೇಳ್ತ್. "ಸೋದರೀ ನಿಂಗಾದ ಅನ್ಯಾಯ ಹಾಂಗೆ ಅವಮಾನದ ಆಳ ಅಗಲ ಎಷ್ಟ್ಂದ್ ನಂಗೆ ಗೊತ್ತಾತ್. ನನ್ನ ಪ್ರಾಣದಾಂಗಿರುವ ನನ್ನ ಬಂಧುಗಳಿಗೆ ಈ ತರದ ಕಷ್ಟಕ್ಕೆ ಇಳ್ಸಿಕ್ಕೆ ಕಾರಣಕರ್ತರಾದ ಆ ನಾಲ್ಕ್ ಜನರ ಈಗಂದೀಗಳೇ ನಾಶಮಾಡಿ ಬುಟ್ಟನೇಂತ ಆವೇಶಲಿ ಹೇಳ್ತ್.

ಆಗ ಅರ್ಜುನ ಕೈ ಮುಕ್ಕಂಡ್. "ಕೃಷ್ಣ ಶಾಂತನಾಗ್ ಶಾಂತನಾಗ್. ನಿಂಗೆ ಕೋಪ ಬಂದರೆ ಈ ಭೂಮಂಡಲನೇ ಸುಟ್ಟ್ ಕರ್‌ಂಟಿ ಹೋದು. ಹೀಂಗೆ ಹೇಳಿ ನಾನಾ ರೀತಿಂದ ಸ್ತುತಿ ಮಾಡಿ ಅವನ ಶಾಂತನಾಗುವ ಹಾಂಗೆ ಮಾಡ್ತ್. ಮತ್ತೆ ಕೃಷ್ಣ ಪಾಂಡವರ ಮಕ್ಕ. ಕಾಡ್‌ಲಿ ಕಷ್ಟಪಡುವ ಅಗತ್ಯ ಇಲ್ಲೆ. ಅಲ್ಲದೆ ಅವ್ಕೆ ಸರಿಯಾದ ಕ್ಷತ್ರಿಯ ವಿದ್ಯಾಭ್ಯಾಸಕ್ಕೆ ಇಲ್ಲಿ ಅವಕಾಶ ಇಲ್ಲೆ. ಅದರ್‌ಂದಾಗಿ ಅಭಿಮನ್ಯು ಮತ್ತೆ ಸುಭದ್ರೆನ ನಾ ದ್ವಾರಕೆಗೆ ಕರ್ಕಂಡ್ ಹೋನೆ. ಧೃಷ್ಟದ್ಯುಮ್ನ ದ್ರೌಪದಿನ ಮಕ್ಕಳ ಪಾಂಚಾಲಕ್ಕೆ ಕರ್ಕಂಡ್ ಹೋಗಲೀಂತ ಹೇಳ್ತ್. ಅದ್ಕೆ ಎಲ್ಲೊವೂ ಒಪ್ಪಿಕಂಡೊ. ಇವೆಲ್ಲ ಕಾಡ್‌ಲಿ ಕಷ್ಟಪಡ್‌ಕನ ನಾ ಮಾತ್ರ ದ್ವಾರಕೆಲಿ ಅರಮನೆಲಿ ಹೇಂಗೆ ಸುಖಲಿರ್ದ್ಂತ ಸುಭದ್ರೆಗೆ ತುಂಬ ದುಃಖ ಆತ್. ದ್ರೌಪದಿ ಅದರ ಸಮಾಧಾನ ಮಾಡ್ತ್, ತನ್ನ ಮಕ್ಕಳ ಬುಟ್ಟಿರೆಕಾದುಲ್ಲೇಂತೇಳಿ ದುಃಖ ಮನ್‌ಸ್‌ಲಿ

ತುಂಬಿಕೆಬಿಡಿದ್ದರೂ ಅಷ್ಟೆ ಹಿತವಚನ ಹೇಳಿ ಅವರ ಅಣ್ಣನೊಟ್ಟಿಗೆ ತೊಪ್ಪುಮನೆಗೆ ಕಳಿಸ್ಬಿಟ್.

ಪಾಂಡವರ್ ಕಾಡ್‌ಲಿ ಬಾವ ಬವಣೆಗಳ್‌ಂದ, ದುರ್ಯೋಧನ, ದುಃಶಾಸನ, ಕರ್ಣ, ಶಕುನಿಗಳೆಳಿಗೆ ಇನ್ನೂ ತೃಪ್ತಿ ಆತ್‌ಲೆ. ಅವು ಮತ್ತಷ್ಟ್ ಕಷ್ಟಪಡೊಕುಂತ ಹೇಳಿಕೆಂಡ್ ಇರ್‌ತಿದ್ದೋ ಗೆಂಡೆ, ಗೆಡ್ಡೆ ಹಣ್ಣ್ ಹಂಪಲ್‌ಂತ ಅರೆ ಬರೆ ತಿಂದ್‌ಕೆಡ್, ಸೊರ್ಗಿ ಹೋಗಿ, ಕೊರ್ಗಿ ಹದಿಮೂರು ವೊರ್ಸ ಕಳೆಯಕನ ಕ್ಷೀಣ ಬಲರಾಗಿದ್ದ್ ಯುದ್ಧಕ್ಕೆ ಬಂದರೆ ಅವು ಸುಲಭಲಿ ಸೋತ್ ದೆಸೆಗೆಟ್ಟ್ ಹೋವೊಂತ ಹಗಲ್ ಕನ್‌ಸ್ ಕಾಂಬತಿದ್ದೊ. ಯುಧಿಷ್ಠಿರಂಗೆ ಸೂರ್ಯ ಅಕ್ಷಯ ಪಾತ್ರೆನ ಕೊಟ್ಟುಟು ಗಡ. ಅದರ್‌ಂದ ಎಷ್ಟ್ ಜೆನಿಗೆ ಬೇಕಾದರೂ ಮೃಷ್ಟಾನ್ನ ಭೋಜನ ಸಿಕ್ಕಿದೆ ಗಡ. ದ್ರೌಪದಿ ತನ್ನ ಊಟ ಮುಗ್ಸಿ ಆ ಪಾತ್ರನ ತೊಳ್ದ್ ಇಸಿದ ಮೇಲೆ ಮತ್ತೆ ಆ ದಿನಕೆ ಆಹಾರ ಸಿಕ್ಕಿಕಿಲ್ಲೆ ಗಡಂತ ಕೇಳಿ ಅಷ್ಟೆ ಆಶ್ಚರ್ಯ ಆತ್. ಇದರ್ಲೂ ಇವರ ಸಿಕ್ಕ್‌ಸಿ ಹಾಕೊಕುಂತ ಒಂದು ಯೋಜನೆ ಹಾಕಿದೊ. ಒಮ್ಮೆ ದೂರ್ವಾಸ ರುಸಿ ಹಸ್ತಿನಾವತಿಗೆ ಬಂದ್, ಏನೋ ಕಾರ್ಯಾರ್ಥ ಅರಮನೆಲಿ ಹಣ್ಣ್‌ದಿನ ನಿತ್ತೆತ್.

ಅವಂಗೆ ಅಲ್ಲಿ ಒಳ್ಳೆ ಸತ್ಕಾರ, ಉಪಚಾರಾದಿಗ ನಡ್ದೋ ಅಂವನ ಕೋಪ, ಅಂವ ಕೊಡುವ ಸಾಪ ಎಲ್ಲಿ ಪ್ರಸಿದ್ಧವಾಗಿದ್ದ್ ಎಲ್ಲೊವೂ ಅದ್ಕೆ ಹೆದುರೊವೆ. ಅಂವಂಗೆ ತೃಪ್ತಿ ಆದರೆ ಎಂಥ ವರಗಳ್ನೂ ಕೊಡ್ತು. ಹಾಂಗೆ ಅಂವ ಹೊರ್ಡ್‌ಕನ ದುರ್ಯೋಧನನೊಟ್ಟಿಗೆ ನಿಂಗೆ ಯಾವ ವರಬೇಕು? ಕೇಳಿಕಂತ ಹೇಳ್ತ್, ಆದಿಕೆ ದುರ್ಯೋಧನ ಕೇಳ್ದ್ ಪಾಂಡವರ ಹೇಂಗಾರ್ ಮಾಡಿ ಕಷ್ಟಕ್ಕೆ ಬೀಳ್ಸೊಕುಂತ. ಪಾಂಡವರ್ ಊಟ ಮಾಡಿ, ದ್ರೌಪದಿನೂ ತನ್ನ ಊಟ ಮುಗ್ಸಿ ಅವರ ಅಕ್ಷಯ ಪಾತ್ರೆನ ತೊಳ್ದ್ ಇಸಿದ ಮೇಲೆ ನೀವು ಅಲ್ಲಿಗೆ ನಿಮ್ಮ ಶಿಷ್ಯರ ಸಮೇತ ಹೋಗಿ 'ನಾವ್ಗೆ ಊಟ ಕೊಡಿಂತ' ಕೇಳೋಕುಂತ ಹೇಳ್ತ್.

ದುರ್ಯೋಧನನ ಕೆಟ್ಟ ಯೋಚನೆಂತೇಳಿರೆ, ದ್ರೌಪದಿ ತನ್ನ ಊಟ ಮುಗ್ಸಿ ಪಾತ್ರೆನ ತೊಳ್ದ್ ಹಾಕಿದ ಮೇಲೆ ಅಕ್ಷಯ ಪಾತ್ರೆ ಖಾಲಿ ಆದೆ. ಮತ್ತೆ ಅಂದಿಗೆ ಊಟ ಸಿಕ್ಕಿಕಿಲ್ಲೆ. ಆಗ ದೂರ್ವಾಸಂಗೆ ಸಿಟ್ಟ್ ಬಂದ್ ಅಷ್ಟೆ ಸಾಪಕೊಡುದು. ಇದರ ಮನ್ಸ್‌ಲೇ ನೆನ್ಸಿಕೆಂಡ್ ಆನಂದ ಪಟ್ಟತ್. ದೂರ್ವಾಸನೂ ಅವನ ಶಿಷ್ಯರೊಟ್ಟಿಗೆ ಬಂದ್, ಯುಧಿಷ್ಠಿರನ ನೋಡಿ ನಾವ್ಗೆ ಇಷ್ಟ್ ಜೆನಿಗೆ ಊಟ ಕೊಡೊಕುಂತ ಕೇಳ್ತ್. ಯುಧಿಷ್ಠಿರ ನೀವೆಲ್ಲ ಮಿಯ್ಕಂಡ್ ಬನ್ನಿಂತ ಹೇಳ್ತ್. ಒಳಗೆ ಬಂದ್ ನೋಡಿರೆ ಅಕ್ಷಯ ಪಾತ್ರೆ ಖಾಲಿ. ದ್ರೌಪದಿಗೆ ಏನ್ ಮಾಡುದೊಂತ ಗಾಬ್ರಿ ಆತ್. ಇರುದೊಂದೇ ದಾರಿ. ಕೃಷ್ಣನೇ ಗೆತಿಂತೇಳಿ ಅವನ ಸ್ತುತಿಮಾಡ್ತ್. ಅಂವನೂ ಪ್ರತ್ಯಕ್ಷ ಆತ್. ಇವರ ಹಣ್ಣ್ ಆದ್ದೊಕುಂತೇಳಿ, ದ್ರೌಪದಿನೊಟ್ಟಿಗೆ, "ನಾನೂ ಓಡೋಡಿ ಬಂದೆ. ನಂಗೂ ಹಸಿವಾದೆ. ಏನಾರ್ ಕೊಡು". "ಅಯ್ಯೋ ಅಣ್ಣಾ! ನಾ ಏನ್ ಮಾಡುವೆ, ನಾನೂ ಊಟ ಮುಗ್ಸಿ ಬುಟ್ಟೆ. ಈಗ ಏನೂ ಒಳ್ತ್‌ಲೆ ಅಣ್ಣಾ. "ಯಾಗೋಳು ಬಾವುಕೆ ಇದೇ ಗೋಳು. ತಂಗೆನ ಮನೆಗೆ ಬಾವ ಅಣ್ಣಂಗೆ ಮಾಡುವ ಸತ್ಕಾರ ಇಷ್ಟೆನೊ? 'ಅಯ್ಯೋ ಅಣ್ಣಾ! ನನ್ನ ಮಾತ್‌ಲಿ ಕೊಲ್ಲ್‌ಬೇಡ ಬೇಕರೆ ನಾ ಆ ಅಕ್ಷಯ ಪಾತ್ರನೇ ತಂದ್ ತೋರ್ಸ್ನೆ."

“ತಂಬ, ತಂಬ ನೋಡಿನೆ”. ದ್ರೌಪದಿ ಪಾತ್ರನ ತಂದ್ ಕೃಷ್ಣನ ಕೈಗೆ ಕೊಟ್ಟಳೆತ್. ಕೃಷ್ಣ ಅದರ ತಿರ್ಗ್‌ಸಿ, ತಿರ್ಗ್‌ಸಿ ನೋಡ್ತ್. ‘ನಂಗೆ ಬೇಕಾದ್ದ್ ಇಲ್ಲಿ ಒಳ್ದುಟುಂತೇಳಿ ಪಾತ್ರದ ಕಂಟ ಪ್ರದೇಶಲಿದ್ದ ಒಂದು ಅಗುಳು ಅಂಟಿಕಳೆಂಡ್ ಇದ್ದದರ ತೆಗ್ದ್ ತೋರ್ಸಿ ಅದರ ಬಾಯೊಳಗೆ ಹಾಕಿ ನೋಣ್ಸಿಕಂಡ್ ಚಪ್ಪಿದಾಂಗೆ ಮಾಡಿ, ನುಂಗಿ, ಡರ್ರ್‌ಂತ ತೇಗ್ ಬುಟ್ಟಳೆತ್. ಅತ್ತ ಮೀಯಕೆ ಹೋಗಿದ್ದ ದೂರ್ವಾಸ ಮತ್ತೆ ಅವನ ಶಿಷ್ಯರ ಊಟಕೆ ಬನ್ನೀಂತ ಕೃಷ್ಣ ನಿಮ್ಮ ಕರಿಯಕೆ ಹೇಳಿಟುಂತ ಹೆಗಲ್ ಮೇಲೆ ಗದೆನ ಇಸಿಕಳೆಂಡ್ ಭೀಮ ಬಂದ್ ಕರಿಯಕನ ದೂರ್ವಾಸ ಮತ್ತೆ ಅವನ ಶಿಷ್ಯರ್ ಗಂಟ್ಲಿಗೆ ಬಾವಷ್ಟ್ ತಿಂದ ಹಾಂಗೆ, ಉಬ್ಬರ್ಲಿದ ಹೊಟ್ಟೆನ ಪೂಜಿಕಳೆಂಡ್, ಡರ್ ಡರ್‌ಂತ ತೇಗ್ ಬುಟ್ಟ್‌ಕಳೆಂಡ್ ಸೇಂಕಿಕಳೆಂಡ್ ಇದ್ದೊ. ಅಯ್ಯೋ ಮಾರಾಯ, ಬೇರ್ ನೀರುಂಡರೆ ಗೆಲ್ಲ್‌ನ ಎಲೆಗಳೆಗೆ ಮುಟ್ಟಿದ. ಹಾಂಗೆ ನಿಮ್ಮ ಕೃಷ್ಣಂಗೆ ಒಂದು ತುಳಸೀದಳ ಬಿಂದು ಗಂಗೋದಕನ ಅರ್ಪಿಸಿರೆ ಸಾಕ್. ಇಡೀ ಲೋಕದವ್ರ್ಕ ಹೊಟ್ಟೆ ತುಂಬಿದೆ. ಅದೇನೋ ಆ ಗೋವಿಂದಂಗೇ ಗೊತ್ತು. ಈಗ ಬನ್ನಿ ಊಟ ಮಾಡಿ. ಇಲ್ಲದಿದ್ದರೆ ಮಾಡ್ದ ಅಡಿಗೆ ಎಲ್ಲ ಹಾಳಾದಂತ ಭೀಮ ಗದೆನ ತಿರ್‌ಗಿಸಿಕಳೆಂಡ್ ಒತ್ತಾಯ ಮಾಡ್ತ್ ಆಗ ದೂರ್ವಾಸ ಹೇಳ್ತ್. ದಮ್ಮಯ್ಯ ಮಾರಾಯ ನಮ್ಮೊದ್ ತೊಪ್ಪಾತ್. ಅದಿಕೆ ಭೀಮ ಹೇಳ್ತ್. ನೀವು ಓಂಗೆ ಮಾಡೊಕುಂತ ಪಿತೂರಿ ಮಾಡುವ ಹಾಂಗೆ ನೀವ್ಗೆ ಹೇಳಿ ಕೊಟ್ಟಂವ ಯಾರ್.? ಲೋಕಕ್ಕೆ ಒಳ್ಳೆದ್ ಮಾಡುವ ನೀವು, ಅಮಾಯಕಳೆರಿಗೆ ಅನ್ಯಾಯ ಮಾಡ್‌ಂತೇಳುವರ, ಕೇಡ್‌ಜನ ಮಾತ್‌ಕೇಳಿಕಳೆಂಡ್ ಓಂಗೆ ಮಾಡಿರೆ ನೀವು ಮಾಡುವ ತಪಸ್ಸಿದ್ದಿ ನೀವ್ಗಾದೋ? ನನ್ನ ಹಸ್ತಿನಾವತಿಲಿ ಪೋಲ್ಜ್ ನೋಡಿಕಂಡದ್ದೈಕೆ ಮೆಚ್ಚಿ ನೀ ಬೇಕಾದ ವರ ಕೇಳಿಕಂತ ಹೇಳ್‌ಕನ, ಅಂವ ಈ ರೀತಿ ಮಾಡಿಕೆ ಪ್ರೇರೇಪಿಸಿತ್. ನಾ ಅದಿಕೆ ಪಶ್ಚಾತ್ತಾಪ ಪಟ್ಟನೆ. ಈಗ ಕೃಷ್ಣನ ನೋಡಿಕೆ ನಾಚಿಕೆಣೆ. ಅಂವ ನಿಮ್ಮ ಕಡೆಗೆ ಇರ್‌ಕನ ನೀವ್ಗೆಯಾಗೋಳು ಜಯ. ನೀವ್ಗೆಲ್ಲೊಷ್ಟೆ ಶುಭವಾಗಲಿಂತ ಹೇಳಿ ರುಸಿ ಅಲ್ಲಿಂದ ಕಾಲ್ತೆಗ್ತ್.

## ಸೈಂಧವಂದ ದ್ರೌಪದಿನ ಅಪಹರಣ

ಪಾಂಡವಳೆರ್ ಕಾಡ್‌ಲಿ ವಾಸ ಮಾಡಿಕಳೆಂಡ್. ವಾಸಕ್ಕೆ ಒಂದು ಸಣ್ಣ ಗುಡಿಸಲ್ ಮಾಡಿಕಳೆಂಡ್ ಇದ್ದೊ. ಅದ್ ಒಂದು ರುಸಿಗಳ ಆಶ್ರಮ ಇದ್ದಾಂಗೆ ಕಾಂಬತ್ತಿತ್. ಕಾಡಾಗಿದ್ದರೂ ಅಲ್ಲಿಂದಾಗಿ ಬೇರೆ ಊರಿಗೆ ಹೋಕೆ ಇರುವ ಒಂದು ಸಂಪರ್ಕ ದಾರಿನೂ ಅದರ ಪಕ್ಕಳೆಲೆ ಇತ್ತ್.

ಒಂದು ದಿನ ಹಗ್‌ಲ್‌ನ ಊಟ ಮುಗ್ಸಿ, ಐದ್ ಜನ ಅಣ್ಣ ತಮ್ಮಂದಳೆರೂ ಕಾಡ್‌ನೊಳಗೆ ಬೇಟೆಯಾಡಿಕೇಂತ ಹೋದೊ. ಬಿಡಾರಳೆಲಿ ಧೌಮ್ಯರೂ, ದ್ರೌಪದಿನೂ ಮಾತ್ರ ಇದ್ದೊ. ಹಜ್ಜಾ ಹೊತ್ತುಲಿ ಕೆಲಳೆವು ಸೈನಿಕರ ದಳೆಂಡ್ ಆ ದಾರಿಲಿ ಹೋತು. ಓಂದೆಂದ ಒಂದು ರಥನೂ ಬಾತಿತ್. ಅದರ್ಲಿ ಒಬ್ಬ ದಳೆಡಿಯ ಕುದ್ದ್‌ಕಳೆಂಡಿತ್. ಅಂವ.

ಇವರ ಬಿಡಾರದ ಹಕ್ಕಲೆ ರಥ ನಿಲ್ಸಿ ಇಳ್ಡ್ ಬಾತ್. ಎದ್ರ್ ಇದ್ದ ಧೌಮ್ಯರ್ 'ಯಾರ್ ನೀ'ಂತ ಕೇಳ್ದ್ರ್ಕೆ, 'ನಾ ಸಿಂಧೂ ದೇಸದ ಒಡೆಯ. ಹಸ್ತಿನಾವತಿನ ದುರ್ಯೋಧನನ ತಂಗೆ ದುಶ್ಶಳೆನ ಗಂಡ. ಹಸ್ತಿನಾವತಿಂದ ನನ್ನ ಊರಿಗೆ ಹೋತಿದ್ದೆ. ಕುಡಿಯಕಾತ್, ಹಾಂಗ ಹಜ್ಜ್ ನೀರ್ ಸಿಕ್ಕುದೋಂತ ಬಂದೆ. ಇದ್ ಯಾರ ಬಿಡಾರ? ಇಷ್ಟ್ ದಿನ ಇಲ್ಲಿ ಏನೂ ಇತ್ತ್‌ಲೆಂತ ಸೈಂಧವ ಆಶ್ಚರ್ಯಲಿ ಕೇಳ್ತ್.

ಅದಿಕೆ ಧೌಮ್ಯರ್ "ವನವಾಸಕ್ಕಂತ ಬಂದ ಪಾಂಡವರ್ ಇಲ್ಲಿ ಈಗ ತತ್ಕಾಲದ ಬಿಡಾರ ಮಾಡಿಕಂಡ್ ಒಳೊಂ"ತ ಹೇಳ್ದೊ. ಅದಿಕ್ಕೆ ಸೈಂಧವ "ಎಲ್ಲಿ ನಮ್ಮ ಭಾವಂದರ್ ಯಾರೂ ಕಾಂಬೊದುಲೆ. ಎಲ್ಲ ಎಲ್ಲಿಗೆ ಹೋಗೊಳೋ?" ಸೈಂಧವನ ಪ್ರಶ್ನೆ. "ಅವೆಲ್ಲ ಬೇಟೆಯಾಡಿಕೆಂತ ಕಾಡ್‌ನೊಳಗೆ ಹೋಗೊಳೊ." ಧೌಮ್ಯರ್ ತಿಳ್ಸಿದೊ. "ದ್ರೌಪದಿನೂ ಅವರೊಟ್ಟಿಗೇ ಹೋಗುಟೊ?" ಹೆಣ್ಮಕ ಎಲ್ಲಾರ್ ಬೇಟೆಗ ಹೋದುಟ್ಟೊ? ಅದ್ ಮನೆ ಒಳಗೆ ಉಟ್ಟು." ಸರಿ. ಹಂಗಾರೆ ನಾ ಹೋಗಿ ಅವರ ಕ್ಷೇಮ ವಿಚಾರ್ಸಿ ನೀರ್ ಕೇಳಿ ಕುಡ್ಡ್ ಬನ್ನೆಂತ ಒಳಗೆ ಕಾಲಿಸಿತ್. ಸಂಬಂಧಂವ ಇಂವ ದ್ರೌಪದಿನ ನಾದಿನಿನ ಗಂಡ ಆದ್ದರ್ಂದ, ಅದಿಕೆ ಸೋದರ ಸಮಾಂತೇಳುವ ಕಾರಣಂದ ರುಸಿ ಅವಂಗೇನೂ ಅಡ್ಡಿ ಹೇಳ್‌ತ್‌ಲೆ. ಸೈಂಧವ ನೀರ್ ಕೇಳಿ ಕುಡ್ಡ್ ಮಾತಿಗೆ ಸುರು ಮಾಡ್ತ್. ಮತ್ತೆ ತನ್ನ ಹಕ್ಕಲೆ ಇದ್ದ ವಸ್ತ್ರಾಭರಣಗಳ ತೆಗ್ದ್ ಕೊಟ್ಟೆತ್. ಅದಿಕೆ ದ್ರೌಪದಿ ಹೇಳ್ತ್. ನನ್ನ ಗಂಡಂದರ್ ಇಲ್ಲದಿರ್‌ಕನ ಪರಪುರುಷರ್ ಕೊಡುವ ವಸ್ತುಗಳ ನಾ ಮುಟ್ಟಕಿಲೆಂತ ಹೇಳ್ತ್. 'ರಾಣಿಯಾಗಿ ಮೆರಿಯಕಾದ ನಿನ್ನಂತ ಕೋಮಲ ಸುಂದರಿ ಈ ಬವಣೆಲಿ ಬೊದ್ಕುದರ ನೋಡಿರೆ ನನ್ನ ಮನ್ಸ್ ಬೆಂದದೆ. ನಾ ಪರಪುರುಷ ಆದರೆ ನಿನ್ನ ಸ್ವಂತ ಪುರುಷನೇ ಆವಾಂಗ ನಾ ಮಾಡಿನೆ. ಈ ಕಾಡ್‌ಲಿ ಹೀಂಗೆ ಬಂಗ ಬಂದ್‌ಕಂಡ್ ಬೊದ್ಕುದರ್ಂದ ಇವರ ಬುಟ್ಟ್ ನನ್ನೊಟ್ಟಿಗೆ ಬಾ. ನಿನ್ನ ನನ್ನ ರಾಣಿಯಾಗಿ ಮಾಡಿಕಣೆ. ನೀ ಸುಕ ಸಂಪೊತ್ತುಲಿ ಮೆರಿಯಕ್ ಏನ್ ಹೇಳಿಯಂತ ಕೇಳ್ತ್. "ನೀ ನಂಗೆ ನೇರಲಿ ಅಣ್ಣ ಆಕುಂತೇಳ್ದರ ಮರ್ತೊಳ. ನನ್ನ ಗಂಡಂದರ್ ಇಲ್ಲದ ಸಮಿಯಲಿ ಬಂದ್ ಇಂತ ನೀಚ ಮತಾಡುವ ನೀ ಬೇಗ ಇಲ್ಲಿಂದ ಹೊರ್ಟ್ ನಿನ್ನ ದಾರಿ ಹಿಡ್ಕಂಡ್ ಹೋದರೆ ನೀ ಒಳಿವ. ಇಲ್ಲದಿದ್ದರೆ ನಿನ್ನ ಮುಂಡದ ಮೇಲೆ ನಿನ್ನ ರುಂಡ ಒಳಿಯಕಿಲೆ. ಬೇಗ ಹೊರ್ಡ್, ನೀಚ!" ದ್ರೌಪದಿ ಮಾತ್‌ನ ಕಿಡಿ ಸೂಸಿತ್ ಧೌಮ್ಯರ ಕರ್ದ್, "ಆಚಾರ್ಯರೇ ಈ ದುಷ್ಟನ ಇಲ್ಲಿಂದ ಬೇಗ ಹೊರಗೆ ಹಾಕಿ"ಂತ ಹೇಳ್ತ್.

ಇಷ್ಟ್ ಹೇಳ್‌ಕನ ಸೈಂಧವ ದ್ರೌಪದಿನ ಹಿಡ್ದ್ ನೇಚಿಕಂಡ್ ಹೋಗಿ ರಥಲಿ ಕುದ್ದ್ರ್ಸಿಕಂಡ್ ತಾನೂ ಹತ್ತಿ ಕುದ್ದ್‌ಕಂಡ್ ಹೊರ್ಟೆತ್. ಧೌಮ್ಯರ್ ಹಿಂದೆಂದ ಬೊಬ್ಬೆ ಹೊಡ್ಕಂಡ್ ಓಡಿರೂ ಏನೂ ಪ್ರಯೋಜನ ಆತ್‌ಲೆ. ಇನ್ನ್ ಪಾಂಡವರ್ನ ಕರಿಯೋನೊಂತೇಳಿ ಕಾಡೊಳಗೆ ಹೋಗಿ ಗಟ್ಟಿಯಾಗಿ ಕರಿಯಕೆ ಸುರುಮಾಡ್ದೊ. ಪುಣ್ಯಕೆ ಇವರ ಕೂಗುಕೇಳಿ ಪಾಂಡವರ್ ಎಲ್ಲ ಓಡಿ ಬಂದ್ ಸಂಗತಿ ತಿಳ್ಕೊ. ಭೀಮ ವಾಯುಪುತ್ರ ಅಲ್ಲೊ? ವೇಗಲಿ ಅವನ ಮೀರ್ದೊವ್ರು ಇಲ್ಲೆ. ಹೀಂಗೇ ಭೀಮ ವೇಗವಾಗಿ

ಓಡಿ. ಸೈಂಧವನ ಜೆನ್ಕಟ್ಟಿ ಹಿಡ್ದ್. ಅವಂಗೆ ಬೆನ್ನ್ ಹಣ್ಣಾವಂಗೆ ನಾಲ್ಕ್ ಗುದ್ದಿ ಅವನ ಜುಟ್ಟುಲಿ ಹಿಡ್ಕಂಡ್ ಎಳ್ಕಂಡ್ ಬಾತ್. ದ್ರೌಪದಿನ ರಥಲಿ ಕುದ್ದ್‌ಕಂಡ್ ಬಾವಾಂಗೆ ಮಾಡ್ತ್. ಬಂದವನೇ ಸೈಂಧವನ ಯುಧಿಷ್ಠಿರನ ಕಾಲ್ ಬುಡಲಿ ಬೀಳುವಾಂಗೆ ನೂಕಿ ಹಾಕಿತ್. ಯುಧಿಷ್ಠಿರ ಹೇಳ್ತ್. "ಇಂವ ಮಾಡ್ದ ಅಪರಾಧಕ್ಕೆ ಅವನ ತಲೆನೇ ತೆಗಿಯೊಕು. ಹಾಂಗೆ ಮಾಡಿರೆ ನಮ್ಮ ಕುಲಕ್ಕೆ ಸೇರ್ದ ಒಂದೇ ಒಂದು ತಂಗೆ ದುಶ್ಶಳೆ ವಿಧವೆಯಾದೆ. ಹಾಂಗೆ ಆದರೆ ವೃದ್ಧರಾಗಿರುವ ಧೃತರಾಷ್ಟ್ರ ಮತ್ತೆ ದೊಡ್ಡಮ್ಮ ಗಾಂಧಾರಿಗೆ ತಡಿಯಕೆ ತೀರದ ಸಂಕಟ ಉಂಟು ಮಾಡ್ದಾಂಗೆ ಆದೆ. ಹಾಂಗೆ ಮಾಡುದು ಬೇಡ. ಆದರೆ ಇಂವ ಮಾಡ್ದ ತೊಪ್ಪುನ ಅಂವ ಎಂದೂ ಮರಿಯಕೆ ಆಗೇದ್. ಮರಣ ದಂಡನೆಂದಲೂ ದೊಡ್ಡ ಶಿಕ್ಷೆ ಆದಾಗಿರೊಕು. ಹಾಂಗೆ ಏನಾರ್ ಮಾಡ್"ಂತ ಭೀಮಂಗೆ ಹೇಳ್ತ್. ತಲೆ ಬೋಳ್ಸಿ ಕತ್ತೆ ಮೇಲೆ ಕುದ್ದ್‌ರ್ಸಿ, ಮೆರವಣಿಗೆ ಮಾಡುದು ಸಾಧಾರಣ. ಆತ್. ಅದ್ ಬೇಡ. ಇದೇ ಸರಿಂತೇಳಿ, ಅರ್ಜುನ, ನಕುಲ ಸಹದೇವರ ಕರ್ದ್, ಸೈಂಧವನ ಮೊಸ್ಟದಾಂಗೆ ಹಿಡ್ಕಣೆಂತೇಳಿ ಅವನ ತಲೆನ ಐದ್ ಕಡೆಂದೊಳು ಪೂರ್ತಿ ಬೋಳ್ಸಿ ಮತ್ತೆ ಐದ್ ಜೆಡೆಗಳಿಗೂ ಕಾಡ್ ಹೂಗಳ ಮುಡ್ಸಿ, ಚಿಪ್ಪಿಗಳ ಮಾಲೆ ಮಾಡಿ ಹಾಕಿ ಬುಟ್ಟೆತ್. ಎಲ್ಲೊವೂ ಚಪ್ಪಾಳೆ ಹೊಡ್ದ್ ನೆಗಾಡಿಕಂಡ್, "ಬೊಡ್ಡ, ಹೋಗು"ಂತೇಳಿ ಬುಟ್ರೊ ಅಂವ ನಾಚಿಕೆಲಿ ತಿರ್ಗಿ ನೋಡದೆ ಹೋತು.

ಹಾಂಗೆ ಹೊರ್ಟ ಸೈಂಧವ ಅವನ ರಾಜ್ಯದ ರಾಜಧಾನಿಗೆ ಆವನೊಟ್ಟಿಗಿದ್ದ ಸೈನ್ಯ ಮಾತ್ರ ಹಿಂದೆ ಕಳ್ಸಿತ್. ಅಂವ ಗಂಗಾದ್ವಾರಕೆ ಹೋತು. ಅಲ್ಲಿ ಪರಶಿವನ ಬಗ್ಗೆ ಕಠಿಣ ತಪಸ್ಸ್‌ಲಿ ಕುದ್ದತ್. ತುಂಬ ಸಮಯ ಕಠಿಣ ತಪಸ್ಸ್‌ನ ಆಚರ್ಸಿತ್. ಕಡೆಗೆ ಶಿವ ಪ್ರತ್ಯಕ್ಷ ಆತ್. ಏನ್ ಬೇಕೂಂತ ಶಿವ ಕೇಳ್‌ಕನ ನಂಗೆ ಪಾಂಡವರ ಯುದ್ಧಲಿ ಗೆಲ್ಲುವ ವರ ಕೊಡೊಕುಂತ ಕೇಳ್ತ್. ಅದ್ಕೆ ಪರಶಿವ ಒಂದು ದಿನ ಅರ್ಜುನನ ಹೊರ್ತು ಒಳ್ದವರ ಒಮ್ಮೆ ಮಾತ್ರ ತಡ್ದ್ ನಿಲ್ಸಿಕೆ ನಿಂಗೆ ಸಾಧ್ಯ ಆದುಂತ ಹೇಳ್ತ್. ತನ್ನ ತಲೆನ ಯಾಂವ ನೆಲಕೆ ಬೀಳ್ಸದೆನೋ ಅವನ ತಲೆ ಸಾವಿರ ಹೋಳಾಕುಂತಲೂ ಕೇಳ್ತ್. ಶಿವ ತಥಾಸ್ತುಂತ ಹೇಳಿ ಮಾಯ ಆತ್.

**ಮಕ್ಕ:**

ತಾತ! ಸೈಂಧವ ದ್ರೌಪದಿಗೆ ಸಂಬಂಧಲಿ ಅಣ್ಣ ಆಂವ ಅದರ ಮೇಲೆ ಮೋಹ ತಾಳಿ ಅದರ ಅಪಹರ್ಸಿಕೆ ನೋಡ್ದ್ ದೊಡ್ಡ ಅನ್ಯಾಯ ಅಲ್ಲೊ? ಇಂಥ ಅಕೃತ್ಯಗಳ ಕಾವ್ಯಗಳ್ಲಿ ಬರ್ದ್ ಪ್ರಚಾರ ಮಾಡಿ, ಈಗ ನಮ್ಮ ಸಿನೆಮಾಗಳ್ಲಿ ಬಾವಾಂಗೆ ಆದರೆ ಅದರ್ಂದ ಸಮಾಜಕ್ಕೆ ಹಾನಿ ಅಲ್ಲೊ? ದೊಡ್ಡಕವಿಗ ಇಂತ ಅನುಚಿತ ಕಾರ್ಯಗಳ ಕಲ್ಪಿಸಿ ಬರ್ದದ್ ತೊಪ್ಪಾದುಲೆನೋ.

**ತಾತ :**

ಮಕ್ಕಳೇ! ನಿಮ್ಮ ವಾದನ ಮೆಚ್ಚೊಕಾದೆ. ಒಳ್ಳೆದ್ ಯಾದ್? ಕೆಟ್ಟದ್ ಯಾದ್ಂತ ತೋರ್ಸಿ ಕೊಡುದು ಕವಿಯಾದವನ ಕರ್ತವ್ಯ. ಒಂದು ಕಾವ್ಯನ ಓದಂದನೂ ಪ್ರಬುದ್ಧನೂ, ಪ್ರೌಢನೂ, ರಸಿಕನೂ, ವಿಚಾರವಂತನೂ ಆಗಿರೊಕು. ಕಾವ್ಯದ ಪ್ರಯೋಜನನ 'ಕಾವ್ಯಂ

ಯಶಸೇ, ಅರ್ಥಕೃತೇ, ಶಿವೇತರ ಕ್ಷಯೇ, ಕಾಂತಾ ಸಮ್ಮಿತತಯಾ ಉಪದೇಯುಜೇ”ಂತ ಹಿಂದಿನೊವ್ರು ಹೇಳಯೊಳೊ. ಕಾವ್ಯದ ಮುಖ್ಯ ಉದ್ದೇಶಗಳ್ಲೆ ‘ಶಿವೇತರ ಕ್ಷಯೇ’ಂತ ಹೇಳಿರೆ ಅಮಂಗಳವಾದದ್ದರ ನಿವಾರಣೆಂಯೂ ಒಂದು ರಾಮಾಯಣ ಮಹಾಭಾರತದಂತಹ ಕಾವ್ಯಗಳ ಪುಣ್ಯ ಕಾವ್ಯಗಂತ ಗೌರವಿಸೊವ್ರು ಒಳೊಂತಾದರೂ ಕನ್ನಡದ ಸರ್ವಜ್ಞನಂತ ಕವಿಗ ಕಠೋರ ಮಾತ್‌ಂದ ನಿಂದಿಸಿಯೂ ಒಳೊ. ಉದಾ: ‘ಹಾದರದ ಕತೆಯನ್ನು ಸೋದರರ ವಧೆಯನ್ನು ಆದರಿಸಿ ಪುಣ್ಯ ಕತೆಯೆಂದು ಓದುವರು ಮಾದಿಗರು ನೋಡ ಸರ್ವಜ್ಞಂತ ಹೇಳಿಟು. ಇದ್ ಅತಿರೇಕದ ಹೇಳಿಕೆಂತ ಕಂಡದೆ. ವೇದಗಳ ನಾಲ್ಕಾಗಿ ವಿಭಾಗಿಸಿದ, ಮಹಾಭಾರತನ ಬರ್ದ ಮಹರ್ಷಿ ವೇದವ್ಯಾಸೆರ್, ಮುಚ್ಚು ಮರೆಯಿಲ್ಲದೆ ಎಲ್ಲದನ್ನೂ ಮುಕ್ತವಾಗಿ, ಇದ್ದಾಂಗೆ ಹೇಳುವ ಸ್ವಭಾವದೊವ್ರುಂತ ಕಂಡದೆ. ಕೆಲೞವು ವರ್ಗದವರ ಬುಟ್ಟರೆ ಹಲವರ ಸಾಮಾಜಿಕ ಕಟ್ಟುಪಾಡು ತೀರ ಸಹಜವಾಗಿ, ಸಡಿಲವಾಗಿ ಇತ್ತ್‌ಂತ ಕಂಡದೆ. ಪರಾಶರ ಮತ್ತೆ ಸತ್ಯವತಿಂದ ತನ್ನ ಹುಟ್ಟು ಹೇಂಗಾತ್‌ಂತ ಹೇಳಿಕಂಬೊದರ್ಲಿ ಅವ್ಕೆ ನಾಚಿಕೆ ಏನೂ ಇಲ್ಲೆ. ದೀರ್ಘತಮಸಂತ ಹೆಸರಿರುವ ರುಷಿನ ಕತೆ ಒಂದು ವಿಚಿತ್ರವಾಗಿ ಉಟ್ಟು. ಪ್ರಸಿದ್ಧನಾಗಿದ್ದ ಆಂಗೀರಸನ ಮಜ್ಜ ಉಚಿತ್ಯಂತೇಳಂವ. ಇನ್ನೊಬ್ಬ ಮಜ್ಜ ಬೃಹಸ್ಪತಿ. ಉಚಿತ್ಯನ ಹೆಣ್ಣ್ ಮಮತಂತ ಅದ್ ಗರ್ಭಿಣಿಯಾಗಿತ್ತ್. ಆ ಸಮಿಯೞಲಿ ಬೃಹಸ್ಪತಿ. ಮಮತ ಎಷ್ಟ್ ‘ಬೇಡ ಬೇಡಾಂತ’ ತಪ್ಪರೂ. ಬುಡದೆ ಅತ್ಯಾಚಾರ ಮಾಡಿಯೇ ಮಾಡ್ತ್. ಆಗ ಹೊಟ್ಟೆಲಿದ್ದ ಕೂಸು ಬೃಹಸ್ಪತಿನ, ‘ನೀ ನಿನ್ನ ಕಾರ್ಯನ ಹಿಂತೆಕಣೂಕು. ಯಾಕೆಂದರೆ ನಾ ಮುಂದೇ ಇಲ್ಲಿ ನಲ್ಲಿಯೊಳೆ. ಇನ್ನೊಬ್ಬಂಗೆ ಇಲ್ಲಿ ಜಾಗೆ ಇಲ್ಲೇಂತ ಹೇಳ್ತ್. ಇದರ ಕೇಳಿ ಬೃಹಸ್ಪತಿಗೆ ಸಿಟ್ಟ್ ಬಂದ್, “ ನನ್ನ ಅತ್ಯಂತ ಸುಖದ ಸಮಿಯಲಿ, ಅಡ್ಡಿ ಮಾಡ್ದ. ನೀ ಹುಟ್ಟು ಕುರುಡನಾಗಿ ಹುಟ್ಟುಂತ” ಸಾಪಕೊಟ್ಟಿೞತ್. ಅಂವ ಹಾಂಗೇ ಹುಟ್ಟಿತ್. ಆದರೆ ಅವನ ಅಪ್ಪುಂದಾಗಿ ಅಂವ ಮಹಾಜ್ಞಾನಿ ಆತ್. ಅವಂಗೆ ಮೊದುವೆ ಆತ್. ಮಕ್ಕೞೂ ಆಗಿ ದೊಡ್ಡವಾದೊ. ಆದರೆ ಅವನ ಹೆಣ್ಣ್ ಯಾಗೋಳೂ ಅವನೊಟ್ಟಿಗೆ ಅಸಮಾಧಾನಂದ ಅವಂಗೆ ಬ್ಯೊಕೆೞಂಡೇ ಇತ್ತ್. ರುಸಿ ಒಂದು ದಿನ ನನ್ನಂವ ನಿಂಗೆ ಇಷ್ಟ್ ದೊಡ್ಡ ಮಕ್ಕ ಆಗಿಯೂ ಇನ್ನೂ ನೀ ಹೀಂಗೆ ಬೊಯ್ಯುಕೆೞಂಡ್ ಇದ್ದು ಸರಿಯೋಂತ ಕೇಳ್ತ್. ಅದ್ಕೆ ರುಸಿನ ಹೆಣ್ಣ್ ಹೇಳ್ತ್. ಎಲ್ಲಿ ಕುಟುಂಬಗಳ್ಲೆ ಹೆಣ್ಣ್ ಮಕ್ಕಳ ಸಾಂಕುವ ಜವಾಬ್ದಾರಿ ಅಪ್ಪ ಆದವಂದ್. ಆದರೆ ಇಲ್ಲಿ ಎಲ್ಲರ್ನೂ ನಾನೇ ಸಾಂಕೊಕುಂತ ಕೋಪೞೇ ಅವನ ಹಂಗಸಿತ್. ಮತ್ತೆ ಮಕ್ಕೞಗೆ ಹೇಳಿ ಅವನ ಗಂಗಾ ನದಿಗೆ ನೂಕಿ ಹಾಕ್‌ಸಿತ್. ಇಂವ ಗಂಗೆನ ಪ್ರವಾಹಲಿ ತೇಲಿಕೆೞಂಡ್ ಮುಳುಗ್ಯಂಡ್ ಹೋಕನ ಕೆಳೆಗೆ ಹಳ್ಳೞಲಿ ಮಿಂಡ್ಯುಂಡ್ ಇದ್ದ ಬಲಿಂತೇಳ್ವ ರಾಜ ಅವನ ಹಿಡ್ಕೆತ್ತಿ ಮನೆಗೆ ಕರ್ಕೆೞಂಡ್ ಹೋಗಿ ಆರೈಕೆ ಮಾಡ್ತ್. ಕಾಲಕ್ರಮೞಲಿ. ಆ ರಾಜಂಗೆ ಮಕ್ಕ ಇಲ್ಲದರ್‌ಂದ. ಅವನ ರಾಣಿ ಸುಧೇಷ್ಣೆಗೆ ರುಸಿಂದಾಗಿ ಆರ್ ಗಂಡ್ ಮಕ್ಕ ಹುಟ್ಟುವೆ. ಆ ರಾಣಿನ ದಾಸಿಗೆ ಹನ್ನೊಂದು ಮಕ್ಕ ಹುಟ್ಟುವೆ.

ಇಂಥ ವಿಚಿತ್ರ ಅನ್ಯಾಯ ಕಾರ್ಯಗೞೂ ನಡಿಯುತಿದ್ದೊ. ಅದನ್ನೂ ಜನ

ಸ್ವೈಸಿಕಣಂಡೂ ಇದ್ದೊ. ಹೆಣ್ಣ್‌ಂತೇಳಿರೆ ಕೇವಲ ಭೋಗ ವಸ್ತು ಮಾತ್ರಂತ ಆ ಕಾಲಣಲಿ ತಿಳ್ಕಣಂಡಿದ್ದೊಂತ ಕಂಡದೆ. ಮೂಲ ಮಹಾಭಾರತಣಲಿ ವಿಚಿತ್ರವಾದ ಇನ್ನೂ ಕೆಲಣವು ಘಟನೆಗ ಬಂದವೆ. ಇಂಥ ಕಾರಣಂಗಳ ಗಮನಿಸಿಯೋ ಏನೋ! ಕಾವ್ಯಗಳ ಓದುದ್ಕೆ ನಿಷೇಧ ಹೇರ್‌ದಂತ ಮಾತ್‌ಗಳೂ ಕಂಡ್ ಬಂದವೆ. ಉದಾ: 'ಕಾವ್ಯಾಲಾಪಂಶ್ಚ ವರ್ಜಯೇತ್' ಎಂದ್ ಯಾರೋ ಹೇಳಿಯೊಳೂ. ಅದ್ ಹೋಗಣಲಿ. ನಮ್ಮ ಮುಖ್ಯ ಉದ್ದೇಶದ ಕಡೆ ತಿರ್ಗೊನೊ.

ಕಾಡ್‌ಲಿ ಪಾಂಡವಣರ್ ಮತ್ತ ದ್ರೌಪದಿ ತಮ್ಮ ಕಷ್ಟ ಕಾರ್ಪಣ್ಯಗಳ ಅನುಭವಿಸಿಕಣಂಡ್ ಆಗಾಗ ಕೌರವರ ಮೇಲ್‌ನ ಅಸಹನೆಂದ ಸಿಡ್‌ಕ್‌ನ ಮಾತಾಡಿಕಣಂಡ್ ಇರ್‌ತಿದ್ದೊ. ಅದರ್‍ಲೂ ಭೀಮಂಗೂ ದ್ರೌಪದಿಗೂ ಕೌರವರ ಮೇಲ್‌ನ ಕೋಪ ಗವುಲಿಕಣಂಡೇ ಇರ್‌ತ್ತಿತ್. ಅವರ ಮಾತ್‌ಲಿ ನಾವ್ಗ ಮೋಸ ಮಾಡ್‌ದವರ ಮೇಲೆ, ಸತ್ಯ, ಧಣರ್ಮ, ನ್ಯಾಯಂತ ನೋಡುದೇ ತೊಪ್ಪು. ಈಗಣಳೇ ಅವರ ಮೇಲೆ ಯುದ್ಧ ಹೂಡಿ ಅವರ ಸಂಹಾರ ಮಾಡಿ, ನಮ್ಮ ಸಂಪೊತ್‌ನ ನಾವು ಪಡ್ಕಣೊಕುಂತೇಳ್ವ ವಾದದ ವಿಷಯವಾಗಿತ್. ಯುಧಿಷ್ಠಿರಂಗೆ ಅವರ ಕಾರವಾದ ಮಾತ್‌ಗಳ ತಡ್ಕಣಿಕೆ ಕಷ್ಟ ಆದರೂ, ಎಂಥ ಕ್ಷೋಭೆ ಉಂಟಾದರೂ ತನ್ನ ದಡ ಮೀರದ ಸೊಂವುಂದ್ರದ ಹಾಂಗೆ, ಅವರೆಲ್ಲ ಸಮಾಧಾನ ಪಡ್ಸಿಕಣಂಡ್ ಇತ್. ಇವರ ನೋಡಿಕೆ ಸಾಂತ್ವನ ಹೇಳಿಕೇಂತ ಕಾಡ್‌ನ ಆಶ್ರಮಗಳ್ಲಿದ್ದ, ದೊಡ್ಡ ದೊಡ್ಡ ರುಸಿಗ ಬಾತಿದ್ದೊ. ಇವರ ಅತಿಥಿ ಸತ್ಕಾರಂದ ಸಂತೋಸು ಪಡ್‌ತಿದ್ದೊ. ಅವ್ಕ ಮನ್ಸಾರೆ ಆಶೀರ್ವಾದ ಮಾಡಿ ಹೋತಿದ್ದೊ.

## ಕೌರವರ ಘೋಷಯಾತ್ರೆ

ಇವರ ಸಮಾಚಾರನೆಲ್ಲ ದುರ್ಯೋಧನ ಗುಪ್ತಚಾರರ ಮೂಲಕ ತಿಳ್ಕಂಬತಿತ್. ಪಾಂಡವರ್ ತಿಂಬಕೆ ಅನ್ನಾಹಾರಗ ಇಲ್ಲದೆ ಜೋಚ್ಚಿ, ಬಳಲಿ ಕಂಗಾಲಾಗಿರುವೊಂತ ಅವನ ನಿರೀಕ್ಷೆಯಾಗಿತ್. ಆದರೆ ಇವು ಕಾಡ್‌ಲಿದ್ದರೂ ಸುಖಲೇ ಒಳೊಂತೇಳಿ ಅವನ ಮಚ್ಚರ ಉಕ್ಕ್‌ತಿತ್. ಹಾಂಗೆ ಗೋಷ ಯಾತ್ರೆಂತ ಹೋಗಿ ಪಾಂಡಣವರ್ ನೆಲ್ಸಿದ್ದ ಜಾಗೆಗೆ ಹಕ್ಕಲೆ, ಅವ್ಕ ತನ್ನ ವೈಭವನೆಲ್ಲ ತೋರ್‍ಸಿ ಅವರ ಹೊಟ್ಟೆ ಉರ್ದೊಕುಂತ ತಂತ್ರ ಮಾಡಿ ತನ್ನ ಬಂಧು ಬಳಗ, ಚತುರಂಗ ಸೇನೆ, ಮುತ್ತು, ರತ್ನಗಳ ಆಭರಣ ಧರ್‍ಸಿದ, ಮಿಂಚುವ ಜರತಾರಿ ಸೀರೆಗಳ ಉಟ್ಟ್‌ಕಂಡ್ ನಾಲ್ಕೂರಿಗೆ ಪೊರಿಮಳ ಬೀಸುವ ಕಸ್ತೂರಿ, ಗಂದ ಚಂದನದ ಲೇಪನ ಮಾಡಿಕಣಂಡ್ ಕಳಸ ಕನ್ನಟಿಗಳ ಒಡ್ಕಂಡ ಸುವಾಸಿನಿಯರ ತಂಡ ಹಾಂಗೇ ತನ್ನ ರಾಣೀವಾಸದೊವ್ರು, ತನ್ನ ತಮ್ಮಂದರ ರಾಣೀವಾಸದೊವ್ರು ಹಿಂಗೆ ಇವೆಲ್ಲ ಆನೆಗಳ್ಲಿ, ರಥಗಳ್ಲಿ, ಕುದುರೆಗಳ್ಲಿ, ಪಲ್ಲಕಿಗಳ್ಲಿ ಕುದ್ದ್‌ಕಣಂಡ್ ಹೊರ್ಟೊ.

**ಮಕ್ಕ:**

ತಾತ! ಇವರೊಟ್ಟಿಗೆ ಭೀಷ್ಮರೂ ದ್ರೋಣರೂ ಹೋಗಿದ್ದೊನೊ?

ತಾತ:

ಹೋಗಿದ್ರೊ. ಇವರ ಉದ್ದೇಶ ಮಾತ್ರ ಬೇರೆಯಾಗಿತ್ತ್. ಪಾಂಡವೆರ್ ಇರುವ ಜಾಗೆನ ಹಕ್ಕಲೆ ಇವೆಲ್ಲ ಹೋದವೆಂತಾಕನ, ತಮ್ಮ ಪ್ರೀತಿನ ಪಾಂಡವರ ನೋಡಿಕೆ ಅವಕಾಶ ಆದೆನೋಂತ ಒಂದು ಒಳ ಆಸೆ ಇತ್ತ್. ಹೀಂಗೆ ಹೋದ ಇವರ ದಣಿಂಡ್ ಕಾಮ್ಯಕ ವನಕ್ಕೆ ಹೋಗಿ ಪಾಂಡವೆರ್ ವಾಸ ಮಾಡಿಕೆಂಡ್ ಇದ್ದ ಆಶ್ರಮದ ಹಕ್ಕಲೆ ತಳವೂರ್ದೊ. ಅಲ್ಲಿ ವೈಭವದ ಡೇರೆಗಳ ಹಾಕ್ಸಿ, ಸಂಗೀತ ನರ್ತನ, ಆಟೋಟಗಳ ಸ್ಪರ್ಧೆ ಎಲ್ಲ ಏರ್ಪಾಡ್ ಮಾಡಿಕೆಂಡ್ ಬಾರಿ ಕುಸೀಂದ ಕಾಲ ಕಳಿಯಕೆ ಸುರುಮಾಡ್ದೊ. ಇವರ ದುರದೃಷ್ಟಂದ ಇವೀಗ ಇದ್ದ ಜಾಗೆ ಚಿತ್ರಸೇನಂತೇಳ್ವ ಗಂಧರ್ವಂಗೆ ಸೇರ್ದಾಗಿತ್ತ್. ಮುಂದೇ ಗಂಧರ್ವರಿಗೆ ಕುರುವಂಶದವರ ಮೇಲೆ ಹುರುಡು ಮತ್ಸರ ಮುಗಿಯದ ಕತೆಯಾಗಿತ್ತ್. ಅದರ ವಿವರ ಮುಂದೆ ಕೊಟ್ಟನೆ. ಗಂಧರ್ವರ್ ಬಂದ್ ಇಷ್ಕೆ ಅಡ್ಡಿ ಮಾಡ್ದೊ. ಒಳ್ಳ ಮಾತ್‌ಲಿ ನೀವಿಲ್ಲಿಂದ ಬೇಗ ಹೊರ್ಟ್ ಹೋಗಿ. ಇಲ್ಲದಿದ್ದರೆ ಪರಿಣಾಮ ಬೇರೆ ಆದು. ಬೇಗ ಎಲ್ಲ ಪೂಜಿ ಕೆಟ್ಟಿಕೆಂಡ್ ಹೊರ್ಡಿಂತ ಹೆದ್‌ರ್ಸಿದೊ.

ಇದರ ಕೇಳಿ ಕೌರವೆರಿಗೆ ಕೋಪ ಬಾತ್. ಇವು ಸಾ ಅಷ್ಟೇ ಜಬರ್‌ದಸ್ತ್‌ಲಿ ಉತ್ತರ ಕೊಟ್ಟೊ. ಮತ್ತೆ ಕೇಳುದೇನ್? ಯುದ್ಧ ಸುರಾತ್. ಗಂಧರ್ವರಿಗೆ ನಾವು ಈ ಹುಲುಮಾನವರ್‌ಂದ ಮೇಲಾದ ವರ್ಗಕ್ಕೆ ಸೇರ್ದೊವುಂತ ಬಡಾಯಿ ಹೆಚ್ಚಿತ್ತ್. ಸಂಖ್ಯಾ ಬಲನೂ ಹೆಚ್ಚಿತ್ತ್. ಇವರ ಹೊಡ್ತನ ತಾಳಿಕೆ ಜೊತ್ತದ. ಕೌರವ ಪಾಳ್ಯಲಿ ಹೆಸ್‌ರಾದ ಜಿಲ್ಲಾಳ್‌ಗ ಎಲ್ಲ ತೊಪ್ಪುಸಿಕೆಂಡ್ ಓಡಿ ಅಡ್‌ಂಗ್ಯಂಡೊ. ಭೀಷ್ಮ ದ್ರೋಣರಂತೆವು ಯುದ್ಧಕ್ಕೆ ಸಿದ್ಧರಾಗಿ ಬಂದಿತ್ತ್‌ಲೆ. ಹಾಂಗೆ ಅವು ಎಲ್ಲರ್‌ಂದ ದೂರ ಹಾಕಿದ್ದ ಡೇರೆಗಳ್ಲಿ ತಮ್ಮಷ್ಟಕ್ಕೆ ತಾವು ಇದ್ದೊ. ದುರ್ಯೋಧನ ಮತ್ತೆ ದುಶ್ಶಾಸನ ಇರ್ಲ್ ಇಡೀ ರಾತ್ರೆ ಮದ್ಯಕುಡ್ಕಂಡ್, ತಮ್ಮ ತಮ್ಮ ವಿಲಾಸಿನಿಗಳೊಟ್ಟಿಗೆ ಕೇಳಿಯಾಡಿ ಕೆಳ್ಟ್, ದಣ್ಟ್ ಮೈಮರ್ತ್ ಮಲ್‌ಗಿದ್ದೊವು ಈ ಗಲಭೆನ ಸದ್ದ್ ಕೇಳಿ ಏನ್‌ಂತ ಗೊತ್ತಾಗದೆ ಬಂದ್ ನೋಡುವಷ್ಟ್ರಲ್ಲಿ ಗಂಧರ್ವ ಸೈನಿಕೆರ್ ಅವರ ಸುತ್ತುಗೆಟ್ಟಿ ಸೆರೆಹಿಡ್ದ್ ಹಡೆಮುರಿಕೆಟ್ಟಿ ನೆಲಕ್ಕೆ ಕೆಡ್ಗಿದೊ. ಗಂಧರ್ವರ ರಾಜ ಚಿತ್ರಸೇನ, ತನ್ನ ಸೈನಿಕರಿಗೆ, “ಏನ್ ನೋಡಿರೆ? ಹಾಕಿ ಅವರ ನನ್ನ ರಥದ ಒಂದು ಮೂಲೇಲಿಂತ ಅಪ್ಪಣೆ ಮಾಡ್ತ್. ಹಾಂಗೆ ಅವರ ಸೈನಿಕೆರ್ ಇವರ ಎರ್ಡ್ ಮೂಟೆಗಳ ಹೊತ್ತ್‌ಕೆಂಡ್ ಹೋಗಿ ಚಿತ್ರಸೇನನ ಕಾಲ್ ಬುಡಲಿದ್ದ ಖಾಲಿ ಜಾಗೆಲಿ ಹಾಕಿ ಬಂದೊ. ಚಿತ್ರಸೇನ ಕೌರವರ ಮುಖ್ಯ ಸೇನಾನಾಯಕರ ಕರ್ದ್ ಕರ್ದ್ ಹೇಳಿಕೆ ಸುರುಮಾಡ್ತ್. ‘ನೀವೆಲ್ಲಿಯಾರ್ ನಿಮ್ಮ ರಾಜನ ಬುಡ್ಸಿಕೆಂತ ಹಮ್ಮುಲಿ ಬಂದ್ರೆ ಅವನ ರುಂಡನ ಈಗಳೇ ಹಾರುಸುವೆ. ಮತ್ತೆ ನಿಮ್ಮ ಇಸಿಕೆಲ್ಲಿಂತ ಕೆಟ್ಟಿನ ಜಳಟ್ಟಿತ್ ಆ ಮೇಲೆ ಬಾನಕೆ ಆ ರಥನ ಹಾರ್ಸಿಕೆಂಡ್ ಹೋತು. ಅವನ ಸೇನೆ ಹಿಂದೆಕೆಂಡ್ ಹೋತು.

ಇತ್ತ ಕೌರವನ ಸೇನಾನಾಯಕೆರ್, ಸೈನಿಕೆರ್ ಎಲ್ಲ ಮೊಲಗಳ ಹಾಂಗೆ ಕಣ್ಣ್ ಪಿಳಿ ಪಿಳಿ ಬುಟ್ಟ್‌ಕೆಂಡ್, ಏನ್ ಮಾಡ್ದುಂತ ಗೊತ್ತಾಗದೆ ಗಾಬರಿಗೊಂಡ್ ಇದ್ದೊ. ರಾಜನ ಗಂಧರ್ವರ್ ಏನ್ ಮಾಡಿ ಬುಟ್ಟೊವೆನೋಂತ ಆತಂಕ ಎಲ್ಲರ ಮೋರೆಲಿ ಕಾಂಬುತ್ತಿತ್ತ್.

ಭಾನುಮತಿ ಅತ್ತ್‌ಕëಂಡ್. ಕೌರವಂಗೆ ಆಪ್ತರಾಗಿದ್ದ ಕರ್ಣಾದಿ ಪ್ರಮುಖ ನಾಯಕರ ಕರ್ದ್ ಹೇಂಗಾರ್ ನನ್ನ ಗಂಡನ ಬುಡ್ಸಿಕëಂಡ್ ಬನ್ನಿಂತ ಕೇಳಿಕëಂಡëತ್. ಅದ್ಕೆ ಅವ್ರು ಹೇಳ್ರು, ಅದ್ ಸಾಧ್ಯ ಆಗಿದ್ದರೆ ನಮ್ಮ ಮಹಾರಾಜರಿಗೆ ಸಹಾಯಮಾಡಿಕೆ ಇಷ್ಟ್ ಹೊತ್ತು ನಾವು ಕಾಯಕಿತ್ತ್‌ಲೆ ಮಹಾರಾಣಿ. ಆಕಾಶಲಿ ಹೋವ ವಿದ್ಯೆ ನಾವ್ಗೆ ಯಾರಿಗೂ ಗೊತ್ತ್‌ಲೆ. ಅತಿಮೀರಿ ನಾವು ಕಾದಾಡಿಕೆ ಹೋದರೆ ಮಹಾರಾಜರ್ನೂ ಅವರ ತಮ್ಮನ್ನೂ ಜೀವëಲಿ ಇಸಿಕಿಲೆಂತ ಹೆದ್ರ್ಸಿಟು. ಹೀಂಗಾಗಿ ಉಪಾಯ ಇಲ್ಲದಾಗುಟುಂತ ಅವ್ರು ಉತ್ತರ ಕೊಟ್ರು. ಮತ್ತೆ ಭಾನುಮತಿ ಪಿತಾಮಹರಾದ ಭೀಷ್ಮರಲ್ಲಿಗೆ ಹೋಗಿ ಅತ್ತ್‌ಕëಂಡ್ ನನ್ನ ಗಂಡನ ಜೀವಂತ ಹಿಂದೆ ತರ್ಸಿಕೆ ನೀವೇ ಏನಾರ್ ಮಾಡೊಕುಂತ ಹೇಳಿಕëಂಡ್ ಅವರ ಕಾಲಿಗೆ ಬೀತ್. ಆಗ ಅವ್ರು ಹೇಳ್ರು. ನೀ ಅಳ್ಬೇಡ ಮಗಳೇ. ಇಲ್ಲಿಯೆ ಹಕ್ಕಲೆ ಪಾಂಡವëರ್ ಆಶ್ರಮ ಕëಟ್ಟಿಕëಂಡ್ ಒಳೊ ಗಡ. ನೀ ಹೋಗಿ ಯುಧಿಷ್ಠಿರನೊಟ್ಟಿಗೆ ಎಲ್ಲ ಹೇಳಿ ನನ್ನ ಗಂಡನ ಸೆರೆಬುಡ್ಸಿಕೊಟ್ಟ್ ನನ್ನ ಮಾಂಗಲ್ಯನ ಒಳ್ಸೊಕುಂತ ಕೇಳಿಕ. ಅಂವ ಕಂಡಿತ ನಿನ್ನ ಬೇಡಿಕೆನ ಪೂರೈಸುದುಂತ ಹೇಳಿ ಕëಳ್ಸಿದೊ. ಭಾನುಮತಿ ಅಲ್ಲಿಂದ ಹಜ್ಜು ದೂರದ ಒಂದು ಗುಡ್ಡೆನ ಮೇಲೆ ಇದ್ದ ಬಿಡಾರಲಿ ಪಾಂಡವರ್ ಒಳೊಂತ ತಿಳ್ಕಂಡ್ ಅಲ್ಲಿಗೆ ಬೇಗ ಬೇಗ ಬಾತ್. ಬಂದëವೇ ಧರ್ಮರಾಯನ ಕಾಲ್ ಹಿಡ್ಕëಂಡ್. ಕëಣ್ಣೀರ್ ಹಾಕëಂಡ್ ಹೇಳ್ತ್. "ಭಾವ! ನಿಮ್ಮ ತಮ್ಮನ ನಮ್ಮವರೆಲ್ಲ ಹೆದ್ರ್ಸಿ. ಗಂಧರ್ವëರ್ ಸೆರೆ ಹಿಡ್ದ್ ಆಕಾಶ ಮಾರ್ಗëಲಿ ಹೊತ್ತ್‌ಕëಂಡ್ ಹೋದೊ. ನಂಗೆ ಯಾರೂ ಗತಿ ಇಲ್ಲೆ. ನೀವೇ ಗತಿ. ನೀವ್ಗೆ ಅವ್ರು ಬೇಕëಷ್ಟ್ ಅನ್ಯಾಯ ಮಾಡ್ರೊ. ಅಪಮಾನ ಮಾಡ್ರೊ. ನನ್ನ ಮೇಲೆ ಕರುಣೆ ತೋರ್ಸಿ, ಉದಾರ ಮನ್ಸಿಂದ ನೀವು ಅವರ ಬುಡ್ಸಿ ತನ್ನಿ ನಂಗೆ ಪುರುಷಭಿಕ್ಷೆ ಕೊಟ್ಟ್ ಕಾಪಾಡೊಕುಂತ ಬೇಡಿಕëಣೆ"ಂತ ದಿರೀಂತ ಅತ್ತëತ್.

ಯುಧಿಷ್ಠಿರ ಅದಿಕೆ ಸಮಾಧಾನ ಹೇಳ್ತ್. "ನೀ ಅಳ್ಬೇಡ ಅಕ್ಕ! ನಾ ಇಂದೇ ನಿನ್ನ ಗಂಡನ ತಂದ್ ನಿನ್ನೊಟ್ಟಿಗೆ ಸೇರ್ಸುವೆ. ಹೆದ್ರ್‌ಬೇಡ. ನಮ್ಮ ನಮ್ಮಲ್ಲಿ ನಡಿವ ಕದನ ಕಿಸ್ರ್‌ಗಳ್ಳಿ ಪಾಂಡವëರ್ ನಾವು ಐದ್ ಜನ ಈ ಕಡೆಗೆ, ಕೌರವëರ್ ನೂರು ಜನ ಆ ಕಡೆಗೆ ಸëರಿ. ಆದರೆ ಬೇರೆವ್ರು ಯಾರಾರ್ ಆಕ್ರಮಣ ಮಾಡಿರೆ ಆ ನೂರು ಜನನೂ ಈ ಐದ್ ಜನನೂ ಸೇರಿ, ನೂರಐದ್ ಜನಂಗ ಆದುಲೆನೋ?ಂತ ತನ್ನ ಔದಾರ್ಯದ ಭಾವನೆನ ಹೇಳ್ತ್. ಮತ್ತೆ ಭೀಮನ ಕರ್ದ್ 'ದುರ್ಯೋಧನನ ಸೆರೆಬುಡ್ಸಿಕëಂಡ್ ಬಾ'ಂತ ಹೇಳ್‌ಕನ ಭೀಮ, "ನಮ್ಮ ಕುತ್ತಿ ಕೊಲ್ಲಿಕೆ ಬಾವನ ಎತ್ತ್ ಕುತ್ತಿ ಕೆಡ್ಗಿತ್‌ಗಡಂತ ಹೇಳಿರೆ ಅದಿಕೆ ನಾವೇಕೆ ಅಳೊಕು? ಅಂವ ನಾವ್ಗೆ ಮಾಡ್ದ ಅನ್ಯಾಯಗಳ ಪ್ರತಿಫಲನ ಬೇರೆವರ್‌ಂದ ಅನುಭವಿಸëಲಿ. ನಾ ಅವನ ಬುಡ್ಸಿ ತಾಕೆ ಹೋಕಿಲೆಂತ ಹೇಳಿ ಒಂದು ಕರೆಗೆ ತೆಲ್ಗಿ ಹೋತು. ಆಗ ಯುಧಿಷ್ಠಿರ ಅರ್ಜುನಂಗೆ "ನಿಮ್ಮ ಅಣ್ಣನ ಗಂಧರ್ವëರ್ ಸೆರೆ ಹಿಡ್ಕëಂಡ್ ಹೋದೊ ಗಡ. ನೀ ಅವನ ಬುಡ್ಸಿಕëಂಡ್ ಬಾಂ"ತ ಹೇಳ್ತ್. ತನ್ನ ಸಾಹಸ ಕಾರ್ಯನ ಮೆರ್ಸಿಕೆ ಕಾದ್‌ಕëಂಡ್ ಇದ್ದ ಅರ್ಜುನ ಗಾಂಡೀವ ಧನುಸ್ಸ್‌ನ ಹಿಡ್ಕಂಡ್ ಗಂಧರ್ವëರ್ ಯಾವ ದಿಕ್ಕ್‌ಲಿ ಹೋದೊಂತ ಕೇಳಿ ಹೊರ್ಟತ್. ಹಿಂದೆ ಗಂಧರ್ವ ಒಬ್ಬ ತನಿಗೆ

ಕೊಟ್ಟಿದ 'ಚಾಕ್ಷುಷೀ' ವಿದ್ಯೆನ ಮಂತ್ರಿಸಿ ನೋಡಿಕನ ಕಕ್ಕೆಗಳ ಹಿಂಡ್‌ನಾಂಗೆ ಹಾರಿಕಲೆಂಡ್ ಹೋಪ ಗಂಧರ್ವರ್ ಪಡೆ ಕಂಡಲೆತ್.

ಅರ್ಜುನ ಕೂಡ್ಲೆ ಗಂಧರ್ವರಿಗೆ ಮುಂದೆ ಓಡಿ ತಪ್ಪಿಸಿಕಂಬಿಕೆ ಆಗದ ಹಾಂಗೆ ಅವರ ಎದ್ರಿಗೆ ಬಾಣ ಹೊಡ್ದ್ ಬಾಣಗಳ ತಡೆಗೋಡೆ ನಿರ್ಮಾಣ ಮಾಡ್ತ್. ಮತ್ತೆ ಹಿಂದೆಂದ, ಎಡ್ದ್‌ಂದ ಬಲ್ದ್‌ಂದ ಬಾಣಗಳ ಮಳೆ ಸುರಿವಾಂಗೆ ಬಾಣ ಬುಟ್ಟಲೆತ್. ಗಂಧರ್ವರ ಪಡೆನ ಅರ್ಧಾಂಶ ಜನಂಗ ಪತಂಗಗಳ ಹಾಂಗೆ ಪಟ ಪಟನೆ ಸತ್ತ್ ಬಿದ್ದೊ. ಚಿತ್ರಸೇನಂಗೆ ಹೆದ್‌ರಿಕೆ ಹಿಡ್ತ್. "ನೀವ್ಗೆ ಕೆಟ್ಟದ್ ಮಾಡ್ತವಂಗೆ ನಾ ಶಿಕ್ಷೆ ಕೊಟ್ಟರೆ ನಿಂಗೇಕೆ ತಲೆ ಬೇನೆಂತ ಗಂಧರ್ವರ್ ಕೇಳ್ತ್. ಅದಿಕೆ ಅರ್ಜುನ "ನಂಗೆ ಅಣ್ಣನ ಅಪ್ಪಣೆ ಆಗುಟು. "ನಮ್ಮೊಳಗೆ ಏನೇ ತಂಟೆ ತಕರಾರ್ ಇದ್ದರೂ ಅದ್ ನಮ್ಮ ಕುಟುಂಬದ ವಿಷಯ. ಅದರ ನಾವು ನಾವೇ ನೋಡಿಕಂಬೆ. ಅದಿಕೆ ನಿನ್ನ ಸಾಯ ನಾವ್ಗೆ ಬೇಕಾಗಿಲ್ಲೆ. ಬೇಗ ಅವರ ನಂಗೆ ಒಪ್ಪಿಸು. ಇಲ್ಲದಿದ್ದರೆ ನನ್ನ ಬಾಣದ ಪೆಟ್ಟ್‌ನ ರುಚಿ ನೋಡುಂತ" ಅರ್ಜುನ ಹೇಳ್ತ್. ನಿಮ್ಮಂಥ ಮೂರ್ಖರ್‌ಲೆರ್ ಬೇರೆ ಇಲ್ಲೆ. ತಕ ನಿನ್ನ ಗಲೆಂಟ್‌ನಂತ ಹೇಳಿ. ದುರ್ಯೋಧನನ್ನೂ ಅವನ ತಮ್ಮನ್ನೂ ಕಲೆಟ್ಟ್ ಮುತ್ತಂಗೆ ಹೆರ್ಕಿ ಬಾನಕೆ ಬೀಸಿ ಇಟ್ಟಲೆತ್. ಹಾಂಗೆ ಅವು ಎಲ್ಲಾರ್ ಅಷ್ಟ್ ಎತ್ತರಂದ ವೇಗವಾಗಿ ನೆಲಕ್ಕೆ ಬಿದ್ದರೆ, ಅವರ ಒಂದು ಎಲು ಸಾ ನೆಟ್ಟಂಗಿರಿಕಿಲ್ಲೆ. ಎಲು ಮತ್ತೆ ಮಾಸದ ಮುದ್ದೆ ಆಗಿ ಅಪ್ಪಚ್ಚಿ ಆಗಿ ಹೋಗಿದ್ದೊ. ಗಂಧರ್ವನ ಉದ್ದೇಶವೂ ಅದೇ ಆಗಿದ್ದಿರ್ದು. ಆದರೆ ಅರ್ಜುನ ಬಾಣಗಳ ಮೇಲೆ ಬಾಣ ಬುಟ್ಟ್ ಒಂದು ಏಣಿನಾಂಗೆ ಮಾಡಿ ಅದರ್ಲಿ ನಿಧಾನವಾಗಿ ಹೊಣ್ಕ್ಯಾಂಡ್ ಬಾವಾಂಗೆ ಮಾಡಿ, ಒಂದಿಷ್ಟು ಅವ್ಕೆ ಬೇನೆ ಆಗದಾಂಗೆ ಭೂಮಿಗಿಳ್ಸಿತ್, ಮತ್ತೆ ಅವರ ಎದ್ದ್ ನಿಲ್ಸಿ, ಯುಧಿಷ್ಠಿರ ಇದ್ದಲೆಲ್ಲಿಗೆ ತಂದ್ ಅವಂಗೆ ಒಪ್ಪಿಸಿತ್.

ಯುಧಿಷ್ಠಿರ ಅರ್ಜುನನ ಮೆಚ್ಚಿ, ತುಂಬ ಹೊಗ್‌ಳ್ತ್. ದ್ರೌಪದಿನ ಕರ್ದ್, "ಬಾ! ನಮ್ಮ ಬಿಡಾರಕ್ಕೆ ಇಬ್ರೊರು ಅತಿಥಿಗ ಬಂದೊಳೊ, ನೋಡುಂತ" ಹೇಳ್ತ್. ದ್ರೌಪದಿ ಬಾತ್. "ಓಹೋ! ತುಂಬಿದ ರಾಜಸಭೆಗ ಅಬಲೆ ಹೆಣ್ಣ್‌ನ ತಲೆ ಕೂದೊಲು ಹಿಡ್ದ್ ಎಳ್ದ್ ತರ್ಸಿ, ಅದರ ಸೀರೆ ಬಿಚ್ಚಕೆ ನೋಡ್ದ್, ಇಲ್ಲಿ ಕುದ್ದುರುಂತ ತೊಡೆ ತಲೆಟ್ಟಿ ಪರಾಕ್ರಮ ತೋರ್ಸಿದ ಮಹಾ ಶೂರರ್! ಗಂಧರ್ವರ್ ಸೆರೆ ಹಿಡ್ದ್ ಹೊತ್ತ್‌ಕಲೆಂಡ್ ಹೋಕನ ನಿಮ್ಮ ಪೌರುಷ ಎಲ್ಲಿ ಎಲ್ಲಿ ಕರ್ಗಿ ಹೋತಪ್ಪಂದಲೆರೆ? ನಿಮ್ಮ ಸೇನಾ ನಾಯಕ ಶಿಖಾಮಣಿಗ ಯಾರೂ ನಿಮ್ಮ ಸಾಯಕೆ ಬಾತ್‌ಲೇನೋ. ನೀವಷ್ಟೆ ಮುಂದೆನೆ ಕೊಟ್ಟ ರಾಜ್ಯಕ್ಕೆ ಇನ್ನೂ ಹಣ್ಣ್ ಸೇರ್ಸಿ ಕೊಟ್ಟ್, ಪಟ್ಟ ಕಲೆಟ್ಟಕೆ ಮನಿ ಉಟ್ಟೊ? ಏನ್ ಬೇಕರೂ ನೀವೇ ಮಾಡಲೆಕ್. ಆ ಕುರುಡ ರಾಜನ ಕೇಳೊಕುಂತಿಲ್ಲೆ. ನೀವು ಏನ್ ಮಾಡಿರೂ 'ಸ್ವ ಸ್ವಾಂತಃಸುಖಾಯ' ಅವನ ಕೆಲ್ಸ." ಹೀಂಗೆ ದ್ರೌಪದಿ, ತನ್ನ ಒಳಗೆನ ಉರಿನೆಲ್ಲ ಹೊರೆಗೆ ಹರ್ಸಿಕನ ಯುಧಿಷ್ಠಿರ ತಡ್ತ್. ದ್ರೌಪದಿ, ಒಬ್ಬ ಕಷ್ಟಲಿರ್‌ಕನ ಹಂಗ್‌ಸುದು ಸರಿಅಲ್ಲ. ನೀ ಬೇಗ ಅವರ ಕಲೆಟ್ಟ್‌ಗಳ ಬಿಚ್ಚಿಬುಡು. ಗಂಧರ್ವರ್ ಕಟ್ಟಿದ ಕಲೆಟ್ಟ್‌ನ ಬಿಚ್ಚೊಕೊರೆ ಪತಿವ್ರತಾ ಸ್ತ್ರೀ ಅಲ್ಲದೆ ಬೇರೆವರಾಂದ ಆಕಿಲೆ. ದ್ರೌಪದಿ ಇಬ್ಬರ ಕಲೆಟ್ಟ್‌ನೂ ಬಿಚ್ಚಿ ಭಾನುಮತೀ ಬಾ ನಿನ್ನ ಗಂಡನ್ನೂ ಮೈದುನನೂ

ಒಪ್ಪಿಸಿಕಂತೇಳಿ, ಅವರ ಕೈಗೆ ಕೊಟ್ಟಿತ್. ದುರ್ಯೋಧನ ಮತ್ತೆ ದುಶ್ಶಾಸನ ಕೆಳಗೆ ಹಾಕಿದ ಮೋರೆನ ಮೇಲೆ ಎತ್ತಿತ್‌ಲೆ. ಭಾನುಮತಿ ಸಂತೋಷುಂದ ಯುಧಿಷ್ಠಿರನ ಕಾಲಿಗೆ ಅಡ್ಡ ಬಿದ್ದ್, ದ್ರೌಪದಿನ ಹಗ್‌ರಲಿಲಿ ತೊಬ್ಬಿಕೆಂಡ್, ನಾವು ಬಂದವಂತೇಳಿ ಹೊರ್ಟಿತ್. ದುರ್ಯೋಧನನೂ ದುಶ್ಶಾಸನೂ, ದ್ರೌಪದಿನ ಮಾತ್‌ನ ಕೇಳುವ ಬದ್‌ಲ್, ಆ ಚಿತ್ರಸೇನ ನಮ್ಮ ಕೊಂದ್ ಬುಟ್ಟದ್ದರೇ ಒಳ್ಳೇದಿತ್ತ್‌ಂತ ಮನ್ಸ್‌ಲೇ ನೆನ್ಸಿಕಂಡ್ ನಡ್ದೊ.

ಗಂಧರ್ವರಿಗೂ ಕುರುಕುಲದೊವ್ಕೂ, ಕಿಸರ್, ಕಲಹಗ, ಹಿಂದೆಂದಳೇ ನಡ್ದ್ ಬಂದೊಳೊ. ಸತ್ಯವತಿ– ಶಂತನುನ ಮಕ್ಕ ಚಿತ್ರಾಂಗದನ ಅದೇ ಹೆಸ್‌ರ್‌ನ ಒಬ್ಬ ಗಂಧರ್ವ ದ್ವಂದ್ವ ಯುದ್ಧಲಿ ಕುತಂತ್ರ ಮಾಡಿಕೊಂದಲ್. ಪಾಂಡವರ್ ಏಕಚಕ್ರ ನಗರಕ್ಕೆ ಹೋಕನ ಒಬ್ಬ ಗಂಧರ್ವ ಅವರ ಅಡ್ಡಗಟ್ಟಿತ್. ಮತ್ತೆ ದುರ್ಯೋಧನ ದುಶ್ಶಾಸನರ ಸೆರೆಹಿಡ್ದ್ ತಕಂಡ್ ಹೋದ್ದ್. ಹೀಂಗೆ ಆಗಾಗ ಏನಾದರೊಂದು ನಡಿಯತ್ತಿತ್ತ್. ಇಲ್ಲಿ ಈಗ ನಾ ಹೇಳುವಂಥ ವಿಷಯ ಮೂಲ ಭಾರತ ಕೃತಿಲಿ ಇಲ್ಲೆ. ಸ್ವಾರಸ್ಯವಾಗಿಯೇ ಇರುವ ಈ ಸನ್ನಿವೇಶ ಕಥಾಕಾಲಕ್ಷೇಪಂತ ಕಾರ್ಯಕ್ರಮ ಕೊಡುವ ವ್ಯಕ್ತಿಗ ರಂಜನೆಗೆ ಕೆಲೊವು ಕಥಗಳ ತಾವೇ ಕಲ್ಪನೆ ಮಾಡಿ ಹೇಳುದು ಉಟ್ಟು. ಅವು ಹೇಳುವ ರೀತಿ ಅಷ್ಟ್ ಆಕರ್ಷಣೆಯುವಾಗಿರುದರ್‌ಂದ ಜೆನ ಅವರ ಹಿಡ್ಕಂಡವೆ. ಬಾಯಿಂದ ಬಾಯಿಗೆ ಹಬ್ಬಿದೆ. ಯಾರೋ ಒಬ್ಬ ಅವರ ತನ್ನ ಬರಹದೊಳಗೂ ತಂದದೆ. ಹೀಂಗೆ ಜನಪದ ರೂಪುಲಿದ್ದದ್ ಶಿಷ್ಟ ಮಾನ್ಯತೆನೂ ಪಡ್ದದೆ. ಭಾರತಲೇ ಬಾವ ಅಕ್ಷಯ ವಸ್ತ್ರ ಪ್ರದಾನ ಇಂದ್ ನಮ್ಮ ದೇಶ ಭಾಷೆಗಳ್ಳಿ ಬಾವ ಎಲ್ಲ ಭಾರತ ಕಥೆಗಳ್ಳಿ ಬಂದಿರುದು ಕಂಡದೆ. ಅದ್‌ಬಾಕೆ ಕಾರಣ, ವೈಷ್ಣವ ಭಕ್ತಿ ಪ್ರಚಾರಕರ್ ತೋರ್ಸಿದ ಕೈ ಚಳಕ. ಇಂದ್ ಅದ್ ಭಾರತದ ಒಂದು ಅಂಗ ಅಲ್ಲ. ಅದರ ತೆಗ್‌ದ್ ಹಾಕೊನೊಂತ ಹೇಳಿರೆ ಹಾಂಗೆ ಹೇಳೊವರ ಸಿಗ್‌ದ್ ಹಾಕುವಂತ ಎದ್ದುರೊವು ಎಷ್ಟೋ ಜೆನ ಇರುವೊ. ಹೀಂಗೆ ಜನ ಜನಿತವಾಗಿರುವ ಒಂದು ಘಟನೆನ ಮುಳಿಯ ತಿಮ್ಮಪ್ಪಯ್ಯಂತೇಳೊವು 'ನಡತೆಯ ನಾಡು'ಂತೇಳುವ ಅವರ ಲೇಖನಲಿ ಬರ್ದೊಳೊ. ದ್ರೌಪದಿನ ಐದ್ ಜೆನ ಪಾಂಡವರ್ ಮೊದುವೆ ಆಗಿ ಹಸ್ತಿನಾವತಿಗೆ ಬಂದವೆ. ಅವರ ಕೊಲ್ಲೊಕುಂತ ಹಿಂದೆ ಕೌರವರ್ ಏನೆಲ್ಲ ತಂತ್ರ ಮಾಡಿದ್ರೂ ದೈವ ಯೋಗಂದ ಅವು ಬೊದ್ಕ್ಯಂಡೊ. ಈಗ ಒಂದು ತಾತ್ಕಾಲಿಕ ಶಾಂತಿ ಇದ್ದಾಂಗೆ ಇತ್ತ್. ದಿನೋಳು ರಾಜನ ಒಡ್ಡೋಲಗ ನಡಿಯುದ್ಯಕೆ ಸಾಮಾಜಿಕರ್ ಬಂದ್ ರಾಜಂಗೆ ಗೌರವ ತೋರ್ಸುದು ವಾಡಿಕೆ. ಹಾಂಗೆ ಅದಿಕೆ ಭೀಮನ ತಮ್ಮ ಪ್ರತಿನಿಧಿಯಾಗಿ ಹೋಗುಂತ ಯುಧಿಷ್ಠಿರ ಕಳ್ಸ್‌ತಿತ್ತ್. ಕೃಷ್ಣನ ಅಭಿಪ್ರಾಯನೂ ಅದೇ ಆಗಿತ್ತ್. ಹಾಂಗೆ ಭೀಮ ಮನ್ಸಿಲ್ಲದ ಮನ್ಸ್‌ಂದ ಹೋತಿತ್ತ್. ಅಂವ ಓಲಗ ಸಾಲೆಗೆ ಹೋಗಿ ಕುದ್ದ ಕೂಡ್ಲೆ ದುರ್ಯೋಧನ "ಇಂದ್ ಯಾರ್ ಭೀಮ?"ಂತ ಒಂದು ಕುಚೋದ್ಯದ ಪ್ರಶ್ನೆ ಕೇಳ್‌ತಿತ್ತ್.

ದ್ರೌಪದಿನ ಐದ್ ಜೆನ ಪಾಂಡವರ್ ಮೊದುವೆ ಅದ್ದ್ ಒಂದು ವಿಚಿತ್ರ ಸಂಗತಿಯಾಗಿತ್ತ್. ಅವಹೇಳನ, ಅಪಹಾಸ್ಯ ಮಾಡಿಕೆ ಕೆಟ್ಟ ಮನ್ಸ್‌ನ ಜೆನಕೆ ಇದೊಂದು

ವಿಷಯವಾಗಿತ್ತ್. ಚರಿ ಬಾಯಿನ ಅಗಿಯೊವುಕೆ ಅವ್ರಲು ಸಿಕ್ಕಿದಾಂಗ ಆತ್. ಐದ್ ಜನರ್ಲ್ಲಿ ಒಬ್ಬೊಬ್ಬನಾಂಗೆ ದ್ರೌಪದಿನ ಉಪಯೋಗ್ಸಿಕಂಡವೇನೋಂತ ಅವರ ಕೆಟ್ಟ ಮನ್ಸ್‌ನ ಕುತೂಹಲ. ಆ ಪ್ರಶ್ನೆನ ಉದ್ದೇಶ ಕೌರವ ಕೂಟದವ್ಕೆಲ್ಲ ಗೊತ್ತಿದ್ದಳದೇ. ಹಾಂಗೆ ಈ ಪ್ರಶ್ನೆನ ಕೇಳ್ದ ಕೂಡ್ಲೇ ಅವೆಲ್ಲ ಭಗ್ಗನೆ ನೆಗಾಡ್‌ತಿದ್ದೊ. ಭೀಮಂಗೆ ಕೋಪ, ನಾಚಿಕೆ ಎಲ್ಲ ಆತಿತ್ತ್. ಆದರೆ ಏನೂ ಮಾಡಿಕೆ ಆತಿತ್ತ್‌ಲೆ. ಹಾಂಗ ಒಂದು ದಿನ ಭೀಮ 'ನಾ ಹೋದುಲೆ. ನಕುಲ ಸಹದೇವನೋ,– ಅರ್ಜುನನೋ, ಅವರ್ಲ್ಲಿ ಯಾರಾರ್ ಹೋಗಲೀಂತ ಭೀಮ ಹೇಳ್ತ್. ಕೃಷ್ಣ, ಯುಧಿಷ್ಠಿರ ಏನ್ ಕಾರಣಂತ ವಿಚಾರ್ಸಿಕನ ಅಲ್ಲಿನ ವಿದ್ಯಮಾನನ ಭೀಮ ಹೇಳಿ "ಈ ಅವಮಾನನ ತಡಿಯಕೆ ಆದ್‌ಲೆ. ಆಗಳೆ ಅವನ ಮುಸುಂಡ್‌ಗೆ ನನ್ನ ಗದೆಲಿ ಕುಟ್ಟಿ ಅವನ ಹಲ್ಲ್‌ಗಳೆಲ್ಲ ಉದುರ್‍ಸೊಕುಂತಾದೆ." ಅದಿಕೆ ಕೃಷ್ಣ "ಓ! ಅಷ್ಟೇನೋ? ಅದಿಕೆ ಮೊದ್ದರಿಯಕೆ ನಂಗೆ ಗೊತ್ತುಟು. ಇಂದ್ ನೀನೇ ಹೋಗು. ಅಂವ "ಇಂದ್ ಯಾರ್ ಭೀಮ?ಂತ ಕೇಳ್ದ ಕೂಡ್ಲೆ ಗಟ್ಟಿಯಾಗಿ "ಇಂದ್ ಯಾರ್‌ೀಂತ ಹೇಳಿರೆ ಏನರ್ಥ? ಇಂದೂ ಯಾಗೋಳುನಾಂಗೆ ಗಂಧರ್ವನೆ ಅಲ್ಲೋ"ಂತ ಹೇಳಿ ಬುಡು! ಅಷ್ಟ್ ಸಾಕ್‌ಂತ ಕೃಷ್ಣ ಉಪದೇಶ ಕೊಟ್ಟ್ ಭೀಮನ ಕಳ್ಸಿತ್. ಭೀಮಂಗೆ ಕೃಷ್ಣನ ಯುಕ್ತಿ ಮಾತ್‌ನ ಒಳ ಅರ್ಥ ಗೊತ್ತಾತ್‌ಲೆ. ಕೆಲವು ಗುಟ್ಟುಗ ಗುಟ್ಟಾಗಿದ್ದರೇ ಆ ಗುಟ್ಟು ತಾನಾಗಿ ಒಡಿಯಕನ ಅದರ ಸ್ವಾರಸ್ಯ ಹೆಚ್ಚಿ ಹಾಂಗೆ ಕೃಷ್ಣ ಇಷ್ಟ್ ಮಾತ್ರ ಹೇಳಿ ನೆಗಾಡಿಕಂಡ್ ಸುಮ್ಮನಾತ್. ಭೀಮ ದಪ್ಪಮೋರೆ ಮಾಡಿಕಂಡ್ ದುರ್ಯೋಧನನ ಒಡ್ಡೋಲಗನ ಪ್ರವೇಶಿಸಿತ್. ಭೀಮ ಏನ್ ಇನ್ನೂ ಬಾತ್‌ಲೇಂತ ದುರ್ಯೋಧನ ಕಾದ್‌ಕಂಡೇ ಇತ್ತ್. ಭೀಮ ಬಂದ್ ಕುದ್ದ ಕೂಡ್ಲೆ ಕಣ್ಣ್ ಮಿಟ್ಕ್‌ಸಿಕಂಡ್ ಇಂದ್ ಯಾರ್ ಭೀಮಂತ ಒಂದು ಅಶ್ಲೀಲ ಆನಂದನ ಆನಂದ್‌ಸಿಕಂಡ್ ಕೇಳ್ತ್. ಭೀಮ ಥಟ್ಟನೆ, "ಇಂದ್ ಯಾರ್‌ಂತೇಳಿರ ಏನ್ ಹೇಳುದು? ಎಂದ್‌ನಂತೆ ಇಂದೂ ಗಂಧರ್ವನೇ ಅಲ್ಲೋ?"ಂತ ಪ್ರತ್ಯುತ್ತರ ಕೊಟ್ಟಳತ್. ಇದರ ಕೇಳ್ದ ದುರ್ಯೋಧನ, ಮರ್ಮಕೆ ಪೆಟ್ಟ್ ಬಿದ್ದಾಂಗ ಮೋರೆಲ್ಲ ಕಪ್ಪಾಗಿ, ಗರುಡನ ಕಂಡ ಸರ್ಪ ಜೇಡ ಮುಚ್ಚುವಾಂಗೆ ಮೋರೆ ಕೆಳಗೆ ಹಾಕಿತ್. ಅಂದ್ ಓಲಗ ಬೇಗನೆ ಮುಗ್ಸಿತ್. ಮತ್ತೆ ಸೀದಾ ಅಂತಃಪುರಕ್ಕೆ ಹೋಗಿ, ಯಾರ್‍ನೂ ಒಳಗೆ ಬುಡ್ಬಡಿಂತೇಳಿ ಬಾಗ್‌ಲ್ ಕಾಯೊವುಕೆ ಕಟ್ಟಪ್ಪಣೆ ಮಾಡಿ, ಒಳಗೆ ಹೋಗಿ ಕಂಪರ ಮಲ್ಗಿತ್. ಅಂದ್‌ಂದ ಮೇಲೆ ಮೂರು ನಾಲ್ಕ್ ದಿನ ಒಡ್ಡೋಲಗಕೆ ರಜೆ. ಯಾವ ಚಟುವಟಿಕೆ ಮಾತ್‌ಕತೆಗ, ಪಾನಗೋಷ್ಠಿ, ಅಟ್ಟ ಹಾಸಗ ಒಂದೂ ಇಲ್ಲದೆ, ವಾತಾವರಣ ಸೂತಕದ ಮನೆ ಇದ್ದಾಂಗಿತ್ತ್.

ರಾಜನ ಒಡನಾಡಿಗಳಿಗೆಲ್ಲ ರಾಜ ಹೀಂಗೆ ಮಾಡ್ತ್ ಒಂದು ಒಗಟ್‌ನಾಂಗ ಕಂಡಳತ್. ಏಕೆ ಹೀಂಗೆ ಪ್ರಾಯೋಪವೇಶ ಮಾಡವರ ಹಾಂಗೆ ಅನ್ನ ನೀರ್ ಬುಟ್ಟ್, ಯಾರ್‍ನೂ ನೋಡದೆ ಮಾತಾಡದೆ ಉಟ್ಟುಂತ ಅವವೇ ಚರ್ಚೆ ಮಾಡಿಕಂಡೊ. ಪ್ರಶ್ನೆ ಕೇಳಿಕಂಡೊ. ಯಾರಿಗೂ ಉತ್ತರ ಹೊಳ್ತ್‌ಲೆ ಕಡೆಗೆ ರಾಜನೊಟ್ಟಿಗೆ ಆತ್ಮೀಯ ಹೊಕ್ಕು ಬಳಕೆ ಒಳ್‌ದ್ ಕರ್ಣಂಗೇ. ಹಾಂಗೇ ಕರ್ಣನೇ ರಾಜನ ನೋಡಿ ವಿಚಾರ್‍ಸೊಕುಂತ

ಒಳ್ಳೂವಲ್ಲ ಕೇಳಿಕಂಡೊ. ಕರ್ಣ ಮಾರ್ಣೇ ದಿನ ಪೊಳ್ತಿಗೆ ರಾಜನ ಅಂತಃಪುರಕ್ಕೆ ಪೋತು. ರಾಜಂಗೂ ಕರ್ಣಂಗೂ ಇರುವ ಸಲುಗೆನ ಬಗ್ಗೆ ಗೊತ್ತಿದ್ದ ಬಾಗಲ್ ಕಾಯೊವ್ರು ಅವನ ತಡಿಯದೆ ಒಳಗೆ ಬುಟ್ರೊ. ದುರ್ಯೋಧನ ಮಾತಾಡದೆ ಮಲ್ಕ್ಯಂಡಿತ್ತ್. ಕರ್ಣ ಮೆಲ್ಲ ಕರ್ತ್ ನಿನ್ನ ಮಿತ್ರ ಕರ್ಣ ಬಂದೊಳೆ. ಮಾತಾಡ್ ಮಿತ್ರಾಂತ ಹೇಳ್ತ್. ಆದರೆ ದುರ್ಯೋಧನ ಮುಚ್ಚಿದ ಕಣ್ಣ್ ಬುಟ್ಟಿತ್‌ಲೆ. ಜಿಗಿದ ಬಾಯಿ ಬಿಚ್ಚಿತ್‌ಲೆ. ನಿದ್ದೆ ಮಾಡ್ತವರ ಎದ್ದರ್‌ಸಕ್ ಆದರೆ ಹೀಂಗೆ ನಿದ್ದೆ ಮಾಡ್ವಾಂಗೆ ನಟಿಸೊವರ ಎದ್ದುರ್ಸುದು ಕಷ್ಟ. ಹೀಂಗೆ ಕರ್ಣ ತುಂಬ ಪೇಚಾಡ್ದ ಮೇಲೆ ದುರ್ಯೋಧನ ಮೆಲ್ಲ ಎದ್ದ್ ಕುದ್ದಿತ್. "ಏನಾತ್ ಮಿತ್ರಾ? ನಾಲ್ಕಾರ್ ದಿನಂದ ನಾವ್ಗೆ ಮೋರೆ ತೋರ್ಸದಂತ ಆಪತ್ತ್ ಏನ್ ಬಾತ್ ನಿಂಗೆ?" ಕರ್ಣ ಆತ್ಮೀಯವಾಗಿ ಕೇಳ್ತ್. ಅದಿಕೆ ದುರ್ಯೋಧನ, "ಏನ್ಂತ ಹೇಳ್ದು ಹೇಳ್! ಯಾರಿಗೂ ಹೇಳಿಕೆ ಆಗದಂತ ನಾಚಿಕೆನ ಹೊರೆ ಹೊತ್ತ್‌ಕಣ್ಂಡ್ ನಾ ಇದ್ದೆ. ಈಗ ಆ ನಾಚಿಕೆಗೇಡ್‌ನ ವಿಷಯ ಹೇಂಗೋ ನಮ್ಮ ವಿರೋಧಿಗಳಿಗೆ ಗೊತ್ತಾಗುಟುಂತೇಳ್ದು ಮೊನ್ನೆ ಓಲಗಲಿ ನನ್ನ ಹಾಸ್ಯದ ಪ್ರಶ್ನೆಗೆ ಭೀಮ ಕೊಟ್ಟ ಉತ್ತರಂದ ಗೊತ್ತಾತ್. ಇನ್ನ್ ಅವು ಅದರ ಜಗಜ್ಜಾಹೀರ್ ಮಾಡಿ ನನ್ನ ಮಾನನ ಮೂರು ಕಾಸಿಗೆ ಹರಾಜ್ ಹಾಕುದು ಖಂಡಿತ. ಇದೇ ನನ್ನ ಪರಿಹಾರ ಕಾಣದ ವ್ಯಥೆಗೆ ಕಾರಣ"ಂತ ಹೇಳಿ ಮತ್ತೆ ಮೌನ ಆತ್. "ನಾವು ಹೇಂಗೂ ಜೀವದ ಮಿತ್ರರ್ ಆಗಿ. ನೀನ್ ತಾನ್ಂತ ಹೇಳುವ ಭೇದ ಇಲ್ಲದೆ ಒಳೊ. ಹಾಂಗಿರ್‌ಕನ ಆ ಸಮಸ್ಯೆನ ನನ್ನೊಟ್ಟಿಗೆ ಹೇಳಿಕೆ ಆಗೇದೋ? ನಂಗೂ ಗೊತ್ತು ಮಾಡಿಕೆ ಆಗದಂತ ಗುಟ್ಟುನ ನೀ ಇಸಿಕಣ್ಂಡ್ ಒಳಂತ ಹೇಳಿರೆ, ನನ್ನ ಪ್ರಾಣಸ್ನೇಹಿತಂಗೆ ನನ್ನ ಮೇಲೆ ನಂಬಿಕೆ ಇಲ್ಲೇಂತಾತಲೇಂತ ನಂಗೆ ತುಂಬ ವ್ಯಥೆ ಆವೇಂತ" ಕರ್ಣ ಹೇಳ್ತ್. "ಅಯ್ಯೋ ಹಾಂಗೆ ತಿಳಿಬೇಡ. ಹಾಂಗೆ ನಿನ್ನಿ ನಿಂಗೆ ಹೇಳದಿದ್ದಿಲ್ಲ್ ಅಲ್ಲ. ಈಗ ಹೇಳಿ ಬುಟ್ಟನೆ. ಬಾ ನಾವು ಏಕಾಂತದ ಕೋಣೆಗೆ ಪೋಯಿ. ಹಗಲ್ ಗೋಡೆಗೂ ಕೆಬಿಂತೇಳುವ ಮಾತುಟ್ಟಲೆ?

ಇಬ್ಬೊರೂ ಏಕಾಂತದ ಕೋಣೆಲಿ ಕುದ್ದ ಮೇಲೆ ದುರ್ಯೋಧನ ಮಾತಿಗೆ ಸುರು ಮಾಡ್ತ್. "ಲೋಕಲಿ ಸಾಧಾರಣವಾಗಿ ನಡಿಯದ ಈ ನನ್ನ ಕತೆನ ಸಹಾನುಭೂತಿಂದ ಕೇಳ್ ಕರ್ಣ. ನಾ ನಿತ್ಯ ಕತ್ತಲೆಗೆ ನನ್ನ ಶಯ್ಯಾಗೃಹಕ್ಕೆ ಹೋಗಿ ಮಲ್ಗುವ ಹೊತ್ತಿಗೆ ಕಾದ್‌ಕಣ್ಂಡೇ ಇದ್ದಾಂಗೆ ಒಬ್ಬ ಗಂಧರ್ವ ಒಳಗೆ ಬಾದು. ಅಂವ ಬಂದಾಕನೇ ನಂಗೆ ಅರ್ಧ ಸ್ಮೃತಿ ತಪ್ಪಿದಾಂಗೆ ಆದು. ಅಂವ ನನ್ನ ಕೈಕಾಲ್‌ಗಳ ಕಟ್ಟಿ ಒಂದು ಕರೆಗೆ ಹಾಕಿ ನನ್ನ ಪಕ್ಕ ಮಲ್ಗಿದ್ದ ನನ್ನ ಹೆಣ್ಣ್ ಭಾನುಮತಿನ ಮೇಲೆ ಏನೋ ವಶೀಕರಣ ಮಂತ್ರ ಹೇಳಿ, ಅದರ ಸೀರೆನಲ್ಲ ಬಿಚ್ಚಿ ಹಾಕಿ. ಬೊಳ್ಪಾಕನ ಮುಟ್ಟ ಕಾಮ ಕ್ರೀಡೆ ನಡ್ಸಿ ಮತ್ತೆ ಹೊರ್ಟ್ ಹೋದು. ನಂಗೆ ಅವನ ನಿಗ್ರಹಿಸಿಕೆ ಸಾಧ್ಯವೇ ಆತಿತ್ತ್‌ಲೆ. ಇದ್ ನಿತ್ಯವೂ ನಡಿವ ಕಾರ್ಯವಾಗಿತ್ತ್. "ನನ್ನ ಗತಿ ಹೀಂಗಾಗುಟು. ನಂಗೆ ಸಂತೋಸೂ ಇಲ್ಲೆ. ಹೊರಿಕೆ ಪೊತ್ತದ ನಾಚಿಕೆ ಬೇರೆ. ನಾ ನಿನ್ನಿನ. ಇದಿಕೆ ಪರಿಹಾರ ಕೊಡಿಕೆ, ನನ್ನ ಮರ್ಯಾದೆನ ಕಾಪಾಡಿಕೆ ನೀ ಒಬ್ಬನೆ ಸಮರ್ಥ. ನಾ ಹೇಳ್ದಾಂಗೆ ನೀ ಮಾಡುವನೋ". ದುರ್ಯೋಧನ

ಕರ್ಣನ ಕೇಳ್ತ್. ಅದಿಕೆ ಕರ್ಣ "ನಿಂಗೆ ಬೇಕಾಗಿ ನನ್ನ ಜೀವನೇ ಕೊಡಿಕೆ ತಯಾರ್. ಹೇಳ್! ನಾ ಏನ್ ಮಾಡೊಕು?" ಕರ್ಣ ಕೇಳ್ತ್. 'ಒಂದು ರಾತ್ರೆ ನೀ ನಿನ್ನ ಬಿಲ್ಲ್ ಬಾಣಗಳ ಹಿಡ್ಕಂಡ್ ಬಂದ್ ನಾ ಮಲ್ಗುವ ಜಾಗೆಲಿ ಮಲ್ಗಿ ಆ ಗಂಧರ್ವಂಗೆ ಬುದ್ಧಿ ಕಲ್ಸೊಕು. ಅಷ್ಟೊಂದು ಉಪಕಾರ ಮಾಡೊಕು. ಮಾಡುವನೋಂತ' ದುರ್ಯೋಧನ ಕೇಳ್ತ್. "ಆಗಲಿ"ಂತ ಕರ್ಣ ಸಂಕೋಚಂದ ಒಪ್ಪಿಕಂಡತ್. "ಇಂದ್ ರಾತ್ರೆ ನಾ ಭಾನುಮತಿಗೆ ಹೇಳಿ ಒಪ್ಪುಸಿನೆ". ಹೀಂಗೆ ದುರ್ಯೋಧನ ಹೇಳ್ತ್.

ಹೀಂಗೆ ಏರ್ಪಾಡ್ ಮಾಡ್ದ ಪ್ರಕಾರ ಮೊರ್ದಿನ ಕರ್ಣ ತಯಾರಾಗಿ ಬಂದ್ ದುರ್ಯೋಧನನ ಮಲ್ಗುವ ಕೋಣೆಗೆ ತಕ್ಕ ಸಮಯಲಿ ಹುಕ್ಕತ್. ಮತ್ತೆ ಬಿಲ್ಲ್ ಬಾಣಗಳ ಪಕ್ಕಕ್ಕಿಸಿ, ಹಾಸಿಗೆಲಿ ಭಾನುಮತಿ ಮಲ್ಗಿದ ಪಕ್ಕಲಿ ಮಲ್ಗಿತ್. ಗಂಧರ್ವಂಗೆ ಯಾರ್ಂತ ಗೊತ್ತಾಗದ ಹಾಂಗೆ ಮೋರೆಗೆ ಮುಸುಕು ಹಾಕಂಡ್ ಮಲ್ಗಿತ್. ಆಗ ಗಂಧರ್ವ ಸಂಭ್ರಮಲಿ ಒಳಗೆ ಬಾತ್. ಬೇರೊಬ್ಬನ ಹೆಣ್ಣ್‌ನೊಟ್ಟಿಗೆ ಹೇಂಗೇಂಗೆ ರಾಸಲೀಲೆ ಆಡುದುಂತ ಮನ್ಸ್‌ನೊಳಗೆ ಲೆಕ್ಕ ಹಾಕಂಡ್, ತನಿಗೆ ತಾನೇ ನೆಗಾಡಿಕಂಡ್. ಅಂತಃಪುರದ ಬಾಗ್‌ಲ್‌ಂದ ಒಳಗೆ ಒಂದು ಕಾಲ್ ಇಸುದೇ ತಡು, ರೊಯ್ಯಂತ ಕರ್ಣ ಬುಟ್ಟ ಬಾಣ ತಾಂಗಿ ಹೊರಗೆ ರಟ್ಟಿ ಬೀತ್. ಕರ್ಣ ಹೋಗಿ ಬಿದ್ದವನಎದ್ದ್‌ರ್ಲಿ, ಬೇರೊಬ್ಬನ ಹೆಣ್ಣ್‌ನ ಸುಖ ಇನ್ನೂ ನಿಂಗೆ ಬೇಕೋಂತ ಕೈಬೀರಿ ಅವನ ಮುಸುಂಡಿಗೆ ಗುದ್ದಿತ್. ಇನ್ನೊಮ್ಮೆ ಕೈ ಬೀರ್‌ಕನ 'ದಮ್ಮಯ್ಯ–ಬುಟ್ಟುಡು. ಇನ್ನ್ ಮುಂದೆ ಈ ತೊಪ್ಪು ಮಾಡಿಕಿಲೆ. ಇನ್ನ್ ಮುಂದೆ ಇತ್ತ ಸೋಂಕಿಕಿಲ್ಲೆಂತ ಎಲ್ಲ ದೇವ್ರುಗಳ ಮೇಲೆ ಆಣೆ ಬಾಸೆ ಹಾಕಿತ್. ನಾ ಹಾಂಗ ಮಾಡ್ಯೊಳೆ. ಹೀಂಗೆ ಮಾಡ್ಯೊಳೆಂತೇಳಿ ಎಲ್ಲ್ಯಾರ್ ನೀ ಬಡಾಯಿ ಕೊಚ್ಚುದು ಕೇಳಿ ಬಂದರೆ, ನೀ ಮಾತ್ರ ಅಲ್ಲ ನಿನ್ನ ಕುಲದವರ ಎಲ್ಲರ್‌ನೂ ಕೊಚ್ಚಿ ಹಾಕದೆ ಬುಡಿಕಿಲೇಂತ ಕರ್ಣ ಹೆದ್‌ರ್ಲಿ ಬೇಗ ಇಲ್ಲಿಂದ ಓಡುಂತೇಳ್ಕನ ಅಂವ ಹುಲ್ಲು ಹುಟ್ಟಿದಾಂಗೆ ಓಟ ಹಿಡ್ತ್.

ಗಂಧರ್ವ ಇನ್ನೆಲ್ಲಿಯಾರ್ ಬಂದದೆನೋಂತ, ಕರ್ಣನ ಕೈ ಹಿಡ್ಕಂಡ್, ಹೊರಗೆ ನೋಡಿಕಂಡೇ ಭಾನುಮತಿ ಮಲ್ಗಿತ್. ಅದರ ಮನ್ಸ್‌ಲಿ ಏನೇನೋ ನಿರೀಕ್ಷೆಗ ತೆರೆಗಳಾಂಗೆ ಎದ್ದ್‌ಕಂಡ್ ಅದಿಕೆ ನಿದ್ದೆನೆ ಬಾತ್‌ಲೆ. ಕರ್ಣ ಮಲ್ಗಿದ್ದಲ್ಲಿ ಹಜ್ಜ ಅಲ್ಗಿರೂ ಅದ್ ಮನ್ಸ್‌ಲಿ ಚುರುಕಾತ್ತಿತ್ತ್. ಹಜ್ಜ ಹೊತ್ತುಲಿ ಕರ್ಣ ಮೆಲ್ಲ ಎದ್ದ್, ಭಾನುಮತಿನ ಕಾಲ್‌ನ ಕಡೆಗೆ ಮಲ್ಗಿತ್. ಮತ್ತೆ ಗಾಡ ನಿದ್ದೆಲಿ ಇದ್ದವರ ಹಾಂಗೆ ಇತ್ತ್. ಭಾನುಮತಿ ನಿದ್ದೆ ಮಾಡ್ತ್‌ಲೇಂತ ಕರ್ಣಂಗೆ ಗೊತ್ತಾತ್. ಅಂವ ಕನ್ಸ್‌ಲಿ ಮಾತಾಡುವ ಹಾಂಗೆ ಅಸ್ಪಷ್ಟವಾಗಿ ಮಾತಾಡ್ತ್. "ಎಲೇ ರಾಜಹಂಸೆಯೇ ಈ ನೀರಿಲ್ಲದ ಕೊಳಲಿ ವಿಹರ್ಸಿಕೆ ಸಾಧ್ಯ ಆಕಿಲ್ಲೆಂತ ಹೇಳಿ, ಇನ್ನೊಂದು ಪಕ್ಕಕೆ ಹೊಣ್ಕಿ ಮಲ್ಗಿತ್. ಭಾನುಮತಿ ನಿಟ್ಟುಸಿರ್ ಬಟ್ಟ್‌ಕಂಡ್, ಅರೆ ನಿದ್ದೆ ಅರೆ ಎಚ್ಚರಂತ ಹೇಂಗೋ ಬೊಳ್ಪು ಮಾಡ್ತ್.

ಅಂದ್‌ಂದ ಮೇಲೆ ಗಂಧರ್ವನ ತೊಂದರೆಯಿಲ್ಲದೆ ದುರ್ಯೋಧನ ಭಾನುಮತಿಯರ ಜೀವನಕೆ ಹೊಸ ಸಂತೋಷ ಒಂದು ಬಂದಾಂಗಾತ್. ಸುಖಲೇ ಅವರ ದಿನಗ ಕಳಿಯುತಿದ್ದೊ. ದುರ್ಯೋಧನನೂ ಅವನ ಕೂಟದವರೊಟ್ಟಿಗೆ

ಓಂದೆನಾಂಗೆ ಸೇರಿಕೆ ಸುರುಮಾಡ್ತ್. ಎಲ್ಲೊವ್ರು ಹರ್ಷಂದಲೇಳಿ ಕಾಲಕಳಿಯತಿದ್ದೊ. ಹೀಂಗಿದ್ದರೂ, ದುರ್ಯೋಧನಂಗೆ ಮನ್ಸ್‌ನೊಳಗೇ ಒಂದು ಸೊಂಸಯದ ಕೀಟ ಕೊರಿಯುತ್ತಲೇ ಇತ್ತ್. ಕರ್ಣ ತನಿಗೆ ಪರಮಾಪ್ತಮಿತ್ರ. ಗಂಧರ್ವನ ಹಾವಳಿನ ಇಲ್ಲದೆ ಮಾಡಿ ತನಿಗೆ ಉಪಕಾರ ಮಾಡ್ತ್. ಆದರೆ ಒಂದು ರಾತ್ರ, ತನಿಗೆ ಮೀಸಲಾಗಿದ್ದ ಜಾಗೆಲಿ ಮಲ್ಗಿತ್ತ್. ಅವನ ಪಕ್ಕಲೆ ಮಲ್ಕ್ಯಂಡ್ ಇದ್ದ ಹೆಣ್ಣ್, ಅಂವನ ಶೌರ್ಯ, ಧೈರ್ಯ ಮತ್ತೆ ರೂಪು ಯೌವನ ನೋಡಿ ಆಕರ್ಷಣೆಗೆ ಒಳೆಗಾದು ಸಹಜ. ಅದೇ ರೀತಿ ಸೌಂದರ್ಯವತಿಯಾದ ಒಂದು ಕೋಮಲೆ, ಏಕಾಂತಲೇಲಿ, ತನ್ನ ಕೈಯಳ್ತಲೇ ಮಲ್ಕ್ಯಂಡ್ ಇರ್ಕನ, ಅವನ ಮನ್ಸ್ ಚಂಚಲ ಆಗದೆ ಇರಿಕೆ ಸಾಧ್ಯನೋ? ಹೀಂಗೆ ಅವಂಗೆ ಒಮ್ಮೊಮ್ಮೆ ಮನ್ಸ್ ಚಂಚಲ ಆತಿತ್ತ್. ಆದರೆ ತನ್ನ ಪರಮಾಪ್ತ ಮಿತ್ರನ ಮೇಲೆ ಈ ಅಪನಂಬಿಕೆ ಇಸುದು ಅಪರಾಧಂತಲೇಳೂ ಆಗಿ ಅವನ ಮನ್ಸ್ ಅಲ್ಲೋಲ ಕಲ್ಲೋಲ ಆತಿತ್ತ್. ಈ ವಿಚಾರನ ಭಾನುಮತಿನೊಟ್ಟಿಗೆ ವಿಚಾರ್ಲೊನೊಂತ ಹೇಳಿರೆ ಅದ್ ದೊಡ್ಡ ರಾದ್ಧಾಂತ ಆದು. ಹೀಂಗೆ ಕತ್ತ್‌ರಿಲಿ ಸಿಕ್ಕಿಕಂಡ ಅಡಿಕೆ ನಾಂಗಾತ್ ಅವನ ಅವಸ್ಥೆ.

ಹೀಂಗೇ ಕೆಲೊವ್ರು ಸಮಿಯ ಕಳೀತ್ತ್. ಕರ್ಣನ ಹೆಣ್ಣ್ ಬೊಸ್‌ರ್‌ಗಡಂತ ಸುದ್ದಿ ಬಾತ್. ತನ್ನ ಜೀವದ ಜೀವಂತ ಇರುವ ಮಿತ್ರನ ಹೆಣ್ಣ್ ಬೊಸ್‌ರ್ ತನ್ನ ಮಿತ್ರ ಕೂಸುನ ಅಪ್ಪ ಆದೆಂತ ದುರ್ಯೋಧನ ಬಾರಿ ಸಂಭ್ರಮಪಟ್ಟಲೇತ್. ಬೊಸ್‌ರಾದ ಹೆಣ್ಣ್‌ಗೆ, ಸಂಟ್ರ, ಇಷ್ಟರ್ ನಾನಾ ತರದ ಹಣ್ಣ್ ಹಂಪಲ್ ಬಗೆ ಬಗೆನ ತಿಂಡಿ ತಿನಲೇಸ್‌ಗಳ ಮಾಡಿ ತಕಲೇಂಡ್ ಹೋಗಿ ಸಮ್ಮಾನ ಮಾಡುದು ಪೂರ್ವಂದಳೇ ನಡ್ಡ್ ಬಂದ ಪದ್ಧತಿ. ನಾವೂ ಹಾಂಗೇ ಮಾಡೊನೊಂತ ದುರ್ಯೋಧನ ಭಾನುಮತಿನೊಟ್ಟಿಗೆ ಹೇಳ್ತ್. ಭಾನುಮತಿ ಆಶ್ಚರ್ಯಂದ ನಂಬಿಕೆ ಬಾರದವರ ಹಾಂಗೆ, "ಏನ್? ಕರ್ಣನ ಹೆಣ್ಣ್ ಬೊಸ್‌ರೊ! ಬಾರಿ ಆಶ್ಚರ್ಯಂತ" ತನಿಗೆ ತಾನೇ ಹೇಳಿಕಂಬ ಹಾಂಗೆ ಮೆಲ್ಲ ಹೇಳಿಕಲೇಂಡ್ ನೆಗಾಡ್ತ್. ಇದರ ನೋಡಿ ದುರ್ಯೋಧನಂಗೆ ಖಾತ್ರಿ ಆತ್. ತನ್ನ ಮಿತ್ರ ನಿರ್ದೋಷಿ ಅಂತ ಚೆನ್ನದಂತ ಗುಣದವನ ಮೇಲೆ ಸೊಂಸಯ ಪಟ್ಟ ನಾ ದುರ್ಯೋಧನ ಅಲ್ಲ ನಾ ದುರ್ಯೋಚನನೇ ಸಲೇರಿಂತ ಹೇಳಿಕಂಡಲೇತ್. ಅಂದ್‌ನ ರಾತ್ರಿ ಏನೇನ್ ನಡ್ತ್‌ಂತ ಭಾನುಮತಿನ ಕೇಳ್ತ್. ಭಾನುಮತಿನೂ ಮನ್‌ಸ್ ಬಿಚ್ಚಿ ಎಲ್ಲ ಹೇಳ್ತ್. ಅವನ ವರ್ತನೆಂದ, ಅಂವ ಕನವರ್ಸಿ ಹೇಳ್ದ ಮಾತ್‌ಂದ, ಅಂವಷಂಡಂತ ಇದ್‌ವರೆಗೆ ತಿಳ್ಕಂಡಿದ್ದೆಂತ ಹೇಳ್ತ್.

ಹೀಂಗೆ ಇದ್ದ ಮೋಡಗ ಎಲ್ಲ ಚೆದ್‌ರಿ ಎಲ್ಲರ ಮನ್ಸ್‌ಂತೇಳುವ ಆಕಾಶ ತಿಳಿಯಾತ್. ಮತ್ತೆ ದುರ್ಯೋಧನ ದಂಪತಿಗ ಎಲ್ಲ ವೈಭವಂದ ಕರ್ಣನ ಹೆಣ್ಣ್‌ಗೆ ಬಯಕೆ ಸಂಭ್ರಮನ ಆಚರ್ಸಿ ಬಂದೊ.

ಈ ಇಡೀ ಕಥಾಂಶನ ಹಿಂದೇನೇ ಹೇಳ್ದಾಂಗೆ, ಮುಳಿಯ ತಿಮ್ಮಪ್ಪಯ್ಯನೊವ್ರು 'ನಡತೆಯ ನಾಡು'ಂತೇಳ್ವ ಅವರ ಲೇಖನಲೇಲಿ ವಿಸ್ತಾರವಾಗಿ ಬರ್ದೊಳೊ. ಮತ್ತೆ ಕಡೆಲಿ ಕರ್ಣನ ಗುಣನ ತುಂಬ ಕೊಂಡಾಡಿಯೊಳೊ. ನಿಜವಾಗಿ ಕರ್ಣನಂತ ಸ್ವಚ್ಛ ಮತ್ತೆ ಸತ್ವ ಗುಣದಂತ ಪಾತ್ರ ಭಾರತಲೇಲಿ ಬೇರೊಬ್ಬ ಇಲ್ಲೆಂತ ಹೇಳಲೇಕ್. ಮೇಲೆ ಹೇಳ್ದ ಕತೆ ಮೂಲಲೇಲಿ

ಇಲ್ಲದಿದ್ದರೂ, ಮತ್ತನ ಯಾರೋ ಬುದ್ಧಿವಂತಲೆರ್ ಸೇರ್ಲ್ದೇ ಆದರೂ, ಅವನ ಕಾಂತಿನ ಇನ್ನಷ್ಟ್ ಹೆಚ್ಚುವ ಹಾಂಗೆ ಮಾಡಿಯೊಳೊ. ಅವನ ಅಯ್ಯ ಕುಂತಿ ಸಣ್ಣೆತರ್ಲಿ ಮಾಡ್ದ ತೊಪ್ಪುಂದಾಗಿ ಕರ್ಣನ ಇಡೀ ಜೀವನ ಹಾಳಾತ್. ನಾನಾ ತರದ ಅವಸಮಾನಕ್ಕೊಳಗಾತ್. ದುರ್ಯೋಧನನ ಹಂಗ್‌ಗೆ ಬಿದ್ದದರ್‌ಂದಾಗಿ ಅಂವನೂ ಕೆಲಲೆವು ತೊಪ್ಪುಗಳ ಮಾಡುವ ಹಾಂಗಾತ್. ಓಂಗಿದ್ದರೂ ಅಂವನಲೆಲ್ಲಿದ್ದ ಹಲೊವು ಉದಾತ್ತ ಗುಣಗಳ ಕೊಂಡಾಡಿ, ಪಂಪ ಕವಿ, 'ಕರ್ಣನಿಂ ಕರ್ಣ ರಸಾಯನಮಲ್ತೆ ಭಾರತಂ?'ಂತ ಕೇಳಿಟು.

## ವ್ಯಾಸರ ಉಪದೇಶ : ಅರ್ಜುನನ ತಪಸ್ಸ್

ಕೌರವ ಪಾಂಡವರ ಎರ್ಡ್ ಪಕ್ಷದವ್ಕೂ ಮೂಲಪುರುಷರಾದೊ ವೇದವ್ಯಾಸ ರುಸಿಗ. ಹಾಂಗೆ ಇಬ್ಬರ್ನ್ನೂ ಒಂದೇ ತರ ನೋಡೊಕಾದ್ದ್ ನಿಜವಾದರೂ ಪಾಂಡವರ ಸದ್ಗುಣ, ಧರ್ಮ ಶ್ರದ್ಧೆಗಳ ನೋಡಿ, ಎಲ್ಲ ರುಸಿಗಲೆಳ್‌ಂತೇಳಿರೆ ತುಂಬ ಮೆಚ್ಚಿಕೆ. ಅವರ ಸಂಪೊತ್ತ್‌ನೆಲ್ಲ ಅನ್ಯಾಯಂದ ವಶಪಡ್ಸಿ ಅವರ ಕಾಡ್‌ಪಾಲ್ ಮಾಡ್ದ ಕಾರ್ಣ ಎಲ್ಲರ ಸಹಸಂತಾಪ ಇವರ ಮೇಲೇ ಹೆಚ್ಚಾಗಿತ್ತ್. ಕೌರವರ್ ಪಾಂಡವಲೆರ್ ಶರ್ತ ಪ್ರಕಾರ ವನವಾಸ ಮತ್ತೆ ಅಜ್ಞಾತವಾಸಗಳ ಮುಗ್ಸಿ ಬಂದರೂ ಯುದ್ಧ ಇಲ್ಲದೆ ಅವರ ರಾಜ್ಯನ ಬುಟ್ಟ್ ಕೊಡಿಕಿಲೆಂತ ಹೇಳ್ದ ಎಲ್ಲೊವ್ಕು ನಿಶ್ಚಯ ಆಗಿತ್ತ್. ಈಗನ ಸ್ಥಿತಿಲಿ, ಪಾಂಡವಲೆರಿಗೆ ಸೈನ್ಯಬಲ ಕಲೆಮ್ಮಿ ಇರುದರ್‌ಂದ ಗೆಲ್ಲಿಕೆ ಕಷ್ಟ ಉಟ್ಟು. ಅಲ್ಲದೆ ಕೌರವರ ಕಡೆಂದ ಭೀಷ್ಮ, ದ್ರೋಣ, ಅಶ್ವತ್ಥಾಮ ಕರ್ಣನಂತ ಮಹಾವೀರಲೆರ್ ಬೇರೆ ಒಳೊ. ಓಂಗಾಗಿ ಪಾಂಡವಲೆರೂ, ಮಹಾಸ್ತ್ರಗಳ ಸಂಪಾದ್ಸಿಕಂಬೊದು ಅಗತ್ಯಂತ ರುಸಿಗಳ ಅಭಿಮತ ಆಗಿತ್ತ್. ಅದಿಕ್ಕೆ ವ್ಯಾಸರ್ ಪ್ರತ್ಯಕ್ಷ ಆಗಿ "ನಾ ನಿಂಗೆ ಪ್ರತಿವೃತ್ತಿಂತೇಳುವ ಮಂತ್ರೋಪದೇಶ ಮಾಡಿನೆ. ನೀ ಅದರ ಅರ್ಜುನಂಗೆ ಏಕಾಂತಲೆಲಿ ಉಪದೇಶ ಮಾಡ್. ಅಂವ ಇಂದ್ರ ಕೀಲ ಪರ್ವತಕ್ಕೆ ಹೋಗಿ, ಪರಶಿವನ ಧ್ಯಾನಿಸಿಕಲೆಂಡ್ ತಪಸ್ಸ್ ಮಾಡಿ ಅವನ ಒಲ್ಸಿಕಲೆಂಡ್ ಅವಂದ ಮಹಾಸ್ತ್ರಗಳ ಪಡ್ಕಣಲೆಲಿ ಬೇರೆ ದೇವಾನೂ ದೇವತೆಗಲೆಳೂ ಅವಂಗ ನಾನಾ ತರದ ಆಯುಧಗಳ ಕೊಡುವ್ರೊಂತ ಹೇಳಿ ಏಕಾಂತಲೆಲಿ ಯುಧಿಷ್ಠರಂಗೆ ಮಂತ್ರೋಪದೇಶ ಮಾಡಿ ಮೊರ್ತ್ ಹೋದೊ. ಯುಧಿಷ್ಠಿರ ಅರ್ಜುನನ ಕರ್ದ್, ವ್ಯಾಸಲೆರ್ ಹೇಳ್ದ ವಿಚಾರನ ಹೇಳ್ತ್. ಅರ್ಜುನ ತಪಸ್ಸಿಗೆ ಹೋಕೆ ಒಪ್ಪಿ ಅವಂದ ಮಂತ್ರೋಪದೇಶಪಡ್ದ್ ಇಂದ್ರಕೀಲ ಪರ್ವತಕ್ಕೆ ಹೋತು. ಇಂದ್ರಕೀಲ ಪರ್ವತಂತ ಹೇಳಿರೆ ಹಿಮಾಲಯದ ಪಕ್ಕಲಿರುವ ದುರ್ಗಮ ಪ್ರದೇಶ ಅದರ್‌ಂದ ಆಚೆ. ಶಿವ ನೆಲ್ಸಿರುವ ಕೈಲಾಸ ಪರ್ವತ ಇಂದ್ರ ಕೀಲ ಪರ್ವತಕ್ಕೆ ಸಾಮಾನ್ಯವಾಗಿ ಯಾರೂ ಹೋತಿತ್ಲೆ. ಅಪರೂಪಾಗಿ ಕೆಲೊವು ರುಸಿಗ ಮಾತ್ರ ತಪಸ್ಸು ಮಾಡಿಕಲೆಂಡ್ ಇದ್ದೊ. ಅಲ್ಲಿ ಮೂಕದಾನವಂತೇಳುವ ಒಬ್ಬ ರಕ್ಕಸ ತುಂಬ ಉಪದ್ರ ಕೊಟ್ಟ್‌ಕಲೆಂಡ್ ಇತ್ತ್. ಅರ್ಜುನ ಅಲ್ಲಿಗೆ ಹೋದಂವ ಗಂಗೆಲಿ ಮಿಂದ್ದ್. ಒಂದು ಪ್ರಶಸ್ತ ಜಾಗೆಲಿ ತಪಸ್ಸಿಗೆ ಕುದ್ರಿಕೆ ತಯಾರ್ ಮಾಡಿಕಲೆಂಡ್ ಇರ್‌ಕನ ಮುಗಿ

ಹಾರಂವನ ವೇಸಟಿಲಿ ಇಂದ್ರ ಅಲ್ಲಿಗೆ ಬಂದಂವ 'ನೀ ಯಾರ್? ಈ ಎಳೆ ಪ್ರಾಯಟಿಲಿ ತಪಸ್ಸಿಗೆ ಬಾಕೆ ಕಾರಣ ಏನ್? ತಪಸ್ಸ್ ಮಾಡಂವಂಗೆ ಬಿಲ್ಲ್ ಬಾಣ, ಕಟಿತ್ತಿಸಂಥ ಆಯುಧಂಗ ಏಕೆ'ಂತ ವಿಚಾರ್ಸಿತ್. ಅದಿಕೆ ಅರ್ಜುನ ನನ್ನ ತಪಸ್ಸ್‌ನ ಉದ್ದೇಸ ಸ್ವರ್ಗ ಪಡಿಯೊಕುಂತಲ್ಲ. ನಮ್ಮ ರಾಜ್ಯದ ಸಂಪೊತ್ತ್‌ನೆಲ್ಲ ಕೌರವರ್ ಕಪಟ ಜೂಜುಲಿ ಎಳ್ಕಂಡ್ ನಮ್ಮ ಕಾಡ್‌ಪಾಲ್ ಮಾಡ್ದೊ. ಅವರ ಗೆಲ್ಲಿಕೆ ವಿಧವಾದ ಶಕ್ತ್ಯಾಯುಧಂಗ ಬೇಕಾದ್ದೆ. ಹಾಂಗೆ ದೇವಾನು ದೇವತೆಗಳ್ನೂ, ಪರಶಿವನ್ನೂ ಮೆಚ್ಚ್ಸಿ, ಶಸ್ತ್ರಾಸ್ತ್ರಗಳ ಪಡ್ಕಂಯೊದೇ ನನ್ನ ಉದ್ದೇಸಂತ ಹೇಳ್ತ್. ಇಂವ ತನ್ನಂಶಂದ ಹುಟ್ಟಿದ ಅರ್ಜುನಂತ ಇಂದ್ರಂಗೆ ಗೊತ್ತಾಗಿ ಸಂತೋಸಾತ್. ತನ್ನ ನಿಜ ರೂಪು ತೋರ್ಸಿನಾ ಇಂದ್ರ. ನೀ ನನ್ನ ಮಜ್ಜ ನಿಂಗೆ ಎಲ್ಲ ಒಳ್ಳೆದಾಗಟಿಲಿ ಕಠಿಣ ತಪಸ್ ಮಾಡಿ ಪರಶಿವನ ಮೆಚ್ಚ್ಸಿ ವರ ಪಡ್ಕ ನೀ ನೆನ್ಸಿದೆಲ್ಲ ಕೈಗೂಡಟಿಲಿಂತ' ಆಶೀರ್ವಾದ ಮಾಡಿ, ಮಾಯ ಆಗಿ ಹೋತು.

ಆ ಮೇಲೆ ಅರ್ಜುನ ಒಂದೇ ಮನ್ಸಂದ ಉಗ್ರ ತಪಸ್ಸಿಗೆ ಕುದ್ದಟಿತ್. ಅವನ ಒಂದು ಕಡೆಗೆ ಬಿಲ್ಲ್ ಬತ್ತಳಿಕೆ, ಇನ್ನೊಂದು ಕಡೆಗೆ ಖಡ್ಗ ಇತ್ತ್. ಅತ್ತಿತ್ತ ಹೋಂವ ರುಸಿಗಳ ವಟುಗ ಇಂವ ಎಂಥ ತಪಸ್ವಿಯಪ್ಪ? ಆಯುಧಗಳ ಇಸಿಕಟಿಂಡ್ ತಪಸ್ಸಿಗೆ ಕುದ್ದುಟುಂತ ಹೇಳಿಕಂಡೊ. ಸಾಮಾನ್ಯಮಟ್ಟಿಗೆ ಹೊಸ್ಬರ್ ಯಾರಾರ್ ತಪಸ್ಸ್ ಮಾಡಿಕೆ ಬಂದೊಳೋಂತೇಳಿರೆ ದೇವೇಂದ್ರಂಗೆ ಕಾರಣ ಇಲ್ಲದೆ ಮತ್ಸರ ಆದು. ಆ ಕೂಡ್ಲೆ ಅಂವನ ಆಸ್ಥಾನ ನರ್ತಕಿಯರ ತಪಸ್ಸ್ ಮಾಡಂವನ ಹಕ್ಕಲೆ ಕಟಿಳ್ಸಿ ಅವರ ಕೆಡ್ಸಿಕೆ ನೋಡ್ತು. ಅರ್ಜುನ ಅಂವಂಗೆ ಬೇಕಾದವನೇ ಆಗಿದ್ದರ್‌ಂದ ಅವನ ತಪಸ್ಸ್‌ನ ಕೆಡ್ಸುವ ಉದ್ದೇಸಂದ ಅಂವ ಅಪ್ಸರೆಗಳನ್ನೇನೂ ಕಟಿಳ್ಸಿತ್ಲೆ. ಒಡೆಯನ ಯಾಗೋಳ್ನ ಪದ್ಧತಿ ಗೊತ್ತಿದ್ದ ಅವು ತಾವಾಗಿಯೇ ಬಂದೊ. ಯಜ್ಮಾನನ ಮೆಚ್ಸಿಕಲೆಂತ ಅವರ ಆಸೆ ಹಾಂಗೆ ಅರ್ಜುನನ ಹಕ್ಕಲೆ ಬಂದ್ ಸುತ್ತಮುತ್ತ ವೈಯಾರಂದ ಸುಳಿಯಕೆ ಸುರುಮಾಡ್ದೊ. ಶೃಂಗಾರ ಗೀತೆಗಳ ಹಾಡಿಕೆ ಸುರು ಮಾಡ್ದೊ. ಅವನ ನೋಡಿ ಕಟಿಣ್ಣ್ ಮಿಟ್‌ಕ್‌ಸಿಕಟಿಂಡ್ ನೆಗಾಡ್ದೊ. ಇಂವಂದ ಯಾವ ಪ್ರತಿಕ್ರಿಯೆನೂ ಬಾರದಿರ್ಕನ ಅಂವನ ಕೆಬಿಗೆ ಕೇಳುವ ಹಾಂಗೆ ಅಂವನ ತೆಗ್ಳಿ ಮಾತಾಡಿಕೆ ಸುರುಮಾಡ್ದೊ. "ಓಯ್! ಈ ಬೂದಿ ಬೊಡ್ಕಂಗೆ ಹೆಣ್ಣ್‌ನ ಸುಖವೇ ಗೊತ್ತ್ಲೆ. ಇಂವ ಬೆರೀ ಮರದ ಕೊರಡ್. ಇಂವ ತಪಸ್ಸ್ ಮಾಡ್ದು ಯಾಕೆ? ಸ್ವರ್ಗಕ್ಕೆ ಹೋಗಿ ಅಲ್ಲಿ ಸುಕ ಪಡಿಯೋಕುಂತ ಹೇಳುವ ಆಸೆಲಿ ತಾನೆ? ಅಲ್ಲಿ ಸಿಕ್ಕುವ ಸುಕನ ಇಲ್ಲಿಯೇ ಕೊಟ್ಟವೆ ಬಾಂತ ಕರ್ದರೆ ಕೆಬಿ ಕೇಳದ ಕಿವುಡ ನಾಂಗೆ ಮಾಡ್ಟೆ. ಬೆರಿ ಮೊಂಡ. ಒಮ್ಮೆ ನಮ್ಮಲ್ಲಿ ಒಬ್ಬಳೊಟ್ಟಿಗೆ ಮಲ್ಗಿ, ರತಿಸುಕನ ನೋಡಟಿಲಿ. ಹಿಂದೆ ವಿಶ್ವಾಮಿತ್ರ ಆದಾಂಗೆ ಆದು. ಇಷ್ಟ್ ಒಳ್ಳೆ ಶರೀರ ದಾರ್ಢ್ಯ ಇರಂವ ಜೀವನದ ಸಾರ್ಥಕ್ಯ ಪಡಿಯಕೆ ಒಮ್ಮೆಯಾರ್ ಒಂದು ಹೆಣ್ಣ್‌ನ ಸಂಗ ಮಾಡಿ ಸುಕ ಪಡಿಯೊಕು. ಇಲ್ಲದಿದ್ದರೆ ಏನ್ ಮಾಡಿ ಏನ್ ಫಲ? ಏ ಕೆಪ್ಪ! ಇಲ್ಲಿ ನೋಡು! ಕೆಂಪಾಗಿ ಹಣ್ಣಾದ ಕಸಿ ಮಾಯನ ಹಣ್ಣ್‌ನಾಂಗಿರುವ ಈ ನನ್ನ ದುಂಡು ಮೊಲೆಗಳ ಪೊರ್ಲುನ ಒಮ್ಮೆ ನೋಡು! ನಿಮ್ಮ ಭೂಲೋಕದ ಹೆಣ್ಮಕ್ಕಳ ಒಳ್‌ಂಗಿದ ಬದನೆ ಕಾಯಿಗಳ ಹಾಂಗೆ ಜೋತ್‌ಕಟಿಂಡ್ ಇರೊವು ಅಲ್ಲ.

ಒಮ್ಮೆ ಇದರ ಕೈತುಂಬ ಹಿಡ್ಡ್ ನೇವರ್ಸಿ, ಮತ್ತೆ ಮೆಲ್ಲ ಮೆಲ್ಲ ಹಿಂಚಿ ನೋಡು. ಮತ್ತೆ ಆ ಎರ್ಡ್ ಮೊಲೆಗಳ ಮೇಲೆ ನಿನ್ನ ಮೋರೆನ ಇಸಿ ಆಡ್ಸಿ ಅವರ ತೊಟ್ಟುಗಳ ನಾಲಿಕೆಲಿ ಜುಮುಗುಟ್ಟುವಾಂಗೆ ಆಡ್ಸಿ, ಹಲ್ಲ್‌ಗಳೆಳ್‌ಂದ ಬೇನೆ ಆಗದಾಂಗೆ ಕಚ್ಚಿ ತುಟಿಗಳ್‌ಂದ ಉಜುಂಜಿ ಸುಖಪಡ್. ಇದರ ನಿನ್ನ ಎದೆಗೆ ಒಮ್ಮೆ ಒತ್ತಿ ಅದರ ಚಪ್ಪಟೆ ಮಾಡಿ ನೋಡು! ಮತ್ತೆ ಜೇನ್ ಹನ್ಕುವ ಹಾಂಗಿರುವ ಈ ತುಟಿಗೆ ನಿನ್ನ ತುಟಿನ ಒಮ್ಮೆ ಒತ್ತಿ ನೋಡು. ಮತ್ತೆ ಬಾಳೆದಟೆಂಡ್‌ನಾಂಗೆ ನುಣುಪಾಗಿರುವ ಈ ತೋರದ ತೊಡೆಗಳೆಳಿಗೆ ನಿನ್ನ ತೊಡೆಗಳ ಸೇರ್ಸಿ, ತೊಪ್ಪಿ ಹಿಡ್ಕಣೆಂಡ್ ಆ ಸುಖಮೂರ್ಚ್ಛೆಲಿ ನೀ ಮೈಮರ್ತ್ ಬೀಳದಿದ್ದರೆ, ಮತ್ತೆ ಹೇಳ್! ಒಂದ್ ಹೆಣ್ಣ್, ಕಾಮನಾಟಕೆ ಕರಿಯಕನ ಹೋಗದಂವ ನರಬಲವಿಲ್ಲದ ದುರ್ಬಲ, ಷಂಢ, ಮೂಢ! ನಾ ಮನಸೋತ್, ಇಷ್ಟ್ ಬೇಡಿಕಂಡರೂ ಬಾರದ ನೀ ಮುಂದೆ ಒಂದು ವರ್ಷದ ಕಾಲ ನಪುಂಸಕನಾಗಿಯೇ ಇರ್! ನಾವು ದೇವಲೋಕಕೆ ಸೇರ್‌ದ್ವೊವು! ನಾವ್ಗೆ ಶಾಪಾನುಗ್ರಹ ಶಕ್ತಿ ಉಟ್ಟು. ಹೀಂಗೆ ಕೋಪಟೆಲಿ ಹೇಳಿ, ಆ ಅಪ್ಸರೆ ತನ್ನ ಸಖಿಯರ ಕರ್ಕಣೆಂಡ್ ಮಾಯ ಆಗಿ ಹೋತು. ಅರ್ಜುನನ ತಪಸ್ಸ್, ತೊಂದರೆ ಇಲ್ಲದೆ ಮುಂದುವರ್ತ್.

**ಮಕ್ಕ:**

ತಾತ! ಇವು ಹೆಣ್ಣ್‌ಗ ಆಗಿ ಇಂತ ಮಾತಾಡುದು ಬಾರಿ ಹೇಸಿಗೆ ಅಲ್ಲೊ?

**ತಾತ:**

ಅವು ಅಪ್ಸರೆಗಾಗಿದ್ದರೂ ಸ್ವರ್ಗಟೆಲಿ ಇದ್ದ ವೇಶ್ಯಾಸ್ತ್ರೀಗಳೆ! ಅವರ ಕುಲವೃತ್ತಿಗೆ ಸಟೆರಿಯಾಗಿ ಗಣ್ಶಕಳ ಹಾಳ್ ಮಾಡುವ ಉದ್ದೇಸಂದ ಹೀಂಗೆ ಮಾತಾಡುದು ಆದರೆ ಅರ್ಜುನನ ಸ್ಥಿರ ಬುದ್ಧಿನ ಕೆಡ್ಸಿಕೆ ಅವರ್‌ಂದ ಬೇತ್‌ಲೆ

## ಅರ್ಜುನಂಗೆ ಶಿವ ಪಾಶುಪತಾಸ್ತ್ರನ ಕೊಟ್ಟಟೆದ್

ಅರ್ಜುನನ ಕಠಿಣ ತಪಸ್ಸ್ ತುಂಬ ಕಾಲ ಮುಂದುವರಿಯತ್ತಿತ್. ಅವನ ತಪೋಜ್ವಾಲೆಗಳ ಬೇಗೆ ಆಸ್‌ಪಾಸ್‌ಗೆಲ್ಲ ಹಬ್ಬಿತ್. ಅಲ್ಲಿದ್ದ ಬೇರೆ ರುಸಿಗಳ ತಪಸ್ಸ್‌ನೆಲ್ಲ ಕೆಡ್‌ಸಿತ್. ಅವು ಕಂಗಾಲಾದೊ. ಅವೆಲ್ಲ ಒಟ್ಟು ಸೇರಿ, ಈಸ್ವರನಲ್ಲಿಗೆ ಹೋಗಿ ಮೊರು ಕೊಟ್ಟೊ. ಪರಮೇಶ್ವರಾ! ಶರಣು! ಶರಣು! ಭೂಲೋಕದ ಒಬ್ಬ ಮಾನವ ಬಂದ್ ಉಗ್ರ ತಪಸ್ಸ್ ಮಾಡಿಕಣೆಂಡ್ ಉಟ್ಟು. ಅದರ ಫಲವಾಗಿ ನಮ್ಮ ತಪಸೆಲ್ಲ ಹಾಳಾಗಿ ನಾವ್ಗೆ ನೆಲೆ ತೊಪ್ಪಿತ್. ದೇವಲೋಕದ ಅಪ್ಸರೆಗಳ್‌ಂದೊಳೂ ಅವನ ಮನ್ಸ್‌ನ ಚಂಚಲ ಮಡಿಕೆ ಆತ್‌ಲೆ. ನಾವ್ಗೇನೂ ದಾರಿಕಾಂಬೊದುಲೆ. ನೀನೇ ನಮ್ಮ ಬಚಾವು ಮಾಡೊಕು. ನಿನ್ನ ಸಾನಿಧ್ಯಕ್ಕೆ ಹಕ್ಕಲಿರೊಕುಂತ ನಾವು ಇಲ್ಲಿ ತಪಸ್ಸಿಗೆ ತುಂಬ ಸಮಯಂದ ಹಿಂದೇ ಬಂದ್ ಕುದ್ದೊಳೆ. ಈಗ ನಾವು ಎಲ್ಲಿಗೆ ಹೋಕುಂತ ನೀನೇ ದಾರಿತೋರ್ದ್ಸೊಕುಂತ ಹೇಳಿಕಣೆಂಡ್ ಶಿವಂಗೆ ಅಡ್ಡ ಬಿದ್ದೊ.

ಶಿವ ಅರೆಗಣ್ಣ್ ಮುಚ್ಚಿಕಂಡ್ ಹಚ್ಚ ಹೊತ್ತ್. ಕುದ್ಟೆತ್ ಆ ಮೇಲೆ ಕಣ್ಣ್ ಬುಟ್ಟ್ ಹೇಳ್ತ್. ನಂಗೆಲ್ಲ ಗೊತ್ತಾತ್. ನಿಮ್ಮ ತಪಸ್ಸ್‌ನ ಎಂದ್‌ಸಾಂಗೆ ಮಾಡಿಕಂಡಿರಿ ನಾ ಅವನ ನೆಟ್ಟಂಗೆ ಮಾಡ್ವೆ. ನೀವು ಧೈರ್ಯಂದ ಹೋಗಿಂತ ಅವರ ಕಳ್ಸ್ತ್. ಆ ಮೇಲೆ ಪಾರ್ವತಿನ ಕರ್ದ್ ಹೇಳ್ತ್. "ಗಿರಿಜೆ! ನನ್ನ ಭಕ್ತ ಒಬ್ಬ ತುಂಬ ದಿನಂದ ನನ್ನಂದ ವರ ಪಡಿಯೊಕುಂತ ತಪಸ್ಸ್ ಮಾಡಿಕಂಡ್ ಉಟ್ಟು. ಅವಂಗೆ ಅವರ ಪಡ್ಕಂಬಷ್ಟ್ ತ್ರಾಣ ಉಟ್ಟೊಂತ ಪರೀಕ್ಷೆ ಮಾಡಿಕೆ, ನಾ ಅವನೊಟ್ಟಿಕ ಮಾಯಾ ಯುದ್ಧ ಮಾಡೊಕುಂತೊಳೆ. ಅದಿಕೆ ಮುಂದೆ ಆ ಮೂಕದಾನವನ ಅವನ ಕೈಂದ ಕೊಲ್ಲ್‌ಸಿಕೂ ಉಟ್ಟು. ಈ ವಿನೋದನ ನೋಡಿಕೆ ನೀ ಬಂದಿಯನೋಂತ ಕೇಳ್ತ್. ಗಿರಿಜೆ ಕುಶಿಲಿ ಬನ್ನೆಂತ ಹೇಳ್ತ್. 'ನೀವೆಲ್ಲಿ ಯಾರ್ ಕೋಪ ಬಂದ್ ಮನ್ಮಥನ ಮಾಡ್ದಾಂಗೆ ಮನಿ ಮಾಡಿ ಬುಡಿಕೆ ಆಗಲ್ದ್. ಅದ್ಕೆ ಬೇಕಾಗಿ ನಿಮ್ಮ ಹಣೆಗಣ್ಣ್‌ನ ತೆರಿಯಕೆ ಬೊತ್ತದಾಂಗೆ ನಿಮ್ಮ ಹಣೆಗೊಂದು ಬಿಗಿಯಾದ ಪೊಟ್ಟಿ ಕಟ್ಟಿನೆ'ಂತ ಗಿರಿಜೆ ಹೇಳ್ತ್. "ಓ! ಜಗನ್ಮಾತೆಗೆ ಮಕ್ಕ ಅಂದರೆ ಎಷ್ಟ್ ಅಕ್ಕರೆ!" ಶಿವ ನೆಗಾಡಿಕಂಡಲ್ತ್. "ಆ ಬಿರುದು ನಂಗೆ ಮಾತ್ರೊನೊ? ನೀವ್ಗೂ ಸೇರ್ಸಿಯೇ ಹೇಳ್ತೊಳಲೆ "ಜಗತೌ ಪಿತರೌ ಪಾರ್ವತೀ ಪರಮೇಶ್ವರೌ"ಂತ.

ಸಲಿರಿ ಮಾತಿಗೆ ಕುದ್ದರೆ ತಡುವಾದೆ ಬೇಗ ನೀ ಒಂದು ಬೇಡತಿನ ವೇಷ ಹಾಕಿಕ. ನಾ ಬೇಡ ಆನೆ. ಕುಮಾರ ಷಣ್ಮುಖನ ಬೇಡರ ಪಡೆನ ನಾಯಕ ಆಗಿ ತಯಾರಾಕೆ ಹೇಳ್. ಹಾಂಗೇ ನಂದಿನೊಟ್ಟಿಗೆ ಗಣಾಗ ಎಲ್ಲ ಬೇಡ ಸೈನಿಕಲಾದಾಂಗೆ ತಯಾರಾಗಲಿಂತ ಹೇಳಿಕಳ್ಸ್‌ಂತ ಶಿವ ಪಾರ್ವತಿಗೆ ಹೇಳ್ತ್. ಹಾಂಗೆ ಕ್ಷಣಾರ್ಧಲಿ ಈಶ್ವರನ ಬೇಡರ ಪಡೆ ತಯಾರಾತ್. ಶಿವನೂ ಪಾರ್ವತಿನೂ ರಥಲಿ ಕುದ್ದೊ. ತೇರಿಗೆ ತಾಮ್ರದ ಬಣ್ಣದ ಕುದುರೆಗಳ ಕಟ್ಟಿದ್ದೊ. ಬೇಡರ ಕಾಲ್ಗಳ, ಕೊಂಬು, ಕಹಳೆ, ಡಮರ ಡಮರ ಡಮರ ಡಂ ಡಂ ಸದ್ದ್ ಮಾಡಿಕಂಡ್ ಬಾವ ಸದ್ದ್ ಕೇಳಿ, ಮೂಕದಾನವ ದೊಡ್ಡ ಪಂದಿನ ರೂಪು ತಾಳಿ ದಾಡೆನ ಕಟಕಟಂತ ಅಕ್ಕಲಿಂಡ್ ಮೈನ ರೋಮಂಗೆಲ್ಲ ಕುತ್ತ ನಿತ್ತ್‌ಕಂಡ್ ರಭಸಂದ ಓಡಿ ಬಾತ್. ಓಡುವ ರಭಸಕ್ಕೆ ಮರಕ್ಕೆ ಢಾಂಟಲೆ ಆ ಮರ 'ಲಟಲ್'ಂತ ಮುರ್ದು ಬೀಳ್ತು. ನೆಲನೊಮ್ಮೆ ಚುಕ್ಕಿರ. ಅಲ್ಲಿ ಅಷ್ಟ್ ಹೊಂಡ ಆಗಿ ಕೆಳಗಂದ ವರ್ತೆ ನೀರ್ ಹಾರ್ತು. ಇದರ ನೋಡಿ, ಶಿವನಗಣಾಗಳ ಪಡೆಗ ದೂರ ದೂರ ತೆಲ್ಗಿ ಅದಿಕ್ಕೆ ದಾರಿ ಬುಟ್ಟೊ. ಅದ್ ಅರ್ಜುನ ತಪಸ್ಸ್ ಮಾಡುವ ಕಡೆಗೆ ಓಡಿ ಬಾತಿತ್ತ್. ದೂರಲಿ ಶಿವನೂ ಅದರ ಬೆನ್ನಟ್ಟಿಕಂಡ್, ಬಿಲ್ಲಿಗೆ ಬಾಣನ ಏರ್ಸಿಕಂಡ್, ಬಾತಿತ್ತ್. ಅರ್ಜುನ ಓಂದೆಂದ ಕೇಳಿ ಬಾವ ಸದ್ದ್‌ನ ಕೇಳಿ ನೋಡ್‌ಕನ ಇತ್ತಲೇ ಓಡಿ ಬಾವ ಹಂದಿನ ನೋಡಿ, ಬಿಲ್ಲಿಗೆ ಬಾಣ ಜೋಡ್ಸಿ ಬೇಗ ಎದ್ದ್ ನಿತ್ತಲತ್. ಆ ಹಂದಿ ತನ್ನ ಬಾಣದತ್ತಗೆ ಬಾತ್‌ಂತೇಳ್‌ಕನ ಗುರಿ ನೋಡಿ ಎಳ್ದ್ ಬಾಣ ಬುಟ್ಟಲತ್ ಅದೇ ಸಮಯಕೆ ಆಚೆಂದ ಬೇಡನೂ ಬಾಣ ಬುಟ್ಟಲತ್. ಎರ್ಡ್ ಬಾಣಗಳೂ ಒಟ್ಟಿಗೇ ತಾಂಗಿ ಹಂದಿ ಸತ್ತ್ ಬೀತ್. ಅರ್ಜುನ ಹೋಗಿ ಅವನ ಬಾಣನ ಕಿತ್ತ್, ಹಳ್ಳದ ನೀರ್‌ಲಿ ತೊಳ್ದ್ ತಂದ್ ತನ್ನ ಬತ್ತಳಿಕೆನೊಳಗೆ ಇಸಿಕೆ ನೋಡ್‌ಕನ ಈಶ್ವರ (ಬೇಡ) ಕಳ್ಸಿದ ಬೇಡರ ಪಡೆನ ನಾಯಕ

ಬಂದ್ ನಿತ್ತ್ "ಇದೇನ್ ಗೊರವರೆ? ಪರರ ವಸ್ತುನ ಕಳೆದ್ಬ್ ತಕಂಬೊವ್ರು ನೀವ್ರು ಎಂತ ಸನ್ಯಾಸಿ? ಮೈಗೆ ಬೂದಿ ಬೊಡ್ಕಳೆಂಡ್ ಕುದ್ರು ಕೂಡ್ಲೆ ಒಬ್ಬ ಸನ್ಯಾಸಿಂತಾವನೊ? ಒಳ್ಳೆ ಮಾತ್‌ಲಿ, ನಮ್ಮ ಒಡೆಯನ ಬಾಣನ ಹಿಂದೆ ಕೊಟ್ಟ್ ಕ್ಷಮೆ ಬೇಡಿ. ಇಲ್ಲರೆ ಪರಿಣಾಮ ನೆಟ್ಟಂಗಾಕಿಲೆ. ಜಾಗ್ರತೆ!ಂತ ಹೇಳ್‌ಕನ ಅರ್ಜುನ ಈ ಕಾಡ್ ಬೇಡಂಗೆ ನನ್ನ ಧಿಕ್ಕರಿಸಿ ಮಾತಾಡುವಷ್ಟ್ ಧೈರ್ಯ ಬಾತೊಂತ ಕೋಪಲೆಲಿ ಕೊದ್ದೆತ್ "ಏ ಕಾಡ್ ಬೇಡರ ಪೈದ! ಏನ್ ಮೊಟ್ಟೆಲ ಕೂಂಗುವ ಸಾಹಸ ಮಾಡಿಯು? ನನ್ನ ವಸ್ತುನ ನಾ ತಕಂಬುದಿಕೆ ಯಾರ ಕೇಳೊಕು? ಅಂಬಟ್‌ಕಾಯನಷ್ಟ್ ತೋರ ಇಲ್ಲದ ಪೋರ! ತ್ರಿಲೋಕ ವಿಜಯಿಂತ ಹೆಸ್‌ರ್ ಮಾಡ್ದ ಪಾಂಡುರಾಜ ಪುತ್ರ ಈ ಅರ್ಜುನನ ಎದ್‌ರ್ ನಿಲ್ಲಿಕೆ ಯೋಗ್ಯತೆ ಇಲ್ಲದ ನೀ ಇನ್ನೊಂದು ಮಾತಾಡಿರೆ ನಿನ್ನ ನಾಲಿಕೆನ ಸೀಳಿ ಬುಡುವೆ. ಒಳ್ಳೆ ಮಾತ್‌ಂದ ಇಲ್ಲಿಂದ ಬೇಗ ಓಡಿ, ನಿನ್ನ ಅಯ್ಯನ ಸೆರ್‌ಂಗ್‌ನ ಅಡಿಲಿ ಅಡ್‌ಂಗಿಕ!" – ಹೀಂಗೆ ಅರ್ಜುನ ಗುಡ್ಗಿತ್.

"ನಿನ್ನ ನೀನೇ ಹೊಗಳೆಕಂಬವ ಎಂತ ಶೂರ? ಇಂತವರ ನೋಡಿರೆ ನಮ್ಮ ಅಪ್ಪಂಗೆ ಎಲ್ಲಿಲ್ಲದ ಕೋಪ ಬಂದ್ ನಿನ್ನ ಹಮ್ಮುನ ಇಳ್ಸದೆ ಬುಡಿಕಿಲೆ. ಇದೆಲ್ಲ ನಾವ್ಗೆ ಸೇರ್ದ ಜಾಗ. ನೀ ಹೊರೆಗಂದ ಬಂದಂವ. ನಮ್ಮ ಅಪ್ಪಣೆ ಇಲ್ಲದೆ ಕುದ್ರೊಳ ಬೇಟೆನೂ ಮಾಡಿ. ನಮ್ಮ ಅಪ್ಪ ಕೊಂದ ಹಂದಿಗೇ ನೀನೂ ಒಂದು ಬಾಣ ಹೊಡ್ದ್. ನಮ್ಮ ಅಪ್ಪನ ಬಾಣನ್ನೂ ಕಳೆದ್ರೊಳ. ನಿಂಗೆ ಬಾಣ ಬೇಕುಂತಾದರೆ ನಮ್ಮ ಅಪ್ಪನ ಕಾಲಿಗೆ ಬಿದ್ದ್ ಬೇಡಿಕಣಕಯ್ತ್. ಅದ್ ಬುಟ್ಟ್ ಎದ್‌ರದ್‌ರೇ ಕಳೆದಿಯಕೆ ನೋಡಿಯು! ನಿನ್ನಂತವರ ಸುಮ್ಮನೆ ಬುಡಿಕೆ ಆಗಲೆದ್ ಇರ್! ಅಪ್ಪನೊಟ್ಟಿಗೆ ಹೇಳಿ ನಿಂಗೆ ಮೊದ್ದ್ ಅರ್ದನೆ" ಹೀಂಗೆ ಹೇಳಿ ಷಣ್ಮುಖ ಒಂದೆ ಕೋಪಲೆಲಿ ತಿರ್ಗಿ ಹೋತು. "ಹೋಗು ಹೋಗು. ನಿನ್ನ ಅಪ್ಪಂಗ ಒಂದು ಬಾಣ ಸಾಕಾತ್‌ಲೆಂತಾದರೆ ನನ್ನ ಹಕ್ಕಲ್ ಬೇರೆನೂ ಒಳೊ. ಬರ್ಲಿಂತ ನೆಗಾಡಿಕಲೆಂಡ್ ಹೇಳಿಕಲೆಂಡಲೆತ್. ಅಷ್ಟರ್ಲಿ ಬೇಡರ ಸೈನ್ಯ, ಕಲೆತ್ತಿ, ದೊಣ್ಣೆಗಳ ಹಿಡ್ಕಲೆಂಡ್ ಬಂದ್ ಮುತ್ತಿಗೆ ಹಾಕಿತ್. ಅದರ ನೋಡಿ ಅರ್ಜುನ ಒಂದು ಬಾಣನ ತೆಗ್ದ್ 'ಪಿಸಿ ಪಿಸಿ'ಂತ ಮಂತ್ರ ಹೇಳಿ ಬಿಲ್ಲಿಗೇರ್ಸಿ ಎಳ್ದ್ ಬುಟ್ಟಲೆತ್. ಬುರು ಬುರುಂತ ಬೀಸುವ ಗಾಳಿ ಬಿರುಗಾಳಿಯಾಗಿ ಬೇಡರ ಸೈನಿಕಲೆರೆಲ್ಲ ಗಾಳಿಗ ಹಾರಿ ಹೋವ ದರ್ಗ್‌ಗಳ ಹಾಂಗೆ ಹಾರಿಕಲೆಂಡ್ ಹೋಗಿ ಕೆಲೊವ್ರು ಹಳ್ಳಕೆ ಬಿದ್ರೊ. ಕೆಲೊವ್ರು ಬೆಟ್ಟದ ಕೊಡಿಲಿ ಬಿದ್ರೊ, ಕೆಲೊವ್ರು ಮರಗಳ ಗೆಲ್ಲ್‌ಗಳ್ಲಿ ಸಿಕ್ಕಿ ಒದ್ದಾಡಿಕಲೆಂಡ್ ಇದ್ರೊ. ಕಿರಾತ ವೇಷಲಿದ್ದ ಶಿವಂಗೆ ನೆಗೆ ಬಂದ್ ಹಕ್ಕಲೆ ಇದ್ದ ಗಿರಿಜೆಗೆ ಹೇಳ್ತ್. ನೋಡ್ದ ನಮ್ಮ ಭಕ್ತನ ಪೌರುಷನ! ವಾಯುವ್ಯಾಸ್ತ್ರ ಪ್ರಯೋಗಂದ ನಮ್ಮ ಗಣಗಳ ಸೇನೆನೆಲ್ಲ ಹೇಂಗೆ ಅಡ್ಸಿ ಬುಟ್ಟಲೆತ್‌ಂತ! ಇನ್ನ್ ಇವನ ನಾನೂ ಹಣ್ಣ್ ಆಡ್ಸಿನೆ. ನೀ ನಿತ್ತ್‌ಕಲೆಂಡ್ ಏನೋದನ ನೋಡುಂತ ಹೇಳಿ ಅರ್ಜುನನ ಎದ್‌ರ್ಲಿನಿತ್ತಲೆತ್ "ಏ ಮಾನವ! ಏನ್‌ಂತ ನೆನ್ಸಿದ? ನನ್ನ ಸೈನ್ಯನ ಎಲ್ಲಾ ಚೆಲ್ಲಾಪಿಲ್ಲಿ ಮಾಡ್ದೆಂತ ಹೆಮ್ಮೆ ಪಡ್ದೇಡ! ನಿನ್ನ ಆಟ ನನ್ನೊಟ್ಟಿಗೆ ನಡಿಯಕಿಲೆ. ಧೈರ್ಯ ಇದ್ದರೆ ನನ್ನೊಟ್ಟಿಗೆ ಯುದ್ಧಕ್ಕೆ ತಯಾರಾಗ್‌ಂತ ಹೇಳ್ತ್. ಅದಿಕೆ ಅರ್ಜುನ "ನಾ ಯಾಗೋಳೂ ಸಿದ್ಧನಾಗಿಯೇ ಒಳೆ.

ಹಾಂಗಾರೆ ಬುಡು ಬಾಣ! ಏಕೆ ತಡು ಮಾಡಿಯಾ?" ನೀ ನಿನ್ನ ಹೆಣ್ಣ್ನೂ ಕರ್ಕಂಡ್ ಬಂದೊಳಿ. ಪ್ರತಿಯೊಂದು ಹೆಣ್ಣೂ ಜಗನ್ಮಾತೆನ ರೂಪೇಂತ ನನ್ನ ನಂಬಿಕೆ. ನಾ ಬುಡುವ ಬಾಣಂದ ಈ ಮಾತೆನ ಮಾಂಗಲ್ಯ ಕಳಚಿ ಬೀಳುವಾಂಗೆ ಆದರೆ ನಂಗೆ ಪಾಪ ಬಾದೊಲೇಂತ ನನ್ನ ಮನ್ಸ್ ಹಿಂದೆಗ್ದದೆ! ಅರ್ಜುನ ಹೇಳ್ತ್. "ನನ್ನ ನೋಡಿ ಹೆದ್ರಿ ಹೀಂಗೆ ನೆವನತೆಗ್ಟಿಯ. ಅದರ ರಕ್ಷಣೆ ಹೇಂಗೆ ಮಾಡೊಕುಂತ ನಂಗೆ ಗೊತ್ತು. ಹೇಡಿಯಾದರೆ ಬಂದ್ ನಂಗೆ ಶರಣಾಗ್" ಬೇಡ ಹೇಳ್ತ್. ಅದಿಕೆ, ಅರ್ಜುನ "ಈ ದ್ರೋಣ ಶಿಷ್ಯ ಪಾರ್ಥಂಗೆ ಹೆದ್ರಿಕೆಂತ ಹೇಳಿರೆ ಏನ್ಂತ ಗೊತ್ತ್‌ಲೆ. ಬುದ್ಧಿಗೆಟ್ಟನಿಂಗೆ ಬುದ್ಧಿ ಕಲ್ಸದೆ ಬುಡಿಕಿಲೆ. ನೋಡೀಗ ನನ್ನ ಬಾಣದ ಪೆಟ್ಟ್‌ನ ರುಚಿನ!" ಹಾಂಗೆ ಹೇಳಿ, ಎಳ್ಟ್ ಒಂದು ಬಾಣ ಬುಟ್ಟಿತ್. ಅದ್ ಅರ್ದಲೇ ಮಾಯ ಆಗಿ ಹೋತು. ಮತ್ತೊಂದು ಬುಟ್ಟಿತ್. ಹಾಂಗೇ ಇನ್ನೊಂದು ಮತ್ತೊಂದು ಎಲ್ಲ ಹಾಂಗೇ ಆಗಿ ಅಕ್ಷಯ ಬತ್ತಳಿಕೆ ಕಾಲಿ ಆತ್. ಅಂವಂಗೆ ಆಶ್ಚರ್ಯ ಆತ್. ಮತ್ತೆ ಕತ್ತಿ ತಕಂಡ್ ಬೇರಿ ಕಡ್ತ್. ಅದರ ಬೇಡ ಎಳ್ಕ್ ಇಟ್ಟಿತ್. ಇನ್ನ್ ಈ ಬಿಲ್ಲ್ ಉಟ್ಟು. ಇದರ್ಲೆ ಬೇರಿ ಹೊಡ್ವನೆಂತ ಹೋಕನ ಅದರ ಹಿಡ್ದ್. ಎಳ್ಬ್ ಅದರ ಮಾಯ ಮಾಡ್ತ್. "ಎಲ! ಇದೆಂಥ ಚೋದ್ಯಂತ" ಹೇಳಿ ಅಲ್ಲಿ ಒಂದು ದೊಡ್ಡ ಗುಂಡು ಕಲ್ಲ್‌ನ ನೇಜಿ ಇಟ್ಟಿತ್. ಆ ಕಲ್ಲ್‌ನ ಬ್ಯಾಟ್‌ಲಿ ಹೊಡ್ಟ್ ರಟ್ಟ್‌ಸುವಾಂಗೆ ದೂರ ರಟ್ಟಿಸಿತ್. ಇನ್ನ್ ಯಾವ ಆಯುಧಗಳೂ ಇಲ್ಲದಾಕನ ನನ್ನ ಈ ಬಲವಾದ ಕೈಗಳ್ಂದಲೇ ಅವನ ಹೊಡ್ದ್ ಬೀಳ್ಸನೇಂತ ಕೈ ಬೀರಿಕಂಡ್ ಅರ್ಜುನ ಹೋತು. ಆಗ ಆ ಬೇಡ ಇವನ ಕೈಗಳ್ಲಿ ಹಿಡ್ಕಂಡ್ ಅವನ ಎರ್ಡ್ ಮೂರು ಸುತ್ತು ತಿರ್ಗ್‌ಸಿ ದೂರಕೆ ಕೊಡ್ಕಿ ಇಟ್ಟಿತ್. ಅರ್ಜುನ ಅಷ್ಟ್ ದೂರ ರಟ್ಟಿ ಬಿದ್ದಿತ್. ಕ್ಷಣಕಾಲ ಅವಂಗೆ ಎಚ್ಚರ ತೊಪ್ಪಿತ್. ಮತ್ತೆ ಎಚ್ಚರ ಆಗಿ, ಇವನ ಪರಶಿವನ ಪೂಜೆ ಮಾಡಿ ಅವನ ಅನುಗ್ರಹ ಸಂಪಾದ್ಸಿ ಗೆಲ್ಲೊಕುಂತ ಹಳ್ಳದ ಕರೆನ ಪೊಯ್ಯ್‌ಲಿ ಶಿವಲಿಂಗನ ಮಾಡಿ ಪೂಜೆ ಮಾಡಿಕೆ ಸುರು ಮಾಡ್ತ್. ಕಾಡ್ ಹೂಗಳ ಕೊಯ್ಕಂಡ್, ಬಂದ್ ಶಿವಲಿಂಗದ ತಲೆ ಮೇಲೆ ಹಾಕ್‌ಕನ ಆ ಹೂಗ ಎಲ್ಲ ಆ ಬೇಡನ ತಲೆ ಮೇಲೆ ಬೀಳ್‌ತಿದ್ದೂ. ಇದ್ ಎರ್ಡ್ ಮೂರು ಸಲ್ತಿ ಪುನರಾವರ್ತನೆ ಆಕನ, ಅರ್ಜುನಂಗೆ ಬೇಡನ ರೂಪುಲಿ ಬಂದದ್ ಶಿವನೇಂತ ಮನ್ಸ್‌ಗೆ ಖಾತ್ರಿ ಆತ್. ಮತ್ತೆ ಬೇಡತಿ ರೂಪುಲಿದ್ದುದು ಪಾರ್ವತಿ. ನಾ ತಿಳುವಳಿಕೆ ಇಲ್ಲದೆ ಎಂತ ತೊಪ್ಪು ಮಾಡಿ ಬುಟ್ಟೆಂತ ಬಾರಿ ಪಶ್ಚಾತ್ತಾಪ ಪಟ್ಟಿತ್. ಇಷ್ಟಾಕನ ಬೇಡ ದಂಪತಿಗ ತಮ್ಮ ನಿಜರೂಪುಲಿ ನಿತ್ತೊ. ಕೂಡ್ಲೇ ಅರ್ಜುನ ಓಡಿ ಬಂದ್ ಈಶ್ವರ –ಪಾರ್ವತಿಯರ ಕಾಲಿಗೆ ಬಿದ್ದ್ ಬಗೆ ಬಗೆಂದ ಅವರ ಸ್ತುತಿ ಮಾಡಿ, ನನ್ನ ಸರ್ವ ತೊಪ್ಪುಗಳ ಕ್ಷಮಿಸಿ ನನ್ನ ಉದ್ಧರ್ಸೊಕುಂತ ಬೇಡಿಕಂಡತ್.

ನಿಷ್ಕಳಂಕ ಭಕ್ತಿಗೆ ಭಗವಂತ ಸೋಲುದು ಇದ್ದದೇ ಇಲ್ಲಿಯಂತೂ ಈಶ್ವರ ಮಾಡ್ದೆಲ್ಲ ವಿನೋದಕ್ಕಾಗಿ. ಹಾಂಗೆ ಅರ್ಜುನಂಗೆ ಹೇಳ್ತ್. "ನಿನ್ನ ತಪಸ್ಸಿಗೂ ಮತ್ತೆ ನಾ ಮಾಡ್ದ ಅಣಕು ಯುದ್ಧಲಿ ನೀ ಮಾಡ್ದ ಹೋರಾಟಕ್ಕೂ ತುಂಬ ಮೆಚ್ಚಿದೆ. ನಿಂಗೆ ಬೇಕಾದ ವರಗಳ ನೀ ಬೇಡಿಕ, ಕೊಟ್ಟನೆ" ಅರ್ಜುನ "ಪರಮೇಶ್ವರಾ. ನಮ್ಮ ರಾಜ್ಯ, ಕೋಶ,

ಸಂಪೊತ್ತುಗಳ ಎಲ್ಲ ನಮ್ಮ ದಾಯಾದಿಗ ಕಪಟ ದ್ಯೂತಲಿ ನಮ್ಮ ಸೋಲ್ಸಿ ಎಳ್ಕಂಡ್ ನಮ್ಮ ಕಾಡ್‌ಪಾಲ್ ಮಡ್ಡೊ. ಶರ್ತದಾಂಗೆ ನಾವು ಹನ್ನೆರ್ಡ್ ವೊರ್ಸದ ವನವಾಸ, ಒಂದು ವೊರ್ಸದ ಅಜ್ಞಾತವಾಸ ಮಾಡ್ದ ಮೇಲೆನೂ ಅವು ನಾವ್ಗೆ ನಮ್ಮ ರಾಜ್ಯನ ಹಿಂದೆ ಕೊಡಿಕಿಲೆಂತ ಕಂಡದೆ. ಯುದ್ಧ ಅನಿವಾರ್ಯವಾದೆ. ಅವರ ಕಡೆಲಿ, ಭೀಷ್ಮ, ದ್ರೋಣ, ಕರ್ಣರಂಥ ವೀರಾಧಿ ವೀರರೊಳೊ. ನಮ್ಮ ಬಲ ಕಮ್ಮಿ ಆದ್ದೆ. ಅದಿಕೆ ಬೇಕಾಗಿ ಮಹಾಸ್ತ್ರಗಳ ಸಂಪಾದುಸುವ ಉದ್ದೇಸಂದ ನಾ ತಪಸ್ಸಿಗೆ ಬಂದಳೆದ್. ದಯ ಮಾಡಿ, ನೀ ನಂಗೆ ನಿನ್ನ ಪಾಶುಪತಾಸ್ತ್ರನ ಕರುಣಿಸೊಕುಂತ ಬೇಡಿಕಣೆ"ಂತ ವಿನಯಂದ ಹೇಳ್ತ್. ಈಶ್ವರ ಅವನ ಪಕ್ಕಲೆ ಕರ್ದ್ ಆ ಅಸ್ತ್ರಕ್ಕೆ ಇರುವ ಮಂತ್ರನ ಉಪದೇಶ ಮಾಡಿ, ಅಸ್ತ್ರನ ಕೊಟ್ಟ್ ತೀರ ಅಗತ್ಯದ ಸಂದರ್ಭಲಿ ಮಾತ್ರ ಇದರ ಪ್ರಯೋಗಿಸೋಕು ಹೊರ್ತ್, ಒಳ್ದಾಂಗೆ ಪ್ರಯೋಗ ಮಾಡಿರೆ ಸರ್ವನಾಶ ಆದು. ಎಚ್ಚರಿಕೆಂತ ಹೇಳಿ ಅಸ್ತ್ರನ ಕೊಟ್ಟಳೆತ್ ಅರ್ಜುನ ಭಕ್ತಿಂದ ಕೈ ಮುಗ್ದ್ ತಕಣ್ತ್. ಗಿರಿಜೆ ಅಂಜಲಿಶಾಸ್ತ್ರನ ಕೊಟ್ಟಳೆತ್. ಗಣಪತಿ ಷಣ್ಮುಖಂತ ಇವರ ಪರಿವಾರದೊವೂ ಒಂದೊಂದು ಅಸ್ತ್ರಗಳ ಕೊಟ್ಟ್, ಮತ್ತೆ ಅವೆಲ್ಲವೂ ಮಾಯ ಆದೊ.

## ಅರ್ಜುನ ದೇವಲೋಕಕ್ಕೆ ಹೋದ್

ಅಷ್ಟರ್ಲಿ ದೇವೇಂದ್ರ ಪ್ರತ್ಯಕ್ಷ ಆತ್. ಶಿವನ ಅನುಗ್ರಹಂದ ಮಹಾಸ್ತ್ರಗಳ ಪಡ್ದದ್ಕೆ ಅರ್ಜುನನ ಅಭಿನಂದ್‌ಸಿತ್. ಮತ್ತೆ ನೀ ನಮ್ಮ ಸ್ವರ್ಗ ಲೋಕಕ್ಕೆ ಬಂದ್, ತಪಸ್ಸ್‌ಲಿ ಬಾರಿ ದಣ್ದ್ ನಿನ್ನ ಶರೀರಕ್ಕೆ ತುಂಬ ವಿಶ್ರಾಂತಿಬೇಕು. ನಿ ಬಂದ್ ಹಚ್ಚ್ ದಿನ ಅಲ್ಲಿ ವಿಶ್ರಾಂತಿ ತಕಂಡ್ ಮತ್ತೆ ನಿನ್ನ ಭೂಲೋಕಕ್ಕೆ ಹೋಕ್‌ಂತೇಳಿ ಕರ್ಕಂಡ್ ಹೋತು. ಇಂದ್ರ ಅವಂಗೆ ಸಂಗೀತ ನಾಟ್ಯಾದಿ ಗಾಂಧರ್ವ ವಿದ್ಯೆನ ಕಲ್ಸಿಕೆ ಏರ್ಪಾಡ್ ಮಾಡ್ತ್. ಯುದ್ಧರಂಗಲಿ ಯುದ್ಧನರ್ತನ ಮಾಡುವ ನನ್ನಂಥವಂಗೆ ಈ ನರ್ತನ ವಿದ್ಯೆಂದ ಪ್ರಯೋಜನ ಏನ್‌ಂತ ಅರ್ಜುನ ಕೇಳ್ತ್. ಪ್ರಯೋಜನಕ್ಕೆ ಬಾರದ ವಿದ್ಯೆನೇ ಇಲ್ಲೆ. ವಿದ್ಯೆಂತೇಳುದ್ಕೆ ಅಂತ್ಯನೇ ಇಲ್ಲೆ ದೇವೇಂದ್ರ ಹೇಳ್ತ್. ಹಾಂಗೆ ಅರ್ಜುನ ಅದರೆಲ್ಲ ಬೇಗ ಬೇಗ ಏಕಾಗ್ರತೆಂದ ಕಲ್ತ್ ಕಂಡಳೆತ್. ಆದಷ್ಟ್ ಬೇಗ ಬೇಗ ಮುಗ್ಸಿ ಕಾಡ್‌ಲಿದ್ದ ಅಣ್ಣ ತಮ್ಮಂದರ ಸೇರಿಕಣೊಕುಂತ.

ಇತ್ತ ಕಾಮ್ಯಕ ವನಲಿದ್ದ ಯುಧಿಷ್ಠಿರ, ಭೀಮ, ನಕುಲ ಸಹದೇವ ಮತ್ತೆ ದ್ರೌಪದಿ, ಅರ್ಜುನ ಇನ್ನೂ ಬಾತ್‌ಲೆ, ಅವಂಗೇನಾರ್ ತೊಂದರೆ ಆಗಿರ್ದೊ ಏನ್‌ಂತ ಎತ ಮಾಡಿಕಂಡೇ ಇದ್ದೊ. ಭೀಮಂತೂ ತಡಿಯಕೆ ಬೊತ್ತದೆ, ಅಣ್ಣ! ನಂಗೆ ಅಪ್ಪಣೆ ಕೊಡು. ನಾ ಹುಡ್‌ಕ್ಯಂಡ್ ಹೋಗಿ ಅಂವ ಎಲ್ಲಿದ್ದರೂ ಅವನ ಹುಡ್ಕ್ಯಂಡ್ ಬನ್ನೆಂತ ಸಣ್ಣ ಮಕ್ಕಳ ಹಾಂಗೆ ಆಗಾಗ ಕೇಳ್‌ತ್ತಿತ್ತ್. ಯುಧಿಷ್ಠಿರ ಅವಂಗೆ ಸಮಾಧಾನ ಹೇಳಿ ನಿಲ್ಸ್‌ತ್ತಿತ್ತ್. ಅವರ ನೋಡಿಕೆ ಬಂದ ರುಸಿಗ ಎಲ್ಲ ಅವ್ಕೆ ಸಮಾಧಾನ ಹೇಳಿ. ಧೈರ್ಯ ಕೊಡ್‌ತಿದ್ದೊ. ಮತ್ತೆ ಯಾರೋ ಒಬ್ಬ ರುಸಿ. ನೀವು ಈ ಕಾಮ್ಯಕ ವನನ ಬುಟ್ಟ್ ಗಂಧಮಾದನ

ಪರ್ವತಕ್ಕೆ ಹೋಗಿ ಅಲ್ಲಿ ಇರಿ. ಇನ್ನ್ ಹಜ್ಜ್ಸಮಿಯರ್ಲೇ ಅರ್ಜುನ ಬಂದ್ ನಿಮ್ಮ ಅಲ್ಲಿ ಸೇರುಮುಂತ ಹೇಳ್ದ್ರೊ. ಹಾಂಗೆ ಹಜ್ಜ್ದಿನ ಕಳ್ದ ಮೇಲೆ ಅವು ಗಂಧಮಾದನ ಪರ್ವತಕ್ಕೆ ಹೋದೊ.

## ಗಂಧ ಮಾದನ ಪರ್ವತ ಪ್ರವೇಶ

ಗಂಧಮಾದನ ಪರ್ವತಕ್ಕೆ ಬಂದ ಪಾಂಡವಣ್ ಅರ್ಜುನ ಬಾದೊರ ಕಾದ್‌ಕಣಂಡ್ ದಿನಾ ಕಳಿಯತಿದ್ದೊ. ಒಂದು ದಿನ ಅಲಕಾವತಿಲಿರುವ ಕುಬೇರನ ಹೂದೋಟಲಿರುವ ಒಂದು ದೊಡ್ಡ ಕೆರೆಲಿ ಸೌಗಂಧಿಕಂತೇಳುವ ತಾವರೆ ಹೂಗ ಅರ್ಳಿದ್ದೊ. ಅವರ ಪೊರಿಮಳಂತೇಳ್ದ ಬಾರೀ ವಿಶೇಷದ್ದಾಗಿತ್ತ್. ಒಮ್ಮೆ ಒಂದು ಹೂವು ಗಾಳಿಲಿ ಹಾರಿಕಣಂಡ್ ಬಂದಣ್ ದ್ರೌಪದಿನ ಕೈಗೆ ಸಿಕ್ಕಿತ್. ಅದರ ಪೊರಿಮಳಕೆ ಅದರ ಮನ್‌ಸ್ ಸೂರೆ ಹೋತು. ಅದ್ ಭೀಮನೊಟ್ಟಗೆ ಆ ಹೂಗಳ ಹೇಂಗಾರ್ ಮಾಡಿ ನಂಗೆ ತಂದ್ ಕೊಡೊಕುಂತ ತುಂಬ ಆಸೆಂದ ಬೇಡಿ ಕಣಂಡಣ್. ಕೂಡ್ಲೆ ಭೀಮ ವೇಗಂದ ಆ ಪೊರಿಮಳ ಬಾವ ದಿಕ್ಕ್‌ನ ನೋಡಿ ದಾಪುಗಾಲ್ ಇಸಿಕಣಂಡ್ ಹೊರ್ಟತ್.

ಸುಮಾರ್ ದೂರ ಹೋಕನ ಒಂದು ಕಾಡ್ ಸಿಕ್ಕಿತ್. ಅಲ್ಲಿ ದಾರಿಗೆ ಅಡ್ಡ ತನ್ನ ಬೀಲನ ಇಸಿಕಣಂಡ್ ಒಂದು ಅಜ್ಜ ಕುರೆ ಕರೆಲಿ ಕುದ್ದ್‌ಕಣಂಡ್ ಇತ್ತ್. ಸಾಮಾನ್ಯವಾಗಿ ಮೊಂಯಿಸರ್ ಹಕ್ಕಲೆ ಬಾಕನ ಕುರೆಗಳಂತ ಮುರ್ಗ್ಗಂಗ ಹೆದ್‌ರಿಓಡುವೊ. ಆದರೆ ಈ ಕುರೆ ಗಣ್ಯ ಇಲ್ಲದೆ ಕುದ್ದುಟೊಲೆಂತೇಳಿ ಭೀಮಂಗೆ ಕೋಪ ಬಾತ್. "ಏಯ್ ಅಜ್ಜ ಕುರೆ! ದಾರಿಗಡ್ಡ ನಿನ್ನ ಬೀಲನ ಇಸಿಕಣಂಡ್ ಮೊಸ್ಗದೆ ಕುದ್ದೊಳ. ತೆಗಿ ನಿನ್ನ ಬೀಲನ. ಮತ್ತೆ ದೂರ ತೊಲ್ಗ್ಂತ ಭೀಮ ಕೋಪಣಲಿ ಹೇಳ್ತ್.

"ಅಯ್ಯೋ ಮಜ್ಜ! ಏನ್ ಹೇಳ್ದ್ದ ಹೇಳ್. ನಾ ಅಜ್ಜ ಆಗೊಳೆಂತ ಕಾಂಬೊದ್‌ಲೇನೋ? ಕೆಜಿ ಕೇಳುದ್‌ಲೆ. ಕಣ್ಣ್ ಕಾಂಬೊದ್‌ಲೆ. ಏನ್ ಮಾಡುದು? ನೀ ಕಾಡ್‌ಲಿರುವ ಕುರೆ. ನಾವು ಮೊಂಯಿಸಣ್. "ಹಾಂಗಿರ್ಕನ ನೀ ನನ್ನ ಮಜ್ಜಂತ ಕರಿಯಕ? ಇದ್ ನಿನ್ನ ಹಾಂಕಾರ ಅಲ್ಲೊ?" ಭೀಮ ಕೋಪಣಲಿ ಕೇಳ್ತ್. "ಅದರ್ಲೇನುಟ್ಟು? ತಿಳ್ದೊವು ಹೇಳಿಯೊಳೊ. ನಿಮ್ಮ ಮಾನವ ಸಂತತಿಗೆ ನಮ್ಮ ವಾನರ ಸಂತತಿಯೆ ಮೂಲ ಗಡ! ಹೋಗಣಲಿ ಮುಂದೆ ಹೋಕುಂತಾದರೆ, ನೀನೇ ನನ್ನ ಬಾಲನ ಆಚೆಗೆ ಜಾರ್ಸಿ ಮುಂದೆ ಹೋಗು!" ಆಗ ಭೀಮ ಇದ್ಯಾವ ದೊಡ್ಡ ಕೆಲ್ಸಂತ ಎಡ್ದ ಕೈಲಿ ಬೀಲನ ನೇಚಿಕೆ ನೋಡ್ತ್. ಆದರೆ ಅದರ ಮೊಸ್ಗಿಸಿಕು ಆತ್‌ಲೆ. ಹಾಂಗೆ ಬೀಲದ ಆಚೆ ಮತ್ತೆ ಈಚೆ ನೆಲನ ಗದೆಲಿ ಗುದ್ದಿ ಹೊಂಡ ಮಾಡಿ, ಗದೆನ ಒಂದು ಕೊಡಿನ ಬೀಲದ ಅಡಿಂದ ಹುಗ್ಸಿ ಆಚೆ ನೆಲಕೆ ಮತ್ತೊಂದು ಕೊಡಿ ಅಂದರೆ ಹಿಡಿವ ದಂಡನ ಈಚೆ ಕಡೆಗೆ ಇರುವ ಹಾಂಗೆ ಮಾಡಿ, ಹಿಡಿಕೆನ ಎರ್ಡ್ ಕೈ ಸೇರ್ಸಿ ಮೀಂಡಿಕೆ ನೋಡ್ತ್. ಎಷ್ಟ್ ಹೊಣ್ಕಿರೂ ಆಗದೆ, ಕಡೆಗೆ ಅಂವನೇ ಬುಡ್ಕಂತ ನೆಲಕೆ ಬೀತ್. ಇಷ್ಟ್ ಬಲ ಇರೊಂವ ಯಾರೋ ಮಹಾಪುರುಷ

ನನ್ನ ಪರೀಕ್ಷೆ ಮಾಡಿಕೆ ಕುದ್ಪೆೞದಾಗಿರೂಕುಂತ ನೆನ್ಸಿ, ಕೈ ಮುಕ್ಕೞಂಡ್. "ಮಹಾತ್ಮ! ನೀ ದೇವನೊ, ದಾನವನೋ ಯಾರ್‌ಂತ ಗೊತ್ತಾಗದೆ ನಾ ನಿನ್ನೞಲ್ಲಿ ತೊಪ್ಪು ಮಾಡಿಬುಟ್ಟೆ. ನನ್ನ ಕ್ಷಮಿಸೂಕು. ನೀ ಯಾರ್‌ಂತ ತಿಳ್ಳೂಕುಂತ ಬೇಡಿಕಣೆ. "ನಾ ವಾಯುಪುತ್ರ ಹನುಮಂತ. ನನ್ನ ಅಯ್ಯೆ ಅಂಜನಾದೇವಿ. ಹಾಂಗೆ ಆಂಜನೇಯಂತ ಇನ್ನೊಂದು ಹೆಸ್‌ರೂ ಉಟ್ಟು" ಹಾಂಗಾರೆ ನೀ ನಮ್ಮಣ್ಣನೇ. ನಾನೂ ವಾಯುಪುತ್ರನೇ. ದ್ವಿತೀಯ ಪಾಂಡವಂತ ಹೇಳಿ ಅವನ ಕಾಲಿಗೆ ಬೀತ್. ಹನುಮಂತ ಅವನ ನೇಚಿ ತೊಬ್ಜಿಕೞಂಡೞತ್. ಮತ್ತೆ ನೀ ಕಾಡಿಗೆ ಬಾಕೆ ಕಾರಣ ಏನ್‌ಂತ ಕೇಳ್ತ್. ಅದಿಕೆ ಭೀಮ ಕೌರವರ್‌ಂದ ಆದ ಅನ್ಯಾಯನೆಲ್ಲ ವಿವರ್ಸಿತ್, ಆಗ ಹನುಮಂತ ಹೇಳ್ತ್: ನನ್ನಂತ ಸೋದರ ನಿಂಗಿದ್ದೂ ನಿಂಗೆ ಇಂತ ಬವಣೆ ಆತೋ. ನಾ ಕ್ಷಣ ಮಾತ್ರೞಲಿ ಅವರೆಲ್ಲ ಧ್ವಂಸ ಮಾಡಿ ಎಲ್ಲ ರಾಜ್ಯವೂ ನೀವ್ಗೆ ಆಗುವಾಂಗೆ ಮಾಡಿನೆಂತ ಹೇಳ್‌ಕನ ಭೀಮ ಹೇಳ್ತ್. "ಆ ಕುನ್ನಿಗಳ ನಿಗ್ರಹಕ್ಕೆ ನಿನ್ನಂತ ಮಹಾಪರಾಕ್ರಮಿ ಹೋದರೆ ನಿಂಗೆ ಅವಮಾನ. ಅವರ ನಾವೇ ಸರಿ ಮಾಡುವೆ. ನನ್ನ ಬೇಡಿಕೆ ಇಷ್ಟೇ ನೀ ನನ್ನ ತಮ್ಮ ಅರ್ಜುನನ ರಥದ ಪತಾಕೆಲಿ ವೈರಿ ಭಯಂಕರನಾದ ನೀನೇ ಇದ್ದ್ ವೈರಿಗಳ ಎದೆ ಒಡಿವ ಹಾಂಗೆ ಮಾಡಿರೆ ಸಾಕ್. ಹನುಮಂತ "ತಥಾಸ್ತು"ಂತ ಹೇಳ್ತ್. "ಇನ್ನೇನಾದರೂ ವರ ಬೇಕರೆ ಕೇಳಿಕ" "ಅಣ್ಣ! ನಂಗೆ ನಿನ್ನ ವಿಶ್ವರೂಪನ ಒಮ್ಮೆ ನೋಡಿಕೆ ಆಸೆ ಆದಂತ" ಹೇಳ್ತ್. ಕೂಡ್ಲೆ ಹನುಮಂತ ಭೂಮ್ಯಾಕಾಶ ಒಂದಾಗುವಷ್ಟ್ ಎತ್ತರಕ್ಕೆ ಬೆಳ್ತ್. ಅಣ್ಣ! ಧನ್ಯನಾದೆ. ಇನ್ನ್ ಮುಂದೇನಾಂಗೇ ಆಗ್!"ಂತ ಪ್ರಾರ್ಥನೆ ಮಾಡ್ತ್. ಹನುಮಂತ ಮುಂದೆನಾಂಗೆ ಆತ್. "ನೀ ಇತ್ತಯಾವ ಕಡೆಗೆ ಹೊರ್ಟೊಳಂತ" ಭೀಮನ ಕೇಳ್ಟ್ರ್‌ಕೆ ಸೌಗಂಧಿಕಾ ಪುಷ್ಪದ ಪ್ರಸ್ತಾಪನೆಲ್ಲ ಹೇಳ್ತ್. "ಸೞರಿ ನೀ ಹೊರ್ಟ್. ಬೇಗ ಅದರ ತಂದ್ ನಿನ್ನ ಹೆಣ್ಣಿಗೆ ಕೊಟ್ಟ್ ಅದರ ಸಂತೋಸು ಪಡ್ಸ್. ನೀವ್ಗೆಲ್ಲ ಒಳ್ಳೞದಾಗೞಲಿ" ಹನುಮಂತ ಆಶೀರ್ವಾದ ಮಾಡ್ತ್. ಭೀಮ ಅವಂಗೆ ಅಡ್ಡ ಬಿದ್ದ್ ಮುಂದೆ ಹೋತು.

ಅದಷ್ಟ್ ವೇಗೞಲಿ ಹೋಗಿ ಭೀಮ ಕುಬೇರನ ಅಲಕಾಪುರಿಗೆ ಸೇರ್ತ್. ಅವನ ತೋಟದ ಕೆರೆನ ಪಕ್ಕಲೆ ಬಾಕನ ಆ ಅರ್ಳಿದ ಹೂಗಳ ಪೊರಿಮಳ ಅಷ್ಟ್ ದೂರಕೆ ಬಾತಿತ್ತ್, ಭೀಮ ಕೆರೆಗೆ ಇಳ್ದಂವ ಕೈಕಾಲ್ ಮೋರೆ ತೊಳ್ತ್, ನೀರ್ ಕುಡ್ತ್, ಕೆರೆನ ನೊಡುಲಿದ್ದ ಹೂಗಳ ಕೊಯ್ಯಿಕೆ ಹೊರ್ಟೞತ್. ಆಗ ಕಾವಲಾಳ್‌ಗ ಅವನ ತಡ್ದೊ. ಇಂವ ಗದೆಲಿ ಒಂದೊಂದು ಪೆಟ್ಟ್ ಹಾಕ್‌ಕನ ಅವು ಅಲ್ಲಲ್ಲೆ ಬಿದ್ದೊ. ಒಳ್ದೊವು ಓಡಿ ಹೋಗಿ ಕುಬೇರಂಗೆ ದೂರು ಕೊಟ್ಟೊ. ಅಂವ ಬಾತ್. "ನಮ್ಮ ಒಪ್ಪಿಗೆ ಇಲ್ಲದೆ ನೀ ಅತಿಕ್ರಮಣ ಮಾಡಿಯೊಳ. ಯಾರ್ ನೀಂತ" ಕೇಳ್ತ್. ಭೀಮ ತಮ್ಮ ಎಲ್ಲ ವಿವರಗಳ ಹೇಳ್ತ್. ಇಂವ ಪಾಂಡವರ ಪೈಕಿಯಂವಂತ ಗೊತ್ತಾಗಿ, ನಿಂಗೆ ಬೇಕಷ್ಟ್ ಹೂಗಳ ಕೊಯ್ದುಕಂಡ್ ಹೋಗುಂತ ಕುಬೇರ ಅಪ್ಪಣೆ ಕೊಟ್ಟೞತ್ ಹಾಂಗೆ ಭೀಮ ತುಂಬ ಹೂಗಳ ಕೊಯ್ದುಕಂಡ್ ಸಂತೋಸುಂದ ಹಿಂದೆ ಬಾತ್. ಹೂಗಳ ನೋಡಿ ದ್ರೌಪದಿ ಭೀಮನ ತುಂಬ ಮೆಚ್ಚಿ ಹೊಗಳ್ತ್.

## ನಿವಾತ ಕವಚರ ಸಂಹಾರ; ಪತ್ನೀ ಸೋದರ ಮಿಲನ

ಸ್ವರ್ಗಂದ ಭೂಲೋಕಕ್ಕೆ ಇಳ್ದ್ ಅಣ್ಣ ತಮ್ಮಂದರ್ನೂ ದ್ರೌಪದಿನೂ ಸೇರೊಕುಂತ ಅರ್ಜುನ ಆತುರಲಿದ್ದರೂ ದೇವೇಂದ್ರ ಅವನ ಗಾಂಧರ್ವ ವಿದ್ಯೆನೆಲ್ಲ ಕಲ್ತ್‌ಕಂತ ಒತ್ತಾಯ ಮಾಡಿ ನಿಲ್ಸಿಕಣ್ತ್. ಅದೆಲ್ಲ ಪ್ರಾವೀಣ್ಯತೆ ಪಡ್ದರೂ, ಇನ್ನ್ ನೀ ನಂಗೆ ಒಂದು ಉಪಕಾರ ಮಾಡೊಕುಂತ ಕೇಳ್ತ್. ಏನ್‌ಂತ ಕೇಳ್ಕನ ನಮ್ಮ ಸ್ವರ್ಗಕ್ಕೆ ನಿವಾತಕವಚರ್‌ಂತೇಳ್ವ ರಾಕ್ಷಸ ಕೂಟದೊವು ಆಗಾಗ ತೊಂದರೆ ಕೊಟ್ಟವೆ. ನನ್ನಂದ ಅವರ ನಿಗ್ರಹಿಸಿಕೆ ಸಾಧ್ಯ ಆದುಲೆ. ಹಾಂಗೆ ನೀ ಅವರ ಕೊಂದ್ ನೆಮ್ಮದಿ ತರೊಕು. ಆ ಮೇಲೆ ನಿ ಭೂಲೋಕಕೆ ಹೊರ್ಡಕ್‌ಂತ ದೇವೇಂದ್ರ ಹೇಳ್ತ್.

ಅರ್ಜುನ ಯುದ್ಧಕ್ಕೆ ತಯಾರಾತ್. ದೇವೇಂದ್ರ ಬೇಕಾದ ಆಯುಧಗಳ್ನೂ ತನ್ನ ರಥನ್ನೂ ಸಾರಥಿಯಾಗಿ ಮಾತಲಿನೂ ಕಳ್ಸಿ ಕೊಟ್ಟತ್. ಅರ್ಜುನ ರಕ್ಕಸರಿರುವ ತಾಣಕ್ಕೆ ಹೋಗಿ ಯುದ್ಧ ಮಾಡಿ ಅವರೆಲ್ಲರ ಸಂಹಾರ ಮಾಡಿ ಬಾತ್. ದೇವೇಂದ್ರಂಗೆ ಸಂತೋಸಾತ್. ಅವಂಗೆ ಬೇಕಾದ ಉಪಚಾರ ಮಾಡಿ ಒಳ್ಳೊಳ್ಳ ವಸ್ತುಗಳ ಕಾಣಿಕೆಯಾಗಿ ಕೊಟ್ಟ್, ನಮಸ್ಕಾರ ಮಾಡ್ದ ಅರ್ಜುನಂಗೆ "ವಿಜಯಿಯಾಗ್"ಂತ ಆಶೀರ್ವಾದ ಮಾಡಿ ಸಂಭ್ರಮಂದ ಕಳ್ಸಿ ಕೊಟ್ಟತ್. ಅರ್ಜುನ ರಥಲಿ ಕುದ್ದತ್. ಮಾತಲಿ ರಥನ ಗಂಧ ಮಾದನ ಪರ್ವತದತ್ತ ಓಡ್ಸಿ ಪಾಂಡವರಿದ್ದ ಜಾಗೆಲಿ ಇಳ್ಸಿತ್. ಭೂಮಿನ ಮುಟ್ಟದೆ ನಾಲ್ಕಂಗುಲ ಎತ್ತರಲಿ ರಥ ನಿತ್ತತ್. ಅರ್ಜುನ ಇಳ್ದ್ ಬಾತ್. ಆಗ ಅವ್ಕೆಲ್ಲ ಆ ಆನಂದ ಎಷ್ಟ್‌ಂತ ಹೇಳಿಕೆ ಜೊತ್ತ್. ಎಲ್ಲರ ಕಣ್ಣ್‌ಗಳ್ಲಿಯೂ ಆನಂದದ ಕಣ್ಣೀರ್ ದಳದಳಂತ ಇಳಿಯುತ್ತಿತ್ತ್. ಮತ್ತೆ ಮತ್ತೆ ಒಬ್ಬೊಂದೊಬ್ಬ ತೊಬ್ಬಿಕಂಬತ್ತಿದ್ದೊ. ಮೋರೆ ನೋಡಿಕಂಬೊತ್ತಿದ್ದೊ. ಮತ್ತೆ ಅರ್ಜುನ ಈಶ್ವರ ಕೊಟ್ಟ ಪಾಶುಪತಾಸ್ತ್ರನ, ಪಾರ್ವತಿ ಕೊಟ್ಟ ಅಂಜಲಿಕಾಸ್ತ್ರನ ಮತ್ತೆ ಬೇರೆ ಬೇರೆ ದೇವತೆಗ ಕೊಟ್ಟ ಅಸ್ತ್ರಗಳ ಅವ್ಕೆಲ್ಲ ತೋರ್ಸಿತ್. ಯುಧಿಷ್ಠಿರ ಪಾಶುಪತಾಸ್ತ್ರನ ಪ್ರಯೋಗ ಮಾಡ್ದು ಹೆಂಗೇಂತ ನೋಡಿಕೆ ಬಯಸಿತ್ ಹಾಂಗೆ ಅರ್ಜುನ ತಯಾರ್ ಮಾಡ್‌ಕನ "ಅಗತ್ಯದ ಸಮಯಲಿ ಅಲ್ಲದೇ ಬೇರೆ ಸಮಯಲಿ ಪ್ರಯೋಗ ಮಾಡಿಕೆ ಆಗದ್‌ಂತ" ಅ ಶರೀರ ವಾಣಿ ಕೇಳಿ ಬಾತ್. ಹಾಂಗೆ ಅರ್ಜುನ ಆ ಕಾರ್ಯನ ಮಾಡ್ತ್‌ಲೆ.

## ಅಜ್ಞಾತ ವಾಸಕ್ಕೆ ತಯಾರಿ:

ಅರ್ಜುನ ಬಂದ ಮೇಲೆ ಹಗೆಲ್ ಇರ್‍ಲ್, ಅಣ್ಣ ತಮ್ಮಂದರೊಳಗೆ ಮಾತೇ ಮಾತ್ ಹನ್ನೆರ್‍ಡ್ ವರ್ಷದ ವನವಾಸದ ಅವಧಿ ಮುಗಿಯಕೆ ಆತ್. ಇನ್ನ್ ಒಂದು ವರ್ಷದ ಅಜ್ಞಾತ ವಾಸನ ಮುಗ್ಸೊಕು. ಹಾಂಗೆ ಇದರ ಎಲ್ಲಿ ಕಳೀದುಂತ ಪುರೋಹಿತರಾದ ಧೌಮ್ಯರೊಡನೆ ಆಲೋಚನೆ ಮಾಡಿಕೆಂಡ್ ಇದ್ದೊ. ಕಡೆಗೆ ವಿರಾಟನ ನಗರವೇ ನಾವ್ಗೆ ಸರಿಯಾದು. ಏಕೆಂದರೆ ಅಲ್ಲಿ ಬಲಶಾಲಿಯಾದ ಕೀಚಕಂತೇಳ್ವ ವಿರಾಟನ ಬಾವನೇ ಸೇನಾಧಿಪತಿಯಾಗಿರುದರ್‌ಂದ ಅವನ ಹೆದ್‌ರಿಕೆಂದ ಕೌರವರ ಪೈಕಿನೊವು ಅತ್ತ ಸುಳಿಯಕಿಲೆಂತ ವಿರಾಟ ನಗರನೇ ಅಜ್ಞಾತ ವಾಸಕ್ಕೆ ಆಯ್ಕೆ ಮಾಡ್ದೊ. ಮತ್ತೆ ತಮ್ಮ ಪರಿವಾರದವರೆಲ್ಲ ನೀವೆಲ್ಲ ಒಂದು ವೊರ್ಸಸದ ಮಟ್ಟಿಗೆ ಹೊರಗೆ ಇರಿ. ಆ ಮೇಲೆ ನಾವಿರುವಲ್ಲಿಗೆ ಬಂದ್ ಸೇರಿಕಣೀಕ್‌ಂತ ಹೇಳಿ ಒಪ್ಪುಸಿ ಹೊರೆಗೆ ಕಳ್ಸಿದೊ. ಅವು ಕಣ್ಣೀರ್ ಇಸಿಕೆಂಡ್ ಹೊರ್ಟ್ ಹೋದೊ.

ಮತ್ತೆ ಇವು ತಮ್ಮ ಆಯುಧಗಳ ಎಲ್ಲ ಮೊಯಿಂಸನ ಆಕಾರಲಿ ಮೂಟೆ ಕಟ್ಟಿ, ಪಟ್ಟಣದ ಹೊರೆಗಿರುವ ಮಸಣಲಿರುವ ಒಂದು ಬನ್ನಿ ಮರದ ಮೇಲೆ ನೇತಾಡ್ಸಿದೊ. ಅದರ ಸುತ್ತೊಳು ಹೆಣಗಳ ಅಡ್ಕಿ ಇಸಿದೊ. ನಮ್ಮ ಪೈಕಿ ಅರ್ಜುನ ಬಂದ್ ಕೇಳಿರೆ ಮಾತ್ರ ಅವನ ಕೈಗೆ ಬರೋಕು ಹೊರ್ತು ಬೇರೆವರ ಕೈಗೆ ಹೋಕೆ ಆಗದ್‌ಂತ ವಾಕ್ ಇಸಿ ಹಿಂದೆ ಬಂದೊ. ಹನ್ನೆರ್‍ಡ್ ವೊರ್ಸದ ಕೊನೆ ದಿನದಂದ್ ಅವು ಆರ್ ಜೆನನೂ ಒಬ್ಬೊಬ್ಬ ಒಂದೊಂದು ದಾರಿಲಿ ಹೋಗಿ ಪಟ್ಟಣ ಪ್ರವೇಶ ಮಾಡ್ದೊ. ಯುಧಿಷ್ಠಿರ ನಾಮ ಮುದ್ರೆ ಹಾಕೆಂಡ್ ಬ್ರಾಹ್ಮಣ ವೇಸಲಿ ವಿರಾಟನ ಆಸ್ಥಾನಕ್ಕೆ ಬಂದ್, ರಾಜಾಶೀರ್ವಾದ ಮಾಡಿ ಮಂತ್ರಾಕ್ಷತೆಗಳ ಕೊಟ್ಟತ್. ರಾಜ ಯಾರ್ ನೀಂತ ಕೇಳ್ತ್. ನನ್ನ ಹೆಸ್‌ರ್ ಕಂಕಭಟ್ಟಂತ. ನಾ ಯುಧಿಷ್ಠಿರ ಮಹಾರಾಜನೊಟ್ಟಿಗೆ ಇದ್ದೆ. ಆ ರಾಜ ನನ್ನೊಟ್ಟಿಗೆ ಹೊತ್ತು ಕಳಿಯಕೆ ಪಗಡೆ ಆಡ್‌ತ್ತಿತ್ತ್. ಮತ್ತೆ ನಂಗೆ ವೇದವೇದಾಂಗಗ ಎಲ್ಲ ಕಸ್ಲಿ ಕೇಳಿರೂ ಹೇಳುವಷ್ಟ್ ತಾಕತ್ತ್ ಉಟ್ಟು. ಆ ರಾಜ, ರಾಜ್ಯಕೋಶಗಳೆಲ್ಲ ಕಳ್ಕಂಡ್ ದೇಶಾಂತರ ಹೋದ್ದರ್‌ಂದ ನಮ್ಮಂತವುಕೆ ನೆಲೆ ತೊಪ್ಪಿ ಹೋದ ಕಾರಣ ಎಲ್ಲಿ ಯಾರ್ ನೆಲೆ ಸಿಕ್ಕುದೋಂತ ಹುಡ್ಕ್ಯಂಡ್ ಬಂದೊಳೆಂತ ಹೇಳ್ತ್. ಸರಿ ನೀ ನನ್ನೊಟ್ಟಿಗೆ ಇರ್‌ಂತ ವಿರಾಟ ಅವನ ನಿಲ್ಸಿಕೆಂಡತ್.

ಮೊರ್‍ದಿನ ಭೀಮ ಒಂದು ಹೇಳಿಗೆಲಿ ಅಡಿಗೆ ಪರಿಕರಗಳ ತುಂಬುಸಿಕೆಂಡ್, ಸೌಟ್ ಸಟ್‌ಗಗಳ ಹಿಡ್ಕೆಂಡ್, ಅಡಿಗೆ ಭಟ್ಟನ ವೇಸ ಹಾಕೆಂಡ್ ಬಂದ್ ವಿರಾಟನ ನೋಡ್ತ್. ವಿರಾಟ ವಿಚಾರ್‍ಸ್‌ಕನ, ಅರಸರೇ ನಾ ಮಾಡ್ವ ಅಡಿಗೆನ ಉಂಡೊವ್ಕೆ ನರೆ ಜರೆಗ ಬಾಕಿಲ್ಲೆ. ಮತ್ತೆ ನಂಗೆ ಮಲ್ಲಯುದ್ಧಲಿನೂ ಪರಿಣಾತಿ ಉಟ್ಟು. ನನ್ನ ಹೆಸ್‌ರ್ ವಲಲಂತ. ನಿಂಗೆ ಒಪ್ಪಿರೆ ನಿಂಗೆ ಆಳಾಗಿ ಇದ್ದನೆಂತ ಹೇಳ್ತ್. ಆಗಲಿ. ನೀ ಬಾಣಸ ಮನೆಗ ಅಧ್ಯಕ್ಷನಾಗಿ ಕೆಲ್ಸ ಮಾಡಿಕೆಂಡ್ ಇರ್‌ಂತ ವಿರಾಟ ಅವನ ಅಗ್ರಸಾಲೆಗೆ ಕಳ್ಸಿತ್. ಮತ್ತೆ ಅರ್ಜುನ ಕ್ಲೈ

ತುಂಬ ಬಳೆ ಇಸಿಕಣೆಂಡ್, ಸೀರೆ ಉಟ್ಕಣೆಂಡ್ ಬೃಹನ್ನಳೆ ವೇಷ ಧರ್ಸಿಕಣೆಂಡ್ ಬಂದ್ ವಿರಾಟಂಗೆ ನಮಸ್ಕಾರ ಹೇಳಿ, ನಾ ಗಾಂಧರ್ವ ವಿದ್ಯೆಯಾದ ಸಂಗೀತ, ನೃತ್ಯ ಎಲ್ಲ ಕಲ್ತೋಳೆ. ನಿಮ್ಮೆಲ್ಲಿ ಕಲಿವ ಮಕ್ಕ ಇದ್ದರೆ, ನಾ ಅವ್ಕೆ ಈ ವಿದ್ಯೆನ ಕಲ್ಸಿಕೊಡುವೆಂತ ಹೇಳ್ಕನ ಉತ್ತರೆಗೆ ಕಲ್ಸಲಿಕ್‌ಂತ ಹೇಳಿ ಅದರ ಅಂತಃಪುರಕ್ಕೆ ಹೋಕೆ ಹೇಳಿ, ನೀ ಉತ್ತರೆಗೂ ಅದರ ಸಖಿಯರಿಗೂ ನಿನ್ನ ವಿದ್ಯೆನ ಹೇಳಿಕೊಡುಂತ ಹೇಳ್ತ್. ಆ ಮೇಲೆ ನಕುಲ ಚಾಟಿ ಕೋಲುಗಳ ಹಿಡ್ಕಂಡ್, ನಾ ಎಂಥ ದುಷ್ಟ ಕುದುರೆನಾದರೂ ಅಂಕೆಗೆ ತಂದ್ ಅದರ ಸವಾರಿಗೆ ತಯಾರ್ ಮಾಡುವಂತ ಸಾಮರ್ಥ್ಯ ನಂಗುಟ್ಟುಂತ ಹೇಳ್ತ್. ರಾಜ ಮೆಚ್ಚಿ ಅವನ, ಕುದುರೆ ಸಾಹಣಿಯಾಗಿರ್‌ಂತ ಅಪ್ಪಣೆ ಮಾಡ್ತ್. ಸಹದೇವನೂ ವೇಷ ಬದ್‌ಲಿಸಿಕಣೆಂಡ್ ಬಂದ್, ನಾ ಗೋಪಾಲಕ. ನಾ ನೋಡಿ ಸಾಂಕುವ ದನಗೆಲ್ಲ ಮೈತುಂಬಿಕಣೆಂಡ್, ಹಸುಗೆಲ್ಲ ಕಾಮಧೇನುನಾಂಗೆ ಸಮೃದ್ಧ ಹಾಲ್ ಕೊಡುವೊ. ಅಲ್ಲಿ ಹಾಲ್‌ನ ಹಳ್ಳವೇ ಹರಿದು. ವಿರಾಟಂಗೆ ಕುಸಿಯಾಗಿ ನನ್ನ ಗೋ ಸಮೂಹಕ್ಕೆ ಗೋಪಾಲಾಧ್ಯಕ್ಷನಾಗಿರ್‌ಂತ ಅಪ್ಪಣೆ ಕೊಟ್ಟತ್. ಇಷ್ಟರ್ಲೆ ದ್ರೌಪದಿ ಕೆಲ್ಸದವಳ ವೇಷ ತಾಳಿ, ಸೈರಂಧ್ರಿಂತ ಹೆಸ್‌ರಿಸಿಕಣೆಂಡ್, ವಿರಾಟನ ರಾಣಿ ಸುಧೇಷ್ಣೆನಕ್ಕಲೆ ಬಾತ್. ಅದರ ಪೊರ್ಲುನ ನೋಡಿ ರಾಣಿಗೆ ಆಶ್ಚರ್ಯ ಆತ್. ಯಾರ್ ನೀಂತ ಕೇಳ್ತ್. ನನ್ನ ಹೆಸರ್ ಸೈರಂಧ್ರಿಂತ. ನಾ ಗಂಧರ್ವ ಕನ್ಯೆ. ಪೊರಿಮಳ ವಸ್ತುಗಳ ತಯಾದ್ಲುದು ನನ್ನ ವೃತ್ತಿ. ಇದಿಕ್ಕಾಗಿ ನಂಗೆ ಗಂಧವಳ್ತಿ'ಂತ ವೃತ್ತಿ ನಾಮ. ನಾ ಗಂಡಸರ್‌ಂದ ದೂರ ಇರೊಂವ. ಬೇರೆವು ಯಾರಾರ್ ನಂಗೆ ತೊಂದರೆ ಕೊಡಿಕೆ ಆಗದ್‌ಂತ ಗಂಧರ್ವರ ಕಾವಲ್ ನಂಗೆ ಉಟ್ಟು. ನೀ ನನ್ನ ಇಸಿಕಂಡರೆ ಪೊರಿಮಳ ವಸ್ತುಗಳ ಮಾಡಿಕಣೆಂಡ್ ಏನಾರ್ ನಿನ್ನ ಊಳಿಗ ಮಾಡಿಕಣೆಂಡ್ ಇರುವೆಂತ ಹೇಳ್ಕನ ಸುಧೇಷ್ಣೆ, ನೀ ನನ್ನ ಹಕ್ಕಲೇ ಇರ್‌ಂತ ಅದರ ನಿಲ್ಸಿಕಣೆಂಡತ್. ದ್ರೌಪದಿ ರಾಣಿಗೆ ಮೆಚ್ಚಿನ ಆಳಾಗಿತ್ತ್.

ಹೀಂಗೆ ಒಂದು ಮಟ್ಟಿಗೆ ಪಾಂಡವರಿಗೆ ಹಜ್ಜ ನೆಮ್ಮದಿ ಕಾಂಬಾಂಗೂ ಆತ್. ಇನ್ನ್ ಒಂದು ವೊರ್ಸನ ಹೇಂಗಾರ್ ದಾಟ ಬುಟ್ಟರೆ, ಮತ್ತೆ ಏನಾರ್ ಆದೆಂತ, ಆದರೆ ಈಗ ನಾವು ಪಾಂಡವರ್‌ಂತ ಯಾರಿಗೂ ಗೊತ್ತಾಕೆ ಆಗದ್‌ಂತ ಜಾಗ್ರತೆಲ್ ಇರೊಕುಂತ ಎಲ್ಲೊವೂ ಜಾಗ್ರತಲೇ ಇರ್‌ತಿದ್ದೊ. ಒಮ್ಮೆ ವಿರಾಟ ರಾಜಂಗೆ ಕುಸ್ತಿ ಯುದ್ಧ ನೋಡಿಕೆ ಅರ್ತಿ ಆತ್. ಊರುಗಳ್ಲಿ ಇದ್ದ ಜಟ್ಟಿಗ ಎಲ್ಲ ಬಂದೊ. ಇಲ್ಲಿ ಮಲ್ಲಯುದ್ಧ ನಡ್‌ದದೆಂತೇಳುವ ಸುದ್ದಿ ಕೇಳಿ, ಹಸ್ತಿನಾಪುರದ ಕೌರವನ ಆಸ್ಥಾನಲಿ ಜಟ್ಟಿಯಾಗಿದ್ದ ವಿಷಖರ್ಪರಂತೇಳುವ ಜಟ್ಟಿನೂ ಬಾತ್. ಅಂವ ನನ್ನೊಟ್ಟಿಗೆ ಸೆಣ್ಸುವ ಧೈರ್ಯ ಯಾರಿಗುಟ್ಟುಂತ ಎಲ್ಲವ್ಕ ಸವಾಲ್ ಹಾಕಿತ್. ಅದಿಕೆ ಸರಿಯಾಗಿ ಅಂವನೊಟ್ಟಿಗೆ ಹೋರಾಡ್ದ ಜಟ್ಟಿಗಳ ಎಲ್ಲ ಕೊಂದ್ ಹಾಕಿತ್. ಆ ಮೇಲೆ ಬಡಾಯಿಲಿ ಸಭೆನ ನೋಡಿ ಸುತ್ತಿ ಸುತ್ತಿ ನೋಡಿ, ನಿಮ್ಮ ಈ ನಾಡ್‌ಲಿ ನನ್ನೊಟ್ಟಿಗೆ ಹೋರಾಡುವಂಥೊವು ಯಾರೂ ಇಲ್ಲೆನೋ? ನೀವೆಲ್ಲ ನಂಗೆ ಸೋತ್ ಶರಣಾದರಿಯೋ?ಂತ ಹಂಗ್‌ಸಿಕಂಡ್ ಗೇಲಿ ಮಾಡಿಕೆ ಸುರು ಮಾಡ್ತ್. ವಿರಾಟಂಗೆ ತುಂಬ ನಾಚಿಕೆ ಆಕೆ ಸುರಾತ್. ನಮ್ಮ ವಲಲನೂ ಒಬ್ಬ ಮಲ್ಲ ಅಲ್ಲೋಂತ ನೆಂಪಾಗಿ

ಅವನ ಬಾಕೆ ಹೇಳ್ತ್. ಅಂವ ಬಂದ್, ಏನ್ ಕರಿಸಿದರಿಂತ ಕೇಳ್ಯೆಕೆ. ನೋಡು ಈ ಜಟ್ಟಿ ಮಲ್ಲಯುದ್ಧಲಿ ನಮ್ಮ ಮಲ್ಲರ ಎಲ್ಲ ಕೊಂದ್ ಹಾಕಿ ನಾವ್ಗೆ ಅವಮಾನ ಮಾಡ್ತ್. ನೀ ಅವನೊಟ್ಟಿಗೆ ಹೋರಾಡಿ ಜಯಿಸುವನೋಂತ ವಿರಾಟ ಕೇಳ್ತ್. ನೀವು ಅಪ್ಪಣೆ ಕೊಟ್ಟರೆ ನಾ ನೋಡ್ತೇಂತ ಭೀಮ ಅಡಿಗೆ ಭಟ್ಟನ ವೇಸ ಬಿಚ್ಚಿ, ಮಲ್ಲ ಕಚ್ಚೆ ಕಟ್ಟಿ ತೊಡೆ ತೋಳುಗಳ ತಟ್ಟಿಕೆಂಡ್ ಕಳಕ್ಕಿಳ್ತ್. ಎದ್‌ರಾಳಿ ಜಟ್ಟನ ಮೊಸ್ಗಿಕಾಗದ ಹಾಂಗೆ ಬಿಗ್ದ್ ಅಂಗಾತ ಬೀಳ್ಸಿ ನೆಲಕ್ಕೆ ಒತ್ತಿ ಹಿಡ್ತ್. ಅವಂಗೆ ಉಸುರು ಕಟ್ಟಿಕೆಂಡ್ ಬಂದ್ ಕಾಲ್‌ಗಳ ನೆಲಕೆ ಬೊಡ್ಕಂಡ್ ಇತ್ತ್. ಕೊತ್ತಿ ಒಮ್ಮೆಗೇ ಎಲಿನ ಕೊಲ್ಲದ್‌ಲೆ ಬುಟ್ಟ್ ಬುಟ್ಟ್ ಹಣ್ಣಣ್ಣನೇ ಆಡ್ಸಿ ಮತ್ತೆ ಕೊಲ್ಲುದು. ಅಥವಾ ಅದಾಗಿಯೇ ಸಾಯುವಾಂಗೆ ಮಾಡುದು. ಅದೇ ರೀತಿ ಭೀಮನೂ ಹಣ್ಣ ಸಟ್ಲ್ ಬುಟ್ಟತ್. ಬಿದ್ದವನ ಕೈ ಕೊಟ್ಟ್ ಎದ್ದ್‌ರ್ಲಿತ್. ಅಂವ ಎದ್ದ್ ನಿತ್ತಾಕನ ಅಂವನ ಒಂದು ಕೈಲಿ ಎಳ್ದ್, ಮೂರು ನಾಲ್ಕ್ ಸುತ್ತುವಾಂಗೆ ಸುತ್ತಿ ಮತ್ತೆ ಕವಣೆ ಕಲ್ಲಿಟ್ಟಾಂಗೆ, ಬಲವಾಗಿ ತಿರ್‍ಗ್ಸಿ ಪಕ್ಕನೆ ಕೈ ಬುಟ್ಟಾಕನ, ಅಂವ ಅಷ್ಟ್‌ದೂರ ರಟ್ಟಿ ಬಿದ್, ಮೂಕುಲಿ ಬಾಯಿಲಿ ನೆತ್ತ್‌ರ್ ಕಾರಿ ಸತ್ತ್ ಜೀತ್. ಆಸ್ಥಾನಲಿದ್ದೊವು ಎಲ್ಲ ಪಲಲಂಗೆ ಜಯಕಾರ ಹಾಕಿದೊ. ವಿರಾಟ ಅವನ ಕೈಗೆ ಚಿನ್ನದ ಕಡಗ ಹಾಕ್ಸಿತ್.

ಕೌರವರ್ ಸುಮ್ಮನಿರಿಕಾಗದೆ, ಪಾಂಡವರ ಬೇಟೆ ಮಾಡೊಕುಂತೇಳ್ವ ದುರುದ್ದೇಸಂದ ವಿರಾಟ ರಾಜನ ಗಡಿಯೊಳಗೆ ನುಗ್ಗಿ ಏನೋ ಕೀಟಲೆಗಳ ಸುರುಮಾಡ್ದೋಂತ ಸುದ್ದಿ ಬಾತ್. ಅದಿಕ್ಕೆ ಕೀಚಕ ತನ್ನ ಪಡೆಗಳ ತಕಂಡ್ ಹೋಗಿ ಅವರ ಅಲ್ಲಿಂದ ಹೋಡ್ದೋಡ್ಸಿ ಹಿಂದೆ ಬಾತ್. ಬಂದಂವ ಬಾವ ವಿರಾಟನ ನೋಡಿ, ಅಕ್ಕ ಸುದೇಷ್ಣನ ಮಾತಾಡ್ಸಿ ಪೋಯಿಂತ ಅದರ ಅಂತಃಪುರಕ್ಕೆ ಹೋತು. ಅಲ್ಲಿ ಕುದ್ದ್ ಮಾತಾಡಿಕೆಂಡ್ ಇರ್‌ಕನ, ರಾಣಿಗೆ ಹಣ್ಣ ದೂರಲಿ ಕುದ್ದ್‌ಕೆಂಡ್ ಅರಕಲ್ಲ್‌ಲಿ ಸುಗಂಧ ವಸ್ತುಗಳ ಇಸಿಕೆಂಡ್ ಅತ್ತಿತ್ತ ಅರ್ಕಂಡ್ ಇರುವ ಸೈರಂಧ್ರಿ ವೇಸದ ದ್ರೌಪದಿನ ನೋಡ್ತ್. ರೆಪ್ಪೆ ಹೊಡಿಯದೆ ನೋಡ್ತ್. ದ್ರೌಪದಿನ ಅವಸ್ಥೆನ ನೆನ್ಸಿರೆ ನಾವು ಕಣ್ಣೀರ್ ಇಸೊಕು. ಪಂಚಪತಿವ್ರತೆಂತ ಹೆಸ್‌ರ್ ಪಡ್ದವರಲ್ಲಿ ಅದ್ ಒಂದು. ಅಗ್ನಿ ಪುತ್ರಿ ಆದರ್‌ಂದಳೇ ಅದ್ ಎಷ್ಟ್ ಪರಿಸುದ್ಧಂತ ಗೊತ್ತಾದೆ. ಅದ್ಕೆ ಕೌರವ ಸಭೆಲಾದ ಘೋರ ಅವಮಾನ, ಆ ಮೇಲೆ ವನವಾಸದ ಬವಣೆ, ಇದರೆಲ್ಲ ಅನುಭವಿಸಿ ಸಹಿಸಿಕೆಂಡ್ ಇರ್‌ಕನ ವಿರಾಟನ ಅರಮನೆಲಿ ಸಿಡ್ಲ್‌ನಾಂಗೆ ಒದ್ಗಿದ ಆಪತ್ತ್. ಹೀಂಗೆ ಕಷ್ಟಗಳ ಮೇಲೆ ಕಷ್ಟಗ ಒದ್ಗಿದೊ. ಕಾರಣ ಒಂದೇ. ಅದರ ರೂಪು. ಅದರ ರೂಪು ಸೌಂದರ್ಯನ ನೋಡಿ ಕೀಚಕಂಗೆ ನಾನಾ ತರದ ಕಾಮ ವಿಕಾರಗ ಉಂಟಾತ್. ಅದರ ಅಂಗಾಗಳ ನೋಡಿಕೆಂಡೇ ಇತ್ತ್. ಆಗ ಅವನ ಮನ್ಸ್‌ಲಿ ಎದ್ದ ವಿಕಾರ ಭಾವನೆಗಳ ವರ್ಣಿಸಿದ, ಬರ್ದ ತುಂಬ ಕವಿಗ ಒಳೊ. ಆದರೆ ನಾ ಹಾಂಗೆ ಮಾಡ್‌ದ್‌ಲೆ. ಕಾರಣ ನಂಗೆ ದ್ರೌಪದಿ ಪರಮ ಪವಿತ್ರ ವ್ಯಕ್ತಿ. ಅಂಥದರ ಬಗ್ಗೆ ಯಾವ ಕುತ್ಸಿತ ಭಾವನೆನೂ ಸುಳಿಯಕೆ-ಆಗಲ್ವ್. ಒಂದು ವೇಳೆ ಕೀಚಕಂಗೆ ದ್ರೌಪದಿ ಯಾರ್‌ಂತ ಗೊತ್ತಿದ್ದರೆ ಅವಂಗೆ ದುಷ್ಟ ಭಾವನೆಗ ಬಾತ್ತಿತ್ಲೆ. ಅದ್ ಸೈರಂಧ್ರಿ (ಸೇವಕಿ) ವೇಷಲಿದ್ದವರ್‌ಂದ ಆ ಕೆಟ್ಟ ಭಾವನೆಗ ಬಂದಿರಿಕೆ ಸಾಕ್‌ಂತ

ಹೇಳಿಕೂ ಸಾಧ್ಯ ಉಟ್ಟು. ಆದರೆ ಬಲ ದರ್ಪ ಅಹಂಕಾರ ತುಂಬಿದ ದುಷ್ಟ ವ್ಯಕ್ತಿಗಳಿಗೆ (ಉದಾ: ರಾವಣ, ಕೀಚಕ)ನಂಥಲೆವ್ರುಕೆ ಆ ಸಾತ್ವಿಕ ಭಾವನೆ ಬಾಕೂ ಇಲ್ಲೆ. ಹಾಂಗೆ ಅಂವ ಆಡುವ ಮಾತ್‌ಗಳೆಳಿಗೆಲ್ಲ ನಾ ಇಲ್ಲಿ ಸೆನ್ಸಾರ್ ಕತ್ತರಿ ಹಾಕನೆ.

ಹೀಂಗೆ ದುರಾಸೆಂದ ಒಂದೇ ಸವನೆ ನೋಡ್ತಾ ಇದ್ದ ಕೀಚಕ ಅಕ್ಕನೊಟ್ಟಿಗೆ ಇದ್ ಯಾರ್‌ಂತ ಕೇಳ್ತ್. ಅದ್‌ಕೆ ಸುಧೇಷ್ಣೆ ಇವನ ಕೆಟ್ಟ ನೋಟನ ಗಮನಿಸಿ ಹೇಳ್ತ್: ಇದ್ ಸಾಮಾನ್ಯ ಹೆಂಗ್‌ಸ್‌ಂತ ತಿಳ್ಕಣ್ ಬೇಡ. ಅದ್ ಗಂಧರ್ವರ ಹೆಣ್ಣ್. ಅದಿಕೆ ಗಂಧರ್ವರ ಕಾವಲ್ ಉಟ್ಟು. ನನ್ನ ಮೇಲೆನ ಪ್ರೀತಿಂದ ಬಂದ್ ಈಗ ನನ್ನ ಹಕ್ಕಲೆ ಕೆಲ್ಸಕೆ ನಿತ್ತುಟು. ನೀ ಏನೂ ಕೆಟ್ಟ ಯೋಚನೆ ಮಾಡದೆ ನಿನ್ನ ಅರಮನೆಗೆ ಹೋಗಿ ವಿಶ್ರಾಂತಿ ತಕ. ಕೀಚಕ ಮನ್ಸಿಲ್ಲದ ಮನ್ಸ್‌ಲಿ ಎದ್ದ್ ಅವನ ಅರಮನೆಗೆ ಹೋತು. ಮತ್ತೆ ಹಜ್ಜ ಹೊತ್ತುಲಿ. ನಂಗೆ ಕುಡಿಯುಕೆ ಕಳ್ಳ್‌ನ ಪಾತ್ರನ ಸೈರಂಧ್ರಿನ ಕೈಲಿ ಕಳ್ಸಿಕೊಡುಂತ ಅಕ್ಕಂಗೆ ಹೇಳಿ ಕಳ್ಸಿತ್. ಹಾಂಗೆ ರಾಣಿ ಒಂದು ಪಾತ್ರೆಲಿ ಕಳ್ಳ್‌ನ ತುಂಬ್‌ಸಿ ಇದರ ಕೀಚಕಂಗೆ ಕೊಟ್ಟ್ ಬಾಂತ ಸೈರಂಧ್ರಿನ ಕೈಲಿ ಕಳ್ಸಿತ್.

ಸೈರಂಧ್ರಿಗೆ ಒಡತಿ ಹೇಳ್ದ ಕೆಲ್ಸನ ಮಾಡಿಕೆ ಬೊತ್ತ್‌ಂತ ಹೇಳಿಕೆ ಉಪಾಯ ಇಲ್ಲೆ. ಅದೂ ಅಲ್ಲದೆ ಕೀಚಕ ಅದರ ಕೆಟ್ಟ ನೋಟಲೆಲಿ ನೋಡ್‌ತಿದ್ದ ಸಂಗತಿನೂ ಅದಿಕೆ ಗೊತ್ತಿತ್ತ್‌ಲೆ. ಹೀಂಗೆ ಅದ್ ಮುಗ್ಧತನಲೆಲಿ ಕೀಚಕನ ಅರಮನೆಗೆ ಬಂದ್ ಕಳ್ಳ್‌ನ ಪಾತ್ರನ ಕೊಟ್ಟಲೆತ್. ಕೀಚಕ ಅದರ ಸುಖ ದುಃಖ ವಿಚಾರ್ಸ್ಲುವರಾಂಗೆ ಮಾತಾಡಿಕೆ ಸುರುಮಾಡ್ತ್. "ನಂಗೆ ನಿನ್ನ ನೋಡ್‌ಕನ ತುಂಬ ಬೇಜಾರಾದೆ. ನಿನ್ನಂತ ಸುಂದರಿ ಈ ಮಾಸಲ್ ಬಣ್ಣದ ಸೀರೆ ಉಟ್ಟ್‌ಕಲೆಂಡ್ ಇನ್ನೊಬ್ಬರ ಮನೆಲಿ ಊಳಿಗ ಮಾಡುದೆಂದರೆ ಏನರ್ಥ? ದೇವಲೋಕಲೆಲಿ ಅರ್ಳಿದ ಹೂವು ಕೆಸ್‌ರ್ ಗುಂಡಿಗೆ ಬಿದ್ದಾಂಗೆ ಕಂಡದೆ. ನೀ ಎಷ್ಟೋ ಎತ್ತರಲೆಲ್ಲಿ ಇರಬೇಕಾದಂವಂತ ಹೇಳುದರ್ಲಿ ಸೊಂಸಯ ಇಲ್ಲೆ. ನೀ ಮನ್ಸ್ ಮಾಡಿರೆ ನಿಂಗೆ ಎಷ್ಟೋ ವೈಭವಂದ ಇರಲೆಕ್. ನಾ ನಿನ್ನ ಮೇಲೆನ ಅನುಕಂಪಂದ ಹೇಳನೆ. ನಿನ್ನ ಊಳಿಗದ ಕೆಲ್ಸ ನಿಂಗೆ ಬೇಡ. ಅದರ ಬುಟ್ಟ್ ನನ್ನ ಹಕ್ಕಲೆ ಬಾ. ನಿನ್ನ ನನ್ನ ಮಹಾರಾಣಿಯಾಗಿ ಮಾಡಿಕಣೆ. ಲೋಕದ ವೈಭವನೆಲ್ಲ ನಿನ್ನ ಕಾಲಡಿರುವಾಂಗೆ ಮಾಡಿನೆ. ನನ್ನ ಈ ಅಗಲವಾದ ಎದೆನ ನೋಡು. ಇದರ ಬ್ರಹ್ಮ ನಂಗೆ ಕೊಟ್ಟಲೆದ್ ಏಕೆ ಗೊತ್ತುಟೋ? ನಿನ್ನ ಈ ತೋರವಾದ ಈ ದೊಡ್ಡ ಮೊಲೆಗಳ ಅದಿಕೆ ಒತ್ತಿ ಇಟ್ಟೊರೂ ಅದರ ಸುಖಪಡಿಯೊನೋಂತ! ಹೀಂಗೆ ಕಾಮ ಜ್ವರಕ್ಕೆ ಒಳಗಾದ ಕೀಚಕ ಯಾದರ ಹೇಳಲೆಕ್ ಯಾದರ ಹೇಳಿಕಾಗಲೆದ್‌ಂತ ನೋಡದೆ ಹೇಳಿಕಂಡೇ ಹೋತು. ಅವನ ಮಾತ್‌ನೆಲ್ಲ ಅಂವ ಹೇಳ್ದ ಹಾಂಗೆ ಬರಿಯುಕೆ ನಂಗೇ ನಾಚಿಕಾದೆ. ಇನ್ನ್ ದ್ರೌಪದಿಗೆ (ಸೈರಂಧ್ರಿ)ಗೆ ಹೇಂಗೆ ಆಗ್ ಬೇಡ. ಅದಿಕೆ ಕಂಡ ಗವುಲುವಾಂಗೆ ಕೋಪ ಗೌಲಿಕಲೆಂಡೇ ಇತ್ತ್. ಮತ್ತೆ ಬಾಯಿ ಬುಟ್ಟ್, ಮಾತ್‌ನ ಜ್ವಾಲೆನ ಹೊರಗೆ ಸೂಸಿತ್. ನಿನ್ನಂತ ದೊಡ್ಡ ವ್ಯಕ್ತಿಗೆ ಇಂತ ನೀಚ ಬುದ್ಧಿ ಬಾಕೆ ಆಗಲೆದ್. ನಿನ್ನಾಂಗೇ ಹಿಂದೆನ ಯುಗಲೆಲಿನೂ ಒಬ್ಬ ಇತ್ತ್. ಅವನೇ ರಾವಣ. ಪರಮ ಪತಿವ್ರತೆ ಸೀತೆನ ಆಸೆ ಪಟ್ಟ ಅವಂಗೇನಾತ್‌ಂತ ನೀ ಕೇಳ್ತ್‌ಲೆನೋ!

ಅವನ ಸರ್ವ ಕುಲವೇ ನಾಶವಾದ ಹಾಂಗೆ ನನ್ನ ಕೆಣ್ಕಿಕೆ ಬಂದರೆ ನಿಂಗೂ ನಂಗೆ ಕಾವಲಾಗಿರುವ ನನ್ನ ಗಂಧರ್ವ ಪತಿಗಳೂ ಮಾಡದಿರಿಕಿಲೆ. ಎಚ್ಚರಿಕೆ! ಹೀಂಗೆ ರೋಷಲಿ, ಸೈರಂಧ್ರಿ ಹೇಳ್ದರ ಕೇಳಿ ಕೀಚಕಂಗೆ ಕೋಪ ತಡಿಯಕೆ ಆತ್‌ಲೆ. "ನಿನ್ನ ಗಂಧರ್ವರ್ ಇದ್ದರೆ ಬರ್ಲಿ. ನನ್ನೊಟ್ಟಿಗೆ ಕಾಳಗ ಕೊಡಟಲಿ ನೋಡೊನೋಂತ ಹೇಳಿ ಸೈರಂಧ್ರಿಗೆ ಬೇರಿ ಒದ್ದಟೆತ್. ಒಮ್ಮಂದೊಮ್ಮೆಗೆ ಆದ ಅನೀರಿಕ್ಷಿತ ಆಘಾತಂದ ಒಂದು ಮಾರ್ ದೂರಕೆ ರಟಿಟ್ಟೆ ಬಿದ್ದ ಸೈರಂಧ್ರಿನ ಮೊಣಕ್ಯೆ ತರೆ ಹೋಗಿ ನೆತ್ತ್‌ರ್ ಒಸ್‌ರ್‌ತ್ತಿತ್ತ್.

**ಮಕ್ಕ:**

ತಾತ! ಎಂಥ ದಬ್ಬಾಳಿಕೆ ಇದ್! ದ್ರೌಪದಿನಂತ ಹೆಣ್ಣ್ ಜೀವಕೆ ಎಷ್ಟೆಲ್ಲ ಅವಮಾನ ಸೈಸೋಕಾತ್! ಈ ಗಟಂಡ್ ಜಾತಿಗೇ ಧಿಕ್ಕಾರ! ಹೇಳೊಕುಂತಾದೆ.

**ತಾತ:**

ಹೆಣ್ಣಿಗೆ ಅದರ ರೂಪನೇ ಶತ್ರು. ಅದಕ್ಕಾಗಿಯೇ ಹಿಂದೆನ ಕಾಲಟಲಿ ರಾಜ ಕನ್ನೆಯರ ಸೂರ್ಯಕಿರಣಂಗಳ್‌ಂದೊಳೂ ನೋಡಿಕೆ ಆತಿತ್ತ್‌ಲೆಂತೇಳ್ವ ಮಾತುಟ್ಟು. ದುರದೃಷ್ಟಂದ ದ್ರೌಪದಿನಂತೊವ್ಕೆ ಅನ್ಯ ಪುರುಷರ ದೃಷ್ಟಿಗೆ ಬೀಳೊಕಾತಿತ್ತ್. ಎಲ್ಲೊವು ಒಳ್ಳೊವುಂತ ಹೇಂಗೆ ಹೇಳ್ವು? ನಾಯ್ ಬುದ್ಧಿನ ಕೆಲೊವು ಕಿತಾಪತಿ ಮಾಡುವೆ.

ಕೀಚಕಂಗೆ ಆ ಮಟ್ಟ್‌ನ ಕೋಪ ಕೆರ್‌ಕಿಕೆ ಕಾರಣಂತೇಳಿರೆ ಸೈರಂಧ್ರಿ ತನ್ನ ಗಂಧರ್ವ ಪತಿಗ ಅವನ ಶಿಕ್ಷಿಸದೆ ಬುಡಿಕಿಲೆಂತ ಹೇಳ್ದ ಕಾರಣ. ತಾನೇ ಬಲಶಾಲಿಂತ ಗಟರ್ವಲಿ ಇರಂವಂಗೆ ಇನ್ನೊಬ್ಬ ಬಲಶಾಲಿ ಉಟ್ಟುಂತ ಹೇಳಿರೆ ಎಲ್ಲಿಲ್ಲದ ಕೋಪ ಬಾದು ಸಹಜ. ಇಲ್ಲಿ ಸೈರಂಧ್ರಿ ನನ್ನ ಗಂಧರ್ವ ಗಂಡಂದಟರ್‌ಂತ ಹೇಳಿಬುಟ್ಟ ಮಾತ್ ಅಪಾಯಂದ ಕೂಡಿತ್ತ್. ಗಂಡಂದರ್‌ಂತ ಹೇಳುವ ಬಹುವಚನ ಪ್ರಯೋಗ ಮಾಡಿಟು. ಆ ಕಾಲಟಲಿ ಒಂದರ್‌ಂದ ಹೆಚ್ಚಿ ಗಂಡಂದಟರ್ ಇದ್ದಟದ್ ದ್ರೌಪದಿಗೆ ಮಾತ್ರಂತ ಎಲ್ಲೊವ್ಕೂ ಗೊತ್ತಿದ್ದ ವಿಸಯವೇ. ಹಾಂಗಾಗಿ ಇದ್ ಪಾಂಡವರ ಹೆಣ್ಣ್‌ಂತ ವಿಚಾರ ಮಾಡಿ ಅಜ್ಞಾತ ವಾಸದ ಪಾಂಡವಟರ್ ಇಲ್ಲಿಯೇ ಒಳೊಂತೇಳ್ವ ಗುಟ್ಟು ರಟ್ಟಾಗಿದ್ದರೆ ಪಾಂಡವಟರ್ ಹಿಂದಕೆ ಹದಿಮೂರು ವೊರ್ಸ ಕಾಡ್ ಪಾಲಾಕಾಯ್ತ್. ಪುಣ್ಯಕೆ ಆ ದಡ್ಡ ತಲೆನ ಕೀಚಕಂಗೆ ಆ ವಿಷಯದ ಕಡೆಗೆ ಯೋಚನೆ ಹೋತ್‌ಲೆ.

ದ್ರೌಪದಿ ತನ್ನ ದುರದೃಷ್ಟನ ನೆನ್ಸಿಕಟಡ್. ಹೋದಲ್ಲೆಲ್ಲ ತನಿಗೆ ಆಗುವ ಅವಮಾನದ ದುಃಖ ಪಟ್ಟ್‌ಕಟಂಡ್ ವಿರಾಟನ ಆಸ್ಥಾನಕ್ಕೆ ಬಂದ್ ಕೀಚಕ ತನಿಗೆ ಮಾಡ್ದ ಅವಮಾನದ ದೂರು ಕೊಟ್ಟ್ ಅತ್ತಟತ್. ಸಟರಿ ತೊಪ್ಪು ವಿಚಾರ್ಸಿ ತೊಪ್ಪಿತಸ್ಥಂಗೆ ಶಿಕ್ಷೆ ಕೊಡಕಾದ್ ರಾಜನಾದವನ ಕರ್ತವ್ಯ. ಆದರೆ ಕೀಚಕಂಗೆ ಹೆದಟರಿ, ವಿರಾಟ ಏನೂ ಮಾಡ್ತ್‌ಲೆ. ಮತ್ತೆ ಕಂಕ ಭಟ್ಟಂಗೆ ಹೇಳ್ತ್. ಅಂವ ತತ್ವ ಮಾತಾಡಿಕೆ ಸುರು ಮಾಡ್ತ್. ನಿನ್ನ ರಕ್ಷಣೆಗೆ ನೀ ಸೂರ್ಯದೇವರ ಪ್ರಾರ್ಥನೆ ಮಾಡುದು ಒಳ್ಳೆಟದ್‌ಂತ ಉಪದೇಶ ಮಾಡ್ತ್. ಈ ಎಲ್ಲ ವಾರ್ತೆ ಕೆಬಿಗೆ ಬಿದ್ದ ವಲಲನೂ ಅರ್ಜುನ ಆಸ್ಥಾನಕ್ಕೆ ಬಂದ್ ನಿತ್ತಂವ ತನ್ನ ಮೋರೆನೂ ಕಣ್ಣ್‌ನೂ ಕಂಪು ಮಾಡಿ ಕಟಂಡ್ ನಿಟ್ಟುಸುರು ಬುಟ್ಟ್‌ಕಟಡ್ ಅರಮನೆನ ಎದ್‌ರಿಗಿದ್ದ

ಮರನ್ನೇ ನೋಡಿಕಣೆಂಡ್ ನಿತ್ತ್‌ಕಣೆಂಡ್ ಇದ್ದವರ ನೋಡ್ತ್ ಕಂಕಭಟ್ಟ 'ಓಯ್ ವಲಲ! ಆ ಮರನ ಈಗಣೆಳೇ ಕಣೆಡ್ಡ್ ನಿನ್ನ ಬಾಣಸದ ಮನೆಗೆ ಸೌದೆ ಮಾಡಿಕೆ ಹೊರ್ಟ್ ಬೇಡ. ಅದರ ಇನ್ನೂ ಹಚ್ಚ ಬೆಳಿಯಕೆ ಬುಡುಂತ ಹೇಳಿ ಅವನ ಮನ್ಸ್‌ನ ತಿರ್ಗ್‌ಸಿತ್. ಅಬಲೆ ಆಗಿರುವ ತನಗೆ ಯಾರು ಸಾಯ ಮಾಡುವ ಗಣೆಂಡ್‌ಸಣೆರೇ ಇಲ್ಲಿದಾಮೊಲೆ? ಇದೆಂಥ ಲೋಕ? ಇವೆಂಥ ರಾಜಣೆರ್? ಹೀಂಗೆ ಮನ್ಸ್‌ಲೇ ಹೇಳಿಕಣೆಂಡ್. ಅದ್ ಸುಧೇಷ್ಣೆನ ಅಂತಃಪುರಕ್ಕೆ ಹೋತು.

## ಕೀಚಕ ವಧೆ

ಸುಧೇಷ್ಣೆ ಸೈರಂಧ್ರಿಗೆ ಕೀಚಕಂದಾದ ಅವಮಾನನ ಕೇಳಿ ತುಂಬ ಬೇಸರ ಪಟ್ಟಣೆತ್. ಅದಿಕೆ ತೀರ್‌ದಷ್ಟ್ ಸಮಾಧಾನ ಹೇಳ್ತ್. ಅಂವ ಮಹಾಪರಾಕ್ರಮಿ. ಅಷ್ಟೇ ದುಷ್ಟ. ಅಂವನ ನಿಯಂತ್ರಿಸೂವು ಯಾರೂ ಇಲ್ಲೆ. ಅಂವನ ಪರಾಕ್ರಮಂದಾಗಿ ನಮ್ಮ ರಾಜ್ಯಕೆ ಶತ್ರು ಭಯ ಇಲ್ಲೆ. ನೀ ಅದಷ್ಟ್ ಅವನ ಕಣೆಣ್ಣಿಗೆ ಬೀಳದಾಂಗಿರ್. ಹೀಂಗೆ ಸೈರಂಧ್ರಿಗೆ ಉಪದೇಸ ಮಾಡ್ತ್.

ದ್ರೌಪದಿನ ಮನ್ಸ್‌ನೊಳಗೆ ಕೋಪ ಕೊದ್ದ್‌ಕಣೆಂಡೇ ಇತ್ತ್. ತನಗೆ ಅವಮಾನ ಮಾಡ್ದ ಕೀಚಕಂಗೆ ಒಂದು ಗಣೆತಿ ಕಾಣ್ಸಿಯೇ ತೀರೊಕು. ಯುಧಿಷ್ಠಿರ ಯಾಗೋಳು ಶಾಂತಿ ಮಂತ್ರ ಜಪಿಸೊಂವ. ಅಂತ ಬಲಶಾಲಿಯೇನೂ ಅಲ್ಲ. ತ್ರಿಲೋಕ ವಿಜಯಿಂತೇಳುವ ಅರ್ಜುನ ಈಗ. ಬೃಹನ್ನಳೆಯಾಗಿ ಹೋಗುಟು. ನಕುಲ ಸಹದೇವಣೆರ್ ಸುಕುಮಾರರ್. ಕೀಚಕಂಗೆ ಎಂದೂ ಸರಿಸಾಟಿಯಾಕಿಲ್ಲೆ. ಒಳ್ದಂವ ಭೀಮ. ಅಂವನೇ ಸಣೆರಿ. ಆಯುಧಗ ಇಲ್ಲದೆ ಹೋದರೂ, ಅವನ ಕೈಗಣೆಳೇ ಅವಂಗೆ ಆಯುಧಂಗ. ಹಿಂದನೇ ಮಲ್ಲಯುದ್ಧಲಿ, ಸವಾಲ್ ಹಾಕಣೆಂಡ್ ಬಂದ ಹಸ್ತಿನಾವತಿಂದ ಬಂದ ಜಟ್ಟಿನ ವಿರಾಟನ ಆಸ್ಥಾನಣೆಲೇ ಕೊಂದ್ ಹಾಕಿದಂವ. ನನ್ನ ಮಾನ ಒಳ್ಸುದ್ಕೆ ಭೀಮ ಒಬ್ಬನೇ ಸಣೆರೀಂತ ಹೇಳಿಕಣೆಂಡ್ ಅವಂಗೇ ದಮ್ಮಯ್ಯ ಹಾಕುದೂಂತ ನಿಶ್ಚೈಸಿತ್.

ಹಾಂಗೆ ಅಂದ್‌ನ ಇರ್ಲ್ ಎಲ್ಲೊವ್ರುಕು ನಿದ್ದೆ ಬಾವ ಹೊತ್ತಿಗೆ ಯಾರಿಗೂ ಗೊತ್ತಾಗದ ಹಾಂಗೆ ಮುಸುಕು ಹಾಕಣೆಂಡ್. ಭೀಮ ಇರುವ ಬಾಣಸದ ಮನೆಗೆ ಅಂದರೆ ಅಡಿಗೆ ಮನೆಗೆ ಬಾತ್. ಒಂದು ಕಡಾಯಣೆಲಿ ನೀರ್ ಕೊದಿಯತ್ತಿತ್ತ್. ನಾಳೆ ಬೊಳ್ಳಿಗೆ ಬೇಗ ಹುಗ್ಗಿ ಮಾಡೊಕುಂತ ಹೇಳಿ ಮುಂದನೇ ಎಲ್ಲಾ ತಯಾರ್ ಆಗಿ ಇಸಿದಾಂಗೆ ಕಾಂಬತ್ತಿತ್ತ್. ಒಂದಷ್ಟ್ ಅಕ್ಕಿನ ಅಳ್ದ್ ಇಸಿದ್ ಒಂದು ಪಾತ್ರಣೆಲಿ ಹಕ್ಕಲೇ ಇತ್ತ್. ಮತ್ತೆ ಗೈಪುಗೆ ಬೇಕಾದ ನಣೆಟ್ಟಿ ಕಾಯಿಗಳ ರಾಸಿ ಒಂದು ಕಡೆ; ಕಾಲ್‌ಗಳ ಕಣೆಟ್ಟ್‌ಸಿಕಂಡ್, ರಾಸಿ ಬಿದ್ದ ಕೋಳಿಗಳ ರಾಸಿ ಒಂದು ಮೂಲೆಗೆ; ಮತ್ತೆ ಅದರ ಹೊರೆಗೆನ ತಿನೆಲಿ. ನಾಳೆ ನಮ್ಮ ಕೊಂದ್ ಬೇಸುವೆಂತೇಳ್ದರ ಗೊಡವೆನೇ ಇಲ್ಲದೆ ಹಾಕಿದ ಹುಲ್ಲು, ಜಿಗ್‌ರ್ ಸೊಪ್ಪು, ದಣೆಂಟ್‌ಗಳ ರಾತ್ರಿ ಹೊತ್ತುಲಿನೂ ಆತುರಣೆಲಿ ಮುಕ್ಕುತಿರುವ. ಕುರಿ, ಪಡ್‌ಗಳ ಸಾಲ್ ಸಾಲ್; ಅಡಿಗೆ

ಕಲ್ಲಕ್ಕೆ ಸಾಂಯ ಮಾಡಿಕಿರುವ. ಬೊಜ್ಜು ಹೊಟ್ಟೆ ಮೇಲೆ ಮಾಡಿಕಳಂಡ್ ಗೂರ್ ಬುಟ್ಟ್‌ಕಳಂಡ್ ಎಲ್ಲಂದರಲ್ಲಿ ಮಲ್ಗಿರುವ ಕೆಲ್ಸದ ಆಳ್‌ಗ, ಅರಕಳಲ್ಲ್, ಕಡಕಳಲ್ಲ್‌ಗಳ. ಮಡಿಕೆ, ಕುಡಿಕೆಗಳ, ಸೆಡೆ, ಸೆಟ್‌ಗಗಳ ರಾಸಿ, ನಾನಾ ತರದ ಚೊಂಬು ಪಾತ್ರೆಗಳ ರಾಸಿ, ಹೀಂಗಿದ್ದ ಜಾಗೆಲಿ ಭೀಮ ಮಲ್ಗಿ ಗಾಢ ನಿದ್ರೆಲಿ ಇತ್ತ್.

ಭೀಮನ ನೋಡಿ ದ್ರೌಪದಿಗೆ ಪ್ರೀತಿ ಉಕ್ಕಿ ಬಾತ್. ಸುಪ್ಪತ್ತಿಗೆಲಿ ರಾಜ ವೈಭವಲಿ ಮಲ್ಗಿ ನಿದ್ದೆ ಮಾಡೊಂವ ಈ ಸ್ಥಿತಿಲಿ ಹೀಂಗೆ ಬಿದ್ದ್‌ಕಳಂಡ್ ನಿಲ್ಲುವ ಗತಿ ಬಾತಲೇ ದೇವ್ರೇಂತ  ಕಣ್ಣೀರೂ ಉಕ್ಕಿತ್. ಮತ್ತೆ ಮೆಲ್ಲ ಕರ್ತ್. ಅಂವಂಗೆ ಎಚ್ಚರಿಕೆ ಆತ್‌ಲೆ. ಅವನ ಭುಜಗಳ ಅಲ್ಗ್‌ಸಿತ್. ಅಂವ ಇನ್ನೊಂದು ಕಡೆಗೆ ಹೊಣ್ಕೆ ಮಲ್ಗಿತ್. ಅವನ ಕೆಬಿಸೊಳಗೆ ಬೆರ್ಲ್ ಹಾಕಿ ಆಡಿಸಿತ್. ಸೊಳ್ಳೆನೋ ಏನೋಂತ ನೆನ್ಸಿಕೆನ್ನೆಗೆ ಟಪ್ಪನೆ ಹೊಡ್ಕಂಡಳತ್. ಆ ಕೈನ ದ್ರೌಪದಿ ಗಟ್ಟಿ ಹಿಡ್‌ಕಣ್ತ್. ಆಗ ಭೀಮಂಗೆ ಎಚ್ಚರಿಕೆ ಆತ್. ಈ ಇರ್ಲ್‌ನ ಹೊತ್ತುಲಿ ನೀ ಏಕೆ ಬಂದ ? ಯಾರಾರ್ ನೋಡಿರೆ ? “ಯಾರೂ ನೋಡಿಕೆ ಆಗಿದ್‌ಂತಳೇ ಇರ್ಲ್ ಬಂದಳದ್”. ದ್ರೌಪದಿ ಹೇಳ್ತ್. “ಏನ್ ಕಾರಣ ಬಂದ?” “ನಾ ಒಂದು ದೊಡ್ಡ ಆಪತ್ತಿಗೆ ಸಿಕ್ಕ್ಯೊಳದ್ ನಿಂಗೆ ಗೊತ್ತ್‌ಲನೊ ? ನನ್ನ ಕೀಚಕ ಕಾಮವಶನಾಗಿ ಪೀಡಿಸಿದೆ. ನಿನ್ನಂಥ ಸುರಸುಂದರಿ, ಆಳಾಗಿ ದುಡಿವ ದುರ್ದೆಸೆನಿಂಗೇಕೆ ? ನಿ ನನ್ನ ವಶವಾದರೆ ನಿನ್ನ ನನ್ನ ರಾಣಿಯಾಗಿ ಮೆರ್ಸುವೆ.

ನಿನ್ನ ತೋರ ಮೊಲೆಗಳ ನನ್ನ ಅಗಲವಾದ ಎದೆಗೆ ಒತ್ತ್‌ಕನ ಆವ ಸುಕಲಿ ಇಬ್ಬರೂ ಆನಂದ ಪಟ್ಟ್‌ಕಳಂಡ್ ಇರೊನೊ. ಹೀಂಗೆಲ್ಲ ಹೇಳುದರ ಕೇಳಿನಾ ಕೋಪಳಲಿ ಉರ್ದ್ ಹೋಗಿ, ಪರಸ್ತ್ರೀನ ಬಯ್ಸಿದ ನೀಚ ರಾವಣಂಗ ಏನಾತ್ ? ನಂಗೆ ಕಾವಲ್ ಆಗಿ ಗಂಧರ್ವರ್ ಒಳೊಂತ ನಿನ್ನ ಅಕ್ಕನೊಟ್ಟಿಗೆ ಮುಂದೇ ಹೇಳಿದ್ದೆ. ಅವು ನಿಂಗೂ ಹೇಳಿರುವ್ರೊ. ನೀ ನಂಗೆ ಉಪದ್ರ ಕೊಟ್ಟರೆ ಅವು ನಿನ್ನ ಸೀಳಿ ಹಾಕದೆ ಬುಡಿಕೆಲಂತೇಳ್‌ಕನ ಅಂವ ಹಾಂಗಾರೆ ಬರ್ಲಿ ನಿನ್ನ ಗಂಧರ್ವರ್‌ಂತ ಹೇಳಿ ನಂಗೆ ಹಾರಿ ಒದ್ದಳತ್. ಅಷ್ಟ್ ದೂರ ಬಿದ್ದ ನನ್ನ ಮುಂಗೈ ಎಲ್ಲ ತರೆ ಹೋಗಿ ನೆತ್ತರ್ ಬಂದ ಗಾಯನ ನೀನೇ ನೋಡು. ಇನ್ನೆಲ್ಲಿ ಯಾರ್ ನಾ ಅವನ ಕಣ್ಣೆದ್‌ರಿಗೆ ಅವಂಗೆ ಸಿಕ್ಕಿರೆ ಜಿಂಕೆನ ಕಂಡ ಹುಲಿಹಾರ್ದಾಂಗೆ ಹಾರಿ ನನ್ನ ಕೆಡ್ಸದೆ ಇರಿಕಲ್ಲೆ. ನನ್ನ ನೀನೇ ಕಾಪಾಡೊಕು. ಇದಿಕೆ ಭೀಮ ಅರೆ ಮುನಿಸ್‌ಲಿ ಹೇಳ್ತ್. ನೀ ಇವರೆಲ್ಲ ನನ್ನೊಟ್ಟಿಗೇ ಹೇಳುದೇಕೆ ? ನಿನ್ನ ಒಳ್ಳಗಂಡಂದಳರ್ ಇಲ್ಲೆನೋ. ಸುಕಳಲಿ ಮಾತ್ರ ಅವ್ಕ ಪಾಲೋ? ಕಷ್ಟಳಲಿ ಇಲ್ಲೆನೋ. ಹೋಗಿ ಹೇಳ್–ಅವರೊಟ್ಟಿಗೆ! ದ್ರೌಪದಿ ಅತ್ತ್‌ಕಳಂಡ್ ಹೇಳ್ತ್. ಅವೆಲ್ಲೊವು ಎಂತೊವ್ರಂತ ಗೊತ್ತಿದ್ದೂ ಹೀಂಗೆ ಹೇಳಿಯಲೆ ? ಕೌರವ ಸಭೆಲಿ ನಂಗಾದ ಕೌರವಳರ್ ನಂಗೆ ಅವಮಾನ ಮಾಡುವ ಕಾಲಳಲಿ ನನ್ನ ಆಕ್ರಂದನಕ್ಕೆ ಸ್ಪಂದಿಸಿ ಕೌರವರ ಎದೆ ನಳಡ್ಗುಸುವಂತ ಪ್ರತಿಜ್ಞೆ ಮಾಡ್ದವ ನೀ ಅಲ್ಲೊ. ಅಕ್ಷಯ ವಸ್ತ್ರದಾನ ಮಾಡಿ ನನ್ನ ಮಾನ ಕಾಪಾಡ್ದಂವ ಕೃಷ್ಣ ಅಲ್ಲೊ ? ಹಾಂಗೆ ಇದುದು ಆಪದ್ಬಾಂಧವರಾಗಿ ನಂಗೆ ನೀವಿಬ್ರೊರೇ. ಅದರ್ಲೂ ನಿನ್ನ ಮತ್ತು ನನ್ನ ಸಂಬಂಧನ ಎಷ್ಟ್ ನಿಕಟಂತ ವಿಧಿಯೇ ಮಾಡಿಟು ನೋಡು ! ನೀ ವಾಯುಪುತ್ರ! ನಾ ಅಗ್ನಿಪುತ್ರಿ!

ಹೀಂಗೆ ನಮ್ಮಿಬ್ಬರ ಜೊತೆ ಎಷ್ಟ್ ಪೊರ್ಲಾಗಿ ಒಟ್ಟು! ನೀ ನನ್ನ ಕೈ ಬುಟ್ಟಂತಾದರೆ ನಂಗೇನ್ ಒಳ್ತ್? ನಾ ಅಗ್ನಿಂದ ಹುಟ್ಟಿದ ಕಾರಣ, ನನ್ನ ಅಂತ್ಯನೂ ಅಗ್ನಿಲೇ ಆಗëಲಿ. ನೀವು ಐದ್ ಜನಗಂಡëಂದವëರ್ ಇದ್ದೂ ಒಂದು ಅಬಲೆ ಹೆಣ್ಣಾಗ ರಕ್ಷಣೆ ಕೊಡಿಕೆ ಬೊತ್ತದೊವ್ರಂತ ನಿಮ್ಮ ಕೀರ್ತಿ ಹಬ್ಬëಲಿಂತ ವ್ಯಂಗ್ಯëಲಿ ಹೇಳಿಕೆ ಸುರು ಮಾಡ್ತ್. ದ್ರೌಪದಿನ ಕëಣ್ಣೀರ್ನ ನೋಡಿ ಭೀಮನ ಎದೆ ಕರ್ಗಿತ್. ಅದರ ಹಕ್ಕಲ್ ಕರ್ಡ್, ತನ್ನ ತೊಡೆಮೇಲೆ ಕುದ್ರ್ಸಿಕëಂಡ್, ಅದರ ಕëಣ್ಣೀರ್ ಒಪ್ಸಿ ಹೇಳ್ತ್, "ನೀ ಹೆದರ್ ಬೇಡ ನನ್ನ ರಾಣಿ. ಕೀಚಕನ ಆಯಸ್ಸ್ ಮುಗ್ದಂತ ನಂಬಿಕ. ನಮ್ಮ ಅಣ್ಣಂಗೆ ಸತ್ಯಪಾಲನೆಂತೇಳುವ ಗರ ಹಿಡ್ದ ಕಾರಣ, ನನ್ನ ಕೈನ ಕëಟ್ಟಿ ಹಾಕಿದಾಂಗೆ ಆಗುಟು. ಇಲ್ಲದಿದ್ದರೆ ಆ ಕೌರವರ ತಲೆಗ ಈ ಭೂಮಿ ಮೇಲೆ ಇಷ್ಟ್ ಕಾಲ ಇರಿಕಿತ್ತ್ಲೆ. ಈಗ ಬಂದ ಸಂಕಟನ ಯಾರಿಗೂ ಗೊತ್ತಾಗದ ಹಾಂಗೆ ತೀರ್ಸೊಕು. ಇದ್ ನಂಗೆ ಮತ್ತೆ ನಿಂಗೆ ಮಾತ್ರ ಗೊತ್ತಿರುವ ಸಂಗತಿಯಾಗಿರೊಕು. ನಾಳೆ ಬೊಳ್ಗೆ ರಾಣೆನ ಒಟ್ಟಿಗೆ ಏನಾರ್ ನೆವನ ತೆಗ್ದ್, 'ನಾ ನಿಮ್ಮ ತಮ್ಮಂಗೆ ಸೇವೆ ಮಾಡಿಕೆ ಬೇಕರೆ ಹೋಕೆ ತಯಾರ್ ಒಳೆ. ನಿನ್ನೆ ನಾ ಒರ್ಟ್ ಮಾತಾಡಿ ಅವಂಗೆ ಕೋಪ ಬಾವಾಂಗೆ ಮಾಡಿ ಬುಟ್ಟೆಂತ ಪಶ್ಚಾತ್ತಾಪ ಪಟ್ಟನೆಂತ ನೆವನ ಹೇಳಿ ಅಲ್ಲಿಗೆ ಹೋಗು. ಅವನೊಟ್ಟಿಗೆ ನಯ ವಿನಯëಲಿ ಮಾತಾಡ್. ಮತ್ತೆ ಆ ದುಷ್ಟಂಗೆ ನಾಳೆ ಸಂಜೆ ವಿರಾಟನ ನಾಟಕ ಸಾಲೆಗೆ ಬಾ. ನಾ ಅಲ್ಲಿ ನಿಂಗಾಗಿ ಕಾದ್ಕëಂಡ್ ಇದ್ದನೆಂತ ಸಂಕೇತ ಸ್ಥಾನನ ಹೇಳಿ ಬುಡು. ಮತ್ತೆ ನಾ ಅವನ ನೋಡಿಕಣೆಂತ ಹೇಳ್ತ್. "ಹೀಂಗೆ ಹೇಳಿ, ಅದರ ಒಮ್ಮೆ ತೊಪ್ಪಿಕëಂಡ್ ಮುತ್ತು ಕೊಟ್ಟ್, "ನೀ ಇನ್ನ್ ಯಾರಿಗೂ ಗೊತ್ತಾಗದ ಹಾಂಗೆ ನಿನ್ನ ಜಾಗಗೆ ಸೇರಿಕ"ಂತ ಹೇಳಿ ಅದರ ಕëಳ್ಸಿತ್. ದ್ರೌಪದಿ ಬಾರಿ ಖುಷಿಂದ ಹೋರ್ಟ್ ಬಾತ್.

ಮಾರ್ನೇ ದಿನದ ಸೂರ್ಯೋದಯ ಆತ್. ಮೂಡ ದಿಕ್ಕ್ನ ಬಾನ ಎಲ್ಲ ಕೆಂಪಾಗಿ ರಕ್ತದೋಕುಳಿಯಾಡ್ದಾಂಗೆ ಕಾಂಬತಿತ್ತ್. ಭೀಮ ದ್ರೌಪದಿಯರಿಗೆ ಅದ್ ಕೀಚಕನ ನೆತ್ತರ್, ದಿಕ್ಕ್ ದಿಕ್ಕಾಗಿ ಚೆಲ್ಲಾಡ್ದಾಂಗೆ ಕಾಂಬತಿತ್ತ್. ಕೀಚಕಂಗೆ, ಕಾಮ ಚೇಷ್ಟೆಲಿ ಸೈರಂಧ್ರಿನ ಕೂದೊಲುನ ಹಿಡ್ಕಳಿಯಕನ ನಾಚಿಕೆಲಿ ಅದರ ಮೋರೆ ಕೆಂಪಾದ ಹಾಂಗೆ ಕëಂಡëತ್. ಒಳ್ಳೊವ್ಕೆಲ್ಲ ಅದ್ ಬೇರೆ ಬೇರೆ ತರ ಕëಂಡëತ್. ಅಂತೂ ಲೋಕಕೆಲ್ಲ ಬೊಳ್ಪು, ಅದರೊಟ್ಟಿಗೆ ಚೈತನ್ಯನೂ ಹಬ್ಬಿತ್. ಜೆನರ ಪಶುಪಕ್ಷಿಗಳ ಚಟುವಟಿಕೆನೂ ಸುರಾತ್. ಬೊಳ್ಪು ಬುಡಿಕೆ ಮುಂದೆ ಕೋಳಿ ಹೂಂಜಂಗ ಎದ್ದ್ ರೆಂಕೆ ಬೊಡ್ಕëಂಡ್. ಹೊಸ ದಿನ ಬಂದದೆ. ಎದ್ದ್ರಿ! ಸೋಮಾರಿತನëಲಿ ಹಾಸಿಗೆಲೇ ಹೊರ್ಳ್ಕ್ಯಂಡ್ ಇರ್ಬೇಡಿಂತ ಕೂಂಗಿ ಕೂಂಗಿ ಹೇಳ್ತಿದ್ದೊವು ಬೊಳ್ಪಾದ ಮೇಲೆ ಹೇಂಟ್‌ಗಳ್ನೂ, ಮರಿಗಳ್ನೂ ಕರ್ಕëಂಡ್ ಕಾಲಿಂದ ಮಣ್ಣ್ನೂ ತಿಪ್ಪೆಗುಂಡಿಗಳ್ನೂ ಕೆದ್ಕಿ, ಆಗ ಅಲ್ಲಿ ಹೊರ್ಳ್ಕ್ಯಂಡ್ ಕಾಂಬ ಬೆಳ್ಳಿ ಸëರಿಗೆನ ತುಂಡುಗಳಾಂಗಿರುವ ಹುಳುಗಳ, ಪಿಳ್ಳೆಗëಳಿಗೂ ಹೇಂಟೆಗëಳಿಗೂ ತೋರ್ಸಿ ಕೊಟ್ಕëಂಡ್ ಹಜ್ಜೆ ಮುಂದೆ ಹೋಗಿ ರೆಂಕೆಗಳ ದುಡಿ ಬೊಟ್ಟಿ ಮತ್ತೊಮ್ಮೆ 'ಕೊಕ್ಕರೆಕೋ'ಂತ ಕೂಂಗಿ, ನನ್ನ ಸೊಂಸಾರನ ನಾ ಎಷ್ಟ್ ಪೊರ್ಲು ನೋಡಿಕëಣೆ, ನೋಡಿಂತ ಘೋಷಣೆ ಮಾಡ್ತು. ಆಗ ಅದರೊಟ್ಟಿಗಿರುವ ಹೇಂಟೆಗëಳಿಗೆ ಪ್ರೀತಿ. ಉಕ್ಕಿ

ಬಂದ್. "ಕೊಟೊ ಕೊಟೊ"ಂತ ತಮ್ಮ ಪ್ರಣಯ ಸಲ್ಲಾಪ ಮಾಡಿಕೆಂಡ್ ಹೂಂಜನ ಹಕ್ಕಲ್ ಹೋಪ್ವೊ. ಕೇಡ್ ಪೊಂಯಿಸರ್ ಇದರ ನೋಡಿ ಸೇಯಿಸದೆ. ನಿಲ್ಲಿ ನಂಟ್ರ್ ಯಾರಾರ್ ಬರ್ಲಿ. ಆಳಿಗೆಲಿ ನಿಮ್ಮ ದರ್ಬಾರ್ ನಡ್ಲುವೆಂತ ಹೇಳಿಕಂಬೊ. ಮತ್ತೊಂದು ಕಡೆಲಿ ಗೂಡುಗಳ್ಲಿದ್ದ ಹಕ್ಕಿಗ ಚರ್ಚಾ ಕೂಟಲಿ ಭಾಗವಹಿಸುವ ಮಕ್ಕಳ ಹಾಂಗೆ ಕಿಚಪಿಚ ಸದ್ದ್ ಮಾಡಿಕೆಂಡ್ ಮೆಲ್ಲ ಮೆಲ್ಲ ಹೊರೆಗೆ ಹಾರಿಕೆ ಸುರು ಮಾಡುವೊ. ಕಕ್ಕೆಗ ಮಾತ್ರ ಹೋಯಿ. ಹೋಯಿ! ತಡುವಾತ್‌ಂತ ಗೊತ್ತು ಗುರಿಯಿಲ್ಲದೆ ಎತ್ತಳೋ ಹಾರುವೊ. ಬೆಳ್ಳೆ ಕೊರ್‌ಂಗಗ, ಎಲ್ಲಿಪರ್‌ಂದ ಎತ್ತರಲಿ ಹಾರುವೊ. ಇವು ಹೀಂಗೆ ಹಾರುದರ ನೋಡ್ದ "ಕುವೆಂಪು" ಅವ್ರು "ದೇವರು ರುಜು ಮಾಡಿದನು"ಂತ ಪೊರ್ಲ್ಬ ವರ್ಣನೆ ಮಾಡಿಯೊಕೊ.

**ಮಕ್ಕ:**

ತಾತ! ವರ್ಣನೆ ಪೊರ್ಲ್ಬ ಉಟ್ಟಾದರೂ ಕೀಚಕನ ಕತೆ ಮುಗಿಯಕೆ ತಡು ಆದೆಲೇಂತಾದೆ.

**ತಾತ:**

ಇದ್ ಅವನ ಕಡೇ ದಿನ. ಅಂವ ಹಚ್ಚ್ ಕಾಲ ಸಂತೋಸುಲಿ ಕಳಿಯಲಿಲೇಂತ.
ಬೊಳ್ಳಾಗಿ ಹಚ್ಚ್ ಹೊತ್ತಾತ್. ಸೈರಂಧ್ರಿ ಅದ್ ಇದ್ ಕೆಲ್ಸ ಮಾಡಿ ಕೆಂಡ್ ಇತ್ತ್. ಮತ್ತೆ ರಾಣಿನೊಟ್ಟಿಗೆ ಏನೋ ಮಾತಾಡ್‌ಕನ ಹೇಳ್ತ್. "ಅಮ್ಮ! ನಿನ್ನೆ ನಾ ತಿಳಿಯದೆ ಕೀಚಕಂಗೆ ಏನೋ ಬಿರ್ಸ್ ಮಾತಾಡಿ ಅಷ್ಕೆ ಕೋಪ ಬಾಪಾಂಗೆ ಮಾಡಿ ಬುಟ್ಟೆ. ಇಂದೇನಾದರೂ ನೀವು ಅಷ್ಕೆ ಕಳ್ಸಿ ಕೊಡಿಕೆ ಇದ್ದರೆ ನಾನೇ ತಕೆಂಡ್ ಹೋಗಿ ಕೊಟ್ಟ್ ನಿನ್ನೆನ ನನ್ನ ತೊಪ್ಪಿಗೆ ಕ್ಷಮೆ ಕೇಳಿ ಬನ್ನೆಂತ ಹೇಳ್ತ್.

ಸುಧೇಷ್ಣೆ ಮನ್ಸ್‌ಲಿ ನಗಾಡಿಕಂಡಲೆತ್. ಹಚ್ಚ್ ಗಂಧದ ಲೇಪನ ಎಲೆ ಅಡಿಕೆ, ಮತ್ತೆ ಅವಂಗೆ ಇಷ್ಟವಾದ ಸೀಂ ಕಳ್ಳ್‌ನ ಗುಂಬನ ತಕೆಂಡ್ ಹೋಗಿ ಕೊಟ್ಟ್ ಬಾಂತ ಹೇಳ್ತ್. ಹಾಂಗೆ ಸೈರಂಧ್ರಿ ಆ ವಸ್ತುಗಳ ಎಲ್ಲ ಹಿಡ್ಕಂಡ್ ಕೀಚಕನಲ್ಲಿಗೆ ಹೋತು. ಇದರ ದೂರಂದ ನೋಡ್ದ ಕೀಚಕಂಗೆ ಬಾರಿ ಸಂಭ್ರಮ ಉಂಟಾತ್. ನಿನ್ನೆನಾಂಗೆ ಅಂಜಿಕೆ ಇಲ್ಲದೆ ಬಾದೋರ ನೋಡಿ ಕುಸಿ ಆತ್. ನನ್ನಂತವರ ನೋಡಿ ಮೆಚ್ಚದ ಹೆಣ್ಣ್‌ಗ ಯಾರಾರ್ ಇರುವೊನೊ! ಹೀಂಗೆ ಹೇಳಿಕೆಂಡ್ ಹಿಗ್ಗಿತ್. ಸೈರಂಧ್ರಿ ಬಂದ್ ತಾನ್ ತಂದ ಸಾಮಾನ್‌ನೆಲ್ಲ ಒಂದು ಕರೆಲಿ ಇಸಿ ನಿತ್ತಲೆತ್. ಕೀಚಕ ಮಾತಿಗೆ ಸುರು ಮಾಡ್ತ್.

ನಿನ್ನೆ ನಾ ಕೋಪಲಿ ನಿಂಗೆ ತುಂಬ ಬೇನೆ ಮಾಡಿಬುಟ್ಟೆ. ನನ್ನದ್ ತುಂಬ ತೊಪ್ಪಾತ್. ನೀ ನನ್ನ ಕ್ಷಮಿಸೊಕುಂತ ಕೀಚಕ ಹೇಳ್ತ್. ಅದಿಕೆ ಸೈರಂಧ್ರಿ, ನಿನ್ನೆ ನಾನೂ ಬಿರ್ಸ್ ಮಾತಾಡಿ ನಿನ್ನ ಮನ್ಸ್‌ಗೆ ಬೇಜಾರ ಮಾಡಿಬುಟ್ಟೆ. ನಾ ಅದಿಕೆ ಕ್ಷಮೆ ಕೇಳ್ತನೆ. ಮತ್ತೆ ನಿನ್ನ ಸಂತೋಸು ಪಡ್ಸಿಕೆ ಬನ್ನೆ. ನೀ ಸಂಜೆ ವಿರಾಟನ ನಾಟಕ ಶಾಲೆಗ ಬಾ. ನಾ ಅಲ್ಲಿ ನಿನ್ನ ಕಾದ್‌ಕೆಂಡೇ ಇರುವೆ. ಹೇಂಗೆ ಬಾವನೋಂತ ಕೇಳ್ತ್. ಕೀಚಕ ಸಂತೋಸುಂದ ಬನ್ನೆಂತ ಹೇಳ್ತ್. ಮತ್ತೆ ಸೈರಂಧ್ರಿ ಹಿಂದೆ ಹೋತು. ಭೀಮಂಗೆ ಇದರ ಸೂಚನೆ ಕೊಟ್ಟ್. ಅವರ ಕೆಲ್ಸಕೆ ಹೋತು.

ಇತ್ತ ಕೀಚಕ ಕಾಮೋತ್ಸುಕತೆಂದ ಎಷ್ಟ್ ಹೊತ್ತಿಗೆ ಸಂಜೆ ಆವೆನೋಂತ ಕಾದ್‌ಕೆಂಡ್

ಇರಿಕೆ ತುಂಬ ಕಷ್ಟ ಪಟ್ಟೇತ್. ಅಂತೂ ಇಂತೂ ಹೇಂಗಾರ್ ಕತ್ತಲೆ ಆಕಲಿಂಡ್ ಬಾತ್. ಈ ತರದ ಸಂಕೇತ ಸ್ಥಾನಕ್ಕೆ ಹೋಕನ ಬೇರೆಪ್ಪೆ ಗುರ್ತ ಸಿಕ್ಕಿಕೆ ಆಗಲೆವ್. ಹಾಂಗ ಒಳ್ಳೆ ಕತ್ತಲೆ ಆಕೆ ಮುಂದೆ ಹೋದು ಆಕಲಿಂತ ಕೀಚಕ ಹಗ್ಲ್ ಹೊತ್ತು ಕಾದ್ ಹೊರಟಲೆತ್. ಇದಿಕೆ ಮುಂದೆ ದ್ರೌಪದಿನೂ ಭೀಮನೂ ಕಲೆಪ್ಪು ವಸ್ತ್ರದ ಮುಸುಕು ಹಾಕಲೆಂಡ್ ಗುಟ್ಟ್‌ಲಿ ನಾಟಕ ಶಾಲೆ ಹಕ್ಕಲೆ ಹೋಗಿ. ದ್ರೌಪದಿನ ಹೊರಗೆ ಬಾಗ್‌ಲ್ ಕರೆಲಿ ಯಾರಿಗೂ ಕಾಣದ ಹಾಂಗೆ ನಿಲ್ಲಿಕೆ ಹೇಳಿ ಮಲ್ಲ ಗಲೆಂಟ್ ಹಾಕಿದ ಭೀಮ ಜಂಬುಲಕ್ಕ್ನ ಮಂಟಪದೊಳಗೆ ಹುಗುವಾಂಗೆ ಹೊಕ್ಕ್ ಮಂಚಲೆಲಿ ಮುಸುಕು ಹೊದ್ದ್ ಮಲ್ಗಿತ್ ಒಳ್ಳೆ ಅಲಂಕಾರ ಮಾಡಿಕಲೆಂಡ್. ಪರಿಮಳ ದ್ರವ್ಯಗಳ ಉದ್ದಿಕಲೆಂಡ್ ಒಳಗ ಕೀಚಕ ಬಂದಂವನೇ ಸೀದಾ ಮಂಚ ಇದ್ದಲ್ಲಿಗೆ ಬಾತ್.

ಕೀಚಕಂಗೆ ಒಂದು ವ್ಯಕ್ತಿ ಮಂಚದ ಮೇಲೆ ಮಲ್ಗಿರುದರ ನೋಡಿ. ಅದ್ ಸೈರಂಧ್ರಿಂತೇ ಅದಿಕೆ ಸಂಶಯವಿಲ್ಲಂತ ನಿಶ್ಚೈಸಿಕಲೆಂಡಲೆತ್. ಸೈರಂಧ್ರಿ! ಏಕೆ ನಿನ್ನ ಮಾತ್ಂತೇಳ್ವ ಗಿಳಿ ಯಾಕೆ ಪಂಜರದ ಒಳಗೆ ಹುಕ್ಕ್ ಕುದ್ದುಟು? ದಾಳಿಂಬದ ಬಿತ್ತ್‌ನಾಂಗಿರುವ ನಿನ್ನ ಹಲ್ಲ್‌ಂದ ಮಲ್ಲ ನಿನ್ನ ಚಿಗುರ್‌ನಾಂಗಿರುವ ಕೆಳಗೆನ ತುಟಿನ ಮಲ್ಲ ಕಲೆಚ್ಚಿ. ಬಯಿಂತ ಚೀಪ್‌ಕನಾರ್ ಅದ್ ಹೊರಗೆ ಬಾದೋ. ರತಿ ಸುಖ ಹಚ್ಚೊತರೆ ಕ್ರಿಯಂದ ಮುಂದ ಮಾತಿದ್ದರೇ ಪೊಲ್ಲು. ಅದೇ ರಸಿಕತನದ ಲಕ್ಷಣ ನಾ ಮನ್ನೆ ಮಾಡ್ದ ತೊಡುವ ನನ್ನ ಮರ್ತತ್‌ಲೆನೋ? ನಿನ್ನ ಕೋಪ ಚೆನ್ನ್‌ಲರೆ ನೀ ಬೇಕಾದರೆ ನಿನ್ನ ಎಡ್ಡ ಕಾಲನ ನನ್ನ ನೊಡು ನೆತ್ತಿ ಮೇಲೆ ಇಸ್. ನಾ ನಿಂಗೆ ಬೇಕರೆ. ದಾಸಾನು ದಾಸನಾನೆ. ಕಾಮಾಂಧ ಕುರುಡಾದಂವಂಗೆ ತಾನ್ ಯಾರ್ ಏನ್ ಎಂದ್ ಗೊತ್ತಾಗದಷ್ಟು ಮಂಕಾಗಿ ಹೋಗಿತ್ತ್. ಹಾಂಗೆ ಮೈ ಮರ್ತಂವ ಮಲ್ಲ ಅದರ ಮೈ ಮೇಲೆ ಕೈ ಹಾಕಿಕೆ ನೋಡ್ತ್. ಅಂಬ ಬಾರಿ ಮೆಚ್ಚಿದ್ದ. ಬಯಸಿದ್ದ ಸೈರಂಧ್ರಿನ ತೋರ ಮೊಲೆಗಳ ಕಾಣದೆ ತಬ್ಬಿಬ್ಬಾತ್. ಅಷ್ಟ್ರಲ್ಲಿ ಭೀಮ ಗಬಕ್ಕನೆ ಎದ್ದ್ ಕೀಚಕನ ಮೊಡ್‌ಚಿ ಹಿಡ್ಕಂಡತ್. ಕೀಚಕ ಒದ್ದರೂ ಬಿಡದೆ ಅವಂಗೆ ಇನ್ನಷ್ಟ್ ಉಸುರು ಕಲೆಟ್ಟುವಾಂಗೆ ಅಮುಕ್ಕಿ ಹಿಡ್ದ್. ಗುಂಡಿಗೆಲಿಗೆ ತಲ್ಲಿತ್ತು ಬಲಿಗೆಲಸಗಲು ಅವನ ತಲೆನ ಬಲವಾಗಿ ತಾಂಗ್ ಸಿಕಲೆಪಲೆತ್. ಸುತ್ತ್ಲೋಂಕು ತಿರ್ಗೈಂಡ್ ಬತ್ತ್. ಕೀಚಕನ ತಲೆಯೊಡ್ದ್ ನೆತ್ತರ್ ಗಿಣ್ಣ ಎಲ್ಲ ಹೊರಗೆ ಬಾತ್. ಕೀಚಕನಂತ ನಿಜಲರ್ ಸತ್ತರೂ ಬುಡಿಕೆ ಆಗಲೆದ್‌ಂತ ಸುಮಾರ್ ಹೊತ್ತು ಭೀಮ ಅವನ ಶರೀರನ ಹಿಡ್ದ್ ಸುತ್ತಿ ಬಾಟಕಲೆಂಡ್ ಇತ್ತ್. ಕೀಚಕನ ಶರೀರದೊಳಗಿದ್ದ ಹೃದಯ. ಕಲೆರ್ಳ್. ಕಲಿಯಿಡ ಎಲ್ಲ ಒಂದೊಂದಾಗಿ ಚದರಿ ಬಿದ್ದ್ ಅದ್ ಮಾರಿಗೆ ರಕ್ತ ಬಲಿ ಕೊಟ್ಟಾಂಗ ಕಾಂಬುತ್ತಿತ್ತ್. ಅವನ ಕಲೆಮಲೆ. ತುಂಬಿದ ಮೊಡ್ಲರನ ಹೊರಗೆ ಸೊಗ್ಗಿದ ಹಾಂಗೆ ಪರಿಚಲೆಯರ್ ಬಂದು ಬಂದಂಗ ಒಳ್ಳದರ ಹೇಸಿಕಾಗಿ ಹರ್ಕಿ ಇಟ್ಟೇತ್. ಮತ್ತೆ ಮುಸುಕು ಹೊದ್ದ್‌ಕಲೆಂಡ್ ಹೊರಗಿದ್ದ ದ್ರೌಪದಿಗೆ ಸನ್ನೆ ಮಾಡಿ. ತನ್ನ ಬಾಣಸದ ಮನೆಗೆ ಗೊತ್ತಾಗದ ಹಾಂಗೆ ಹೋಗಿ ಸೇರಿಕಲೆಡಲೆತ್.

ಅಷ್ಟ್ರಲ್ಲಿ ನಾಟಕಶಾಲೆನಕ್ಕಲೆ ಇದ್ದ ಸೈರಂಧ್ರಿ ರೂಪದ ದ್ರೌಪದಿ ಗಟ್ಟಿಯಾಗಿ ಅಳುವಲಿ

ಕರ್ದ್ ಹೇಳ್ತ್ "ನಾ ಎಷ್ಟ್ ಬೇಡ ಬೇಡಾಂತ ತಡ್ದರೂ ಕೇಳದೆ ನನ್ನ ಮಾನಭಂಗ ಮಾಡಿಕೆ ಕೀಚಕ ಪ್ರಯತ್ನ ಮಾಡ್ತ್. ನನ್ನ ಅಳ್ಗ್‌ಲ್‌ನ ಬಾನತೆಲಿ ಹಾರಿಕಡ್ ಹೋಪ ಗಂಧರ್ವರ್. ಕೇಳಿ ತಮ್ಮ ಕುಲಮೊರ್ಯಾದೆನ ಕಾಪಾಡೊಕುಂತ ಬಂದ್ ಅವನೊಟ್ಟಿಗೆ ಕಾದಿಕೊಂದು ಹಾಕಿದೊ. ಪಾಪಿ ಕೀಚಕಂದಾಗಿ ನಂಗೆ ಅವನ ಹಂತಕಿಂತ ಒಂದು ಲೋಕಾಪವಾದ ಬಾವಾಂಗೆ ಅತ್‌ಂತ ಬೊಪ್ಪೆ ಹೊಡ್ತ್.ಇದರ ಕೀಚಕನ ನೂರು ಜನ ತಮ್ಮಂದಲೆರ್ ಕೇಳ್ವೊ. ನಮ್ಮಣ್ಣನ ಸಾವ್ರಗೆ ಈ ಪೀಡೆನೇ ಕಾರಣ ಆಗುಟು. ಅವನ ಈ ಜೆನ್ಮಲಿ. ಅಂವ ಬಯ್ಸಿದ ಇದರ ಅಂಗ ಸುಖ ಸಿಕ್ಕದೇ ಹೋದರೆ, ಪರಲೋಕತೆಲಿಯಾರೂ ಸಿಗುವ ಹಾಂಗಾಗಲೆಂತ ಇದನ್ನೂ ಅಣ್ಣನ ಸರ್ರದೊಟ್ಟಿಗೆ ಕಟ್ಟಿ ಒಂದೆ ಕಾಟತೆಲಿ ಕಿಚ್ಚಿ ಕೊಡೊನೊ. ಇರ್ಲ್ ಬೊಳ್ಳಾಕೆ ಮುಂದೆ ಹೊತ್ತ್‌ನೊಕುಂತ ಮಸಣಕೆ, ತಮಟೆ ಹೊಡ್ಕಂಡ್ ಹೋತಿದ್ದೊ. ಸೈರಂಧ್ರಿ ಗಟ್ಟ ಅಳುವ ಸದ್ದೊ ಭೀಮನ ಕೆಬಿಗೆ ಬೀತ್. ಅಂವ ವೇಷ ಮರ್ಸಿಕಡ್ ಅವರೊಟ್ಟಿಗೆನೆ ನಡ್ಕಂಡ್. ಕೊಣ್ಕಂಡ್, ಅತ್ತ್‌ಕಂಡೂ ಅವರೊಟ್ಟಿಗೇ ಹೋತು. ಸ್ಮಶಾನದೊಳೆಗೆ ಹುಕ್ಕ ಕೂಡ್ಲೇ ಕಾಡಾನೆ ಬಾಳೆ ತೋಟಕ್ಕೆ ಹುಕ್ಕಾಂಗೆ ಆ ಉಪಕೀಚಕರ ಚಗಣೆಗಳ ಒರ್ಪ್ ಹಾಕಿದಾಂಗೆ ಎಲ್ಲವನ್ನೂ ಹೊಸ್ಕಿ ಹಾಕಿತ್. ಮತ್ತೆ ಏನೂ ಗೊತ್ತಿಲ್ಲದವರ ಹಾಂಗೆ ದ್ರೌಪದಿನ ಕರ್ಕಂಡ್ ಅರಮನೆಗೆ ಬಾತ್. ದ್ರೌಪದಿ ಅವನ ಸಾಹಸನ ಮೆಚ್ಚಿ ಅವನ ತೊಪ್ಪಿ ಮುತ್ತು ಕೊಟ್ಟ್ ಅಂತಃಪುರದತ್ತ ಹೋತು. ಇಂವ ಅಗ್ರ ಸಾಲೆನತ್ತ ನಡ್ತ್.

ಮತ್ತ ಏಂದ್‌ನಾಂಗೆ ಬೊಳ್ಪಾತ್. ಆದರೆ ತಂಗಾಳಿ ಬೀಸಿತ್‌ಲೆ. ಮರಗಳ, ದೈಗಳ, ಸೊಪ್ಪು ಅಲ್ಗಿತ್‌ಲೆ. ತುಂಬಿಗಳೂ ಉತ್ಸಾಹಂದ ಹೂಗಳ ಜೇನ್ ಹೀರಿಕೆ ಹಾರ್‌ತ್‌ಲೆ. ಕೋಳಿಗ ಮಾತ್ರ ವಿರಳವಾಗಿ ಕೂಂಗ್‌ತಿದ್ದೊ. ವಿರಾಟನ ಮಟ್ಟಿಗೆ ಒಂದು ಘೋರ ದುರಂತ ನಡ್‌ದ್ ಹೋಗಿತ್ತು. ವಿರಾಟನ ರಾಜ್ಯಕ್ಕೆ 'ಸೇನಾಪತಿಯಾದ ಕೀಚಕನೆ ಬೇಲಿನಾಂಗಿತ್ತ್. ಯಾವ ಶತ್ರುವೂ ಅಂವ ಇದ್ದಕಡೆಗೆ ತಲೆ ಹಾಕಿ ಮಲ್ಗ್‌ತಿತ್ತ್‌ಲೆ. ಅಂತಹ ವೀರ ಒಂದು ಹೆಣ್ಣ್‌ನ ರೂಪುಗೆ ಮರುಳಾಗಿ ಅಳ್ದ್ ಹೋತು! ಸುದ್ದ ನಡೆನುಡಿ ಇಲ್ಲದವಂಗೆ ಏನಿದ್ದೇನ್ ಫಲ? ಒಟ್ಟುಲಿ ವಿರಾಟನ ಬಲ್ದ ಕಯ್ಯೇ ಮುರ್ದಾಂಗೆ ಆತ್. ಬೊಳ್ಪಿಗೆ ಎದ್ದ್, ಅತ್ತಿತ್ತ ಹೊರ್ಟ ಜನಂಗ, ಗುರ್ತ ಇದ್ದೊವ್ರ, ಇಲ್ಲದೊವ್ರ ಯಾರು ಸಿಕ್ಕಿರೂ ಅಂದ್ ಮಾತಾಡುದು ಎಲ್ಲ ಈ ಮಾತೇ. ವಿರಾಟಂಗಾಗಲೀ ಸುದೇಷ್ಣಲಾಲಿ, ತೆರ್ಟ ಮನ್ಸ್‌ಂದ ಶೋಕ ವ್ಯಕ್ತಮಾಡಿಕೆ ಆತ್‌ಲೆ. ಕಾರಣ ಅಂಥ ಪರಾಕ್ರಮಿಗ ಆಗಿದ್ದರೂ ಅವ್ಕೆ ವೀರ ಸಾವ್ರ ಒದ್ಗದೆ. ಬರೇ ಹೀನ ಸಾವ್ರ ಒದ್‌ಗಿತ್ತ್. ಅಂತೂ ವಿರಾಟ ರಾಜ್ಯಲಿ ಕೀಚಕಾಧ್ಯಾಯಂತೇಳ್ದ ಸಮಾಪ್ತಿ ಆತ್.

ಈ ಸುದ್ದಿ ದೇಶದ ಎಲ್ಲ ಕಡೆಗೂ ಹಬ್ಬಿತ್. ಹಗೆಗಳಿಗೆ ಕೆಬಿ ನೆಟ್ಟಂಗಾತ್, ಆದರ್ಲೂ ಹಸ್ತಿನಾವತಿಗೆ ಈ ಸಾವುನ ಸುದ್ದಿ ಒಸಗೆನ ಹಾಂಗೇ ಕಂಡತ್. ತಾವೇ ವೀರಾಧಿವೀರರ್‌ಂತ ಮೀಸೆ ತೀಗ್‌ನತ್‌ತಿದ್ದ ಕರ್ಣಾದಿಗಳಿಗೆ ಮರಿಯಕೆ ಆಗದ ಪೆಟ್ಟ್ ಕೊಟ್ಟಿತ್ತ್- ಕೀಚಕ. ಅಷ್ಟೆ ಒಟ್ಟಿಗೆ ಆಶ್ಚರ್ಯನೂ ಆತ್. ಆಗನ ಭಾರತತೆಲಿ ಜರಾಸಂಧ,

ಶಲ್ಯ, ಕೀಚಕ, ಬಲರಾಮ, ಭೀಮಂತೇಳೊವು ಸಮಬಲಂರ್‌ಂತ ಪ್ರಖ್ಯಾತಿ. ಇವರ್ಲಿ ಜರಾಸಂಧನ ಭೀಮ ಕೊಂದಟ್, ಸುಪ್ರಸಿದ್ಧವಾಗಿತ್.

ಈಗ ಈ ಕೀಚಕನ ಕೊಂದೊವು ಯಾರ್? ಭೀಮನೇ ಆಗಿರ್ಮೋ? ಪಾಂಡವರ್ ವಿರಾಟ ನಗರಿಲಿ ಅಡಿಂಗ್ಯಂಡ್ ಒಳೊನೋ ಏನ್? ಇನ್ನ್ ಹಚ್ಚ್ ಸಮಯ ಕಳ್ದರೆ ಅದರ ಅಜ್ಞಾತವಾಸ ಮುಗ್ದ್, ಮೋಡಂದ ಹೊರ್ಟ್ ಬಂದ ಸೂರ್ಯನಾಂಗೆ ಪ್ರಕಾಶಕ್ಕೆ ಬಾಕೆ ಒಳೊ. ಹಾಂಗೆ ಬಂದ ಮೇಲೆ ಒಪ್ಪಂದದ ಪ್ರಕಾರ ಕೊಡಿ ನಮ್ಮ ರಾಜ್ಯಂತ ಕೇಳುವ ದಿನ ಹಕ್ಕಲೆ ಬಾಕೆ ಆತ್. ಆದರೆ ಕೌರವರ ಮನ್ಸ್‌ಲಿ ಅದಿನ ಹಕ್ಕಲೇ ಬಾಕೇ ಬೊತ್ತ್. ಕಾಡ್‌ಪಾಲಾದ ಪಾಂಡವರ್ ಕಾಡ್‌ಲೇ ಕಾಣವಾಕುಂತ ಹಾಂಗೆ ಅಜ್ಞಾತವಾಸ ಮುಗಿಯಕೆ ಮುಂದೇ ಪಾಂಡವರ ನೆಲೆನ ಕಂಡ್ ಹಿಡ್‌ದರೆ ಅವು, ತಾವಾಗಿಯೇ ಒಂದಕೆ ಅಷ್ಟೇ ಅವಧಿನ ವನವಾಸಕೆ ಹೋಕಾದು. ಹಾಂಗೆ ನಾವೀಗ ವಿರಾಟನ ನಗರಕ್ಕೆ ಮುತ್ತಿಗೆ ಹಾಕಿ, ಅವನ ಗೋವುಗಳ ಸೆರೆ ಹಿಡ್ದರೆ, ಪಾಂಡವರ್ ಅಲ್ಲಿದ್ದರೆ ಸುಮ್ಮನಿರೊವಲ್ಲ. ಯುದ್ಧಕ್ಕೆ ಬಂದೇ ತೀರುವೊ. ಸುಲಭಲಿ ನಮ್ಮ ಕಾರ್ಯ ಸಿದ್ಧಿಯಾದುಂತ ಹೇಳಿ ವಿರಾಟನ ದಾಯಾದಿ ಸುಶರ್ಮನ ಜೊತೆಗೂಡಿ ವಿರಾಟ ರಾಜ್ಯದ ಉತ್ತರದಿಕ್ಕ್‌ಂದ ಮುತ್ತಿಗೆ ಹಾಕಿ ಅಲ್ಲಿನ ಗೋವುಗಳ ಸೆರೆಹಿಡ್ದೊ. ಆಗ ವಿರಾಟ ಸೈನ್ಯ ತಕಲಂಡ್ ಯುದ್ಧಕ್ಕೆ ಹೋತು. ಅವನೊಟ್ಟಿಗೆ ಕಂಕಭಟ್ಟ, ವಲಲ. ಜೇರೆ ಹೆಸರ್‌ಲಿನ ನಕುಲ ಸಹದೇವರೂ ಹೋದೊ. ನಗರ ರಕ್ಷಣೆನ ಹೊಣೆನ ಉತ್ತರಂಗೆ ಒಪ್ಪುಸಿ ಹೋಗಿದ್ದೊ. ಉತ್ತರಲಿ ಯುದ್ಧ ಜೋರಾಗಿ ನಡ್ದ್, ಕೆಲವು ದಿನಲಿ ಕೌರವರ್ ಪೂರಾ ಸೋತ್ ಹಿಂದೆ ತಿರ್‌ಗಿಕಾತ್. ಹಾಂಗೆ ತಿರ್ಗಿದೊವು, ದಕ್ಷಿಣ ದಿಕ್ಕಿಗೆ ಮುತ್ತಿಗ ಹಾಕಿ, ಅಲ್ಲಿನ ಗೋವುಗಳ ಸೆರೆ ಹಿಡ್ದೊ. ಉತ್ತರಕೆ ಹೋದ ಸೇನೆ ಇನ್ನೂ ಹಿಂದೆ ಬಂದಿತ್ತ್‌ಲೆ. ದನಮೇಪತರ್ ಜೀವದ ಹಂಗ್ ಬುಟ್ಟ್, ದನಕಳ್ಳರ ಎದ್‌ರ್ಲಿದೊ. ಎಷ್ಟೋ ಸೈನಿಕರ ಒಳ್ಳೆ ಸಿಂಧೂ ಕುದುರೆಗಳ ಈಟಂದ ಕುತ್ತಿ ಬೀಳ್ಲಿದೊ. ಆದರೆ ಸೊಪ್ಪಂದ ಉಕ್ಕಿ ಬಾವ ಹಾಂಗ ತೆರೆತೆರೆಯಾಗಿ ಬಾವ ಸೈನಿಕರ ಎಡೆಲಿ ಅವರ ಕ್ಯ ಸಾಗಿತ್‌ಲೆ. ಇವರ ಕೊಚ್ಚಿ ಕೆಡಹಿ ಹಾಕಿದೊ. ದನಮೇಪತರ ಹೆಣಗಳ ಮೇಲೆ ದಪ್ಪ ಕಚ್ಚಲ್‌ನ ವಿರ್‌ಕಿ ಕೆಟ್ ಜೀಲಗಳ ನೇಚಿಕಟ್ ಹಸ್‌ಗ ಓಡ್‌ತಿದ್ದೊ. ತನ್ನ ಕುಲಬಾಂಧವರ್ ಹೀಂಗ ಸತ್ತ್ ಬೀಳುದರ ನೋಡಿಕೆ ಆಗದೆ ಒಬ್ಬ ಮೇಪತ ಓಡಿಬಂದ್ ಅರಮನೆಲಿ ಹೆಣ್ಮಕಳ ಮುಂದೆ ಬಡಾಯಿ ಕೊಚ್ಚಿಕಟಿರುವ ಉತ್ತರಂಗೆ ಕೌರವರ ದೊಡ್ಡ ಸೈನ್ಯ ಬಂದ್ ನಮ್ಮ ದನಂಗಳ ಸೆರೆ ಹಿಡ್ದಟ್ ಗೋಪಾಲರ ಎಲ್ಲ ಕೊಂದ್ ಹಾಕಿದ ಸುದ್ದಿ ಮುಟ್ಸಿ, ಒಡೆಯಾ, ನೀನೇ ನಮ್ಮ ಕಾಪಾಡೊಕುಂತ ಕೈ ಮುಗ್ದ್. ಉತ್ತರಂಗೆ ಒಮ್ಮಂದೊಮ್ಮೆಗೆ ಕೋಪ ಬಾತ್.ಭಯ ಭೀತನಾದ ದೂತನ ಎಲೋ ಹೇಡಿ! ಏಕೆ ಹೀಂಗೆ ನಡ್‌ಗಿಯ? ನಿನ್ನ ಕೌರವರೇನ್ ನಾ ಕಾಣದವನೇ ಕೇಳದವನೇ? ಅವರ್ಲಿ ನಾ ಯಾರೊಟ್ಟಿಗೆ ಯುದ್ಧ ಮಾಡುವೆ? ಕೆಲವರ್ ಹಾರ್; ಕೆಲರ್ ಹೀನಕುಲಲಿ ಹುಟ್ಟಿ ಬಂದೊವು.. ಮತ್ತೆ ಕೆಲವು ಬಡಪಾಯಿಗ ಒಳೊ. ಮುದಿತನಂದ ನಟ್ಗ್ಯಂಡ್, ಯಮನ ಮನೆಗ ಕಾಲ್ಗೆಯಕೆ ತಯಾರಾಗಿರೊವು. ಮತ್ತೆ

ಒಕ್ಕ ಕೌರವ ಗಿಪ್ರವರ ನಾನೋಡದವನೋ? ಆ ದುರ್ಯೋಧನ ನನ್ನ ಒಂದು ಬಾಣನ ತಾಳಿಕಂಬೋದೊ? ನಂಗೆ ಒಬ್ಬ ಸಾರಥಿ ಇಲ್ಲದೆ ಸೋತೆ. ಏನ್ ಮಾಡ್ಮು ? ಅವ್ನೆ ಬುದ್ಧಿ ಕಲ್ಲಿಕೆ, ನನ್ನ ಕೈ ನಿಮೊರ್ಡ್ತ. ಶಿವ ಶಿವಾ, ನಂಗೆ ಸಾರಥಿ ಇಲ್ಲದಾಂಗೆ ಮಾಡಿ ವಿಧಿ ನನ್ನ ಸೋಲ್ಲಿ ತಲೆದೇವ್ರಂತ ಹೇಳಿ ಕಲಂಡ್ ಪೇಜಾಡಿಕಲಂಡ್ ಇತ್ತ್. ಸುತ್ತೊಳು ಇದ್ದ ಹೆಣ್ಮಕ್ಕ ಎಲ್ಲ ಅವನ ಮೆಚ್ಚಿಕಲಂಡ್ ನೋಡ್ತಿದ್ದೊ. ರಾಜಕುಮಾರನ ನಿಸ್ಸಹಾಯಕತೆಗೆ ಬೇಜಾರ ಪಟ್ಟ್‌ಕಲಂಡೂ ಇದ್ದೊ.

ಅರ್ಜುನ ಈ ಹೈದನ ಬಾಲಭಾಷೆನ ಒಳಗೊಳಗೆ ನಗಾಂಡಿಕಲಂಡ್ ಕೇಳಿಕಲಂಡ್ ಇದ್ದಂವ ದ್ರೌಪದಿನ ಕರ್ದ್ ಹೇಳ್ತ್. ಕೌರವರ ಸೇನೆ ಬಂದಲೆದ್ ನಮ್ಮ ಕಲಂಡ್ ಓಡಿಯೊಕುಂತ. ನಮ್ಮ ಅವಧಿನೂ ಮುಕ್ಕಲಂಡ್ ಜಾಕೆ ಆತ್. ಇನ್ನ್ ನಾವು ಹೀಂಗೆ ಇದ್ದು ಸರಿ ಅಲ್ಲ. ನೀ ಉತ್ತರೆನೊಟ್ಟಗೆ ಹೇಳ್. "ಬೃಹನ್ನಳೆ ಹಿಂದೆ ಅರ್ಜುನಂಗೆ ಸಾರಥಿಯಾಗಿದ್ದಂವ. ನಿನ್ನ ಅಣ್ಣ ಅಂವನ ಸಾರಥಿ ಮಾಡಿ ಯುದ್ಧಕ್ಕೆ ಹೋಗಲಿಂತ ಹೇಳಿ ಒಪ್ಪ್‌ಸ್‌ಂತ" ದ್ರೌಪದಿ ಉತ್ತರೆ ಕುಮಾರಿಗೆ ಇದರ ಹೇಳ್ತ್. ಅದ್ ಸಂತೋಸುಂದ ಬಂದ್, ಅಣ್ಣ ಉತ್ತರಂಗೆ ಹೇಳ್ತ್. ಅಂವ ಸಂತೋಸುಂದ ಕೊಣ್ದಾಡ್ತ್. "ನನ್ನ ಬಚಾವು ಮಾಡ್ದ ತಂಗೆ. ನೀನೆ ಹೋಗಿ ಅವನ ಇಲ್ಲಿಗೆ ಕರ್ಕಂಡ್ ಬಾ". ಹಾಂಗೆ ಸಂಭ್ರಮುಂದ ಉತ್ತರೆ ಬಂದ್ ಅರ್ಜುನನ ಕರ್ಕಲಂಡ್ ಬಾತ್. ಅರ್ಜುನ ಪಾಪದವರ ಹಾಂಗೆ ಬಂದ್ ಓರೆಲಿ ನಿಲ್ಲ್‌ಕನ ಉತ್ತರ, ಬಾ ಬೃಹನ್ನಳೆ. ಸಾರಥಿ ಇಲ್ಲದೆ ಏನು ಮಾಡಿಕೂ ಬೊತ್ತದಿದ್ದ ನಂಗೆ ಒದ್‌ಗಿ ಬಂದ್ ತುಂಬ ಉಪಕಾರ ಮಾಡ್ದ. ಕುರುಸೈನ್ಯ ಕಾಂಬಕೆ ದೊಡಲದಾಗಿರ್ದು. ಅದರ ನೋಡಿ ನೀ ಹೆದ್‌ರಿಕಂಬಕಾಗಲೆದ್. ಮುದಿಯರ್, ಹಾರ್‌ರ್, ಜಾತಿ ಅಲ್ಲದಲೆವೇ. ಎದ್‌ರ್ಲಿ ಇದೊವು. ಮತ್ತೆ ಕಾಕಪೋಕಲೆರ್ ತುಂಬ ಇರುವೊ. ಅವೆಲ್ಲ ನನ್ನ ಬಾಣಕೆ ತತ್ತರ್‌ಸಿ, ಗಾಳಿಗೊಡ್ಡಿದ ದರ್ಗೆಗಳ ಹಾಂಗೆ ಹಾರಿ ಹೋವೊ. ನೀ ಕುದುರೆಗಳ ಜೀನ್‌ನ ಬುಡದೆ ಗಲೆಟ್ಟಿ ಹಿಡ್ಕಲಂಡ್ ಕುದ್ದ್‌ಕಂತ ಹೇಳ್ತ್. ಸರಿ ನೀ ಇರ್‌ಕನ ನಂಗೇನ್ ಹೆದ್‌ರಿಕೆಂತ ಬೃಹನ್ನಳೆ ಹೇಳ್ತ್. ಸಾರಥಿಗೆ ಒಂದು ಕವಚ ತಂದ್ ಕೊಡಿಂತ ಸೇವಕರಿಗೆ ಹೇಳ್ತ್. ಹಾಂಗೆ ಅವಂಗೆ ಅದರ ತಂದ್‌ಕೊಟ್ಟೊ. ಬೃಹನ್ನಳೆ ಅದರ ಅತ್ತ ಇತ್ತ ತಿರ್ಗ್‌ಸಿ ನೋಡಿ ಅದರ ತಲೆಕೆಳಗಾಗಿ ತೊಡ್‌ಕನ ಅಲ್ಲಿದ್ದ ಹೆಣ್ಮಕ ಎಲ್ಲ 'ಗೊಳ್ಳ್'ಂತ ನೆಗಾಡ್ದೊ. ಆಗ ಉತ್ತರ ತಾನೇ ಅದರ ತಕಲಂಡ್ ಪಾಪ! ಸಾರಥಿಗೆ ಗೊತ್ತ್‌ಲೆ. ಅದರ್ಲಿ ಅವಂದೇನ್ ತಪ್ಪುಂತೇಳಿ ತಾನೇ ಸರಿಯಾಗಿ ತೊಡ್ಸಿತ್. ಕಡಿವಾಣ ಹಿಡ್ಕಲಂಡ್ ಬೃಹನ್ನಳೆ ಮುಂದೆ ರಥಲಿ ಹತ್ತಿಕುದ್ದಲೆತ್. ಬಾಗ್‌ಲ್ ನಕ್ಕಲೆ ರಥನ ತಂದ್ ನಿಲ್ಸಿ ಉತ್ತರನ ರಥಕೆ ಹತ್ತಿಕೆ ಹೇಳ್ತ್. ಉತ್ತರೆ ಸಾರಥಿಗೆ ಹೇಳ್ತ್. ಬೃಹನ್ನಳೆ, ಅಣ್ಣ ಯುದ್ಧಲಿ ಸೋಲ್ಸಿದ ವೀರರ, ಧ್ವಜ ಪತಾಕೆ, ಪಟ್ಟೆ ಪೀತಾಂಬರಗಳೆಲ್ಲ ಹಿಡ್ಕಲಂಡ್ ಬಾ. ನನ್ನ ಆಟದ ಬೊಂಬೆಗಳ ಸಿಂಗರ್ಸಿಕೆಂತ ಹೇಳ್ದರ ಒಪ್ಪಿಕಲಂಡಲೆತ್. ಮತ್ತೆ ಕಣ್ಣ್ ಮುಚ್ಚಿ ಬುಡುವಷ್ಟರ್ಲಿ ರಥ ಮಿಂಚ್‌ನ ವೇಗಲಿ ಓಡಿ ತುಂಬ ದೂರಕೆ ಮುಟ್ಟಿತ್.

ವಿಸ್ತಾರವಾದ ಮೈದಾನ ಜಾಗೆಲಿ ನಿತ್ತ ಕುರುಸೈನ್ಯ ಒಂದು ಸೊಪ್ಪಂದ್ರದ ಹಾಂಗೆ

ನೋಡಿದಲೆಷ್ಟೂ ದೂರಕೆ ಕಣ್ಣೆತ್ತದ ವಿಸ್ತಾರಲಿ ಕಾಂಬತ್ತಿತ್ತ್. ನಿಂತಲ್ಲಿ ನಿಲ್ಲದೆ ಓಲಾಡಿಕಲೆಂಡ್, ಜೂಲುಗಳ ಬಾಲಗಳ ಆಡ್ಸಿಕಲೆಂಡ್ ಇರುವ ಕುದುರೆಗಳ ಸಾಲ್ ಸಾಲ್ ಸೊಂಪ್ರುಂದ್ರದ ತೆರೆನಾಂಗೆ ಕಾಂಬತ್ತಿತ್ತ್. ಮಧ್ಯಾನೆಗ ನಿಂತಲೆದ್ ಸೊಂಪ್ರುಂದ್ರದ ನೊಡುಲಿರುವ ದ್ವೀಪಗಳ ಹಾಂಗೆ. ತೇರ್‌ಗಳ ಗುಂಪು, ಪರ್ವತಗಳ ಹಾಂಗೆ ಕಾಂಬತಿದ್ದೊ. ಬಿಲ್ಲಾಳ್‌ಗ ಹಿಡ್ದ ಬಿಲ್ಲ್ ಬಾಣಗ ಜೆಡೆ ಬುಡ್ಸಿದ ಸರ್ಪಂಗಳ ಹಾಂಗೆ ಕಾಂಬತಿದ್ದೊ. ಆನೆಗಳ ಘೀಂಕಾರ. ಕುದುರೆಗಳ ಕೆನೆತ ಎಲ್ಲ ಸೇರಿ ಸೊಂಪ್ರುಂದ್ರನ ಘೋಷದಾಂಗೆ ಕೇಳ್‌ತ್ತಿತ್ತ್. ಇದರಲ್ಲ ನೋಡ್‌ಕನ ಉತ್ತರನ ಹೊಟ್ಟೆಲಿ ಚಳಿ ಕುದ್ದತ್. ದಮ್ಮಯ ಬೃಹನ್ನಳೆ! ಮುಂದೆ ರಥನ ಓಡ್ಸಬೇಡ. ಹಿಂದೆ ತಿರ್‌ಗ್ಸ್. ಇದರ ಜಯಿಸೊಂವ ಮೂರುಲೋಕಲಿಲಿಯೂ ಇಲ್ಲೆ. ನನ್ನ ಹಿಂದೆ ಅರಮನೆಗೆ ಕರ್ಕಲೆಂಡ್ ಹೋಗು. "ಮತ್ತೆ ಅಲ್ಲಿ ಗೂಡೆಗಳೆದ್‌ರ್ ಅಷ್ಟೆಲ್ಲ ಬಡಾಯಿ ಕೊಚ್ಚಿದ!" ಸಾರಥಿ ತೇರ್‌ನ ನಿಲ್ಸಿದರ್‌ಂದ ಉತ್ತರ 'ಬೊದ್ಕಿರೆ ಬೇಡಿ ತಿಂಬೆ'ಂತ ಹಾರಿ ಓಡಿಕೆ ಸುರುಮಾಡ್ತ್. ಅರ್ಜುನ ಬೆರ್ಸಿ ಅಂವನ ತಲೆ ಜುಟ್ಟುಲಿ ಹಿಡ್ದ್ ಎಳ್ದ್ ರಥಕ್ಕೆ ಹತ್ತಿಸಿಕಣ್ತ್. ನೀ ಹೆದ್‌ರ್ ಬೇಡ ನೀನೇ ಸಾರಥಿಯಾಗ್ ನಾ ಯುದ್ಧ ಮಾಡಿ ಜಯಿಸಿ ನಿನ್ನ ಪೊಲ್ರ್ಪಲಿ ಅರಮನೆಗೆ ನಿನ್ನ ಗೂಡೆಗಳ ಸಭೆಗೆ ಕರ್ಕಲೆಂಡ್ ಹೋಗಿ ಬುಡುವೆ. "ನೀ ಹೀಂಗೆ ಹೆಡ್ದ್ ಮಾಡಿ ಕಡೆಗೆ ವೈರಿಗಳೆಗೆ ಬೊಲಿಕೊಡುವ. ನಿನ್ನ ಕಲೆಯಿಲಿ ಯಾವ ಆಯುಧನೂ ಇಲ್ಲೆ. ನೀ ಹೇಂಗೆ ಯುದ್ಧ ಮಾಡುವ?"

ನೀ ಹಿಂಗೇ ನನ್ನ ಅರಮನೆಗೆ ಕರ್ಕಂಡ್ ಹೋಗಿ ಬುಟ್ಟರೆ ನಿಂಗೆ ಬೇಕಷ್ಟ್ ಚಿನ್ನಾಭರಣ. ಹಣ ಎಲ್ಲ ಕೊಡುವೆ. ಬೇಗ ಪೋಯಿ." "ಅದೆಲ್ಲ ಮತ್ತೆ ನೋಡೊನೊ. ಈಗ ರಥನ ಸ್ಮಶಾನದ ಕಡೆಗೆ ಓಡ್ಸ್. ಅಲ್ಲಿರುವ ಬನ್ನಿ ಮರಲೆಲಿ ನನ್ನ ಆಯುಧಗಳ ಎಲ್ಲ ಇಸಿಯೊಳ ಅವರ ತೆಗ್ದ್ ಕೊಡು"ಂತೇಳಿ ಅತ್ತ ರಥನ ಓಡ್ಸಿತ್. ಈ ವಿದ್ಯಮಾನನೆಲ್ಲ ಎದ್‌ರ್ ಪಡೆವು ನೋಡಿ ಯಕ್ಷಗಾನದ ಆಟಲೆಲಿ ಜಾಪ ಕೋಡೆಂಗಿ ವೇಸನ ನೋಡಿ ನೆಗಾಡುವಾಂಗೆ ತಪ್ಪಾಳೆ ಕುಟ್ಟಿಕಲೆಂಡ್ ನೆಗಾಡ್ದೊ. ಇವು ಬನ್ನಿ ಮರದಡಿಗೆ ಬಂದ್ ನಿತ್ತೊ. ಅರ್ಜುನ ಉತ್ತರಂಗೆ ಮರದ ಮೇಲೆ ನೇತಾಡಿ ಕಲೆಂಡಿರುವ ಮೊಂಯಿಸನಾಕಾರದ ಚೀಲನ ತೋರ್ಸಿ ಅದರ್ಲಿರುವ ನಮ್ಮ ಆಯುಧಗಳ ತೆಗ್‌ದ್ ಕೊಡಿಕೆ ಹೇಳ್ತ್." ಅವು ನನ್ನ ಹಕ್ಕಲೆ ಹೋಕೆ ಬುಡ್ದುಲೆ. ಹಾವುಗಳಾಂಗೆ ಸುಯ್ಗುಟ್ಟುವೆ. ನಂಗೆ ಹೆದ್‌ರಿಕೆ ಆದೆ!. ಹೆದ್‌ರ್‌ಬೇಡ: 'ಅರ್ಜುನ, ಫಲ್ಗುಣ, ಪಾರ್ಥ, ವಿಜಯ, ಧನಂಜಯ, ಗುಡಾಕೇಶ, ಸವ್ಯಸಾಚಿ, ಮುಂತಾಗಿ ತನ್ನ ಹತ್ತ್ ಹೆಸ್‌ರ್‌ಗಳ ಹೇಳಿಕಲೆಂಡ್ ತೆಗ್‌ದ್ ಕೊಡು. ನಿಂಗೇನಾಕಲ್ಲೆಂತ ಹೇಳ್ದ ಮೇಲೆ ಅಂವ ಹಾಂಗೇ ಮಾಡಿ, ಆ ಚೀಲನ ಇಳ್ಸಿ ಕೊಟ್ಟಲೆತ್. ಅರ್ಜುನ ಆ ಆಯುಧಗಳ ತಕಂಡ್ ರಥದೊಳಗೆ ಓರಣವಾಗಿ ಇಸಿ ಕೈಗೆ ತನ್ನ ಗಾಂಡೀವ ಧನುಸ್ಸ್‌ನ ತಕಲೆಂಡ್. ತುಂಬ ಕಾಲಂದ ನೋಡದ ಗೆಳೆಯನ ನೋಡ್‌ದಷ್ಟ್ ಕುಷಿಯಾಗಿ ಅದರ ಕೈಲಿ ಒಮ್ಮೆ ಹಿಡ್ದ್ ನೇವರ್ಸಿ, ಕಣ್ಣೆಗೂ ಒತ್ತಿಕಲೆಂಡ್ ಅದರ ಬೊಳ್ಕನ ಮೇಲೆನ ಉಂಗುರಕ್ಕೆಗಲೆಷ್ಟ್ ಕಲೆಷ್ಟ್. ಒಮ್ಮೆ ಅದರ ತಂಬೂರಿನ ತಂತಿನ ಮೀಟಿದಾಂಗೆ ಬೆರ್ಲ್‌ಂದ

ಎಳ್ದ್ ಬುಟ್ಟೇತ್. ಅದರ ರೊಂಯ್ಯೆಂಬ ಸಬ್ದ ಬಾನಲೆಲ್ಲ ಪ್ರತಿಧ್ವನಿಸಿ ಕೌರವ ಸೇನೆನ ಎದೆ ನಡ್ಗ್‌ಸಿತ್. ಅರ್ಜುನ ಉತ್ತರನ ಕರ್ದ್ ಹೇಳ್ತ್. ನಾ ಪಾಂಡವರ ಪೈಕಿ ಅರ್ಜುನ. ನನ್ನ ಅಣ್ಣಯುಧಿಷ್ಠಿರನೇ ಕಂಕ ಭಟ್ಟ, ವಲಲನೇ ಭೀಮಣ್ಣ. ತಮ್ಮಂದಿರ್ ನಕುಲ ಸಹದೇವರೇ ಗೋಪಾಲಾಧ್ಯಕ್ಷನೂ, ಕುದುರೆ ಸಾಹಣಿಯೂ. ನಮ್ಮ ಪತ್ನಿಯೇ ಸೈರಂಧ್ರಿ. ನಾವೆಲ್ಲ ಒಂದು ವರ್ಷದ ಅಜ್ಞಾತವಾಸ ಮಾಡಕಾಗಿತ್ತ್. ಹಾಂಗೆ ನಾವೆಲ್ಲ ನಿಮ್ಮಲ್ಲಿ ಇದ್ದೊ. ನಮ್ಮ ಕಂಡ್ ಹಿಡ್ದ್. ಮತ್ತೆ ನಮ್ಮ ಶರ್ತ ಪ್ರಕಾರ ಕಾಡಿಗೆ ಕಳ್ಸೊಕುಂತ ಕೌರವರ ಹಂಚಿಕೆ. ಆದರೆ ಇಂದಿಗೆ ಅದರ ಅವಧಿ ಮುಗ್ತ್. ಹಾಂಗೆ ನಾವು ನಿಜರೂಪುಲಿ ಪ್ರತ್ಯಕ್ಷ ಆದವೆ. ನೀ ಧೈರ್ಯಂದ ಕುದುರೆಗಳ ಓಡ್ಸ್. ನಾ ಯುದ್ಧ ಮಾಡಿನೆ. ನನ್ನ ಗಾಂಡೀವ ತುಂಬಸಮಿಯ ಜಡಗಟ್ಟಿತ್ತ್. ಈಗ ನೋಡು ಅದರ ವಿಲಾಸ. ಹೀಂಗೆ ಹೇಳಿ ರಥ ಭಯಂಕರ ವೇಗಂದ ಬಾದೊರ ನೋಡಿ ಕುರುಸೈನಿಕರ ಪೆರಿಜಿವ ಹಾರ್ತ್. ಭೀಷ್ಮಾಚಾರ್ಯರ್ ಕೌರವಂಗೆ ಹೇಳ್ದೊ, ಅಜ್ಞಾತ ವಾಸಾವಧಿ ಮುಗ್ದ ಕಾರಣ ಅರ್ಜುನ ಪ್ರತ್ಯಕ್ಷ ಆಗಿ ಯುದ್ಧಕ್ಕೆ ಬಂದುಟು. ಅವನ ಗಾಂಡೀವದ ದನಿನ ಆಗಲೇ ಕೇಳ್ದರಿ. ಇನ್ನ್ ಅಂವ ಬುಡುವ ತೀಕ್ಷ್ಣ ಬಾಣಗ ಹದ್ದ್‌ಗಳಾಂಗೆ ನಿಮ್ಮ ತಲೆ ಮೇಲೆ ಬೀಳಿಕೆ. ಮಾತ್ರ ಬಾಕಿ! ನೀ ವಿರಾಟನ ಗೋಗಳ ಹೊಡ್ಕಂಡ್ ಬೇಗ ಹಸ್ತಿನಾವತಿಗೆ ಹೊರ್ಡು. ನಾ ಅವನ ಹಜ್ಜ ಎದ್ರ್‌ಲಿ ನೋಡಿನೆಂತ ಹೇಳ್ದೈಕೆ, ಕೌರವ ಹಾಂಗೆ ಮಾಡಿಕೆ ನೋಡ್ತ್. ಅಷ್ಟರ್ಲಿ ಅರ್ಜುನ ಗುರುಗಳ ಆಶೀರ್ವಾದ ಪಡಿಯಕಾಗಿ ಅವನ ಅಂಕಿತದ ಮೂರು ಬಾಣಗಳ ಅವರ ಪಾದಕೆ ಬೀಳುವಾಂಗೆ ಬುಟ್ಟತ್. ದ್ರೋಣರಿಗೆ ಶಿಷ್ಯನ ಪ್ರತ್ಯಕ್ಷ ಕಂಡಷ್ಟೇ ಸಂತೋಸಲಿ ಹೃದಯ ಹಿಗ್ಗಿ "ಜಯವಿಜಯೀಭವ"ಂತ ಆಶೀರ್ವಾದ ಮಾಡಿ ಅವೂ ಮೂರು ಬಾಣನ ಅವನ ತಲೆಮೇಲೆ ಹಾರಿ ಹೋವಾಂಗೆ ಬುಟ್ಟೊ. ಮತ್ತೆ ಅರ್ಜುನಂಗೆ ಕೌರವ ಹಸ್‌ಗಳ ಹಸ್ತಿನಾವತಿಗೆ ಹೊಡ್ಕಂಡ್ ಹೋವ ಹುನ್ನಾರ ಗೊತ್ತಾಗಿ ಅಲ್ಲಿಗೆ ಹೋಗಿ ಅವನ ಅಡ್ಡ ಗಟ್ಟಿ ಯುದ್ಧ ಮಾಡಿ, ಕೈಯ್ಲಿ ಬಾಣ ಹಿಡಿಯಕೆ ಜೊತ್ತದಾಂಗೆ ಬಾಣ ಹೊಡ್ದ್ ಕೈ ಬೆರ್ಲ್‌ಗಳಿಗೆ ಗಾಯ ಮಾಡಿ, ದನಗಳ ವಿರಟನಗರಿಗೆ ತಿರ್ಗುವ ಹಾಂಗೆ ಮಾಡಿ ಮತ್ತೆ ಬೇರೆ ಸೈನ್ಯದ ಕಡೆ ತಿರ್ಗಿತ್. ಕರ್ಣ, ಅಶ್ವತ್ಥಾಮನಂಥ ಯುವ ವೀರರ್ ಯುದ್ಧಕ್ಕೆ ಬಂದೊ. ಆ ಇಬ್ಬೊರೊಟ್ಟಿಗೆ ಭಯಂಕರ ಯುದ್ಧ ಮಾಡಿ ಚಿಗ್‌ರ್ ಬುಟ್ಟ ಮರಗಳ ಹಾಂಗೆ ಮೈತುಂಬ ನೆತ್ತ್‌ರ್ ಸುರಿವಾಂಗ ಮಾಡ್ತ್. ಮಾತ್ರ ಅವರ ಜೀವಕ್ಕೆ ಅಪಾಯ ಆಗುವಷ್ಟ್ ಗಾಯ ಮಾಡ್ತ್‌ಲೆ. ಇನ್ನ್ ಭೀಷ್ಮ ದ್ರೋಣರೊಟ್ಟಿಗೆ ಮೇಲಂದ ಮೇಲೆ ಗೌರವ ತೋರ್ಸುವ ಯುದ್ಧನಷ್ಟೇ ಮಾಡ್ತ್. ಆದರೆ ಇತರ ಪರಿವಾರಕ್ಕೆ ಸೇರ್ದ ಅನೇಕ ಕಾಲಾಳ್‌ಗ ಸತ್ತ್ ಬಿದ್ದೊ. ಈಗ ಅರ್ಜುನಂಗೆ ಹೀಂಗೆ ಸುಮ್ಮನೆ ಕೊಲ್ಲಿಕೆ ಮನ್ಸ್ ಬಾರದೆ, ಇಡಿ ಶತ್ರು ಸೈನ್ಯಕ್ಕೆ ಇತ್ತನ ಜ್ಞಾನವೇ ಇಲ್ಲದಾಂಗೆ ಮಾಡುವ ಸಮ್ಮೋಹನಾಸ್ತ್ರ ಬುಟ್ಟೇತ್. ಯಾರ್ ಹೇಂಗೇಂಗೆ ಇದ್ದೋ ಹಾಂಗ ನಿತ್ತ್ ಬುಟ್ಟೊ. ಹೀಂಗೆ ಇಡೀ ಸೇನೆ ಇದ್ದೂ ಇಲ್ಲದಾಂಗಾತ್. ಅರ್ಜುನ ಉತ್ತರಂಗೆ ಹೇಳ್ತ್. ನೋಡು ವೈರಿಗ ಎಲ್ಲ ಜೀವ ಇಲ್ಲದಾಂಗೆ ನಿತ್ತೊಳೊ ಮೂರು ಗಳಿಗೆಗಳ ಕಾಲ ಅವ್ರುಕೆ ಏನೂ ಗೊತ್ತಾಕಿಲ್ಲೆ.

ನೀ ಹೋಗಿ ಪ್ರಧಾನ ನಾಯಕರ ಧ್ವಜ ಪತಾಕೆಗಳ ಅವು ಹೊದ್ದ ಶಾಲ್‌ಗಳ ಎಲ್ಲ ನಾವು ಜಯಿಸಿದ ಕುರುಹಾಗಿ ಬೇಗ ಎಳ್ಕಂಡ್ ಬಾ. ಭೀಷ್ಮಾಚಾರ್ಯರ ಹಕ್ಕಲೆ ಮಾತ್ರ ಹೋಗ್ಬಡ. ಅವು ಒಬ್ಬ ಮಾತ್ರ ಎಚ್ಚರ ತೊಪ್ಪಿರ್‌ಕಿಲೆ. ಉತ್ತರ ಹಾಂಗೇ ಮಾಡ್ತ್. ಮತ್ತೆ ಅರ್ಜುನ ಸಾರಥಿಯಾಗಿ ಕುದುರೆಗಳ ವಾಯುವೇಗಲಿ ಓಡ್‌ಸಿತ್. ಇಷ್ಟರ್‍ಲೆ ವಿರಾಟ ಸೇನಾಸಮೇತ ಉತ್ತರಂದ ರಾಜಧಾನಿಗೆ ಬಂದಿತ್ತ್. ದಕ್ಷಿಣ ಗೋಗ್ರಹಣಕ್ಕೆ ಉತ್ತರ ಒಬ್ಬನೇ ಹೋರಾಟಕ್ಕೆ ಹೋತಲೆ. ಅಂವ ಇನ್ನೂ ಎಳೆಕೂಸಲೇಂತ ಎತೆ ಮಾಡ್ತ್. 'ಬೃಹನ್ನಳೆ ಜೊತೆಲಿ ಹೋದರ್‌ಂದ ಯಾವ ಹೆದ್‌ರಿಕೆನೂ ಇಲ್ಲೆಂತ' ಕಂಕಭಟ್ಟ ಹೇಳ್ತ್. ಅಷ್ಟರ್‍ಲಿ ಅರಮನೆನ ಹಸ್‌ಗ ಎಲ್ಲ ತಿರ್‍ಗಿ ಓಡಿ ಬಂದೊ. ಯುದ್ಧಲಿ ಕುಮಾರಂಗೆ ಜಯ ಆತ್‌ಂತ ಚಾರಕೆರ್ ಸುದ್ದಿ ತಂದೊ ವಿರಾಟ ಸಂತೋಸುಲಿ ಪಟ್ಟಣನ ಕುಮಾರನ ಗೌರವಾರ್ಥ ಶೃಂಗರಿಸಿಕೆ ಅಪ್ಪಣೆ ಮಾಡ್ತ್. ಮತ್ತೆ ಕಂಕಭಟ್ಟನ ಕರ್ದ್ ಅವನೊಟ್ಟಿಗೆ ಪಗಡೆ ಆಟಕೆ ಕುದ್ದಕೆತ್. ಆಟ ಆಡಿಕಕೆಂಡ್ ಇರ್‌ಕನ ಕಂಕಭಟ್ಟ ಹೇಳ್ತ್. 'ಕುರುಸೈನ್ಯನ ಗೆಲ್ಲಿಕೆ ಉತ್ತರಂಗೆ ಸಾಧ್ಯ ಇಲ್ಲೆ. ಅಂವ ಇನ್ನೂ ಬಾಲಕ ಆ ಸೇನೆಲಿ ಒಬ್ಬಂದೊಬ್ಬ ಮೇಲಾದ ವೀರಾಧಿ ವೀರಕೆರೊಳೊ. ಹಾಂಗಾಗಿ ಬೃಹನ್ನಳೆನೇ ಯುದ್ಧಕೆಲಿ ಜಯಿಸಿದವಂತೇಳ್ದು ನಿಶ್ಚಯ! ವಿರಾಟಂಗೆ ಸಿಟ್ಟ್ ಬಾತ್. ಪರಾಕ್ರಮ ತೋರ್ಸಿಕೆ ಬಾಲಕ, ಪ್ರೌಢಂತೇಳುವ ಭೇದ ಉಟ್ಟೊ! ಸಿಂಹ ಸಣ್ಣ ಮೊರಿಯಾಗಿದ್ದರೂ ಮದ್ದಾನೆನ ನೆತ್ತಿನ ಮೇಲೆ ಹಾರಿ ಅದರ ಸೀಳ್‌ದ್‌ಲೆನೋ? ಸಿಂಹದ ಮೊರಿ ಹಾಂಗೆ ಮಾಡ್ದೇನೋ ಸಕೆಯಾಗಿರ್‍ದು. ಆದರೆ ಕುರಿಮೊರಿ ಹಾಂಗೆ ಮಾಡ್ದು?ಂತ ಹೇಳಿಕೆ ತೀರ್‍ದೋ' ವಿರಾಟಂಗೆ ತುಂಬ ಕೋಪ ಬಾತ್. ಕಂಕಭಟ್ಟ ರಾಜಕುಮಾರಂಗೂ ತನಗೂ ಇಬ್ಬರಿಗೂ ಸೇರಿಯೇ ಅವಮಾನ ಮಾಡ್ತ್‌ಂತ, ಪಗಡೆನ ದಾಳಗಳ ಬೀಸಿ ಅವನ ಹಣೆಗೆ ಇಟ್ಟಕೆತ್. ಅವನ ಹಣೆ ಒಡ್ದ್ ಸರಸರಂದ್ ನೆತ್ತ್‌ರ್ ಸುರಿಯಕೆ ಸುರಾತ್. ಸೈರಂಧ್ರಿ ವೇಷಕೆಲಿದ್ದ ದ್ರೌಪದಿ ಕೂಡಲೆ ಬಂದ್ ಕಂಕ ಭಟ್ಟನ ಹಣೆಂದ ಹರಿವ ಈ ನೆತ್ತ್‌ರನ ತನ್ನ ಸೆರ್‌ಂಗ್‌ಲಿ ಒಡ್ಡಿ ಅದ್ ನೆಲಕೆ ಬೀಳದಾಂಗೆ ತಡ್ತ್. ಯಾರಾರ್ ತನ್ನ ಅಣ್ಣನ ಸಕೆರ್‍ರಂದ ಎರ್ಡ್ ಹನಿ ನೆತ್ತ್‌ರ್‌ನಾರೂ ಭೂಮಿಗೆ ಬೀಳುವಾಂಗೆ ಮಾಡಿರೆ ನಾ ಅವರ ಕೊಲ್ಲದೆ ಬುಡಿಕಿಲೆಂತ ಅರ್ಜುನ ಹಿಂದೆ ಶಪಥ ಮಾಡಿತ್ತ್. ತಾವ್ಗೆ ಆಶ್ರಯ ಕೊಟ್ಟ ರಾಜನ್‌ನೇ ಕೊಲ್ಲುವಂತ ಘೋರ ಕೃತ್ಯ ನಡ್ದ್ ಹೋತಿತ್ತ್. ದ್ರೌಪದಿನ ಮುಂಜಾಗೃತೆಂದ ಅದ್ ತೊಪ್ಪಿತ್.

ಅಷ್ಟರ್‍ಲಿ ಉತ್ತರನ ರಥ ಅರಮನೆನ ಬಾಗ್‌ಲಿಗೆ ಬಂದೆತ್ತಿತ್ತ್. ಹೆಣ್ಮಕಳ ತಂಡ ಆರತಕ್ಷತೆಗಳ ಹಿಡ್ಕಂಡ್, ಉತ್ತರಂಗೆ ಆರತಿ ಬೆಳ್ಗಿಕೆ ನೋಡ್‌ಕನ ಅದರ ತಡ್ದ್, ಅರ್ಜುನನ ಕಡೆಗೆ ಕೈ ತೋರಿಸಿ ಅವಂಗೆ ಆರತಿ ಬೆಳ್ಗಿಕೆ ಹೇಳ್ತ್. ಮತ್ತೆ ವಿರಾಟನ ಹಕ್ಕಲೆ ಹೋಗಿ ಹೇಳ್ತ್. "ಅಪ್ಪ! ಇಂದ್ ನನ್ನ ತಲೆಗಾದ ಮಹಾತ್ಮ ಇವನೇ ಅಪ್ಪ ಬೃಹನ್ನಳೆ ವೇಷಕೆಲಿದ್ದ ಮಧ್ಯಮ ಕೌಂತೇಯನಾಗಿರುವ ಮೂರುಲೋಕದ ವೀರ ಅರ್ಜುನ. ನೀವ್ಗೆ ಪುರೋಹಿತನ ವೇಷಕೆಲಿದ್ದ್ ಪಗಡೆಯಾಟದ ಸಂಗಾತಿಯಾಗಿರುವ ಕಂಕಭಟ್ಟನೇ ಮಹಾತ್ಮನಾದ ಮಹಾಜ್ಞಾನಿಯಾದ ಯುಧಿಷ್ಠಿರ, ಪಾಂಡವರ ಹಿರಿಯಣ್ಣ– ರಾಜಸೂಯ ಯಾಗ

ಮಾಷ್ಟ ಸಾರ್ವಭೌಮ. ಇನ್ನ್ ಬಾಣಸದ ಮನೆನ ಅಧ್ಯಕ್ಷನಾಗಿರುವ ವಲಲನೇ ಜೆಟ್ಟಿಗನೂ ತನ್ನ ಸೋದರರ ಎಂತ ಅಪಾಯಂದಲೀಳೂ ರಕ್ಷಿಸುವ ಬಾಹುಬಲಶಾಲಿ, ಭೀಮಸೇನ. ಗೋಪಾಲಾಧ್ಯಕ್ಷನೂ ಕುದುರೆ ಸಾಹಿಣಿಯಾಗಿರೊವ್ರು, ನಕುಲ ಮತ್ತೆ ಸಹದೇವಂತೇಳ್ದ ಯಮಳಲೀರ್ ಮಾದ್ರೇಯಲೀರ್; ಅಂತಃಪುರಲೀಲಿ ಸೈರಂಧ್ರಿ ವೇಷಲಿ ಸುಗಂಧ ವಸ್ತುಗಳ ತಯಾರ್ಲಿಕಲೀಂಡ್ ಇದ್ದಲೀದ್,ಈ ಐವಲೀರ್ ಮಹಾತ್ಮರ ಮಹಾದೇವಿ, ದ್ರುಪದ ಪುತ್ರಿ, ದ್ರೌಪದಿ. ಹೀಂಗೆ ಉತ್ತರ ಅರ್ಜುನಂದ ಕೇಳಿ ತಿಳ್ದ ಎಲ್ಲ ವಿಚಾರಗಳ ಹೇಳ್ದರ ಕೇಳಿ ವಿರಾಟ, ಯುಧಿಷ್ಠಿರನ ಕಾಲಿಗೆ ಉದ್ದಂಡ ನಮಸ್ಕಾರ ಮಾಡ್ತ್. ಆನಂದದ ಕಣ್ಣೀರ್ ಹಾಕಲೀಂಡ್, ಮಹಾತ್ಮ ಯುಧಿಷ್ಠಿರ! ನೀ ನನ್ನ ಮೇಲ್ನ ಕರುಣೆಂದ, ನನ್ನ ರಾಜಧಾನಿಲಿ ನಿಮ್ಮ ಅಜ್ಞಾತ ವಾಸನ ಕಲೀಳಿಯಕೆ ಮನ್‌ಸ್ ಮಾಡ್ದ್ ನನ್ನ ಪುಣ್ಯ ವಿಶೇಷದ ಫಲ. ನನ್ನ ಜೆನ್ಮ, ಏಳೇಳ್ ಜೆನ್ಮಗಳವರೆಗೂ ಪಾವನ ಆತ್. ಹೀಂಗೆ ಅಪರಿಮಿತವಾದ ಸಂತೋಸುಲಿ, ಮುಳ್ಗ್ಯಂಡ್ ಎದ್ದ್‌ಕಲೀಂಡ್ ಇತ್ತ್. ಅವರೆಲ್ಲರ್ನೂ ಕರ್ದ್, ಎತ್ತರದ ಆಸನಗಳ್ಲಿ ಕುದ್ದ್‌ರ್ಸಿ ಫಲತಾಂಬೂಲ ಕೊಟ್ಟ್‌ಕಲೀಂಡ್, ದಾಸಿಯಲೀರ್ ಅಷ್ಕೆ ಗಾಳಿ ಬೀಸಿಕೆ ಏರ್ಪಾಡ್ ಮಾಡ್ತ್. ನಾಳೆ ಬೊಳ್ಪಾಕನ ನಗರನೆಲ್ಲ ಪೂರ್ತಿ ಸಿಂಗಾರ ಮಾಡೂಕುಂತ ಅಪ್ಪಣೆ ಮಾಡ್ತ್. ಹಾಂಗೇ ಅಂದ್ ರಾತ್ರಿಗೆ ಎಲ್ಲೊವ್ವ ಮೃಷ್ಟಾನ್ನ ಬೋಜನ ಉತ್ತಮ ಪಾನೀಯಗಳ ತಯಾರ್ಲೊಕುಂತೊಳೂ ಅಪ್ಪಣೆ ಮಾಡ್ತ್.

ರಾತ್ರಿನ ಭೋಜನ ಪಾನೀಯ ಪಾಂಡವರೊಟ್ಟಿಗೆ ಬಾರಿ ವೈಭವಂದ ನಡ್ತ್. ಪಾಂಡವಲೀರಿಗೆ ಒಳ್ಳೆ ಅನುಕೂಲ ಇರುವ ಪ್ರತ್ಯೇಕ ಪ್ರತ್ಯೇಕ ಶಯ್ಯಾಗೃಹಗಳ ವಿರಾಟ ಏರ್ಪಡಿಸಿತ್. ಸುಖನಿದ್ರೆ ಮಾಡಿ ಅವೆಲ್ಲವ್ರೂ ಬೊಳ್ಗೆ ಮಂಗಳ ವಾದ್ಯಗಳ ಗಾಯನಕ್ಕೆ ಎದ್ದೊ. ಪುಣ್ಯ ತೀರ್ಥಗಳ ತರ್ಸಿ ಅವೆಲ್ಲ ಅದರ್ಲಿ ಮಿಯ್ಯಾದ ಮೇಲೆ ರಾಜಭಂಡಾರಂದ ಅಷ್ಕೆ ದಿವ್ಯ ವಸ್ತ್ರಗಳ್ನೂ, ದಿವ್ಯಾಭರಣಗಳ್ನೂ, ರಾಜಕಿರೀಟಗಳ್ನೂ ತರ್ಸಿ ಕೊಟ್ಟ್. ಅವ್ರು ಅದರೆಲ್ಲ ಧರಿಸಿ ಆದ ಮೇಲೆ ಅವರ ನಗರದ ಪ್ರಮುಖ ಬೀದಿಗಳ್ಲಿ ರಥದ ಮೇಲೆ ಕುದ್ದ್‌ರ್ಸಿಕಲೀಂಡ್ ಮೆರವಣಿಗೆ ಕರ್ಕಲೀಂಡ್ ಹೋಗಿ, ದೇವಸ್ಥಾನನ ನೋಡಿ ದೇವ್ರಿಗೆ ಪೂಜಿಸಿ, ಹಿಂದೆ ಬಂದ್ ಅರಮನೆನ ಓಲಗ ಸಾಲೆಲಿ, ಯುಧಿಷ್ಠಿರಂಗೆ ಎತ್ತರದ ಸಿಂಹಾಸನ ಕೊಟ್ಟ್ ಅದರ್ಲಿ ಕುದ್ದ್ ಒಡ್ಡೋಲಗ ಕೊಡುವ ಹಾಂಗೆ ಮಾಡಿ ಸಂತೋಸು ಪಟ್ಟಲೀತ್. ತಾನೂ ಒಳ್ದ ಪಾಂಡವರೂ, ಮತ್ತೆ ಕೆಲವು ಸಾಮಂತ ರಾಜರೂ, ಕೆಲೊವ್ರು ಪ್ರಜಾಪ್ರಮುಖರೂ ಅವರವರ ಸ್ಥಾನಕ್ಕೆ ಸಲೀರಿಯಾದ ಆಸನಗಳ್ಲಿ ಕುದ್ದ್‌ಕಂಡೊ. ಸುರುಗೆ ಗಾಯನ, ನರ್ತನ ಎಲ್ಲ ನಡ್ದ್ ಎಲ್ಲೊವ್ವ ಸಂತೋಸಾತ್.

ಅದೆಲ್ಲ ಆದ ಮೇಲೆ ವಿರಾಟ ಬಿನ್ನಹ ಮಾಡ್ತ್. ಮಹಾಪ್ರಭು! ಬೇರೆ ರಾಜ್ಯಗಳ ಗಮನಕ್ಕೆ ತಾರದೆ ನಮ್ಮ ರಾಜಧಾನಿನೇ. ನಿಮ್ಮ ಅಜ್ಞಾತವಾಸನ ಕಲೀಳಿಯಕೆ ಆಯ್ಕೆ ಮಾಡಿಕಲೀಂಡಲೀದ್ ನಮ್ಮ ಪೂರ್ವಜನ್ಮದ ಪುಣ್ಯ. ನೀವು ನಡ್‌ದಾಡ್ದ ನೆಲ ದವಸ ಧಾನ್ಯಗಳ್ಂದ ಸಮೃದ್ಧಿಯಾಗುವ ಕಾರಣ, ವಿಧಿಯೇ ನೀವ್ಗ ವನವಾಸ ಮಾಡುವ ಅದೃಷ್ಟ ಉಂಟುಮಾಡ್ತ್ತೋ ಏನೋ. ನಿಮ್ಮ ಕಷ್ಟಗಳ ನೆನ್ಸಿ, ಬೇಸರ ಆವದೂ. ಆದರಾಂದ

ಜೇರೆವ್ಯಾದ ಉಪಕಾರನ ನೆನೆವರೆ ಸಂತೋಸು ಪಡೋಕಾದೆ. ಮುಂದೇ ನೀ ಸಾರ್ವಭೌಮ. ಹಾಂಗೆ ನೀನೇ ಅಧಿರಾಜ. ನನ್ನ ರಾಜ್ಯ, ಕೋಶ, ಸೇನೆ ಪರಿವಾರ, ಎಲ್ಲವೂ ನಿನ್ನದೇ. ನಾ ನಿನ್ನ ಅಧೀನ ರಾಜ. ನನ್ನ ಮನ್ಸ್‌ಲೊಂದು ದೊಡ್ಡ ಆಸೆ ಎದ್ದುಟು. ಅದೆಂದರೆ ನನ್ನ ಮಗ ಉತ್ತರೆನ ನಿನ್ನ ತಮ್ಮ ಅರ್ಜುನನ ಮಜ್ಜ ಅಭಿಮನ್ಯುಗೆ ಮೊದುವೆ ಮಾಡಿ ನಮ್ಮೆರ್ಡ್ ವಂಶಗಳ ಪ್ರೀತಿ-ಮೈತ್ರಿಗ ಶಾಶ್ವತವಾಗಿ ಇರುವ ಹಾಂಗೆ ಮಾಡೊಕುಂತ. ನೀ ಇದಿಕೆ ಒಪ್ಪಿಕಎಂಡರೆ ನನ್ನಷ್ಟ್ ಭಾಗ್ಯಶಾಲಿಯಾರೂ ಇಲ್ಲಂತ ಹೇಳಿ ಕೈ ಮುಗ್ದ್.

ವಿರಾಟನ ವಿನಯದ ಮಾತ್. ಎಲ್ಲೊಪ್ರಕೂ ಕುಶಿಕೊಟ್ಟಿಎತ್. ಯುಧಿಷ್ಠಿರ ನೆಗಾಡಿಕಎಂಡ್ ಹೇಳ್ತ್" ವಿರಾಟ! ನೀ ನಮ್ಮ ಕಷ್ಟ ಕಾಲಎಲಿ ಸಾಯ ಮಾಡ್ದಂವ. ಈ ಕಾಲಎಲಿ ಸಿಕ್ಕಿಬಿದ್ದರೆ, ಹಿಂದಕೆ ಹದಿಮೂರು ವರ್ಸಗಳ ಅವಧಿನ ಕಾಡ್‌ಲಿ ಮತ್ತೆ ಕಡೇವೊರ್ಸನ ಅಜ್ಞಾತವಾಸಎಲಿ ಕಎಳಿಯೊಕುಂತ ವೈರಿಗ ಶಪಥ ಹಾಕಿದ್ದೊ. ಅಂತಹ ಕಷ್ಟ ಕಾಲಲಿ ನಾವ್ಗ ಆರಾಮಎಲಿ ಅಡ್ಗ್ಯಂಡ್ ಇರಿಕೆ ಅವಕಾಶ ಮಾಡಿಕೊಟ್ಟ್ ಮಾಡ್ದ ಉಪಕಾರಕ್ಕೆ ನಾವು ಎಷ್ಟ್ ಕೃತಜ್ಞತೆನ ಸಲ್ಲಿಸಿರೂ ಸಾಲಎದ್. ನಮ್ಮಿಬ್ಬರ ನೊಡುವೆ ಅಧಿರಾಜ ಅಧೀನ ರಾಜಂತೇಳುವ ಅಂತರವೇ ಇಲ್ಲೆ. ಇಬ್ಬೊರೂ ಮಿತ್ರಎರ್. ಆ ಮೈತ್ರಿ ಇನ್ನಷ್ಟ್ ಗಎಟ್ಟಿ ಆವಾಂಗೆ ನಮ್ಮ ಕುಟುಂಬಗಳ ನೊಡುವೆ ವಿವಾಹ ಸಂಬಂಧ ನಡಿಯೊಕುಂತ ನೀನೇ ಹೇಳಿಯೊಳ. ನಂಗೆ ಅದ್ ಸಂಪೂರ್ಣ ಒಪ್ಪಿಗೆ. ನಾವೇ ನಿಶ್ಚೈಸುದಿಕೆ ಮುಂದೆ ನಾವ್ಗ ಪ್ರಾಣ ಸ್ವರೂಪನಾದ ಶ್ರೀಕೃಷ್ಣನ ಒಂದು ಮಾತ್ ಕೇಳಿ ಅವನ ಅಪ್ಪಣೆ ಪಡಿಯೊಕಾದ್ದ್ ನಮ್ಮ ಮೊದಲ ಕರ್ತವ್ಯ. ಹಾಂಗೆ ಇಂದೇ ದ್ವಾರಕೆಗೆ ಚಾರರ ಕಎಳ್ಸಿ, ಶ್ರೀಕೃಷ್ಣನ ಇಲ್ಲಿಗೆ ಬಾಕೆ ಮಾಡಿನೆ. ಮತ್ತೆ ಎಲ್ಲದರ್ನೂ ನಿಶ್ಚಯ ಮಾಡೊನೊ." ವಿರಾಟನ ಹೃದಯ ಓಗ್ಗಿತ್. ಶ್ರೀಕೃಷ್ಣ ನಮ್ಮ ನಗರಕ್ಕೆ ಬಂದದೆಂತೇಳ್ದು. ಅವಂಗೆ ತುಂಬ ಸಂತೋಸು ಉಂಟು ಮಾಡ್ತ್. ಅಂವ ಆ ದಿನನ ಭಾರಿ ಸಂಭ್ರಮಲಿ ಎದ್‌ರ್ ನೋಡಿಕಎಂಡ್ ಇತ್ತ್. ಯುಧಿಷ್ಠಿರ ತಮ್ಮ ಕ್ಷೇಮ ಸಮಾಚಾರ ತಿಳಿಸಿ ಕ್ಷೇಮಂದ ಅಜ್ಞಾತವಾಸನ ಮುಗ್ಸಿದ್, ಉತ್ತರೆನ ಅಭಿಮನ್ಯುಗೆ ಮೊದುವೆ ಮಾಡುವ ವಿರಾಟನ ಆಸೆ, ಅದ್ದರ್‌ಂದ ಸುಭದ್ರೆನೂ ಅಭಿಮನ್ಯುನೂ ಜತೆಲಿ ಕರ್ಕಂಡ್ ಬಂದ್ ಈ ಶುಭಕಾರ್ಯನ ನೆರವೇರ್ಸಿ ಕೊಡೊಕುಂತ ಕಾಗದ ಬರ್ದ್, ಚಾರರ ಕೈಲಿ ಕಎಳ್ಸಿ ಕೊಟ್ಟಿಎತ್. ಹಜ್ಜ ದಿನಎಲಿ ಶ್ರೀ ಕೃಷ್ಣ ಅಭಿಮನ್ಯು ಮತ್ತೆ ಸುಭದ್ರೆ ಸಮೇತ ವಿರಾಟ ನಗರಿಗೆ ಬಂದ್ ಮುಟ್ಟಿತ್. ಪಾಂಡವರೂ ವಿರಾಟನೂ ಹೋಗಿ ಸಂಭ್ರಮಲಿ ಎದ್‌ರ್ಗಂಡೊ. ಎಷ್ಟೋ ಸಮಯಂದ ಕೃಷ್ಣನ ನೋಡದಿದ್ದ ಪಾಂಡವಎರಿಗೆ ಕೃಷ್ಣನ ನೋಡ್‌ದಷ್ಟೂ ತೀರದ್, ಮಾತಾಡ್‌ದಷ್ಟೂ ಮುಗಿಯದ್‌ಂತ ಹೇಳುವ ಅವಸ್ಥೆ. ಅಂದ್ ಇರ್ಲಿಡೀ ಅವೆಲ್ಲ ಕೃಷ್ಣನ ಸುತ್ತ ಕುದ್ದ್‌ಕಎಂಡೇ ಕಾಲಕಳ್ದೊ. ಅಭಿಮನ್ಯು ಒಮ್ಮೆ ದೊಡ್ಡಮ್ಮ ದ್ರೌಪದಿನಕ್ಕಲೆ ಮತ್ತೊಮ್ಮೆ ಅಪ್ಪ ಅರ್ಜುನಕ್ಕಲೆ ಮಾತಾಡಿಕೆ ಹೋತಿತ್ತ್. ದೊಡ್ಡಮ್ಮ ಉತ್ತರೆನ ಸುದ್ದಿ ಹೇಳಿ ಅವನ ನೆಗಾಡ್‌ಸ್‌ತಿತ್ತ್. ಕಿರೀಟಿವೆ ಹೇಂಗುಟ್ಟುತ ಕೇಳಿ, ಇಷ್ಟ್ ಸಮಯ ಆತ್; ಇನ್ನೂ ನಾವ್ಗೊಂದು ಪಿಳ್ಳಿ ಆತ್‌ಲಲಂತ ನಾವ್ಗೆ ಬೇಜಾರಂತ ಹೇಳ್‌ತ್ತಿತ್ತ್. ಅದಿಕೆ ಅಭಿಮನ್ಯು "ದೊಡ್ಡಮ್ಮ, ನನ್ನ ಅಮ್ಮಂದಎರ್

ಬೇಗ ಅಜ್ಜಿಕ ಆಕೆ ಆಗಲೇದ್‌ಂತ ನನ್ನ ಆಸೆಂತ ಹೇಳಿ ನೆಗಾಡ್‌ತ್ತಿತ್ತ್. ದ್ರೌಪದಿನೂ ನೆಗಾಡ್‌ತ್ತಿತ್ತ್. ದ್ರೌಪದಿ ಎಲ್ಲಿಯಾರ್ ಕುದ್ದ್‌ಕಣಂಡ್ ಇರುದರ ನೋಡಿರೆ ಅಭಿಮನ್ಯು ಓಡಿ ಬಂದ್ ಅವರ ತೊಡೆ ಮೇಲೆ ತಲೆ ಇಸಿ ನಾ ಹಣ್ಣು ನಿದ್ದೆ ಮಾಡ್ನೆ ದೊಡ್ಡಮ್ಮಂತ ಹೇಳಿ ಕಣ್ಣ್ ಮುಚ್ಚಿ ಗೂರೆಳಿವಾಂಗೆ ನಟನೆ ಮಾಡ್ದು. ಹಗ್‌ಲ್‌ಲೇಸ್ ಮಜ್ಜ ನಿದ್ದೆ? ರಾತ್ರೆ ಏನ್ ನಿದ್ದೆ ಮಾಡ್‌ದ್‌ಲೆನೋ?ಂತ ಕಣ್ಣ್ ಮಿಣ್‌ಕ್‌ಸಿ ಕೇಳ್‌ತ್ತಿತ್ತ್. ಹೀಂಗೇ ಹತ್ತು ದಿನ ಕಳೆಯಕನ ಹಿರಯೊವೆಲ್ಲ ಸೇರಿ, ಜೋಯಿಸರ ಕರ್ಸಿ, ಶುಭದಿನ, ಶುಭ ಮುಹೂರ್ತಲಿ, ರಾಜಕುಮಾರಿ ಉತ್ತರೆಗೂ, ಅಭಿಮನ್ಯುಗೂ ಮೊದುವೆಂತ ನಿಶ್ಚಯ ಮಾಡ್ದೊ. ಆ ದಿನ ವಿರಾಟ ತನ್ನ ಮಗಳ ವೈಭವಂದ ಅಭಿಮನ್ಯುಗೆ ಧಾರೆ ಹೊಯ್ದ್ ಮೊದುವೆ ಮಾಡಿ ಕೊಟ್ಟಲೆತ್. ಕೃಷ್ಣನೂ, ಯುಧಿಷ್ಠಿರನೂ ಹೊಸ ಮೊದ್ ಮಕ್ಕಳ ವಹಿಸಿಕಣಂಡ್ ತಮ್ಮ ಮಂಟಪಕೆ ಕರ್ಕಂಡ್ ಬಂದೊ. ಆರತಿ ಮಾಡ್ದೊ. ಅಜ್ಜಿಕ ಸೋಬಾನೆ ಹೇಳ್ದೊ. ಮೊದ್ ಮಕ್ಕಳಿಗೆ ಹಾಲ್ ಹಣ್ಣ್ ಕೊಟ್ಟೊ. ಇನ್ನ್ ಮುಂದೆ ದೊಡ್ಡ ಯುದ್ಧ ಸುರಾವ ಸಂಭವ ಇದ್ದ್, ಯಾವ ಶುಭ ಕಾರ್ಯಗ ನಡ್ಸಿಕೂ ವ್ಯವಧಾನ ಇರಿಕಿಲೆಂತೇಳುವ ಕಾರಣ, ಅಂದೇ ನಕ್ಷತ್ರ ಮುಹೂರ್ತಗ ಸಲಿರಿ ಇದ್ದುದರ್‌ಂದ, ಅಂದೇ ಅವ್ಕ ಶೋಭನ ಪ್ರಸ್ತದ ಏರ್ಪಾಡೂ ಮಾಡ್ದೊ. ಅಭಿಮನ್ಯು ಮತ್ತು ಉತ್ತರೆನ ಜೀವನ ಸಂತೋಸುಲಿ ಆರಂಭ ಆತ್.

## ಯುದ್ಧ ಪೂರ್ವೋದ್ಯೋಗ

ಅಭಿಮನ್ಯು-ಉತ್ತರೆನ ಮೊದುವೆ ಕಾರ್ಯಗ ಎಲ್ಲ ಪೊರ್ಲುಗ ನಡ್ದ್ ಬಂಧು ಬಳಗಕ್ಕೆಲ್ಲ ಸಂತೋಸೇ ಸಂತೋಸು. ಹತ್ತು ದಿನ ವಿರಾಟನ ರಾಜಧಾನಿಲಿ ಹಬ್ಬದ ಸಡಗರವೇ ಇತ್ತ್. ಪುರಜನಂಗ ಮೊದ್ ಮಕ್ಕಳ ನೋಡುವ ಸಡಗರಂದ ಬಾತಿದ್ದೊ. ಅವರೊಟ್ಟಿಗೆ ಅವ್ಕ ಶ್ರೀಕೃಷ್ಣನಂತ ಮಹಿಮಾ ಪುರುಷನ ದರ್ಶನ ಭಾಗ್ಯದ ಲಾಭನೂ ಆತಿತ್ತ್. ಹಾಂಗೆ ವಿರಾಟನ ಅರಮನೆಲಿ ಯಾಗೋಳೂ ಜೆನ ಜಾತ್ರೆ ನಡಿಯತಿತ್ತ್. ಇದೆಲ್ಲ ಆಗಿ ಹತ್ತು ದಿನ ಕಳ್ದ್ ಶ್ರೀಕೃಷ್ಣ ದ್ವಾರಕೆಗೆ ವಾಪಾಸಾತ್. ಪಾಂಡವರ್ ವಿರಾಟನಗರಲೇ, ರಾಜರಾಂಗೇ ಇದ್ದೊ. ಅವರ ಹಿಂದೆನ ಸಾಮಂತ ಅರ್ಸಲೆರೆಲ್ಲ ಅವರ ಗೌರವಲಿ ಒಲೈಸ್‌ತಿದ್ದೊ. ವಿರಾಟನಂತೂ ಅವರ ಹೊಸ ಸಾಮಂತನಾಂಗೆ ತನ್ನ ರಾಜ್ಯ, ಕೋಶ ಎಲ್ಲ ಯುಧಿಷ್ಠಿರಂಗೇ ಸೇರ್ದ್‌ಂತ ಹೇಳ್ತ ಭಕ್ತಿ ಗೌರವ ತೋರ್ಸ್‌ತಿತ್ತ್. ಪಾಂಡವಲೆರ್, ತಾವು ಒಪ್ಪಿದ ನಿಬಂಧನೆನೆಲ್ಲ ಪೂರೈಸಿಯಾಗಿತ್ತ್. ಇನ್ನ್ ಕೌರವಲೆರ್ ತಮ್ಮ ಕರ್ಸಿ, ಹಿಂದೆ ತಮ್ಮಂದ ಎಳ್ಕಂಡ ರಾಜ್ಯ ಕೋಶಗಳ ಹಿಂದೆ ಕೊಡುದು ಮಾತ್ರ ಬಾಕಿ. ಹಾಂಗೆ ಹಸ್ತಿನಾವತಿಂದ ಇಂದ್ ಕರೆ ಬಾದು, ನಾಳೆ ಬಾದುಂತ ಕಾದ್‌ಕಣಂಡೇ ಇದ್ದೊ. ಆದರೆ ಎಷ್ಟ್ ದಿನ ಕಾದರೂ ಆ ಸುದ್ದಿಯೇ ಇಲ್ಲೆ. ಅಲ್ಲದೆ ಪಾಂಡವಲೆರ್ ಅಜ್ಞಾತವಾಸದ ನಿಬಂಧನೆನ ಮೀರ್‍ದೊಳೊ. ಅವಧಿಗೆ ಮುಂದೆನೇ ಪ್ರಕಟವಾಗೊಳೊ.

ಹಾಂಗೆ ಅವ್ರು ಹಿಂದಕೆ ಕಾಡಿಗೆ ಹೋಕು. ಆ ಮೇಲೆ ಕಡೆಗೆ ಒಂದು ವೊರ್ಸದ ಅಜ್ಞಾತ ವಾಸ ಮಾಡೊಕುಂತೆಲ್ಲ ಪ್ರಚಾರ ಮಾಡ್ರೊ. ಆದರೆ ಭೀಷ್ಮ ದ್ರೋಣರ್ ಮಾತ್ರ ಅಲ್ಲ. ನಾಡ್‌ಲಿದ್ದ ಪ್ರಖ್ಯಾತ ಜ್ಯೋತಿಷ್ಕರೆಲ್ಲ ಪಾಂಡವಱ್ ನಿಬಂಧನೆನ ಸಱಿಯಾಗಿ ಪಾಲನೆ ಮಾಡಿಯಾಳೊಂತ ಸಮರ್ಥನೆ ಮಾಡ್ದೊ.

ಇಷ್ಟಾಕನ ಕೌರವಱ್ ಬೇರೆ ಬೇರೆ ಕಡೆಗೆ ಹೋಗಿ ಅಲ್ಲಿನ ರಾಜಱ್‌ಗಳೊಟ್ಟಿಗೆ ಮೈತ್ರಿ ಒಪ್ಪಂದ ಮಾಡಿಕಂಡವೆಂತ ಗುಪ್ತಚಾರರ್ ಸುದ್ದಿ ತಂದೊ. ಯುದ್ಧ ಮಾಡಿ ಅಲ್ಲದೆ ದುರ್ಯೋಧನ ರಾಜ್ಯ ಬುಟ್ಟ್ ಕೊಡುವ ಹಾಂಗೆ ಕಾಂಬುದುಲೆ. ಹಾಂಗೆ ನಾವೂ ಅದೇ ದಾರಿನ ಅನುಸರ್ಸೊಕಾದೆಂತ ತಮ್ಮಂದರೊಟ್ಟಿಗೆ ಮಾತಾಡಿ, ಮುಂದೆ ಶ್ರೀಕೃಷ್ಣ ನಮ್ಮ ಪಕ್ಷಲಿ ಇರುವ ಹಾಂಗೆ ಮಾಡೊಕು. ಹಾಂಗೆ ಅರ್ಜುನ ಇಂದೇ ದ್ವಾರಕೆಗೆ ಹೋರ್ಟ್ ಶ್ರೀಕೃಷ್ಣನ ಒಲ್ಸಿಕಱಂಡ್ ಬರೊಕುಂತ ಅಭಿಪ್ರಾಯ ಪಟ್ರೊ. ಹಾಂಗೆ ಅರ್ಜುನ ರಥ ಹತ್ತಿ ಅಂದೇ ದ್ವಾರಕೆಗೆ ವೇಗವಾಗಿ ಹೋತು.

ಅರ್ಜುನ ದ್ವಾರಕೆಗೆ ತಲ್ಪಿ, ರಾಜಗೃಹನ ಹುಕ್ಕಱ್. ಆಗ ಶ್ರೀಕೃಷ್ಣ ಮಲ್ಗಿ ನಿದ್ದೆ ಮಾಡಿಕಱಂಡ್ ಇತ್ತ್. ಹರಿನ ನಿದ್ದೆ ಕೆಡ್ಸುದು ಸಱಿ ಅಲ್ಲಂತ ಅರ್ಜುನ ಅವನ ಕಾಲ್‌ನ ಕಡೆಗೆ ಕುದ್ದ್‌ಕಱಂಡ್ ಅವನ ಪಾದಗಳ ಒತ್ತಿಕಱಂಡ್ ಇತ್ತ್. ಹಜ್ಜ್ ಹೊತ್ತಿಗೆ ದುರ್ಯೋಧನನೂ ಅಲ್ಲಿಗೆ ಬಂದತ್ತಿ ಅಂವ ತಲೆ ಕಡೆಗೆ ದರ್ಪಲಿ ಕುದ್ದಱ್. ಹೀಂಗೆ ಹಜ್ಜ್ ಹೊತ್ತು ಕಱ್ಳ್. ಕೃಷ್ಣ ತನ್ನ ಕಪಟ ನಿದ್ದೆಂದ, ಮೈಮುರ್ದ್ ಆಕಱ್ಳಿಕಱಂಡ್ ಎದ್ದ್, ಸುರುಗೆ ಅರ್ಜುನನ ನೋಡಿ, “ಅರ್ಜುನ! ಯಾಗ ಬಂದ? ನೀವೆಲ್ಲ ಸೂಪ್ರಕ್ಸನೋಂತ” ಉಪಚಾರದ ಮಾತಾಡ್ತ್. ಅಷ್ಟೊತ್ತಿಗೆ ತಲೆಕಡೆಂದ “ಹುಂ”ತೇನೋ ಸದ್ದಾಗಿ ತಿರ್ಗಿ ನೋಡ್ತ್. ದುರ್ಯೋಧನನ ನೋಡಿ ಆಶ್ಚರ್ಯ ಪಟ್ಟವರಾಂಗೆ, “ಓ! ಕುರುಕುಲ ಸಾರ್ವಭೌಮಱ್! ಎಂದೂ ಬಾರದೊವು ಇಂದ್ ಬಂದೊಳೊರಿ. ಅದೂ ಅಣ್ಣ ತಮ್ಮಂದಱ್ ಇಬ್ರೊರೂ ಒಟ್ಟಾಗಿ ಬಂದೊಳೊರಿ. ನಿಮ್ಮ ಇತ್ತಂಡಕ್ಕೂ ರಾಜಕೀಯ ಸಹಮತ ಉಂಟಾತೋ? ಸಂತೋಷ. ಹಾಂಗಾದರೆ ನಮ್ಮಷ್ಟ್ ಸಂತೋಸು ಪಡೊವು ಬೇರೆ ಯಾರೂ ಇರಿಕಿಲ್ಲೆ. ಸುಮ್ಮನೆ ಕಿಸ್‌ಲೋಟೆ ವಿಸಯಲಿ ಅಣ್ಣ ತಮ್ಮಂದಱ್ ಜಗಳಾಡುದು ಯಾರಿಗೆ ಪೊರ್ಲು ಅಲ್ಲ?” ಕೃಷ್ಣ ಹೇಳ್ತ್. ಅದಿಕೆ ದುರ್ಯೋಧನ, “ಕೃಷ್ಣ, ನೀ ಭಾವತನಂದ ನಮ್ಮ ಹಾಸ್ಯ ಮಾಡಿಕೆ ನೋಡಿಯ. ನಾ ನಿಜ ಸಂಗತಿ ಹೇಳ್ನೆ, ನಮ್ಮೊಳಗೆ ರಾಜಕೀಯ ಸಹಮತ ಉಂಟಾತೋಂತ ಕೇಳ್ದ. ಹೌದು ಸಹಮತ ಉಂಟಾಗುಟು. ಅಂದರೆ ಎರ್ಡ್ ಕಡೆವೂ ಯುದ್ಧ ಕಳಱಲಿ ಎದುರಾದುಂತ. ನೀವು ಯಾದವಱ್ ನಾವ್ಗೆ ಮುಂದೆಂದಳೇ ನಂಟ್ರ್. ಹಾಂಗೆ ಈ ಯುದ್ಧಲಿ ಭಾಗವಹಿಸಿ ನಮ್ಮ ಗೆಲ್ಸಿ ಕೊಡೊಕುಂತ ಕೇಳಿಕೆ ನಾವು ಬಂದ ಉದ್ದೇಸ”.

“ದುರ್ಯೋಧನ, ನಂಗೆ ಸಣ್ಣಿತರ್‌ಂದಳೇ ಯುದ್ಧ ಮಾಡಿ ಮಾಡಿ, ಸಾಕಾಗುಟು. ಎಷ್ಟೋ ರಕ್ಕಸರ ಕೊಂದ್ ನನ್ನ ಚಕ್ರನೂ ಮೊಂಡ್‌ಗಱ್ಟುಟು. ನಾ ಯುದ್ಧ ಮಾಡಿಕಿಲೆ. ಹೀಂಗೆ ನನ್ನ ಚತುರಂಗ ಸೇನೆ ಒಂದು ಕಡೆಗೆ. ಮತ್ತೊಂದು ಕಡೆಗೆ ಕೆಲ್ಸಕ್ಕೆ ಬಾರದ ನಾ.

ನೀವಿಬ್ಬರೂ ನಾವ್ಗೆ ಸಮ ಆದರ್ಂದ ಈ ಎರ್ಡ್ ಪಾಲ್ ಮಾಡಿ ಒಂದೊಂದು ತಂಡಕ್ಕೆ ಪಾಲ್. ನಾ ಸುರುಗೆ ಇಂದ್ ನೋಡ್ಡ್ ಅರ್ಜುನನ. ಅಲ್ಲದೆ ಅಂವ ನಿಂಗೆ ಕಿರಿಯ. ಹಾಂಗೆ ಬೇಕಾದೊದರ ಆಯ್ಕೆ ಮಾಡುವ ಸರದಿ ಅವಂದ್. ಹೇಳ್ ಅರ್ಜುನ! ನೀ ಯಾರ ಆಯ್ಕೆ ಮಾಡಿಕಂಡಿಯಂತ ಕೃಷ್ಣ ಅರ್ಜುನನ ಕೇಳ್ತ್. ಅದಿಕೆ ಅರ್ಜುನ ಹೇಳ್ತ್. "ಗೋವಿಂದ! ವನವಾಸ ಕಳ್ಡ್ ಬಂದ್ ಬಡವಟಾದ ನಾವ್ಗೆ ಚತುರಂಗ ಸೈನ್ಯನ ಸಾಂಕುವ ತ್ರಾಣ ನಾವ್ಗಿಲ್ಲೆ. ಪಾಪದ ನಾವ್ಗೆ ನೀ ಒಬ್ಬನೇ ಸಿಕ್ಕಿರೆ ಸಾಕ್ಂತ" ಉತ್ತರ ಕೊಟ್ಟಟ್. ಕೃಷ್ಣ "ದುರ್ಯೋಧನ, ನನ್ನಷ್ಟೆ ಬಲಶಾಲಿಯಾದ ನನ್ನ ತಮ್ಮ ಕೃತವರ್ಮನ ನೇತೃತ್ವತ್ಲಿ, ತೊಂಬತ್ತಾರ್ ಸಾವಿರ, ನನ್ನ ಒಡನಾಡಿಗಳಾಗಿದ್ದ ಗೋಪಕುಮಾರರ್ನೂ, ತಕ್ಕ ಆನೆ, ಕುದುರೆಗಳ್ನೂ ನಿಂಗೆ ಕೊಟ್ಟನೆ. ನೀ ಅವರ ಕರ್ಕಂಡ್ ಹೋಗು"ಂತ ಹೇಳ್ತ್. ದುರ್ಯೋಧನಂಗೆ ಕುಶಿ ಆತ್. ಅಂವ ಸಂತೃಪ್ತಿಲಿ ಆ ಸೇನೆನ ಕರ್ಕಂಡ್ ಹಸ್ತಿನಾವತಿಗೆ ಹೋತು.

ಕೃಷ್ಣ ಮತ್ತೆ ಅರ್ಜುನನ ಹಾಸ್ಯ ಮಾಡಿಕೆ ಕೇಳ್ತ್: ನಿನ್ನ ಅಣ್ಣಂದಟ್ ಮತ್ತೆ ತಮ್ಮಂದಟ್. ನೀ ಮಾಡ್ದ ಮುಟ್ಠಾಳ ಬುದ್ಧಿಗೆ ಏನ್ ಹೇಳುವೆನೋ ಏನೋ? ಕೆಲ್ಸ ಮಾಡದ ಉಂಡಾಡಿಯಾದ ನನ್ನಂದ ನೀವ್ಗೆ ಏನ್ ಪ್ರಯೋಜನ? ದೇವರ ದೇವ! ನೀ ನನ್ನ ಹಾಸ್ಯ ಮಾಡಿಯ. ನೀನೇ ನಮ್ಮ ಪ್ರಾಣ; ಉಸುರು, ಸರ್ವಸ್ವ. ನೀ ಇಲ್ಲದಿದ್ದರೆ ನಾವಿಲ್ಲೆ. ಶರೀರನ ಪಂಚೇಂದ್ರಿಯಗ ಬುದ್ಧಿನ ಅಂಕಿತಟ್ಲಿರುವಾಂಗೆ ನಾವು ಐದು ಜೆನವೂ ನಿನ್ನ ಅಧೀನ. ನೀ ಸರ್ವಜ್ಞ; ನಾವು ಮಂದ ಬುದ್ಧಿಯಟ್ವು. ನೀನೇ ನಮ್ಮ ಉದ್ಧರ್ಸೊಕು. ನೀ ಯುದ್ಧ ಮಾಡುವ ಅಗತ್ಯ ಇಲ್ಲೆ, ನಮ್ಮಂದ ಯುದ್ಧ ಮಾಡ್ಸ್. ನಾವ್ಗೆ ಜಯತಂದ್ ಕೊಡು. ನೀ ನನ್ನ ತೇರ್‌ನ ಸಾರಥಿಯಾಗಿ ನನ್ನ ಬೊದ್ಕುಸೊಕುಂತ ನಾ ನಿನ್ನ ಕಾಲಿಗೆರ್‌ಗಿ ಬೇಡಿಕಣೆಂತ ಅರ್ಜುನ ಕೈ ಮುಗ್ದ್, ತಲೆ ಬೊಗ್ಗ್ಸಿ ನಿತ್ತಟ್.

ಕೃಷ್ಣ ಅರ್ಜುನನ ವಿನಯನ ಮೆಚ್ಚಿತ್. ಒಪ್ಪಿದೆ. ನಾ ನಿನ್ನ ತೇರ್‌ನ ಸಾರಥಿ ಆನೆ. ಹೆದ್‌ರ್ ಬೇಡ. ಈಗ ವಿರಾಟ ನಗರಿಗೆ ಹೋಗಿ ನಿನ್ನ ಸೋದರರ ನೋಡಿ, ಸಮಾಲೋಚನೆ ಮಾಡೊನೊ. ಮತ್ತೆನ ಕಾರ್ಯ ಮತ್ತೆ. ಹಾಂಗೆ ಅವಿಬ್ಬರೂ ತಮಾಸೆನ ಮಾತಾಡಿಕಟ್ಂಡ್ ವಿರಾಟ ನಗರಿಗೆ ಬಂದೊ.

ವಿರಾಟನೂ ಪಾಂಡವಟ್ರೂ ಅರ್ಜುನನೊಟ್ಟಿಗೆ ಶ್ರೀ ಕೃಷ್ಣ ಬಾದೊರ ಕೇಳಿ ಎದ್‌ರ್ ಬಂದ್ ಅವರ ಅರಮನೆಗೆ ಆದರಂದ ಕರ್ಕಂಡ್ ಹೋಗಿ, ಸ್ನಾನ ಮತ್ತೆ ಊಟನೆಲ್ಲ ಮಾಡ್ಸಿ ಬಳಲಿಕೆನ ನಿವಾರ್ಸಿದ ಮೇಲೆ ಮಾತ್‌ಕತೆಯಾಡಿಕಟ್ಂಡ್ ಇದ್ದೊ.

ಯುಧಿಷ್ಠಿರ ಮಾತಿಗೆ ಸುರುಮಾಡ್ತ್: 'ಕೃಷ್ಣ! ವಾಸುದೇವ! ನಿನ್ನ ದಯಂದ ಹನ್ನೆರ್ಡ್ ವೊರ್ಸದ ವನವಾಸ, ಮತ್ತೆ ಒಂದು ವೊರ್ಸದ ಅಜ್ಞಾತವಾಸನ ಅಂಥ ತೊಂದರೆಯೇನೂ ಇಲ್ಲದೆ ಮುಗ್ಸಿ ಸುರಕ್ಷಿತವಾಗಿ ಬಂದೆ. ನಿರೀಕ್ಷಿಸಿದ್ದಾಂಗೆ ಕೌರವರ್ ನಮ್ಮ ರಾಜ್ಯ, ಕೋಶಗಳ ಹಿಂದೆ ಕೊಡುವ ಸುದ್ದಿಲೇ ಇಲ್ಲದಾಂಗೆ ಕಂಡದೆ. ನಾವು ಹೀಂಗೇ ಇದ್ದರೆ ಕೈಲಾಗದೊವ್ರುಂತ ಲೋಕದ ಜೆನರ ಅವಹೇಳನೆಗೆ ಗುರಿಯಾಕಾದೆ. ಇಂತ ಸಂದಿಗ್ಧ ಪರಿಸ್ಥಿತಿಲಿ ನೀನೇ

ನಾವ್ಗೆ ವಾರಿತೋರ್ಲೋಕುಂತ ನನ್ನ ಬಿನ್ನಹಂತ' ಹೇಳ್ತ್.

ಅದಿಕೆ ಕೃಷ್ಣ ಹೇಳ್ತ್: "ಸಮುದ್ರಕ್ಕೆ ನೀರ್ ತುಂಬುಸುದು, ಗಿರಿಗೆ ಮೋಣ್ಣ್ ಹೊರುದು ಅಗತ್ಯ ಉಟ್ಟುಂತಾದರೆ ನಿಂಗೆ ನಾ ಬುದ್ಧಿ ಹೇಳುವ ಅಗತ್ಯ ಉಟ್ಟುಂತಾದು. ಅಂತೂ ಲೋಕ ವ್ಯವಹಾರಲಿ ನೀ ಕೇಳ್ಟ. ನಾನೂ ನಂಗೆ ಕಂಡಟೀದರ ಲೋಕ ವ್ಯವಹಾರಟೀಲಿ ಹೇಳಿನೆ. ಕೌರವಟೀರ್ ನಿಮ್ಮ ಹಕ್ಕ್‌ನ ರಾಜ್ಯ ಕೋಶಗಳ, ಜೂಜಾಟದ ಒಪ್ಪಂದದ ಪ್ರಕಾರ ತಾವಾಗಿಯೇ ಓಂದ ಕೊಡುದುಲಂತ ಖಾತ್ರಿ ಆದೆ. ಭೀಷ್ಮ, ದ್ರೋಣಾದಿ, ಹಿರಿಯ ನಾಯಕರಿದ್ದರೂ, ಅವರ ಬುದ್ಧಿ ಮಾತ್‌ನ ಕೇಳದೆ, ಉದ್ಧಟತನಟೀಲಿ ದುರ್ಯೋಧನ ಸರ್ವಾಧಿಕಾರನ ಮಾಡ್ದೆ. ಇವನ ಮೂರ್ಖತನನ ತಡಿಯಕೆ, ಕುರುಡ ರಾಜ ತೀರಾ ಅಸಮರ್ಥ. ಹೀಂಗಿರ್ಕನ, 'ಚಾಟನಂ ಪ್ರತಿಚಾಟನಂ' ಅಂದರೆ ನಾವೂ ಅವ್ಕೆ ಯುದ್ಧ ಮೂಲಕನೇ ಉತ್ತರ ಕೊಡಕಾದ್ದ್ ಸರಿ. ಆದರೆ, ವೈರಿಗೂ ಒಂದು ಅವಕಾಶ ಕೊಟ್ಟು ನೋಡುದು ಧರ್ಮ. 'ಸಾರಿ ಸರ್ಪನ ಕೊಲ್ಲಟೀಕ್'ಂತ ಗಾದೆನೇ ಉಟ್ಟು. ಹಾಂಗೆ ಮುಂದೆ ನಾವು ಸಂಧಿಗೆ ಯತ್ನ ಮಾಡುದು ನ್ಯಾಯಂತ ನಂಗೆ ಕಂಡದಂತ ಹೇಳಿ ಕೃಷ್ಣ ಮಾತ್ ನಿಲ್ಸಿತ್. ಭೀಮಾದಿಗ ಏನಾದರೂ ಅವರ ಅಭಿಪ್ರಾಯನ ಹೇಳುವೆನೋಂತ ನೋಡಿಕೆ. ಭೀಮನ ಕಣ್ಣ್, ಮೋರೆಗಳ್ಲಿ ಕಿಚ್ಚಿ ಏದ್ದ್ ರ್‌ತಿತ್ತ್. "ಕೌರವಟೀರ್ ನಾವ್ಗೆ ಮಾಡ್ದ ಅನ್ಯಾಯ ಒಂದೋ ಎರ್ಡೋ? ವಿಷಕೊಟ್ಟ್, ಹಾವುಗಳ್‌ಂದ ಕಟೀಚ್ಚ್‌ಸಿದ್ ಕಟೀಲ್ಲ್ ಕಟ್ಟಿ ಗಂಗೆನ ಗಯಕ್ಕೆ ಎತ್ತಿ ಹಾಕಿದ್; ಅರ್ಕ್‌ನ ಮನೆಗೆ ಕಿಚ್ಚಿಕೊಟ್ಟ್, ಎಲ್ಲವರ್ನೂ ಒಮ್ಮೆಗೇ ಕೊಲ್ಲಿಕೆ ನೋಡ್‌ದ್; ವಂಚನೆನ ಜೂಜಾಡಿ, ರಾಜ್ಯ ಕೋಶಗಳ ಎಲ್ಲದರ್ನೂ ಎಳ್ಕಂಡಟೀದ್; ಪರಮ ಪತಿವ್ರತೆ, ರಾಜಸೂಯಾ ಯಾಗ ಪರಿಪೂತೆಯಾಗಿದ್ದ, ಅದರ್ಲೂ ಆದ್ ರಜಸ್ವಲೆಯಾಗಿದ್ದ ಕಾಲಟೀಲಿ ಅದರ ತಲೆಜುಟ್ಟುಲಿ ಹಿಡ್ದ ಸಭೆಗೆ ಎಳ್ಕಟೀಂಡ್ ಬಂದ್ ಅವಮಾನ ಮಾಡ್ದ್ ಅಲ್ಲದೆ ಅದರ ಸೀರೆ ಬಿಚ್ಚಿಕೆ ಪ್ರಯತ್ನ ಮಾಡ್ದ ಹೇಯಕೃತ್ಯನ ನಡ್ಸಿದ್; ಇಷ್ಟೆಲ್ಲ ಮಾಡ್ದವರ ಹೇಂಗ ಮೋರೆ ನೋಡುದು? ಹೇಂಗೆ ಅವರ ನಮ್ಮ ಜ್ಞಾತಿಗಂತ ಒಡನಾಡುದು? ಇಷ್ಟೆಲ್ಲ ಇದ್ದ್‌ಕಟೀಂಡ್ ನೀವು ಅವರೊಟ್ಟಿಗೆ ಮಾಡುವ ಸಂಧಿಂತ ಹೇಳಿರೆ, ಒಳೆಗೆ ಕಟೀಂತಿದ ಮುಳ್ಳು ತೆಗಿಯದೆ ಮೇಲೆ ಮೊದ್ದ್‌ನ ಲೇಪ ಹಾಕಿದಾಂಗೆ. ನೀವು ಮಾಡುವ ಸಂಧಿ, ನನ್ನ ಮಟ್ಟಿಗೆ ಜರಾಸಂಧನ ಸಂಧಿನಾಂಗೆ ತುಂಡಾಗದೆ ಇರಿಕಿಲ್ಲೆ.

ಯುಧಿಷ್ಠಿರನೂ ಕೃಷ್ಣನೂ ಭೀಮನ ಸಮಾಧಾನ ಮಾಡ್ರೊ. ನಾವೀಗ ಸಂಧಿಗೆ ಹೊರ್ಡುದುಂತೇಳಿರೆ ಲೋಕ ನಮ್ಮ ದೂರಿಕೆ ಆಗಟೀದ್‌ಂತೇಳುವ ಕಾರಣಕೆ. ನೀ ಮಾಡ್ದ ಪ್ರತಿಜ್ಞೆನ ನೀ ಸಂಪೂರ್ಣ ಪೂರೈಸುವ. ಆ ಸಮಯ ಬಂದೇ ಬಂದದೆ. ನಿಂಗೇನೂ ಚಿಂತೆ ಬೇಡ. ಸಟೀರಿ, ಇನ್ನ್ ಒಳ್ದವರ ಕೇಳೊನೊ. ಸಂಧಿನೋ ಸಮರನೋ? ಒಬ್ಬೊಬ್ಬೊನೂ ಯಾದ್ ಒಳ್ಳಟೀದ್‌ಂತ ಹೇಳಿಂತ, ಅರ್ಜುನ, ನಕುಲ, ಸಹದೇವರ ಒಬ್ಬೊಬ್ಬರ ಮೋರೆನ ಕೃಷ್ಣ ಪ್ರಶ್ನಾರ್ಥಕವಾಗಿ ನೋಡ್ತ್. ಅರ್ಜುನನೂ ನಕುಲನೂ ಸಂಧಿ ಮಾಡುದೇ ಒಳ್ಳಟೀದ್‌ಂತ ಒಪ್ಪಿಕಟೀಂಡೊ. ಸಹದೇವ ಮಾತ್ರ ನಂಗೆ ಸಂಧಿ ಆದು

ಬೇಡ. ಸಮರವೇ ಬೇಕುಂತ ಹೇಳ್ತ್.

ಕೃಷ್ಣಂಗೆ ಆಶ್ಚರ್ಯ ಏನೂ ಆತ್‌ಲೆ. ಅಂದರೆ ಪಾಂಡವಕ್ಕ್ ಕೌರವರ್‌ಂದ ಅನುಭವಿಸಿದ ಹಿಂಸನ ಪ್ರಮಾಣ ಆ ಮಟ್ಟಿಗಿತ್ತ್. ಈ ಸಂಧಿವಿಚಾರನ ದ್ರೌಪದಿ ಎಲ್ಲ್ಯಾರ್ ಕೇಳ್ತ್ಂತಾವರೆ ಅದ್ ಕೋಪೊಲಿ, ಎಲ್ಲದನ್ನೂರ್ ಸುಟ್ಟು ಬುಡುದು! ಹೀಂಗೆ ನಾವು ಮಾಡುವ ಕೆಲ್ಸಲಿ ದ್ವಂದ್ವದ ಇಬ್ಬಂಗಿತನ ಇರಿಕೆ ಆಗಕದ್. ಮುಳ್ಳುನೇ ಹಿಡಿದಾದರೂ ಅದರ ಪೂರ್ತಿ ಹಿಡಿಯೊಕು'ಂತ ಒಂದು ಮಾತುಟ್ಟು. ಸಕರಿ. ಕಡೇದಾಗಿ ಯುಧಿಷ್ಠಿರ ದೃಢವಾಗಿ ಹೇಳ್. ಏನ್ ಮಾಡೊಕುಂತ ಕೃಷ್ಣ ಕೇಳ್ತ್. ಅದಿಕೆ ಯುಧಿಷ್ಠಿರ, ಏನೇ ಆಗಕಲಿ ಸಂಧಿ ಆದರೆ ಅಷ್ಟೇ ಸಾಕ್. ಬಂಧು ಬಳಗದ ರಕ್ತ ಹರ್‌ಸುದರ ನೋಡುದು ತೊಪ್ಪುದಲೆ. ನಮ್ಮ ಅರ್ಧ ರಾಜ್ಯ ಕೊಡದಿದ್ದರೆ ಹೋಗಕಲಿ, ಐದ್ ಗ್ರಾಮಗಳ ಆದರೂ ಕೊಟ್ಟರೆ ಸಾಕ್. ಆ ಮೇಲೆ ಈ ಸಂಧಾನಕ್ಕೆ ಹಸ್ತಿನಾವತಿಗೆ ಹೋಕೆ ನೀನೇ ಸಮರ್ಥ. ನಮ್ಮ ಒಳಗೆ ಹೊರಗೆ ಎಲ್ಲ ನಿಂಗೆ ಗೊತ್ತಿದ್ದಕದೇ. ಹೀಂಗೆ ನೀನೇ ನಮ್ಮ ಉದ್ಧರ್ಸೊಕುಂತ ಯುಧಿಷ್ಠಿರ ಪ್ರಾರ್ಥಿಸಿಕಕಂಡಕತ್. ಶ್ರೀ ಕೃಷ್ಣ ಒಪ್ಪಿಕಕಂಡಕತ್. ಮೊರ್ದಿನ ಕೃಷ್ಣ ಹಸ್ತಿನಾವತಿಗೆ ಸಂಧಾನ ಕಾರ್ಯಕೆ ಹೊರ್ಡುದುಂತ. ನಿಶ್ಚಯ ಆತ್. ಅಂದ್ ದಶಮಿ ತಿಥಿ ದಿನ ಒಳ್ಳಕದ್‌ಂತ ಮುಂದೇ ನಿರ್ಣಯ ಮಾಡ್ದೊ.

ಮಾರ್ಣೆ ದಿನ, ಶುಭ ಯೋಗ ಕರಣ ಮುಹೂರ್ತಗಳ ನೋಡಿ, ಮೂಕುನ ಗಾಳಿ ಮೂಕುನ ಯಾವ ಹೊಳ್ಳೆಂದ ಹೊರ್ಟದೆಂತ ಬಲ್ದ ಕೈನ ಕಿಂಕ್‌ಣಿಕೆ ಬೆರ್ಲ್‌ನ ಮೂಕುಗಿಸಿ ನೋಡಿ, ಶ್ರೀ ಕೃಷ್ಣ ರಥನ ಹತ್ತುವ ಸಮಯಲಿ ದ್ರೌಪದಿ ಅತ್ತ್‌ಕಕಂಡ್ ಕೃಷ್ಣನ ಹಕ್ಕಲೆ ಓಡಿ ಬಾತ್. ಕೃಷ್ಣ ಹಜ್ಜಾತಡ್ದ್ ನಿತ್ತ್ ಏನಾತ್ ತಂಗೇಂತ ಕೇಳ್ತ್. ಇನ್ನ್ ಏನಾಕು ಅಣ್ಣ? ಕಿಚ್ಚಿ ತಣ್ಣಂಗಾದಾಂಗಾತ್. ಅಮೃತ ವಿಷ ಆತ್. ತರತರದ ಕಷ್ಟಗಳ ಕೊಟ್ಟ್, ರಾಜ ಸಭೆಲಿ ನಂಗೆ ಸೈಸಿಕೆ ಜೊತ್ತದ ಅವಮಾನ ಮಾಡಿ, ನನ್ನ ಮಾನಭಂಗ ಆಗದಾಂಗೆ ಆ ಕೇಡ್ ಜನರ್‌ಂದ ಕಾಪಾಡ್ದ ನೀನೇ ಈಗ ಅವರೊಟ್ಟಿಗೆ ಸಂದಿ ಮಾಡೊಕುಂತ ಹೊರ್ಟೊಳಂತೇಳಿರೆ ಏನ್ ಹೇಳ್ದು: ನನ್ನ ಗಂಡಂದಕ್ಕ್ ನನ್ನ ರಕ್ಷಣೆಗೆ ಬಾರದ ಹೇಡಿಗಾಗಿರ್‌ಕನ ನೀ ಒಬ್ಬನೇ ನಂಗೆ ರಕ್ಷಕಂತ ನಂಬಿಕಕಂಡ್ ಇರ್‌ಕನ ನೀನೂ ನನ್ನ ಕೈ ಬುಟ್ಟ್ ಆ ದುಷ್ಟರೊಟ್ಟಿಗೆ ಸಂಧಿ ಮಾಡಿ, ಪಾಂಡವರ್ ಕೌರವಕ್ಕ್ ಸಹಬಾಳ್ವ ಮಾಡುವ ಕಾಲ ಬಂದರೆ ನಾ ಹೇಂಗೆ ಜೊಡ್ಕುವೆ ಹೇಳ್‌ಂತ ಅವನ ಕಾಲಿಗೆ ಬೀತ್. ಅದರ ಹಿಡ್‌ದೆತ್ತಿ ಕಣ್ಣೀರ್ ಒರ್ಸಿ ಕೃಷ್ಣ ಹೇಳ್ತ್: ದ್ರೌಪದಿ! ನಾ ಸಂಧಿಗೆ ಹೋದು ಲೋಕದ ಕಣ್ಣ್ ಕಟ್ಟಿಗೆ ಹೊರ್ತು ಬೇರೇನೂ ಅಲ್ಲ. ಸಂಧಿಗೆಂತ ಹೋದರೂ, ಮಾತ್‌ಲಿ ಅವರ ಕೆದ್‌ಕ್ಸಿ, ಸಂಗ್ರಾಮನ್ನೇ ನಿಜಮಾಡಿ ಬಾವೆ. ಭೀಮಾರ್ಜುನಕ್ಕ್ ಅವು ಮಾಡ್ದ ಪ್ರತಿಜ್ಞೆಗಳ ಕಂಡಿತ ನೆರವೇರ್ಸುವ್ರೋ. ಅವು ಅಲ್ಲದಿದ್ದರೆ ಅದರ ನಾನೇ ಮಾಡುವೇ ಹೆದ್‌ರ್ ಬೇಡಂತ ಹೇಳಿ ಅದರ ಹಿಂದೆ ಕಳ್ಸಿ ಅಂವ ರಥ ಹತ್ತಿತ್.

ಕಾಡ್ ದಾರಿ, ಕಲ್ಲ್ ಕೊರಕಲ್‌ಲಿ ರಥದ ಚಕ್ರ ಹತ್ತಿ ಇಳ್ದ್ ಗಡಗಡಂತ ಅಲ್ಲ್ಯಂಡ್ ಹೋದರೂ, ಮಾರ್ಗದ ಕರೆಲಿದ್ದ ಮರಗಳ ನೆಳೊಲ್ ಜಿದ್ದ್ ಎಡೆ ಎಡೆಲಿ ಜಿಕ್‌ಲ್

ಜಿದ್ದ್, ಕಲ್ತು ಬೊಳ್ಳುನ ರಂಗೋಲೆ ಹಾಕಿದಾಂಗೆ ಕಾಂಬತ್ತಿತ್ತ್. ಮರಗೆಲ್ಲ ಎತ್ತರ ಬೆಳ್ದಿದ್ದೊ. ಮರದ ಕೊಡಿಗ ಗಾಳಿಗೆ ಅಲ್ಲುದು ಅವು ಸಂಧಾನಕ್ಕ ಹೊರ್ಟ ಭಗವಂತನ ಆಯಾಸ ಕಮ್ಮಿಯಾಗಲಿಂತ ಅವಂಗೆ ಚಾಮರ ಬೀಸುವ ಹಾಂಗೆ ಕಾಂಬತಿತ್ತ್. ಕೆಲೂವು ಮರಗ ಕೆಂಪಾದ ಚಿಗ್‌ರ್ ಬುಟ್ಟಿದ್ದೊ. ಒಂದು ಚಾಕೊಟೆ ಮರ, ಅಡಿಂದ ಕೊಡಿತನಕ ಕೆಂಪಾದ ಸೊಪ್ಪುಂದ ತುಂಬಿತ್ತ್. ಪೊರ್ಸಕೊಮ್ಮ ವಸಂತಕಾಲ ಬಾತ್‌ಂತೇಳಿರೆ, ಎಲ್ಲ ಪಚ್ಚೆ ಸೊಪ್ಪುಗಳ, ಗಟ್ಟ ಬೋಳ್ಳಿದಾಂಗೆ ಬೀಳ್ಳಿ ಬುಟ್ಟದೆ. ಮತ್ತೆ ಎರ್ಡ್ ದಿನ ಕಳಿದೀ ಸರಿ. ಚಿಗ್‌ರ್ ಸೊಪ್ಪುಗ ಒಂದೊಂದೇ ಹೊರ್ಟ್. ಮತ್ತೆ ಎರ್ಡ್‌ದಿನ ಕಳಿವಷ್ಟುಲ್ಲಿ ಇಡೀ ಮರ ಕೆಂಪು ಸೊಪ್ಪುಗಳ್‌ಂದ ತುಂಬಿ ಉಲ್ಲಾಸಂದ ಮೈ ಕುಲ್ಕ್ಯಂಡ್ ನೆಗಾಡಿಕಂಡ್ ಇದುವ ಹಾಂಗೆ ಕಂಡದೆ. ಕೃಷ್ಣ ಎಳೆಪ್ರಾಯಲಿ. ದನಮೇಪತರೊಟ್ಟಿಗೆ ಸೇರಿಕಂಡ್, ಕಾಡ್ ಮೇಡ್‌ಗಳ ಸುತ್ತಿದಂವ. ಮರಗಳ, ದೈಗಳ. ಬೊಳ್ಳಿಗಳ. ಹೂಗಳ. ಹಣ್ಣ್‌ಗಳ ನೋಡಿ. ಆನಂದ ಪಟ್ಟಂವ. ದೊಡ್ಡಂವ ಆಗಿ ಪ್ರಪಂಚದ ವ್ಯವಹಾರಲಿ ಮಗ್ನ ಆದ ಮೇಲೆ ಅದರ ಅನುಭವಿಸುವ ಆನಂದಿಸುವ ಅವಕಾಶ ಇಲ್ಲದಾಗಿತ್ತ್. ಬಾಲ್ಯದ ಆ ದಿನಗಳ ನೆಂಪಾದರೆ ಮನ್‌ಸ್ಸಿಗೆ ಅತ್ಯಂತ ಆನಂದ ಆದು ಇಂಥವರ ಅನುಭವ. ಈಗ ಕೆಂಪು ಸೊಪ್ಪುಗಳ್‌ಂದ ಕೂಡ್ದ ಚಾಕಟೆ ಮರನ ನೋಡಿ ಆ ಕಳ್ಡ್ ಹೋದ ಜಗತ್ತೆಲ್ಲ ಕೃಷ್ಣನ ಮನ್‌ಸನೆದ್‌ರ್ ಬಂದ್ ನಿತ್ತತ್. ಕೃಷ್ಣ ಒಂದು ಗಳಿಗೆ ರಥನ ನಿಲ್ಸಿ, ಆ ಮರನೂ. ಸುತ್ತ ಇದ್ದ ವನಶ್ರೀನೂ ನೋಡಿ, ಮೈಮರ್ತ್. ನಿತ್ತ್, ಮತ್ತೆ ಹೊರ್ಟತ್. ಇಂವ ಬಾವ ಸುದ್ದಿ ಕೇಳಿ ದುರ್ಯೋಧನ ಅಲ್ಲಲ್ಲಿ ವಿಶ್ರಾಂತಿ ಧಾಮಗಳ ಏರ್ಪಾಡ್ ಮಾಡಿತ್ತ್. ಹಾಂಗೆ ಎರ್ಡ್‌ಮೂರು ದಿನದ ಪಯಣ ಮಾಡಿ ಕೃಷ್ಣ ಹಸ್ತಿನಾವತಿನ ಹೊರವಲಯಕ್ಕೆ ಬಂದ್ ಸೇರ್ತ್. ಅಲ್ಲಿಗೆ ಕೃಷ್ಣ ಬಾವ ಸುದ್ದಿತಿಳ್ದ ದೊಡ್ಡ ದೊಡ್ಡ ರುಸಿಗಳೂ, ಜೆನಂಗಳೂಕೃಷ್ಣ ಪರಮಾತ್ಮನ ದರ್ಶನ ಪಡಿವ ಆಸೆಂದ ಬಂದ್ ಸೇರಿದ್ದೊ. ಅವನ ತೇರ್‌ನ ಕಂಡಕೂಡಲೇ, 'ಶ್ರೀ ಕೃಷ್ಣ, ಗೋಪಾಲ, ವಾಸುದೇವ, ಶ್ರೀ ಹರೀ! ಜಯ ಜಯ ಜಯ!ಂತ ಭಕ್ತಿಂದ ಘೋಷಣೆ ಮಾಡಿ ಅಡ್ಡ ಬಿದ್ದೊ.

ಕೃಷ್ಣ ಕೈಯೆತ್ತಿ 'ನಿಮ್ಮ ನಿಮ್ಮ ಇಷ್ಟ ಸಿದ್ಧಿ ಪೂರೈಸಲಿಂತ ಆಶೀರ್ವಾದ ಮಾಡಿ. ತೇರ್‌ನ ನಿದಾನವಾಗಿ ನಡ್ಸಿಕಂಡ್ ಹೋತು. ಪಟ್ಟಣ ಪ್ರವೇಶ ಮಾಡ್ತ್. ಹಸ್ತಿನಾವತಿನ ಬೀದಿಗ ಅಗಲವಾಗಿದ್ದೊ. ಎರ್ಡ್. ಕಡೆಗಳ್ಲಿಯೂ ದೊಡ್ಡ ದೊಡ್ಡ ಅಂಗ್‌ಡಿ ಮಳಿಗೆಗ ಇದ್ದೊ. ಬಟ್ಟೆ ಅಂಗ್‌ಡಿಗಳ್ಲಿ, ಪಟ್ಟೆ, ಜರತಾರಿ ಮತ್ತೆ ಹತ್ತಿನೂಲುಂದ ಮಾಡ್ದ ಜೇರೆ ಬಣ್ಣದ ಸೀರೆಗಳ ಪ್ರದರ್ಶನಕ್ಕಿಸಿಕಂಡ್ ಇದ್ದೊ. ಹೆಣ್ಮಕ ಗಣ್ಮಕ ಅವ್ಕವ್ಕೆ ಬೇಕಾದ ಬಟ್ಟೆ ಬರೆಗಳ ವ್ಯಾಪಾರ ಮಾಡಿಕಂಡ್ ಇದ್ದೊ. ಇನ್ನೊಂದು ಕಡೆಲಿ, ತಾಮ್ರ, ಹಿತ್ತಾಳೆ. ಕಂಚಿನ ತರತರದ ಅಂಡೆ, ಮಂಡೆ, ಪಾತ್ರೆ ಕಡಾಯಿಗಳ ಒಂದರ ಮೇಲೆ ಒಂದರ ಎತ್ತರೆತ್ತರ ಅಡ್ಕಿ ಇಸಿಕಂಡ್ ಇದ್ದೊ. ಕಂಚಿ ಹಿತ್ತಾಳೆನ ಪಾತ್ರೆಗ. ಚೊಂಬುಗ ದೀಪಂಗ ಕಾಲ್ ದೀಪಂಗ, ಆಳೆತ್ತರದ ಗೊಂಚಲ್ ದೀಪಂಗ ಮಿರಿ ಮಿರಿ ಮಿಂಚಿಕಂಡ್ ಕಣ್ಣ್‌ಗಳ ಮನ್‌ಸ್‌ಗಳ ಸೆರೆ ಹಿಡಿಯತಿದ್ದೊ. ಬೀದಿನ ಎರ್ಡ್ ಕಡೆಗಳ್ಲಿಯೂ ಚಿನ್ನ ಬೆಳ್ಳಿಂದ ಆಭರಣ ತಂಬಾರೊಪ್ಪು ಒಂದು ಪೊಣ್ಣ್‌ನ ಮಡಿಕೆನ ಎರ್ಡಾಗಿ ಒಡ್ಡ್, ಬುಡದ ಅರ್ಧ ಭಾಗಕ್ಕೆ

ಉಮಿ ತುಂಬಿಸಿ, ಮೇಲೆ ಚಿಪ್ಪಿನ ಕಲ್ಲೆರಿ ಮಾಡ್ದರ ಒಂದು ಪದರ ಹಾಕಿ, ಸೊಡುಗೆ ಒಂದು ಸಣ್ಣ ಕೆಂಡನ ದಂಡಾಸ್‌ಲಿ ತಂದ್ ಹಾಕಿ, ಸೂಂತ್‌ರಿಲಿ 'ಸೂ', 'ಸೂ'ಂತ ಉರ್ಗಿ ಕಿಚ್ಚಿ ಗಪ್ರುಲುವ ಹಾಂಗೆ ಮಾಡಿ, ಅದರ್ಲಿ ಆ ಲೋಹನ ಕರ್ಗಿಸಿ ಸುದ್ದ ಮಾಡಿ, ಅದರ ತೆಗ್ದ್ ನೀರ್‌ಲಿ ಪೊರ್ಲುರ್ ತೊಳಿವ್ರೊ. ಮತ್ತೆ ಅದರ ತೆಗ್‌ದ್, ಕಲ್ಬ್ಬಿಣದ ಅಡಿಗಲ್ಲ್‌ಲಿ ಇಸಿ ಮುಟ್ಟಿಂದ ಅದಿಕೆ ಗುದ್ದ್‌ಕನ ತಾಳ ಬದ್ಧವಾಗಿ, 'ಕೊಟ್ಟಂ ಕೆಟ್ಟಂ', 'ಕೊಟ್ಟಂ ಕೆಟ್ಟಂ'ಂತ ಕೇಳಿ ಬಾತ್ತಿತ್ತ್. ಇಂತೊವರ ಕೈಲಿ ಏನಾರ್ ಒಡವೆ ಮಾಡ್ಲಿಕೆ ಕೊಟ್ಟರೆ, ಅದ್ ಹೇಳ್‌ದ ಪಾಯ್ದ್ದಿಗೆ ಸಿಕ್ಕಿಕಿಲೆ. ಸಿಕ್ಕಿರೂ ಅದರ್ಲಿ ನಾವು ಕೊಟ್ಟಷ್ಟ್ ಇರಿಕಿಲೆ. ಕನ್ನಡಲ್ಲಿ ಒಂದು ಗಾದೆ ಮಾತೇ ಉಟ್ಟು. 'ಅಕ್ಕನ ಚಿನ್ನವಾದರೂ, ಅಕ್ಕಸಾಲೆ ಕದಿಯದೆ ಬಿಡ'ಂತ. ಇಂದ್ ನಾವು ಯಾದಾರ್ ಒಂದು ಪಂಗಡಕ್ಕೆ ಮಾತ್ರ ಈ ಗಾದೆನ ಉಪಯೋಗ್ಸುವಾಂಗೆ ಇಲ್ಲೆ. ಕಾರಣ ಈಗ ವ್ಯಾಪಾರಲ್ಲಿ ಕಳ್ಳ ಕಲ್ಸ, ಮೋಸ ಮಾಡದ ಜೆನಂಗಳೇ ಸಿಕ್ಕಿಕಿಲ್ಲೆ. ಅದು ಹೇಂಗೂ ಇರ್‍ಲಿ. ಕೃಷ್ಣಂಗೆ ಆ ಕೆಲ್ಸಗಾರ್‌ರ್, ಮುಟ್ಟಿಂದ ಹೊಡ್ದ್ ಮಾಡುವ ಸದ್ದ್ ಕೇಳಿ ಅವ್ರ ನಿಜನ್ನೇ ಸಾರ್ವತ್ರಿಕವಾಗಿ ಒಪ್ಪಿಕಂಡವೆಲೆಂತ ನೆನ್ಸಿ ನಗೆ ಬಾತ್.

ಬೀದಿಗಳ ಎಲ್ಲ ಶುಚಿ ಮಾಡಿದ್ದೊ. ನೀರ್ ಹಾಕಿ ತೊಳ್ದ್ ಬಣ್ಣ ಬಣ್ಣದ ರಂಗೋಲಿಗಳ ಬುದ್ದಿದ್ದೊ. ದೂರದೂರಲ್ಲಿ ತೋರಣಂಗಳ್ನೂ ಕಲ್ಟ್ಟಿದ್ದೊ. ಬೀದಿಗಳ್ಲಿ ಸಿಂಗಾರ ಮಾಡ್ದ ಆನೆಗ, ಕುದುರೆಗ ಜೆನಂಗ ಅತ್ತಂದಿತ್ತ, ಇತ್ತಂದತ್ತ ಓಡಾಡ್‌ತ್ತಿದ್ದೊ. ಒಟ್ಟಿಲಿ ಹಸ್ತಿನಾವತಿ ನಗರದ ಸೌಂದರ್ಯ, ಕೃಷ್ಣಂಗೆ ಕುಸಿ ಉಂಟ್ ಮಾಡ್ತ್. ರಾಜವಂಶದವರ ಪ್ರಮುಖರ, ದುರ್ಯೋಧನನ, ಧೃತರಾಷ್ಟ್ರನ ಅರಮನೆಗ ಎಲ್ಲ, ಒಂದದ್ರೊಂದು ಮೇಲಾಗಿ ಕಾಂಬತ್ತಿದ್ದೊ. ಮತ್ತೆ ಅವೆಲ್ಲ ಕೃಷ್ಣ ನಮ್ಮಲ್ಲಿಗೆ ಬಾದು; ತಮ್ಮಲ್ಲಿಗೆ ಬಾದುಂತ ನೆನ್ಸಿಕಲೆಂಡ್. ಅವನ ಗೌರವಾರ್ಥ ತರತರದ ಜಿತಣಗಳ ತಯಾರ್ ಮಾಡಿ ಅವಂಗಾಗಿ ಕಾದ್‌ಕಲೆಂಡೇ ಇದ್ದೊ. ಆದರೆ ಕೃಷ್ಣ ಅಂತ ಹಮ್ಮೆ ಪ್ರದರ್ಶಿಸುವ ದೊಡ್ಡ ಮೊಂಯಿಸರ ಗಣ್ಯ ಮಾಡದೆ, ಅವೆಲ್ಲ ವೈರಿಪಕ್ಷದೊವು ಆದರ್‌ಂದ ಅವರೊಟ್ಟಿಗೆ ಭೋಜನ ನಿಷಿದ್ಧಂತ ಹೇಳಿ ತನ್ನ ಭಕ್ತನೂ ವಿವೇಕಿಯೂ, ಪಾಂಡವ ಪಕ್ಷಪಾತಿಯೂ, ಸಾಧು ಸ್ವಭಾವದವನೂ ಆದ ವಿದುರನ ಮನೆಗೆ ಸೀದಾ ಹೋತು. ವಿದುರ ಇದರ ನಿರೀಕ್ಷಿಸಿ ಇತ್ತ್‌ಲೆ. ಹಾಂಗೆ ವಿದುರಂಗೆ ಏನ್ ಮಾಡುದುಂತ ಗೊತ್ತಾಗದೆ ಏನೋ ಮಾಡಿಕೆ ಸುರು ಮಾಡ್ತ್. ಕೃಷ್ಣ ಬಂದ ಸುದ್ದಿ ಕೇಳಿ ಎದ್‌ರ್ ಬಂದ ಕುಂತಿಗೆ ಕೃಷ್ಣ ಅದರ ಕಾಲಿಗೆ ನಮಸ್ಕಾರ ಮಾಡ್ತ್. ಪಾಂಡವರ ಕ್ಷೇಮ ಸಮಾಚಾರ ತಿಳ್ಕತ್. ವಿದುರ ಕೃಷ್ಣಂಗೆ ನಮಸ್ಕಾರ ಮಾಡ್ತ್.

ಏನ್ ಮಾಡೊಕುಂತ ಗೊತ್ತಾಗದೆ ಸುಮ್ಮನೆ ನಿತ್ತ್‌ಕಲೆಂಡ್ ಇದ್ದ ವಿದುರನ ಹಾಸ್ಯ ಮಾಡೊಕುಂತ ಕೃಷ್ಣ, 'ಇದೇನ್ ವಿದುರ! ಅಷ್ಟ್ ದೂರಂದ ಪರ್ಣ್ದ್ ಬಂದಂವಂಗೆ, ಕೈ ಮೋರೆ ತೊಳಿಯಕೆ ಅಗಲ್ಲಿ, ಕುಡಿಯಕೆ ಅಗಲ್ಲಿ, ಒಂದಿಷ್ಟ್ ನೀರೂ, ಹೊಟ್ಟೆಗಿಷ್ಟ್ ತಿನಲೆಸೂ ಈ ಕುರು ಸಾಮ್ರಾಜ್ಯದ ರಾಜಧಾನಿಲಿ ಸಿಕ್ಕಿಕಿಲ್ಲೆಂತ ಕಂಡದೆ. ಅದ್ ಹೇಂಗೋ ಅಖೂ ಹಾಂಗೇಂತ ಸಂಸ್ಕೃತಲ್ಲಿ 'ಯಥಾ ರಾಜಾ, ತಥಾ ಪ್ರಜಾಂತ' ಒಂದು ಮಾತುಟ್ಟು. ಇಲ್ಲಿ ಎಲ್ಲೊವ್ರೂ ಕಂಜೂಸುಗಳೇಂತ ಕಂಡದೆ" ಕೃಷ್ಣ ನೆಗಾಡಿಕಲೆಂಡ್ ಹೇಳ್ತ್. ವಿದುರನೂ

ನೆಗಾಡಿಕಲೆಂಡ್ ಉತ್ತರ ಕೊಟ್ಟೇತ್. ಪರಮಾತ್ಮ! ನಿಂಗೆ ಕೊಡಿಕೆ ನಾವೆಷ್ಟರವ್ರು? ನೀನೇ ನಾವ್ಗೆಲ್ಲ ಕೊಡೊಂವ. ಹೀಂಗೆ ಹೇಳಿ ಒಳಗೆ ಹೋಗಿ ಒಂದು ಸಣ್ಣ ಗಿಂಡಿಲಿ ಹಾಲ್ ತಂದ್ ಕೊಟ್ಟ್, 'ದೇವಾ ನೀ ಹಾಲ್‌ನ ಕಡಲ್‌ಲಿ ಮಲ್ಗಂವ! ಅಂಥ ನಿಂಗೆ ಈ ಬಡ ಭಕ್ತನ ಒಂದು ಗಿಂಡಿ ಹಾಲ್‌ನ ಸಮರ್ಪಣೆ. ಅದರ ಕೃಷ್ಣ ತಕಲೆಂಡ್ ಸಂತೋಷುಲಿ ಕುಡ್ತ್. ಹೊಟ್ಟೆ ತುಂಬಿತ್‌ಂತ ತೋರ್ಲಿಕೆ ಢರ್ರ್‌ಂತ ಒಂದು ತೇಗ್ ಬುಟ್ಟೇತ್, 'ಅಕ್ಷಯ ದಾನಮಸ್ತು'ಂತ ಹೇಳ್ತ್. ವಿದುರನ ಮನೆ ಸಕಲ ಸೌಭಾಗ್ಯಗಳ್‌ಂದ ತುಂಬಿತ್. ಮತ್ತೆ ಕೃಷ್ಣನ ಮನೆ ಒಳಗೆ ಕರ್ದ್ ಸುಖಾಸನಲಿ ಕುದ್ರ್ಲಿತ್. ಅವನ ಪಾದಗಳ ತೊಳ್ತ್. ಆ ನೀರ್‌ನ ತನ್ನ ತಲೆ, ಮೈಗೆಲ್ಲ ಕೊಡ್ಕ್ಯಂಡೇತ್. ಆ ಮೇಲೆ ಹಣ್ಣು ಹೊತ್ತು. ಕಳ್ದ್ ಹದ ಬಿಸಿನೀರ್ ತಯಾರ್ ಮಾಡ್ಲಿ ಅದಿಕೆ ಕಸ್ತೂರಿ ಮುಂತಾದ ಪರಿಮಳ ದ್ರವ್ಯಂಗಳ ಹಾಕಿ, ಕೃಷ್ಣಂಗೆ ಮೀಯಕೆ ಏರ್ಪಾಡ್ ಮಾಡ್ತ್. ಆ ಮೇಲೆ ಕೃಷ್ಣಂಗೆ ಸುಖ ಭೋಜನ ಆತ್. ಕೃಷ್ಣಂಗೆ ಪ್ರಯಾಣದ ಆಯಾಸ ಪರಿಹಾರ ಆತ್. ಮತ್ತೆ ಲೋಕಾಭಿರಾಮದ ಮಾತಾಡಿಕಲೆಂಡ್ ಇದ್ದೊ.

ಇತ್ತ ದುರ್ಯೋಧನ ನಾ ಇಷ್ಟ್ ಸಂಭ್ರಮಂದ ಕೃಷ್ಣಾ ಸ್ವಾಗತಕೆ ಏರ್ಪಾಡ್ ಮಾಡಿದ್ದೆ ದೊಡ್ಡ ಔತಣಕ್ಕೆ ಏರ್ಪಾಡ್ ಮಾಡ್‌ಸಿದ್ದೆ. ಆದರೆ ಆ ಗೊಲ್ಲ ಇವರೆಲ್ಲ ಕಾಲ ಧೂಳಿಗೆ ಸಮಂತ ನೆನ್ಸಿ ಆ ತೊತ್ತುನ ಮಜ್ಜನ ಮನೆಗೆ ಹೋತು. ಅವನ ದವ ಕಾಯುವ ಬುದ್ಧಿ ಎಲ್ಲಿಗೆ ಹೋದೆ? ಹೋಗಲಿ ಹೀಂಗೆ ಹೇಳಿಕಲೆಂಡ್ ಬುಸುಗುಟ್ಟಿಕಲೆಂಡ್ ಇರುವ ಹೊತ್ತಿಗೆ ವಿದುರ ಬಾತ್. 'ಶ್ರೀ ಕೃಷ್ಣ ಬಂದಂವ ನನ್ನ ಮನೆಲಿ ವಿಶ್ರಾಂತಿ ಪಡ್ಕಲೆಂಡ್ ಉಟ್ಟು. ನಿನ್ನ ನೋಡಿಕೆ ಯಾಗ ಅನುಕೂಲಂತ ವಿಚಾರ್ಲಿಕಲೆಂಡ್ ಬಾಂತ ನನ್ನ ಕಳ್ಸಿತ್'ಂತ ಹೇಳ್ತ್. ನಾಳೆ ಬೊಳ್ಪಿನ ಓಲಗಕೆ ಬರ್ಲಿಂತ ದರ್ಪಲೀ ಹೇಳ್ತ್. ಮೂರ್ಖರೊಟ್ಟಿಗೆ ಹೆಚ್ಚಿಗೆ ಮಾತಿಗೆ ನಿಲ್ಲಿಕೆ ಆಗದ್‌ಂತ ವಿದುರ ಮರುಮಾತಿಲ್ಲದೆ ಹಿಂದೆ ಬಂದ್ ಇದ ಸಂಗತಿನ ಕೃಷ್ಣಂಗೆ ವಿವರ್ಲಿತ್. ಕೃಷ್ಣ ನೆಗಾಡಿಕಲೆಂಡ್ ಸುಮ್ಮನಾತ್.

ಮೊರ್ದಿನ ಬೊಳ್ಪಿಗೆ ಕೃಷ್ಣ ತನಿಗೆ ಸಹಜವಾಗಿರುವ ಅಲಂಕಾರ ಅಂದರೆ ಸಿಂಗ್ರಮಾಡಿ, ತ್ರಿಪುಂಡ್ರ, ನವಿಲು ಗರಿ ಇಸಿದ ಕಿರೀಟ, ಕೊಳ್ಲ ಧರ್ಸಿ, ದುರ್ಯೋಧನನ ಒಡ್ಡೋಲಗಕ್ಕೆ ಹೊರ್ಟೇತ್. ವಿದುರನೂ ನಿತ್ಯದ ತನ್ನ ಓಲಗದ ಉಡಾಪುಲಿ ಹೊರ್ಟೇತ್. ಆಗಾಗಲೆ ಬಾಗ್‌ಲ್‌ನ ಭಾರೀ ಅಲಂಕಾರ ಮಾಡಿದ್ದೊ. ಮೂರನೇ ಬಾಗ್‌ಲಿಗೆ ಎತ್ತಕನ ಬಾಗ್‌ಲ್ ಕಾಯೊಂವ ಹೋಗಿ ರಾಜಂಗೆ ಸುದ್ದಿ ಮುಟ್ಸಿತ್. ರಾಜ ಸಭೆಲಿ ಎಲ್ಲ ನೆಟ್ಟಂಗೆ ಕುದ್ದೊ. ನೀಲವರ್ಣದ ಕೃಷ್ಣ ಮೋರೆಲಿ ಸಹಜವಾಗಿದ್ದ ನೆಗೆಂದಾಗಿ ಚಂದ್ರನ ಬೆಳ್ದಿಂಗೆರ ಕಾಂತಿ ದಿಕ್ಕ್ ದಿಕ್ಕ್‌ಗೆ ಹರ್‌ಂಡ್‌ಕನ ಅಂಜನಾ ಪರ್ವತವೆ ನಡ್ಕಂಡ್ ಬಂದದೇನೋಂತ ಕಾಂಬ ಹಾಂಗೆ, ರಾಜ ಸಭೆನ ಪ್ರವೇಶ ಮಾಡ್ತ್. ಸಭೆಲಿ ಕುದ್ದೊವೆಲ್ಲ ಅವಂಗೆ ಗೌರವ ಸೂಚಿಸಿಕೆ ಎದ್ದ್ ನಿತ್ತೊ. ಕೆಲೊವು ಜನ ಭಕ್ತಿಂದ ಕೈ ಮುಗ್ದೊ, ಕೆಲೊವು ಜನ ಸುಮ್ಮನೆ ನಿತ್ತೊ. ಕೃಷ್ಣ ಒಮ್ಮೆ ರಾಜ ಸಭೆನ ಅವಲೋಕನ ಮಾಡ್ತ್. ದುರ್ಯೋಧನನ ಎಡ್ದ್ ಬಲ್ದ್‌ಗೆ ದುಶ್ಯಾಸನನೂ ಕರ್ಣನೂ ಅವಂಗೆ ಒತ್ತಿ ಕಲೆಂಡ್ ಒಂದೇ ಆಸನಲಿ ಕುದ್ದಿದ್ದೊ. ಭೀಷ್ಮ

ಕಡೆಗೆ ಅವನ ತಮ್ಮಂದೀರ ಸಾಲ್. ಬಲ್ಪ ಕಡೆಗೆ ಅವನ ನೂರು ಮಕ್ಕಳ ಸಾಲ್. ಮತ್ತೆ ಎದ್ರಿಗೆ ಎತ್ತರದ ಪೀಠಗಳ್ಲಿ ಭೀಷ್ಮರ್, ದ್ರೋಣರ್, ಕೃಪಾಚಾರ್ಯರ್ ಮತ್ತೆ ಕೆಲೊವು ದೊಡ್ಡ ರುಸಿಗಳ ಸಾಲ್, ಇಷ್ಟ್ ಜನಕೆಲ್ಲ ಚಿನ್ನದ ಪೀಠ, ಅದರ್‌ಂದಾಚೆ ಸಾಲ್‌ನ ಬೆಳ್ಳಿ ಪೀಠಗಳ್ಲಿ ಸಾಮಂತರಾಜೆರ್, ಮಂತ್ರಿಗ, ಮತ್ತೆ ರಾಜತಾಂತ್ರಿಕೆರ್, ಬೇರೆ ರಾಜರ ರಾಯಭಾರಿಗ, ಪುರಪ್ರಮುಖರ್ ಹೀಂಗಿದ್ದೊವೆಲ್ಲ ಕುದ್ಕಂಡ್ ಇದ್ದೊ. ಎಲ್ಲ ಸಭಾಸದರೂ ತನ್ನ ಗಮನಕ್ಕೆ ಬಾವಾಂಗಿದ್ದ ಎತ್ತರದ ಜಾಗೆಲಿ ರಾಜನ ಸಿಂಹಾಸನ ಹಾಕಿತ್. ಧೃತರಾಷ್ಟ್ರ ಅದರ್ಲಿ ಕುದ್ದಿತ್. ಅಲ್ಲಿ ಅಂವ ಕುದ್ದರೂ ಒಂದೆ, ಇಲ್ಲದಿದ್ದರೂ ಒಂದೆ. ಏಕೆಂದರೆ ಕಣ್ಣಿಲ್ಲದ ಅವಂಗೆ ಯಾರೂ ಕಾಂಬತಿತ್ಲೆ. ಅಂವ ಮಾತ್ರ ಎಲ್ಲೊವ್ಕೂ ಕಾಂಬತಿತ್.

ಕೃಷ್ಣ ಒಳಗೆ ಬಾಕನ ಬೇಕೋ ಬೇಡೋಂತ ಎಲ್ಲವರೊಟ್ಟಿಗೆ ಎದ್ದ್ ನಿತ್ತ್ ದುರ್ಯೋಧನ ಶಿಷ್ಟಾಚಾರದಾಂಗೆ ಎದ್ರ್ ಬಂದ್ ಆಲ್‌ಂಗ್‌ಸಿಕಂಡ್, ತನ್ನ ಹಕ್ಕಲೆ ಇದ್ದ ಎತ್ತರದ ಆಸನದ ಮೇಲೆ ಅವನ ಕುದ್‌ರ್ಸ್ಲಿ ಮತ್ತೆ ಅಂವ ಕುದ್ದೆತ್. ಮತ್ತೆ ಮಾತಿಗೆ ಸುರುಮಾಡ್ತ್: "ಲೋಕ ಗುರುವಾದ ನೀ ನನ್ನ ಮನೆಗೆ ಬಂದಂತಾದರೆ, ನಂಗೆ ಯಾರ್ ಎಣೆಯಾವ್ರೊ? ಬಂದಂವ ಸೀದಾ ನನ್ನ ಮನೆಗೇ ಬಾವಂತ ಎದ್ರ್ ನೋಡಿಕಂಡಿದ್ದೆ. ನಿನ್ನ ಉಪಚಾರಕ್ಕೆ ಬೇಕಾಗಿ ನಾನಾ ವಸ್ತುಗಳ ತಯಾರ್ ಮಾಡಿದ್ದೆ. ಆದರೆ ನೀ ನಿನ್ನ ಅಂತಸ್ತಿಗೆ ಸರಿಯಾದವನಲ್ಲಿಗೇ ಹೋಗಿ ಇದರೆಲ್ಲ ವ್ಯರ್ಥ ಮಾಡ್ದಂತ" ಆಕ್ಷೇಪ ಮಾಡ್ತ್. ಅದಿಕೆ ಕೃಷ್ಣ "ನಾ ನಂಟ ಆಗಿ ಬಂದಿದ್ದರೆ ಸೀದಾ ನಿನ್ನ ಮನೆಗೆ ಬಂದಿದ್ದೆ ಆದರೆ ನಾ ನಂಟ ಆಗಿ ಬಾತ್‌ಲೆ ನಾ ಬಂದದ್ ಪಾಂಡವ ಪಕ್ಷದ ರಾಯಭಾರಿಯಾಗಿ ಹಾಂಗಿರ್‌ಕನ ಅವರ ವೈರಿಯಾಗಿರುವ ನಿಮ್ಮಲ್ಲಿ ಆತಿಥ್ಯ ಸ್ವೀಕಾರ ಮಾಡುದು ನಂಗೆ ವರ್ಜ್ಯ. ಹಾಂಗೆ ಅವರ ಪಕ್ಷಕ್ಕೆ ಅನುಕೂಲ ಆದ ವಿದುರನಲ್ಲಿಗೆ ಹೋಕಾಗಿ ಬಾತ್."ಸರಿ, ಮತ್ತೇನ್ ಲೋಕವಾರ್ತೆ?" "ಲೋಕವಾರ್ತೆಂತೇಳಿರೆ ಪಾಂಡವರ್. ಅವು ನಿಮ್ಮ ಶರ್ತದ ಪ್ರಕಾರ ಘೋರ ಕಾಡ್‌ಲಿ, ಹಿಂಸ್ರ ಜಂತುಗಳೊಟ್ಟಿಗೆ, ಕಲ್ಲ್ ಮೊಣ್ಣ್‌ಗಳ್ಲಿ ಹೊರ್ಳಿ, ಕಾಡ್ ಗೆಡ್ಡೆ ಗೆಣಸುಗಳ ತಿಂದ್ ಹೇಂಗೋ ಜೀವ ಹಿಡ್‌ದ್‌ಕಂಡ್ ಭಗವಂತನ ಕೃಪೆಂದ ಅಜ್ಞಾತ ವಾಸನ ಮುಗ್ಸಿ ಜಯಶೀಲರಾಗಿ ಬಂದೊಳೊ. ಅವು ಅನುಭವ್ಸಿದ ಬನ್ನಗ ಎಲ್ಲ ನಿನ್ನ ಒಂದು ಸಮಿಮಾತ್‌ಂದ ಕ್ಷಣಮಾತ್ರಲಿ ಮರ್ತ್ ಹೋಗಿ ಸೋದರ್ಯದ ನಂಟತನದ ಬಂಧನ ಬಿಗಿಯಾದು. ಪಂಚಭೂತಂಗಳ ಹಾಂಗಿರುವ ಆ ಐದು ಜನ ಸೋದರರ್ ನಿನ್ನ ಪಾಲಿಗೆ ಇದ್ದರೆ ಮತ್ತೆ ಯಾರ್ ತಾನೇ ನಿಂಗೆ ಸರಿ ಇರುವೊ? ಏನೋ ಸಣ್ಣ ಕಾರ್ಣಂಗಳ್‌ಂದ ಹಿಂದೆ ಅಣ್ಣ ತಮ್ಮಂದೀರಾದ ನಿಮ್ಮೊಳಗೆ, ಕೋಪ ಕಿಸ್‌ರ್‌ಗ ಉಂಟಾತ್. ಎಳವೆಲಿ ಇದೆಲ್ಲ ಸಹಜ ಬೆಳಿಯಕನ ಅದರೆಲ್ಲ ಮರಿದೂ ಸಹಜ. ಹಾಂಗೆ ಇತ್ತಂದನೊವ್ರೂ ಅದರೆಲ್ಲ ಮರ್ತ್ ಮತ್ತೆ ಒಂದಾಕುಂತ ನನ್ನ ಅಭಿಲಾಷೆ. ಹಾಂಗೆ ಹಿಂದೆದರ ಎಲ್ಲ ಮರ್ತ್ ಮತ್ತೆ ಒಂದಾಕುಂತ ನನ್ನ ಅಭಿಲಾಷೆ. ಹಾಂಗೆ ಹಿಂದೆದರ ಎಲ್ಲ ಮರ್ತ್ ನೀ ಪ್ರೀತಿಂದ ಅವ್ಕೆ ಕರೆಕಳ್ಸ್. ಹಿಂದೆ ಅವರ ಪಾಲಿಗಿದ್ದ ರಾಜ್ಯನ ಅವ್ಕೆ ಕೊಟ್ಟ್ ನಿಲ್ಸ್. ಅವ್

ಆದ್‌ಲೆಂತ ನೀ ನೆನ್ಸುದಾದರೆ ನಿನ್ನ ಇಷ್ಟ್ ದೊಡ್ಡ ಸಾಮ್ರಾಜ್ಯಲಿ ಒಂದು ಐದ್ ಗ್ರಾಮಗಳನಾರ್ ಕೊಡು. ನಿಂಗೆ ಸಂಬಂಧನೇ ಇಲ್ಲವ ಕುಲಹೀನಂತ ಅವಹೇಳನಕ್ಕೆ ಒಳಗಾಗಿರುವ ಕರ್ಣನ ಗುರುಗ ಹೀನೈಸಿದಿಕೆ ಮರುಕ ತುಂಬಿ, ನೀ ಅವಂಗೆ ಅಂಗರಾಜ್ಯದ ಪಟ್ಟನೇ ಕಟ್ಟಿದ ಉದಾರಿ. ಅಂವ ನಿಂಗೆ ಸಂಬಂಧಿಕನೂ ಅಲ್ಲ. ಸ್ವಜಾತಿಯೂ ಅಲ್ಲ. 'ಮೀಂಗುಲಿಗ, ಸೂತಪುತ್ರ' ಹೀಂಗೆ ಮೇಲ್ಜಾತಿಯವರ್‌ಂದ ಹೀನೈಸಿಕಂಡ ಅವನ ಮೇಲೆ ಅಷ್ಟ್ ಅನುಕಂಪ ನಿಂಗೆ ಬರೊಕುಂತಾವರೆ ನಿನ್ನ ಹೃದಯ ಎಷ್ಟ್ ದೊಡ್ಡದ್‌ಂತ ಕೊಂಡಾಡೊಕಾದೆ. ನಿನ್ನ ಉದಾತ್ತತೆನ ತಿಳಿಯದ ಜನ ಅಂದ್ ನಿನ್ನ ದೂಷಿಸಿದೊಗಡ. ಅಂಥ ಯಾರೋ ಒಬ್ಬಂಗೆ ಔದಾರ್ಯ ಮೆರೆದ ನೀ ನಿನ್ನ ಸ್ವಂತ ಚಿಕಪನ ಮಕ್ಕ, ನಿನ್ನ ಸೋದರರೇ ಆಗಿರುವ ಪಾಂಡವಲೆರಿಗೆ, ಜೂಜುನ ನಿಬಂಧನೆಗೊಳಗಾಗಿ, ಹನ್ನೆರ್ಡ್‌ವೊರ್ಸ ಕಾಡ್‌ಲಿ, ಮರಗಳ ದರ್ಗೆಲೆಗ ಬಿದ್ದ್ ಕೊಳ್ತ್‌ನಾರುವ, ಕೆರೆ ಕೊಳಗಳ ನೀರ್‌ನ ಕುಡ್ದ್, ಗೆಂಡೆ ಗೆಳ್ಸ್‌ಗಳ ತಿಂದ್, ನುಸಿ ನೊಣಗಳ್‌ಂದ ಕಚ್ಚ್‌ಸಿಕಲೆಂಡ್, ಹಾವು ಚೇಳ್‌ಗಳಿಗೆ, ಆನೆ, ಕಾಟಿ, ಹುಲಿ ಸಿಂಗಗಳಿಗೆ ಯಾಗೋಳು ಹದ್‌ರಿಕಲೆಂಡ್, ಕಲ್ಲ್, ಮುಳ್ಳುಗಳ್‌ಂದ ಕೂಡ್ದ ಒರ್ಟ್ ನೆಲಲೆಲಿ ಮಲ್ಗಿ ಮೈಯೆಲ್ಲ ಯಾತನೆಯಾಗಿ ಸರಿಯಾದ ನಿದ್ದೆನೂ ಇಲ್ಲದೆ, ಹೀಂಗೆ ಬಾರದ ಬಂಗ ಬಂದ ಆ ಕೋಮಲ ಶರೀರರಿಗೆ ನಿನ್ನ ಮನ್ಸ್ ಜೆಣ್ಣ ನಾಂಗೆ ಕರ್ಗುದರ್ಲಿ ಆಶ್ಚರ್ಯ ಏನುಟ್ಟು? ಹಾಂಗೆ ಬೇಗ ನೀ ಒಬ್ಬ ಮೂತನ ಕಳ್ಸಿ ಅವರ ಹಿಂದೆ ಕರ್ಸಿ, ಹಿಂದೆ ಅವರ್ದೇ ಆಗಿದ್ದ ಅವರ ರಾಜ್ಯ, ಕೋಶಗಳ ಹಿಂದೆ ಕೊಟ್ಟ್ ಅವ್ಕೆ ನೆಲೆ ಮಾಡಿ ಬುಟ್ಟರೆ, ಮೂರು ಲೋಕವೂ ನಿನ್ನ "ಪಾಂಡವ ಪ್ರತಿಷ್ಠಾಪನಾಚಾರ್ಯ"ಂತ ಹೇಳಿ ಸೂರ್ಯ ಚೆಂದ್ರರ್ ಇರುವವರೆಗೆ ನಿನ್ನ ಕೀರ್ತಿನ ಕೊಂಡಾಡುದು.

ಇಷ್ಟ್ ಹೇಳಿ ಕೃಷ್ಣ ಮಾತ್ ನಿಲ್ಸ್‌ಕನ ರಾಜ ಸಭೆವು ಜಯ ಜಯ ಶ್ರೀಕೃಷ್ಣ! ಜಯ ಜಯ"ಂತ ಉದ್ಘೋಷ ಮಾಡ್ತು. ಸಭಿಕಲೆರಿಗೆಲ್ಲ ಕೃಷ್ಣ, ಕರ್ಣಂಗೆ ಅಂಗರಾಜ್ಯದ ಪಟ್ಟ ಕಟ್ಟಿದ ವಿಷಯನ ಎತ್ತಿ ಈ ಸಂದರ್ಭಕ್ಕೆ ಹೊಂದ್‌ಸಿ ದುರ್ಯೋಧನನ ಮನ್‌ಸ್ ಕರ್ಗುವಾಂಗೆ ವಾದ್‌ಸಿದ್ ಮನ್ಸಿಗೆ ತುಂಬ ಒಡ್ತ್. ಖಂಡಿತ ದುರ್ಯೋಧನನ ಮನ್ಸ್ ಮೆದುವಾಗಿ ಸಂಧಿಗೆ ಒಪ್ಪುದುಂತ ಆಸೆ ಪಟ್ಟ್‌ಕಂಡೊ.

ಆದರೆ, ದುರ್ಯೋಧನನ ಮೋರೆಲಿ ಯಾವ ಮಾರ್ದವತೆನೂ ಕಾಣದೆ ಕಠೋರತೆನೇ ಕಂಡಲೆತ್. ಅಂವ ಮಾತಿಗೆ ಸುರುಮಾಡ್ತ್. "ಕೃಷ್ಣ! ಹುಟ್ಟು ಗುಣ ಗಟ್ಟ ಹತ್ತಿರೂ ಹೋಕಿಲೆಂತೇಳುವ ಗಾದೆ ಮಾತ್ ಸರೀಂತ ತೋರ್ದಿದ. ಬೇಡುದು ನಿನ್ನ ಹುಟ್ಟುಗುಣ. ತನ್ನ ಪಾಡಿಗೆ ತಾನ್ ಸುಖಲಿನೂ, ವೈಭವಲಿನೂ ಪ್ರಜಾವತ್ಸಲನೂ ಆಗಿದ್ದ ಬಲಿ ಚಕ್ರವರ್ತಿನ ನೋಡಿ, ಹೇಡಿಗಳೂ, ಕಳ್ಳ್ ಕುಡ್ಕರೂ, ವ್ಯಭಿಚಾರಿಗಳೂ ಆಗಿದ್ದ ದೇವತೆಗ ಸುಕ ಸುಮ್ಮನೆ ಅವನ ಮೇಲ ಕೇಜ್‌ಂದ ಚಾಡಿ ಹೇಳ್ತು. ಆ ಚಾಡಿ ಮಾತ್ನ ಕೇಳಿ ನೀ ಒಂದು ಹಾರ್‍ರ ಮಾಣಿನ ವೇಸ ತಾಳಿ ಮೂರಡಿ ನೆಲನ ಬೇಡಿ ಅವನ ಪಾತಾಳಕೆ ಇಳ್ಸಿದ. ಇಷ್ಟಕ್ಕೂ ಅಂವ ನಿನ್ನ ವಿರೋಧಿಯಾಗಿತ್ತ್‌ಲೆ. ನಿನ್ನ ಪರಮ ಭಕ್ತ ಪ್ರಹ್ಲಾದನ ಪಿಳ್ಳಿ ಅಂವ. ಲೋಕಲೆಲಿ ಯಾರಾರ್ ಒಳ್ಳವು ಒಳೊಂತಾವರೆ, ಅವರ ಹಾಳ್ ಮಾಡದೆ

ನಿಂಗೆ ನಿದ್ದೆ ಬಾಕಿಲೆ. ಈ ಸಂಧಾನ ಕಾರ್ಯ ನಿಂಗೆ ಬೇಡ. ನಿಂಗೆ ಏನೂ ಮಾಡಿಕೆ ಕೆಲ್ಸ ಇಲ್ಲೆಂತಾದರೆ ಸಣ್ಣೆತರ್ಲಿ ಮಾಡ್‌ತ್ತಿದ್ದಲೆ, ಹಾಂಗೆ ಗೊಲ್ಲರ ಮನೆ ಮನೆಗೆ ಹುಗು. ನೆಲುಲಿ ಬೆಣ್ಣೆ ಇಸಿಯೊಳೊನೋ ನೋಡು. ವೈಭವಲಿರುವ ನಮ್ಮ ಕುರು ಸಾಮ್ರಾಜ್ಯನ ಚೂರು ಚೂರು ಮಾಡಿ ಹಾಕುವ ಯೋಚನೆ ಅಂದರೆ ಕೆಟ್ಟ ಯೋಚನೆ ನಿಂಗೆ ಬೇಡ. ಪಾಂಡವರ್‌ಂತ ಹೇಳೊವು ಪಾಂಡು ಚಿಕಪ್ಪನ ಮಕ್ಕ ಅಲ್ಲಂತ ಲೋಕಕ್ಕೇ ಗೊತ್ತುಟು. ಅವು ನಮ್ಮ ಪ್ರಸಿದ್ಧ ಕುರುಕುಲಕೆ ಸೇರ್ದವೇ ಅಲ್ಲಂತ ಗೊತ್ತುಟು. ಅವು ನಮ್ಮ ಪ್ರಸಿದ್ಧ ಕುರುಕುಲಕೆ ಸೇರ್ದವೇ ಅಲ್ಲಂತ ಹಿಂದೆ ಹಲವು ಸರ್ತಿ ಹೇಳಿಯೊಳೆ. ಇನ್ನೂ ಹೇಳುವೆ. ಅವು ಇದ್ದದರೆಲ್ಲ ಕಳ್ಕಣ್ಡ್ ಕಾಡಿಗೆ ಹೋಕನೇ ನಮ್ಮ ಕುಲಕ್ಕೆ ಅಂಟಿದ ಒಂದು ಕಪ್ಪು ಚುಕ್ಕೆ ತೊಡ್ಡ್ ಹೋತುಂತ ಸಂತೋಸು ಪಟ್ಟದ್ದ್. ಅಷ್ಟ ವರ್ಸ ಕಾಡ್‌ಲಿದ್ದೊ, ತಾವು ನಿಜವಾಗಿ ಯಾರ್‌ಂತ ತಿಳ್ಕಣದೆ ರಾಜ್ಯದ ಹಕ್ಕ್‌ನ ಬಗ್ಗೆ ಹಿಂದಕೆ ಬಂದ್ ಕೇಳಿಕೆ ಅವ್ಕೆ ಯಾವ ಹಕ್ಕುಟ್ಟು? ನೀ ಅವರ ಪರವಾಗಿ ವಾದ ಮಾಡಿ ಪ್ರೇಜನ ಇಲ್ಲೆ. ಅರ್ಧ ರಾಜ್ಯ ಅಲ್ಲ. ಐದ್ ಗ್ರಾಮಗಳ ಅಲ್ಲ. ಒಂದು ಸೂಜಿಮೊನೆ ಚುಚ್ಚುವಷ್ಟ ಕೂಡ ಅವ್ಕೆ ಜಾಗೆ ಕೊಡಿಕಿಲ್ಲೆ. ಬಂದ ದಾರಿಗೆ ಸುಂಕ ಇಲ್ಲಂತ ನೀ ಇಲ್ಲಿಂದ ಹೊರ್ಡ್‌ಂತ ಕೋಪಲಿ ಹೇಳ್ತ್. ಕೃಷ್ಣಂಗೆ ವಿಪರೀತ ಕೋಪ ಬಾತ್. 'ದುರ್ಯೋಧನ! ಪಾಂಡವರಿಗೆ ನೀ ಮಾಡ್ದ ತಪ್ಪು ಒಂದೆರಡಲ್ಲ. ಸುರುಂದಲೇ ನಂಪುಮಾಡಿಕ. ಭೀಮಂಗೆ ವಿಸದ ಲಾಡ್ ತಿನ್ಸಿದ್, ಹಾವುಗಳ್‌ಂದ ಕಚ್ಚ್‌ಸಿದ್, ಗಂಟ್ಲಗೆ ಕಲ್ಲ್ ಕಟ್ಟಿ ಗಂಗೆನ ಹೊಂಡಕ್ಕೆ ನೂಕಿ ಹಾಕಿದ್, ಖಾಂಡವ ಪ್ರಸ್ತಲಿ ಅರ್ಕ್‌ನ ಮನೆಲಿ ಎಲ್ಲರ್ನೂ ಸುಟ್ಟ್ ಹಾಕುವ ಸಂಚ್ ಮಾಡ್ದ್, ಕಪಟ ಜೂಜಾಟಲಿ ಅವರ ಸರ್ವಸ್ವನ ಅಪಹರಣ ಮಾಡ್ದ್, ಪರಮ ಪತಿವ್ರತೆಯಾದ ಪಾಂಡವರ ಪತ್ನಿ ದ್ರೌಪದಿನ, ರಾಜಸೂಯ ಯಾಗ ಪರಿಪೂತೆ, ರಜಸ್ವಲೆಯಾಗಿ, ಏಕವಸ್ತ್ರಧಾರಿಣಿಯಾಗಿದ್ದದರ ಕೂದೊಲುಲಿ ಹಿಡ್ದ್ ಎಳ್ಕಣ್ಡ್ ರಾಜ ಸಭೆಗೆ ಎಳ್ಕಣ್ಡ್ ಬಂದ್ ಅವಮಾನ ಮಾಡ್ದಲ್ಲದೆ, ಅವರ ಸೀರೆನ ರಾಜ ಸಭೆಲಿ ಬಿಚ್ಚಿಕೆ ನೋಡ್ದ್ ನೀಚ ಕೃತ್ಯನ ಮಾಡ್ದ್, ಇದರೆಲ್ಲ ನೀ ಆಗಳೇ ಮರ್ತ್ ಬುಟ್ಟೊಳ? ನೀ ಮಾಡ್ದ ಈ ಕೃತ್ಯಗಳ, ಸ್ವಾಮಿ ಭೂಮಿ ಮೆಚ್ಚುದೊ? ಇಂಥ ಹೀನ ಕಾರ್ಯಗ ನಿಜವಾದ ಕ್ಷತ್ರಿಯಲ್ ಮಾಡುವಂತದಲ್ಲ. ಇದರ ವಿರೋದ್‌ಸಿ ಇಡೀ ಕ್ಷತ್ರಿಯ ಲೋಕವೇ, ತಮ್ಮ ಕುಲಕ್ಕಾದ ಅವಮಾನಂತ ನನ್ನಿ ನಿನ್ನ ಇದಿಕೆ ಮುಂದೇ ನಾಶಮಾಡಕಯ್ತ್. ಪಾಂಡವಲ್ ಸಹಿಸಿಕಣ್ಡದ್ ಅವ್ಕೆ ಬೊತ್ತದೆ ಅಲ್ಲ. ಭೀಮ ಗದೆನ ಎತ್ತಿಕಂಡರೆ ಅರ್ಜುನ ಗಾಂಡೀವನ ಹಿಡ್ದ್ ಹೊರ್ಟರೆ, ಅವರ ಎದ್‌ರ್ಲುವ ಗಣ್ಡ್‌ಗ ನಿಮ್ಮಲ್ಲಿ ಯಾರೊಳೊ? ಗಂಧರ್ವಲ್ ನಿನ್ನ ಹೆಡೆಮುರಿಕಟ್ಟಿ ಹೊತ್ತ್‌ಕಣ್ಡ್ ಹೋಕನ ಗುರು ಇತ್ತ್‌ಲೆನೊ? ಗುರುನ ಮಗ್ಗ, ರುದ್ರಾವತಾರ, ಅಶ್ವತ್ಥಾಮ ಇತ್ತ್‌ಲೆನೋ? ಪಿತಾಮಹಲ್ ಭೀಷ್ಮ ಇತ್ತ್‌ಲೆನೊ? ನಾನೇ ವೀರಂತ ಯಾಗೋಳೂ ಕೊಚ್ಚಿಕಂಬ ನಿನ್ನ ಪ್ರಿಯ ಮಿತ್ರ ಕರ್ಣ ಇತ್ತ್‌ಲೆನೊ? ನಿನ್ನ ನೂರು ಜನ ತಮ್ಮಂಲ್. ನಿನ್ನ ಚತುರಂಗ ಸೇನೆ ಇತ್ತ್‌ಲೆನೊ? ಅವೆಲ್ಲ ಪಿಳಿಪಿಳಿ ಕಣ್ಣ್ ಬುಟ್ಟ್‌ಕಣ್ಡ್ ಇದ್ದಾಂಗೆ ಆಕಾಶ ಮಾರ್ಗಲಿ ನಿನ್ನನೂ. ನಿನ್ನ ತಮ್ಮನ್ನೂ ಗಂಧರ್ವ

ಸೆರೆ ಹಿಡ್ದ್ ತಕಲ್ಂಡ್ ಹೋಕನ ಭಾನುಮತಿ ರೋವ್‌ಸಿಕಲ್ಂಡ್ ಯುಧಿಷ್ಠಿರನ ಬೇಡಿಕಂಬಕನ, ಅವನ ಅಪ್ಪಣೆ ಪ್ರಕಾರ, ಏಕಾಂಗಿಯಾಗಿ ಹೋಗಿ ಗಂಧರ್ವ ಪಡೆನ ಸೋಲ್ಸಿ, ನಿಮ್ಮಿಬ್ಬರ ಆಕಾಶಕ್ಕೆ ಏಣಿ ಮಾಡ್ದಾಂಗ ಬಾಣ ಬುಟ್ಟ್, ನಿಮ್ಮ ಮೆತ್ತಂಗ ಭೂಮಿಗೆ ಇಳ್ಸಿದಂವ ಅರ್ಜುನ ಅಲ್ಲಾ? ಹೀಂಗೆ ನಿನ್ನ ಪ್ರಾಣ ಮತ್ತೆ ಮಾನ ಗೌರವನ ಒಳ್ಸಿದ ಪರಾಕ್ರಮ ಶಾಲಿಗಳಿಗೆ ನೀ ಕೃತಘ್ನನಾಕಾದ್, ನ್ಯಾಯವೇ ಅಲ್ಲಾ? ಮನ್ನೆ ಮನ್ನೆ ನಡ್ದ ನಿಮ್ಮ ಗೋಗ್ರಹಣ ಪ್ರಸಂಗಲ್ಲಿ ನಿನ್ನ ಸರ್ವ ಸೇನೆಗೂ ಸೇನಾಪ್ರಮುಖರಿಗೆ ಮೋರೆಗ ಏಕಾಂಗ ವೀರ ಪಾರ್ಥ ಮೊಸಿ ಪೂಜಿದರ ಅಷ್ಟ್ ಬೇಗ ಮರ್ತ್ ಬುಟ್ಟ? ಶಹಭಾಸ್! ದುರ್ಯೋಧನ! ನಿನ್ನ ಮೆಚ್ಚೋಕೆ! ಸಂಧಿಗೆ ನೀ ಒಪ್ಪದಿದ್ದರೆ, ಇನ್ನ್ ಹೆಚ್ಚಿದಿನ ಬೇಡ! 'ರೊಂಯ್ಯ' 'ರೊಂಯ್ಯ'ಂತ ಗಾಂಡಿವದ ನಾರಿನ ಪ್ರತಿಧ್ವನಿ ನಿಮ್ಮ ಕೆಬಿಗಳ್ಲಿ ಮೊಳ್ಗುದು ಹತ್ತ್ ದಿಕ್ಕ್‌ಗಳ್‌ಂವಲೂ ಅದರ್‌ಂದ ಹದ್ದ್‌ಗಳ ಹಾಂಗೆ ಹಾರುವ ಬಾಣಂಗ ಹಾರಿ ನಿಮ್ಮ ಸುಭಟರ ತಲೆಗಳ ತಾಳೆ ಕಾಯಿಗಳ ಹಾಂಗೆ ನೆಲಕೆ ಕೆಡ್ಗುವೊ. ರುಧಿರಮುಖಿಂತೇಳ್ವ ಭೀಮನ ಗದೆ ಪರ್ವತಗಳ ಮೇಲೆ ಬೀಳುವ ಸಿಡ್ಲಿನ ಪೆಟ್ಟ್‌ನ ಗುಡ್ಗುನ ಸದ್ದ್‌ನಾಂಗೆ, ಆನೆಗಳ ರಥಗಳ ಕುದುರೆಗಳ ಮೇಲೆ ಬಿದ್ದ್ ಅವರೆಲ್ಲ ನುಜ್ಜು ಗುಜ್ಜಾಗುವ ಹಾಂಗೆ ಮಾಡುದುರ ನೋಡುವರಿ. ಯಮಳರ್, ರಣರಂಗಲ್ಲಿ ಖಡ್ಗಗಗಳ ಬೀಸಿ ಬೀಸಿ, ಯುದ್ಧ ವೀರರ ತಲೆಗಳ, 'ಕಚಕ್' 'ಪಿಚಕ್'ಂತ ತುಂಡು ಮಾಡ್‌ಕನ ತಲೆತುಂಡಾದ ಮುಂಡಂಗಳ್‌ಂದ ನೆತ್ತ್ರ್‌ನ ಊಟೆ ಬಾನೆತ್ತರಕೆ ಚಿಮ್ಮುದು. ಅಟ್ಟೆಗ ಮಾಡುವ ನರ್ತನ, ರಣರಂಗಲ್ಲಿ ಹರಿವ ನೆತ್ತ್ರ್‌ನ ಹಳ್ಳಲ್ಲಿ. ಶಾಕಿನಿ, ಡಾಕಿನಿ, ಪೂತನಿ ಮುಂತಾದ ಪಿಶಾಚಿಗ ನೆತ್ತ್ರ್‌ನ ಓಕುಳಿಯಾಡಿ ಕುಸಿಪಡುವೊ. ಸತ್ತ್ ಬಿದ್ದ ಆನೆಗಳ ಬೆಟ್ಟದಾಂಗಿರುವ ರಾಸಿಗಳ್ ಮೇಲೆ ಹತ್ತಿ, ಅಲ್ಲಿಂದ ನೆತ್ತ್ರ್‌ನ ಹೊಂಡಕೆ ದುಡುಮ್ಮನೆ ಹಾರಿ ಆನಂದ ಪಡುವೊ.

ನಿಮ್ಮ ಶಿಬಿರಗಳ್ಲಿ ಕರ್ಪರೆ ಓಂಕಂಬಕೆ ಒಂದು ನರಪಿಳ್ಳೆನೂ ಇರಿಕಿಲ್ಲೆ.

ಗಂಡನ ಕಳ್ಕಂಡ ಹೆಣ್ಣ್, ಮಜ್ಜನ ಕಳ್ಕಂಡ ಅಯ್ಯ, ಅಣ್ಣನ ಕಳ್ಕಂಡ ತಂಗೆ ಇಂತವರ ಪರಿವಾರ ತಲೆ ಹರ್‌ಂಡಿಕಲ್ಂಡ್, ಕಣ್ಣೀರ್ ಸುರ್ಸಿಕಲ್ಂಡ್ ಗೋಳಾಡುವ ಗೋಳು ಎಲ್ಲೆಲ್ಲಿಯೂ ತುಂಬುದು. ಕುರುಡರಾದ, ಮುದಿಯರಾದ ನಿನ್ನ ಅಯ್ಯಪ, ಗತಿ ಇಲ್ಲದ ಭಿಕಾರಿಗಳಾಗಿ ಗೋಳಾಡಿಕಲ್ಂಡ್ ಇರುವೊ. ರಣರಂಗಲ್ಲಿ ಪಾಂಡವರ ಆಯುಧಗಳಿಗೆ ಬೊಲಿಯಾದ, ನಿನ್ನ ತಮ್ಮಂದರ, ಮಕ್ಕಳ, ಬಂಧುಗಳ, ಮಿತ್ರರ ಅಟ್ಟೆಗಳ, ನರಿಗ, ಹದ್ದ್‌ಗ ಎಲ್ಲ ಕಚ್ಚಿ ಕಚ್ಚಿ ಎಳ್ದಾಡಿಕಲ್ಂಡ್, ಜೊಪ್ಪೆ ಹೊಡ್ಕಲ್ಂಡ್ ತಿಂಬೊ. ನೆತ್ತ್ರ್‌ನ ಹಳ್ಳ, ಮೆದುಳಿನ ಕೆಸರ್, ತಲೆ ಕೂದೊಲುನ ಪಾಚಿತುಂಬಿದ ರಣರಂಗ, ಕೊಳ್ತ್ ನಾರುವ ಮಾಸದ ಹೊಲ್ಸ್ ವಾಸನೆ ಊರೆಲ್ಲ ತುಂಬಿ, ಒಳ್ವೊಷ್ಕೆ ಕಾರಿಕೆ ಬಾವಾಂಗೆ ಮಾಡುದು. ಸುಖದ ಸುಪ್ಪತ್ತಿಗೆಲಿ, ರಾಜಭೋಗಲ್ಲಿ ಓಲಾಡುವ ಈ ನಿನ್ನ ಕೋಮಲ ದೇಹ, ಕಲ್ಲ್ ಮೊಣ್ಣ್‌ಂದ ಕೂಡ್ದ ಒರ್ಟ್ ನೆಲದ ಮೇಲೆ ಹೊಣ್ಣಾಡುದು ಮೃಷ್ಟಾನ್ನ ಬೋಜನ ಮಾಡಿ, ಕರ್ಪೂರ ವೀಳ್ಯದ ಸವಿನೋಡುವ ನಿನ್ನ ಬಾಯಿಗೆ ಹೊಡಿಮೊಣ್ಣ್ ತುಂಬುದು. ಸಂಧಿಗೆ ಒಪ್ಪುದು ಜಾಣತನ. ಇಲ್ಲದಿದ್ದರೆ ನಿಂಗೆ ನರ್ಕ ಬಾಯಿ ಬುಟ್ಟ್

ಕಾದ್‌ಕಣಂಡೇ ಉಟ್ಟು.

ಕೃಷ್ಣನ ಈ ಮಾತ್‌ಗಳ ಕೇಳಿ ದುರ್ಯೋಧನಂಗೆ ಉರಿ ಉರಿ ಕೋಪ ಬಾತ್. ದುಶ್ಶಾಸನ ಮತ್ತೆ ಕರ್ಣನೊಟ್ಟಿಗೆ ಹೇಳ್ತ್. "ನೀವು ಹೋಗಿ ಬೇಗ ಒಂದು ಜೊಳ್ಕಿತನ್ನಿ. ಆಸ್ಥಾನದ ಮರ್ಯಾದೆನ ಮೀರಿ ಹರ್ದುವ ಈ ಗೋವಳನ ಹಿಡ್ದ್ ಕಟ್ಟಿ ಹಾಕೊನೊ ಇಲ್ಲರೆ ಅವನ ಮೋರ್ಲ್ ಮಾತ್ ನಿಲ್ಲಿಕಿಲೆ" ದುಶ್ಶಾಸನನೂ ಕರ್ಣನೂ ಹೊರೆಗೆ ಹೊರ್ಟ್ ಹೋದೊ.

ಕೃಷ್ಣನ ಕಟ್ಟಿ ಹಾಕುದುಂತ ದುರ್ಯೋಧನ ಯೋಚನೆ ಮಾಡಿಟುಂತೇಳ್ದರ ಕೇಳಿ ಸಭೆಲಿ ಗೊಂದಲ ಸುರಾತ್. ಹಿರಿಯೊವು, ಧೃತರಾಷ್ಟ್ರ ಸೇರಿ, "ಬೇಡ ಬೇಡ"ಂತ ವಿರೋಧಿಸಿದೊ. ಆಸ್ಥಾನದ ಹೊರೆಗೂ ಸುದ್ದಿ ಹಬ್ಬಿತ್. ದುರ್ಯೋಧನನ ಸಹಾಯಕ್ಕಂತ ಕಳ್ಸಿದ ಯಾದವ ಸೇನೆ ಅರಮನೆನ ಹೆಬ್ಬಾಗಿಲ ಕಡೆ ಆಯುಧಗಳ ಹಿಡ್ಕಣಂಡ್ ಬಂದ್ ಸೇರ್ತ್.

ಕೃಷ್ಣ ಕೋಪಲಿ ಮೈ ಒದರ್‌ಕನ ಗುಡುಗು ಗುಡ್ಗಿತ್. ಸಿಡ್ಲ್ ಮಿಂಚಿತ್. ದೊಡ್ಡ ಸ್ಫೋಟದಾಂಗೆ ಸಬ್ದ ಆಗಿ ಭೂಮಿ ಒಮ್ಮೆ ನಡ್ಗಿತ್. ದೊಡ್ಡದೊಂದು ಜ್ಯೋತಿ ಭೂಮ್ಯಾಕಾಶಲಿ ಬೆಳ್ಗಿತ್.

ಕೃಷ್ಣ ವಿಶ್ವರೂಪು ತಾಳಿ ಆಕಾಶದೆತ್ತರ ನಿತ್ತತ್. ಚಿನ್ನದ ಬಣ್ಣದ ಕಾಂತಿ ಲೋಕದ ತುಂಬೆಲ್ಲ ಹಬ್ಬಿತ್. ಅದರ ಪ್ರಭೆಲಿ ಜನಂಗಲ್ಲ ತೇಂಕಿ ಮುಳ್ಕಾಡಿಕಣಂಡ್ ಇದ್ದೊ. ಎಲ್ಲ ಗ್ರಹಗಳೂ ಅವನ ಹೊಟ್ಟೆನೊಳಗೇ ತಿರ್‌ಗ್ತಿರ್‌ಗ್ಯಂಡ್ ಇದ್ದೊ. ತೆರೆ ತೆರೆಗಳ್‌ಂದ ಕೂಡಿ ಅಬ್ಬರ್‌ಸಿಕಣಂಡ್ ಇದ್ದೊ ಲೆಕ್ಕಕ್ಕೆ ತಾಕ ಜೊತ್ತೆದಷ್ಟ್ ಕೈಗಳ್ಲಿ ನಾನಾ ವಿಧದ ಆಯುಧಂಗ ಇದ್ದೊ. ಅದರ್ಲಿ ಪ್ರಧಾನವಾದ ಅವನ ಚಕ್ರಾಯುಧ ಗರಗರನೆ ತಿರ್‌ಗ್ತಿತ್ತ್. ಅದರ್‌ಂದ ಸೂಸಿದ ಕಿಡಿ ಹೊವ್‌ರಿ ಹೊರ್ಡಾಂಗೆ ಪರಪರಂದ್ ಹರ್‌ಂಡ್‌ತ್ತಿತ್ತ್. ಸೃಷ್ಟಿ, ಸ್ಥಿತಿ, ಲಯ ಕರ್ತನಾಗಿ ಅವನೇ ಕಾಂಬತಿತ್ತ್. ಅವನ ಹಲವಾರ್ ಮೋರೆಗಳ್ಲಿ ಒಂದರ್‌ಂದ ಲಯಕಾಲದ ಅಗ್ನಿ ಜ್ವಾಲೆ ಹೊರ್ಟರೆ ಇನ್ನೊಂದರ್ಲಿ ಬಿರುಗಾಳಿ ಬೀಸ್‌ತ್ತಿತ್ತ್. ಇನ್ನೊಂದು ತೆರೆದ ಬಾಯೊಳಗೆ ಮಾನವ ದಾನವ ದೇವ ಅಲ್ಲದೆ ಸಕಲ ಜೀವ ಕೋಟಿಗಳೂ ಹುಗುತಿದ್ದೊ. ಈ ಸೌಮ್ಯ ಭಯಂಕರ ರೂಪುನ ನೋಡಿ ಸಭೆ ಸರ್ವರೂ, ಸಂತೋಷ ಆಶ್ಚರ್ಯಗಳ್ಲಿ ಮುಳುಗಾಡ್ದೊ. ಈ ರೂಪುನ ನೋಡಿಕೆ ಧೃತರಾಷ್ಟ್ರಂಗೂ ಕೃಷ್ಣ ಕಣ್ಣ್ ಕೊಟ್ಟಿತ್. ಧೃತರಾಷ್ಟ್ರ ಆ ಅದ್ಭುತ ರೂಪುನ ಮನ್‌ಸಾರ ನೋಡಿ ಪರಮಾನಂದನ ಅನುಭವಿಸಿತ್. ಮತ್ತೆ ಕೃಷ್ಣ! ವಾಸುದೇವ! ನಿನ್ನ ದಿವ್ಯ ರೂಪುನ ನೋಡಿ ಧನ್ಯನಾದೆ. ನಿನ್ನ ಪುಣ್ಯ ರೂಪುನ ನೋಡ್ದ ಮೇಲೆ ಇನ್ನ್ ಬೇರೆಯಾದರ್‌ನ್ನ ನೋಡಿಕೆ ಮನ್‌ಸಿಲ್ಲೆ. ನನ್ನ ಮುಂದೆನಾಂಗೆ ಕುರುಡನಾಗಿ ಇರುವಾಂಗೆನೇ ಮಾಡ್‌ಂತ ಪ್ರಾರ್ಥನೆ ಮಾಡ್ತ್. ಅಂವ ಮುಂದೆನಾಂಗೇ ಆತ್. ದುರ್ಯೋಧನಂಗೆ ವಿಶ್ವರೂಪು ತೋರ್‌ಲ್ತಲೆ. ಅವನೂ ಅವನ ಕೂಟಾಳಿಗಳಿಗೂ ಸಭೆಲಿದ್ದ ಪ್ರತಿಯೊಬ್ಬನೂ ಕೃಷ್ಣನ ಹಾಂಗೇ ಕಂಡೊ. ಯಾರ್‌ನ್ನ ಕಟ್ಟಿ ಹಾಕುದು? ಗೊತ್ತಾಗದೆ ಬೆಪ್ಪರಾಂಗೆ ತಜ್ಜಿಬ್ಬಾಗಿ ನಿತ್ತೊ.

ಕೃಷ್ಣ ವಿಶ್ವರೂಪುನ ನಿಲ್ಸಿ ಮುಂದೆನಾಂಗೆ ಆಗಿ ಸಭೆಂದ ಹೊರ್ಟ್, ಅಶ್ವತ್ಥಾಮನ ಕೈ ಹಿಡ್ಕಕೆಂಡ್ ಹೊರೆಗೆ ಬಂದ್ ವಿದುರನ ಮನೆಗೆ ಬಾತ್. ಕುಂತಿನ ನೋಡಿ ನಡ್ದ ಸಂಗತಿನೆಲ್ಲ ಚುಟುಕಾಗಿ ಹೇಳ್ತ್. ಭೀಷ್ಮ, ದ್ರೋಣ, ಅಶ್ವತ್ಥಾಮ ಇವೆಲ್ಲ ನಾವ್ಗೆ ಮಾನಸಿಕ ಬೆಂಬಲನಾರ್ ಕೊಡೊವೊ. ಒಳ್ದೊವು ಎಲ್ಲ ತೀವ್ರ ವಿರೋಧದವೆ ಆದರ್ಲೂ ಕರ್ಣ ತುಂಬ ಕಠಿಣನಾದಂವ. ಅಂವ ನಿಮ್ಮ ಚೊಚ್ಚಿಲ ಮಕ್ಳ. ನೀವು ಅವನ ನೋಡಿ, ನೀವ್ಗೆ ತಿಳ್ದಾಂಗೆ ಅವನ ನಮ್ಮ ಪಕ್ಷಕ್ಕೆ ಒಲಿವಾಂಗೆ ಮಾಡಿಕೆ ಪ್ರಯತ್ನ ಮಾಡಿ. ನಾನೂ ತೀರ್ದ ಮಟ್ಟಿಗೆ ಅವನ ಬೇದಿಸಿ ನೋಡ್ತೆ. ಇನ್ನ್ ನಾ ಹೋಗಿ ಪಾಂಡವಕೆರ್ ಯುದ್ಧಕ್ಕೆ ತಯಾರಾಗುವ ಹಾಂಗೆ ಹೇಳ್ತೆಂತ ಹೇಳಿ ರಥ ಹತ್ತಿ ಹೊರ್ಟಕೆತ್.

ರಥಲಿ ಕರ್ಣನ ಮನೆ ಹಕ್ಕಲೆ ಹೋಗಿ ಕರ್ಣನ ಕರ್ತ್. 'ಕರ್ಣ! ಬಾ. ನನ್ನ ಹಜ್ಜ ದೂರ ದಾರಿ ಕಳ್ಸಿ ಬರೆಕ್. ಬಾ ಪೋಯಿ'ಂತೇಳ್ತ್. ಕರ್ಣ ಬಾತ್. 'ಬಾ! ರಥಕೆ ಹತ್ತಿಕಂ'ತ ಹೇಳ್ತ್. ಹಾಂಗೆ ಕರ್ಣ ತೇರಿಗೆ ಹತ್ತಿ ಒಂದು ಕರೆಲಿ ಒಂದಿ ಕುದ್ದ್‌ರಿಕೆ ನೋಡ್ತ್. ಆಗ ಕೃಷ್ಣ ಅವನ ಹೆಗ್‌ಲ್ ಮೇಲೆ ಕೈ ಹಾಕಿ, ಸ್ನೇಹಕೆಲಿ, 'ಇತ್ತ ಬಾ ಮಾರಾಯಂತೇಳಿ ತನ್ನ ಜೊತೇಲೆ ಕುದ್ದ್‌ರ್ಸಿಕಂಡಕೆತ್. 'ನೀವು ಉತ್ತಮ ಜಾತಿಗೆ ಸೇರ್ದೊವು. ನಾ 'ಮೀಂಗುಲಿಗ', 'ಸೂತ ಪುತ್ರ'ಂತ ಹೇಳುವ ಹೀನ ಜಾತಿಗೆ ಸೇರ್ದಂವ. ನೀವ್ಗೆ ಸರಿ ಸಮ ಆಗಿ ಕುದ್ದುರ್ದು ಹೇಂಗೆ? 'ಕರ್ಣ! ನೀ ನಂಗೆ ಭಾವ ನಾ ನಿನ್ನ ಮೊಯ್ದುನ ಹೀಂಗೆ ನಮ್ಮ ಸಮ್ಮಂದ ಇರ್‌ಕನ, ಉತ್ತಮ ಜಾತಿ, ಹೀನ ಜಾತಿಂತೇಳ್ದು ಎಲ್ಲ್ಯುಟ್ಟು?'ಂತ ಕೃಷ್ಣ ನೆಗಾಡಿಕಕೆಂಡ್ ಉತ್ತರ ಕೊಟ್ಟಕೆತ್. ಕರ್ಣಂಗೆ ಗಾಬ್ರಿ ಆತ್. ಹಾಂಗೆ ಮಾತಿಲ್ಲದೆ ಕುದ್ದಕೆತ್. ಮತ್ತೆ, 'ದೇವ! ನೀವು ಸುಮ್ಮನೆ ಈ ಬಡಂವನ ತಮಾಸೆ ಮಾಡ್ತಡಿ'ಂತ ಹೇಳ್ತ್. 'ಈ ಸಮಸ್ತ ಕುರು ಸಾಮ್ರಾಜ್ಯಕ್ಕೆ ಅಧಿಪತಿಯಾದಂವ ಎಂದಾದರೂ ಬಡಂವ ಆಕೆ ಸಾಧ್ಯ ಉಟ್ಟೊ?' ಕೃಷ್ಣನ ಮಾತ್ ಒಂದಕ್ಕೊಂದು ಸಂಬಂಧ ಇಲ್ಲದಾಂಗೆ ಕಂಡಕೆತ್. ಕರ್ಣ ಏನೂ ಹೇಳದೆ ಸುಮ್ಮನೆ ಕುದ್ದಕೆತ್. ಅಂವ ಹೇಳ್ದ ಸಮಸ್ಯೆನ ಅವನೇ ಬುಡ್ಸುವಾಂಗೆ ಕೃಷ್ಣ ಸುರುಮಾಡ್ತ್. ನೋಡು ಕರ್ಣ! ಕುಂತಿ ನಂಗೆ ಸೋದರತ್ತೆ. ಆಗ ಅದರ ಮಕ್ಳಂದಕೆರ್ ನಂಗೆ ಏನಾಕು? ಅಂದರೆ ಭಾವಂದಕೆರ್, ಅಥವಾ ಮೊಯ್ದುನಂದಕೆರ್– ಕರ್ಣ ಹೇಳ್ತ್. ಹಾಂಗೇ ನೀ ನಂಗೆ ಭಾವ. ಅಂದರೆ ನೀ ಕುಂತಿನ ಚೊಚ್ಚಲ ಮಕ್ಳ. ಅದ್ ಕನ್ಯೆ ಆಗಿ ಇರ್‌ಕನ, ದೂರ್ವಾಸ ರುಸಿ ಕೊಟ್ಟ ಮಂತ್ರನ ಪರೀಕ್ಷೆಮಾಡುವ ಕುತೂಹಲಂದ ಗಂಗಾ ತೀರಕೆ ಬಂದ್ ಸೂರ್ಯಮಂತ್ರನ ಯಥಾವಿಧಿಯಾಗಿ ಉಚ್ಚರ್ಸಿಕನ ಸೂರ್ಯ ದೇವ ಬಂದ್ ಅದಿಕೆ ಕೊಟ್ಟ ಕೂಸು ನೀ. ಲೋಕಾಪವಾದಕ್ಕೆ ನಿನ್ನ ಒಂದು ಮರದ ಮರ್ಗಿಲ್‌ಲಿ ಮಲ್ಗಿಸಿ ಗಂಗೆಲಿ ತೇಲ್ಸಿಬುಟ್ಟಕೆತ್. ನೀ ತೇಲಿಕಕೆಂಡ್ ಹೋಕನ ಸೂತ. ನಿನ್ನ ನೋಡಿ ತಕಕೆಂಡ್ ಹೋಗಿ ಪ್ರೀತಿಂದ ಅವನ ಹೆಣ್ಣ್ ರಾಧೆಂತೇಳುದರ ಕೈಗೆ ಕೊಟ್ಟಕೆತ್. ಮಕ್ಕ ಇಲ್ಲದ ಅವು ನಿನ್ನ ಪ್ರೀತಿಂದ ಬೆಳ್ಸಿದೊ. ಹಾಂಗೆ ನೀ ರಾಧೇಯ ಆದ. ನಿಜವಾಗಿ ನೀ ಕೌಂತೇಯ. ಪಾಂಡವ ಕೌರವ ಇತ್ತಂಡಕ್ಕೂ ಹಿರಿಯಣ್ಣ! ಇಡೀ ಕುರು ಸಾಮ್ರಾಜ್ಯದ ಏಕೈಕ ಅಧಿಕಾರಿ. ನೀ ಒಪ್ಪಿರೆ ಇಂದ್‌ಂದಲೇ ಸಾಮ್ರಾಜ್ಯಾಧಿಪತಿಯಾಗಿ ನಿಂಗೆ

ಕಿರೀಟಧಾರಣೆ ಮಾಡ್ಡಿ ಪಾಂಡವ ಕೌರವರ್ ನಿನ್ನ ಸೇವೆಲಿ ಇರುವಾಂಗೆ ಮಾಡುವೆ. ಏನ್ ಹೇಳಿಯ? ಒಪ್ಪಿಗೆನೋ? ಕೃಷ್ಣ ಎಲ್ಲ ವಿವರವಾಗಿ ಹೇಳ್ತ್. ಇದರೆಲ್ಲ ಕೇಳ್‌ಕನ ಕರ್ಣನ ಮೈ ಜುಮುಗುಟ್ಟಿ, ಮೈನ ರೋಮಗೆ ನೆಟ್ಟಂಗಾದೊ. ಕಣ್ಣೀರ್ ದಳದಳಂತ ಇಳ್ತ್. ಅತ್ತ್‌ಕಲಂಡ್, ಅಯ್ಯೋ ದೇವ್ರೆ ಇದರೆಲ್ಲ ಈಗ ಏಕೆ ಹೇಳ್ದಲರಿ? ಹೀಂಗೆ ಹೇಳಿ, ನನ್ನ ಪ್ರಿಯ ಮಿತ್ರ ದುರ್ಯೋಧನನ ಈಗಳೇ ಕೊಂದ್ ಬುಟ್ಟಲರಿ ಅಲ್ಲ? ಅವನ ಹಗೆಗ ನಂಗೂ ಹಗೆಗ. ಅವನ ಮಿತ್ರಲರ್ ನಂಗೂ ಮಿತ್ರಲರ್‌ಂತ ಇದ್ದೆ. ಇನ್ನ್ ಹೇಂಗೆ ಯುದ್ಧಲಲಿ ನನ್ನ ತಮ್ಮಂದರ್ನೇ ಕೊಲ್ಲುವೆ? ಹೇಂಗೆ ನನ್ನನೇ ನಂಬಿದ ಪ್ರಾಣ ಮಿತ್ರಂಗೆ ಯುದ್ಧಲಿ ಮೋಸ ಮಾಡುವೆ! ಅಯ್ಯೋ ವಿಧಿಯೇ! ಹೀಂಗೆ ಹೇಳಿ ಕರ್ಣ ದುಃಖಪಟ್ಟಲತ್.
ಆಗ ಕೃಷ್ಣ– 'ಸಮಾಧಾನ ಮಾಡಿಕ ಕರ್ಣ ದುರ್ಯೋಧನಂಗೆ ನೀ ಯಾರ್‌ಂತ ಗೊತ್ತಿದ್ದೆ ನಿನ್ನೊಟ್ಟಿಗೆ ಅಷ್ಟ್ ಸ್ನೇಹ, ಪ್ರೀತಿನ ತೋರ್ಸಿ ಒಡನಾಡ್ತ್. ನಿನ್ನ ಹುಟ್ಟುನ ಗೊತ್ತಿರೊವ್ರು ಕೆಲವೇ ಜೆನ ನಾ ನಿನ್ನ ಅವ್ವ ಕುಂತಿ, ದೇವೇಂದ್ರ. ಮತ್ತೆ ದಿವ್ಯ ಜ್ಞಾನಿ ಸಹದೇವ. ದುರ್ಯೋಧನಂಗೆ ಗೊತ್ತಾತ್‌ಂತ ಹೇಳಿನೆ. ನಿನ್ನ ಭೇದ್‌ಸಿಕೆ ಹೀಂಗೆ ಹೇಳಿನಂತ ಗ್ರೈಸ್‌ಬೇಡ. ಒಂದು ದಿನ ನೀನೂ ಅಂವನೂ ಗಂಗಾ ತೀರಲಲಿ ಬೇಟೆಗೆ ಹೋಗಿದ್ದಲರಿ. ಅಲ್ಲಿ ಸತ್ಯಂತಪಂತೇಳುವ ರುಸಿಗಳ ಆಶ್ರಮ ಇತ್ತ್. ನೀವಿಬ್ಬೊರೂ ಹೋಗಿ ಆ ರುಸಿನ ನೋಡ್ಡಲರಿ. ಆ ರುಸಿಗ, ಮುಂದೆ ನಿಂಗೆ ಆಸನ ಕೊಟ್ಟ್ ಕುದ್ದ್‌ರ್ಸಿದೊ. ಇದ್ ನಿನ್ನ ಮಿತ್ರಂಗೆ ಸಲರಿ ಕಂಡಲತ್‌ಲೆ. ಅಂವ ನಿನ್ನ ಅಲ್ಲಿಂದ ಎದ್ದ್ ಹೋಕೆ ಹೇಳಿ, ನೀ ಹೋದ ಮೇಲೆ ರುಸಿನೊಟ್ಟಿಗೆ ಕೇಳ್ತ್. 'ನಾ ಇರ್‌ಕನ ನೀವು ಈ ಮುಗ್ಗನ ಮಜ್ಜಂಗೆ ಏಕೆ ಮೊದಲ ಮನ್ನಣೆ ಕೊಟ್ಟಲರೀಂತ'. ಅದಿಕೆ ಸತ್ಯಂತಪಲರ್, ನೀ ಯಾರ್‌ಂತ ನಿನ್ನ ಜನ್ಮ ವೃತ್ತಾಂತನ ಅವಂಗೆ ಹೇಳ್ಬೊ. ಇದರ ಕೇಳಿ ದುರ್ಯೋಧನ ಕುಶಿಪಟ್ಟಲತ್. ಮುಳ್ಳುನ ಮುಳ್ಳುಂದಳೆ ತೆಗಿವೆಂತ ನೆನ್ಸಿಕಲಂಡ್ ನಿನ್ನ ಮೇಲೆ ಎಲ್ಲಿಲ್ಲದ ಪ್ರೀತಿ ತೋರ್ಸಿಕೆ ಸುರುಮಾಡ್ತ್. ಸುಮ್ಮನಲ್ಲ.
ಕರ್ಣ ಉತ್ತರ್ಸಿತ್. "ಏನೆ ಆಗಲಿ. ನಾ ತುಂಬ ಹೀನಾಯವಾದ ಅಪಮಾನನ ಮೇಲೆನ ಜಾತಿಯವರ್‌ಂದ ಅನುಭವಿಸ್‌ಕನ ಅವರೆಲ್ಲ ತೀಕ್ಷ್ಣವಾಗಿ ವಿರೋಧಿಸಿ, ನನ್ನ ಕೈ ಹಿಡ್ದೆತ್ತಿ ಉದ್ಧರ್ಸಿತ್. ನನ್ನ ತನ್ನ ಸಮಾನನಾಗಿ ಕಂಡಲತ್. ಅದರ ನಾ ಎಂದಿಗೂ, ಏನೇ ಆದರೂ, ಮರಿಯಕಿಲ್ಲೆ. ಈ ನನ್ನ ಶರೀರ ಮತ್ತೆ ಪ್ರಾಣ ಅವಂಗೇ ಸಮರ್ಪಣೆ ಈ ಸಂಧಿಗ್ಧ ಸಮಿಯಲಿ ನಾ ಪಕ್ಷಾಂತರ ಮಾಡಿರೆ ಅದರ್‌ಂದ ದೊಡ್ಡ ವಿಶ್ವಾಸ ದ್ರೋಹ ಬೇರೆ ಇಲ್ಲೆ. ನಿನ್ನ ಪ್ರಿಯ ಪಾಂಡವರ ಸರ್ವ ರೀತಿಂದಲೂ ನೀ ಕಾಪಾಡ್.ನಂಗೆ ರಾಜ್ಯದ ಆಸೆ ಇಲ್ಲೆ. ಕೌರವರ್‌ದಾಗಲಿ ಪಾಂಡವರ್ದಾಗಲಿ ಆಗಿರುವ ರಾಜ್ಯದ ಆಸೆ ಇಲ್ಲೆ. ಕೌರವರ್‌ದಾಗಲಿ ಪಾಂಡವರ್ದಾಗಲಿ ಆಗಿರುವ ರಾಜ್ಯನ ನನ್ನ ವಶಕ್ಕೆ ತಕಲಂಡ್, ನಾ ರಾಜನಾಗಿ ಆಳುದುಂತಾದರೆ ಅದ್ ಇನ್ನೊಬ್ಬನ ಹೆಣ್ಣ್‌ನ, ತನ್ನದಾಗಿ ಮಾಡಿಕಂಬಂತಹ ಪಾಪ ಕಾರ್ಯ. ನಾ ಆ ಪಾಪ ಮಾಡಿಕೆ ತಯಾರಿಲ್ಲೆ. ಹಾಂಗಾಗಿ ನನ್ನ ದಯಮಾಡಿ ನನ್ನಷ್ಟಕ್ಕೆ ಬುಟ್ಟ್‌ಬುಡು. ಇಷ್ಟೆಲ್ಲ ಆಕೆ ಮುಂದೆನ ಘಟ್ಟಲಲಿ, ಅಂದರೆ ನನ್ನ ಜೆನ್ಮದ ಬಗ್ಗೆ ತಿಳ್ದವ್ರ ನಿನ್ನಂಥವು ಎಲ್ಲ ಸೇರಿ, ನಂಗೆ ಹುಟ್ಟುಂದ ದಕ್ಕೋಕಾದ

ಸ್ಥಾನನ ಕೊಡಿಕೆ ಯತ್ನಿಸಿದ್ದರೆ. ಎಲ್ಲ ಸರಿಯಾತಿತ್ತೋ ಏನೋ? ಆದರೆ ಈಗ ತುಂಬ ತಡ ಆತ್. ದಯಮಾಡಿ ನಾ ಯಾರ್‌ಂತ ಪಾಂಡವರಿಗೆ ಹೇಳಿಕಾಗದ್. ದಯಮಾಡಿ ರಥ ನಿಲ್ಸ್. ಹೊತ್ತು ಕಳಿಂತಿಕೆ ಬಾತ್. ನಾ ಹಿಂದಕೆ ಹೋನೆ. ಹಾಂಗೆ ರಥ ನಿಲ್ಲ್‌ಕನ ಕೃಷ್ಣಂಗೆ ನಮಸ್ಕಾರ ಮಾಡಿ ಇಳ್ಸ್ ಹೋತು. ಕೃಷ್ಣನ ಪಯಣ ಮುಂದುವರ್ತ್.

ಕರ್ಣನ ಕಣ್ಣ್‌ಂದ ನೀರ್ ತಡೆಯಿಲ್ಲದೆ ಹರಿಯತ್ತಿತ್ತ್. ಬಾಲ್ಯಂದ ಹಿಡ್ದ್ ಇದ್‌ವರೆಗನ ಅವನ ಜೀವನರಲಿ ನಡ್ದ ಘಟನೆಗೆ ಒಂದೊಂದೂ ಅವನ ಮನ್‌ಸನ ಕಣ್ಣ್‌ದ್‌ರ್ ಹಾದ್ ಹೋತು. ಅವನ ಸಾಕಮ್ಮ ರಾಧೆ ಎಷ್ಟ್ ಪ್ರೀತಿ ತೋರ್ಸಿತ್! ಅಡಿಲಿಸರೆ ಪಿಜಿನ್ ತಕಲಿಂಡ್ ಹೋದು; ಮೇಲೆ ಇಸಿರೆ ಕಕ್ಕೆ ತಕಲಿಂಡ್ ಹೋದೂಂತ ಯಾಗೋಳು ನನ್ನ ತನ್ನ ಎದೆ ಮೇಲೇ ಇಸಿಕಲಿಂಡ್ ಸಾಂಕಿತ್. ನಿಜವಾದ ಅಯ್ಯೆಕ ಆದರೂ ಅಷ್ಟ್ ತಮ್ಮ ಮಕ್ಕಳ ಮುದ್ದಾಡುವನೋ ಇಲ್ಲನೋ. ನನ್ನ ನಿಜ ಅಯ್ಯೆನ ಅಜಾತುರ್ಯಂದ ನಾ ಜಾತಿ ಇಲ್ಲದಂವ ಆಗಿ ಹೀನಾಯ ಬಾಳ್ ಬಾಳಿಕಾತ್. ಯುದ್ಧ ಒದ್‌ಗಿ ಬಂದ ಸಮಿಯರಲಿ ಮಾತ್ರ ಕೃಷ್ಣಂಗೆ ನಾ ನಂಟಂತೇಳ್ದು ನೆಂಪಾತ್. ಮುಂದೆಲ್ಲ ನಾ ಹೀನಾಯ ಅಪಮಾನ ಸಹಿಸಕಾಗಿ ಬಾಕನ ಈ ಕೃಷ್ಣನೂ ನನ್ನ ಸಹಾಯಕ್ಕೆ ಬಾತ್‌ಲೆ. ನನ್ನ ಹೆತ್ತವ್ವ ಕುಂತಿನೂ ಬಾಯಿ ಬುಟ್ಟರಿತ್‌ಲೆ. ಎಲ್ಲ ಬುಟ್ಟ್ ಎಲ್ಲದಿಕೂ ಸಾಕ್ಷಿಯಾಗಿರುವ ನನ್ನ ಅಪ್ಪ ಸೂರ್ಯ, ನಾ ಅವಮಾನರಲಿ ಸಾಯುವ ಹಾಂಗಿರ್‌ಕನ ಬಂದ್ 'ಇಂವ ನನ್ನ ಮಜ್ಜಂತ' ಎಲ್ಲರೆದ್‌ರ್ ಒಮ್ಮೆ ಸಾರಿದ್ದರೆ ನನ್ನ ಹೀನ್ಯೆಸುವರ ಬಾಯಿ ಮುಚ್ಚ್‌ತಿತ್ತ್. ಆದರೆ ಅವಂಗೂ ಅವನ ಸ್ವಪ್ರತಿಷ್ಠನೇ ಮೇಲಾತ್. ಕಾರಣ ಅಂವ ಕುಂತಿನೊಟ್ಟಗೆ ನಡ್ಸಿದ ಹಾದರದ ಕತೆ ಲೋಕಕ್ಕೆ ಗೊತ್ತಾದರೆ, ತನಿಗೂ ಅವಮಾನ. ಕುಂತಿಗೂ ಅವಮಾನಂತ, ಅಂವನೂ ಅಂಜಿಕಂಡರಿತ್. ಆ ಸಮಿಯಲಿ ನನ್ನ ಹೀನ್ಯೆಸಿದ ತನ್ನ ಗುರುಗಳ್ನೇ ಧಿಕ್ಕರ್ಸಿ, ನನ್ನ ಕೈ ಹಿಡ್ದ್‌ತ್ತಿದಂವ ದುರ್ಯೋಧನ. ಅಂಥವನ ಬುಟ್ಟ್, ಬಾಂಧವ್ಯದ ನೆವನರಲಿ ಈಗ ನಾ ಪಾಂಡವರ ಸೇರೊಕುಂತ ಲೋಕಗುರು ಕೃಷ್ಣನ ಉಪದೇಸ! ಹೇಂಗೆ?.........ನನ್ನ ರಾಜ ಕುರುಪತಿಗೆ ದೈವಬಲ ಇಲ್ಲೆಂತೇಳ್ದು ನಿಶ್ಚಯ.

ಭೀಷ್ಮ ದ್ರೋಣಾದಿಗ ಪಾಂಡವ ಪಕ್ಷಪಾತಿಗ ಆಗಿ ಪೂರ್ಣ ಮನ್ಸ್‌ಂದ ಯುದ್ಧ ಮಾಡೊವಲ್ಲ. ಕೌರವ ಸಂಪೂರ್ಣ ಸುರುಂದರಳೇ ನನ್ನನೇ ನಂಬಿಟ್ಟು. ನಾ ಇರುವ ಧೈರ್ಯಂದರಳೇ ಪಾಂಡವರ ನಾನಾ ತರ ಕೆರ್ಳಿಸಿ ಹಗೆ ಕಟ್ಟಿ ಕಣ್ತ್. ನಾ ಅವನ ಬುಟ್ಟ್ ಹೋಗದೆ ಅವನ ಪಕ್ಕರಲಿ ನಿತ್ತೊಳೆ ನಿಜ. ಪಾಂಡವರಿಗೆ ನಾ ಅವರ ಸೋದರಂತ ಗೊತ್ತ್‌ಲೆ. ಆದರೆ ಅವು ನನ್ನ ಸೋದರರೀರ್‌ಂತ ಕೃಷ್ಣಂದ ನಂಗೆ ಗೊತ್ತಾತ್. ಇನ್ನ್ ಹೇಂಗೆ ಯುದ್ಧ ಕಳಲಿ ನಿರ್ದಯಂದ ಅವರ ಕೊಲ್ಲುವೆ? ನನ್ನ ಮೇಲೆ ಪೂರ್ಣ ಭರವಸೆ ಇಸಿದ ನನ್ನ ಒಡೆಯಂಗೆ ಹೇಂಗೆ ನಾ ಮೋಸ ಮಾಡುವೆ? ಪಾಂಡವರ್ ಐದ್ ಜೆನನ ಬುಟ್ಟ್, ಒಳ್ದ ವೈರಿ ಸೇನನ ಕುಮೇರಿ ಕಡ್ದ ಹಾಂಗೆ ಕೊಚ್ಚಿ ಹಾಕಿ, ಕಡೆಗೆ ಶತ್ರುಗಳ ಬಾಣಗಳಿಗೆ ಗುರಿಯಾಗಿ ನನ್ನ ರಾಜಂದ ಮುಂದೆ ನಾನೇ ಸತ್ತ್ ಯುದ್ಧರಂಗರಲಿ ಮಲ್ಗುವೆ. ನಂಗೆ ಇದೊಂದೇ ದಾರಿಂತ ಕರ್ಣ ನಿರ್ಣಯಕ್ಕೆ ಬಾತ್.

**ತಾತ:**

ಏನ್ ಮಕ್ಕಳೆ? ಏನೋ ಹೇಳೊಕುಂತೇಳ್ವಾಂಗೆ ನಿಮ್ಮ ಮೋರೆಲಿ ಕಂಡದೆ ಇಷ್ಟ್ ಸಮಿಯ ಮೌನವಾಗಿಯೇ ಇದ್ದೀರಿ ಏನ್ಂತ ಕೇಳಿ ಅಥವಾ ಹೇಳಿ.

**ಮಕ್ಕ:**

ತಾತ! ಕತೆನ ಓಟೆಲಿ ಪ್ಯೆಮರ್ತ್ ಹೋಗಿದ್ದೊ. ಕರ್ಣನ ಕತೆ ಯಾರಿಗೂ ಕಣ್ಣೀರ್ ಬರ್ದುದು. ತನ್ನದಲ್ಲದ ತೊಪ್ಪಿಗೆ ಅಂವ ಸಂಕಟಕ್ಕೀಡಾತ್. ಈಗ ಕೃಷ್ಣ ಅವನ ಜೆನ್ಮ ವೃತ್ತಾಂತನ ಎತ್ತಿದ್. ಅಂವ ತನ್ನ ಅತ್ತೆ ಮಜ್ಜ, ನಂಗೆ ಭಾವ ಆಕುಂತೇಳ್ವ ಪ್ರೀತಿಂದೇನೂ ಅಲ್ಲ ಹಾಂಗಿದ್ದರೆ ಅಂವ ಈ ಕೆಲ್ಸನ ಮುಂದೇ ಮಾಡಕಣಿಯ್ತ್.

**ತಾತ:**

ಅದಿಕೆ ಸೊಂಸಯ ಇಲ್ಲೆ. ಕೃಷ್ಣಂಗೆ ಪಾಂಡವರ ಯುದ್ಧಲಿ ಗೆಲ್ಲುಸೊಕು. ಹಾಂಗೆ ಮಾಡುವ ಚತುರೋಪಾಯಗಂತೇಳುದರ್ಲಿ ಇದೂ ಒಂದು. ಇದ್ ಭೇದೋಪಾಯ ಕೃಷ್ಣಂಗೆ ಮುಂದೇ ಗೊತ್ತುಟು ಕರ್ಣ ಪಾಂಡವರ ಪಕ್ಷಕೆ ಬಾಕಿಲ್ಲೇಂತ. ಅಲ್ಲದೆ ಅವಂಗೆ ದುರ್ಯೋಧನನೊಟ್ಟಿಗಿರುವ ಗಾಢ ಸ್ನೇಹ, ಮತ್ತೆ ಪಾಂಡವರ ಮೇಲೆ ಇರುವ ಹಗೆತನ. ಈಗ ಕೌರವರ ಸ್ವಾರ್ಥ ಭಾವನೆನ ಕರ್ಣನೆದ್‌ರ್ ಬಿಚ್ಚಿತ್- ಸತ್ಯಂತಪ ರುಸಿನ ಕತೆ ಹೇಳಿ. ಮತ್ತೆ ಪಾಂಡವೀರ್ ಅವಂಗೆ ತಮ್ಮಂದೀರ್ಂತ ವಿವರ್ಸಿತ್. ಈಗ ಕರ್ಣ ದಣಿರ್ಮ ಸಂಕಟಕ್ಕೆ ಸಿಕ್ಕಿದಾಂಗ ಆತ್. ಕೌರವಂಗೆ ನಂಬಿಕೆ ಕೊಟ್ಟಾಂಗೆ ಯುದ್ಧ ಮಾಡಿ ಪಾಂಡವರ ಕೊಲ್ಲೊಕು. ಆದರೆ ಅವು ತಮ್ಮಂದೀರ್. ಹೇಂಗೆ ಅವರ ಕೊಲ್ಲುದು? ಇದಿಕೆ ಉಪಾಯ?- ಸಾಧ್ಯ ಇದ್ದಷ್ಟ್ ವ್ಯೆರಿ ಸೇನೆನ ಕೊಚ್ಚಿ ಹಾಕಿ, ಕಡೆಗೆ ತನ್ನ ಒಡೆಯಂದ ಮುಂದೆ ರಣರಂಗಲಿ ತಾನೇ ಸತ್ತ್ ಮಲ್ಗುದು! ಕೃಷ್ಣಂಗೆ ಬೇಕಾದ್ದೊ ಅದೆ. ಇದರ ಇನ್ನಷ್ಟ್ ಖಾತ್ರಿ ಪಡ್ಸಿಕೆ ಕರ್ಣನ ನೋಡಿ ಪಾಂಡವರ ಸೇರೊಕುಂತ ಕೇಳಿಕೆ ಕುಂತಿನೇ ಕಳ್ಸಿದೆ.

## ಕುಂತಿ ಕರ್ಣ ಸಂದರ್ಶನ

ಮೇಲ್ನ ವಿದ್ಯಮಾನ ಮುಗ್ದ ಮೇಲನ ಸೂರ್ಯ ದಿನದಂದ್(ಆದಿತ್ಯವಾರ) ಕರ್ಣ ಅವನ ವಾಡಿಕೆನಾಂಗೆ ಬೊಳ್ಪಿಗೆ ಗಂಗಾ ನದಿಗೆ ಬಂದ್ ಮೀಯ್ದ್ ಸೂರ್ಯ ಮಂತ್ರನ ಜಪ್‌ಸಿ, ಸೂರ್ಯಂಗೆ ಅರ್ಘ್ಯಕೊಟ್ಟ್ ಮೂರು ಮುಳುಗು ಹಾಕಿ ಎದ್ದ್ ದಡಕ್ಕೆ ಬಾಕನ ಅಲ್ಲಿ ಕುಂತಿ ನಿತ್ತ್‌ಕಣಿಂಡ್ ಇದ್ದದರ ಕಂಡಣಿತ್. ನನ್ನ ಹೆತ್ತವ್ವನೇ ಇಂದ್ ನಂಗೆ ದರ್ಶನ ಕೊಟ್ಟಣಿತ್! ನಾ ಎಷ್ಟ್ ಪುಣ್ಯವಂತನೋಂತ ಮನ್ಸ್‌ಲೇ ಹೇಳಿಕಂಡಣಿತ್! ಏನ್ ಬಂದಣಿರಿ ಅವ್ವಾ? ನಂಗೆ ಪುಣ್ಯಯೋಗ ಬಾವಾಂಗಂತ ಹೇಳಿ ಅದರ ಪಾದ ಮುಟ್ಟಿ ನಮಸ್ಕಾರ ಮಾಡ್ತ್. ಕುಂತಿನೂ ಉಕ್ಕಿ ಬಾವ ಪ್ರೀತಿಂದ, ಅವನ ಎತ್ತಿ ತೊಬ್ಬಿಕಣ್ತ್. ಅವರ ಮೊಲೆಗಳ್ಲಿ ಹಾಲ್ ಹೊರೆಗೆ ಹರ್ತ್. ಮತ್ತೆ ಕರ್ಣನ ತಲೆ ನೇವರ್ಸಿಕಣಿಂಡ್, ಕರ್ಣ ನಾ ಇಷ್ಟರವರೆಗೆ ನಿಂಗೆ ಅಜ್ಞಾತಳಾಗಿ ಇದ್ದಣಿದಿಕೆ ನೀ ಕ್ಷಮಿಸೊಕು ಮಜ್ಜ. ನಾ ಸ್ವಸ್ತಿಕರ್ಣನ

ಬುದ್ಧಿ ಇಲ್ಲದೆ ತೊಪ್ಪು ಮಾಡಿ ಬುಟ್ಟೆ. ಆ ಮೇಲೆ ಅದ್ ಎಷ್ಟ್ ದೊಡ್ಡ ತೊಪ್ಪುಂತ ಅರಿವಾಗಿ ಲೋಕಾಪವಾದಂತ ಹೆದ್‌ರಿ ನಿನ್ನ ಹುಟ್ಟಿದ ಕೂಡ್ಲೆ ಕೈ ಬುಡಕಾಗಿ ಬಾತ್. ಪಾಪಿ ನಾ! ಲೋಕಲಿಲಿ ನನ್ನಂಥ ಅಯ್ಯ್ ಇರಿಕಾಗಲಿದ್! ಐದ್ ಜೆನ ಪಾಂಡವ ಸೋದಲಿರಲಿರಿಗೆ ನೀ ಹಿರಿಯಣ್ಣ. ಇಡೀ ಕುರುವಂಶದ ಮಕ್ಕಳ ಸಾಲ್‌ಲೇ ನೀನೇ ಹಿರಿಯುಂವ ಹಾಂಗಿರ್ಕನ, ಇಡೀ ಕುರು ಸಾಮ್ರಾಜ್ಯ ನಿಂಗೆ ಸೇರೂಕಾದ್. ಹೀಂಗಿರ್ಕನ ದುರ್ಯೋಧನ ಅದ್ರು ನೀ ಅವನ ಆಳ್‌ಂತ ಇರ್ದು ಹೇಂಗೆ ಸಲಿರಿ? ಅದಿಕೆ ನೀ ಪಾಂಡವರೊಟ್ಟಿಗೆ ಸೇರಿರೆ ಎಲ್ಲನೂ ಸಲಿರಿ ಆದು. ಈಗ ಮುಂದೆ ನಡಿವ ಮಹಾಯುದ್ಧದ ಕಾರ್ಮೋಡ ತುಂಬಿಕಲಿಂಡ್ ಉಟ್ಟು. ನೀ ಪಾಂಡವರ ಕಡೆ ಸೇರ್ದಂತಾದರೆ ಯುದ್ಧ ನಡೆಯಕಿಲ್ಲೆ. ದೊಡ್ಡ ಪ್ರಮಾಣದ ರಕ್ತಪಾತ ನಿಲ್ಲುದು. ಹಾಂಗಾಗಿ, ನೀ ಕೌರವನ ಹಂಗ್ ತೊರ್ದ್ ಬಾದು ಎಲ್ಲೊವ್ಕೂ ಕ್ಷೇಮ. ನೀ ಇತ್ತ ಬರೂಕು ಮಜ್ಜಂತ ಕುಂತಿ ಅತ್ತ್‌ಕಲಿಂಡ್ ಹೇಳ್ತ್.

ಕರ್ಣ ಧೃಢವಾಗಿ ಹೇಳ್ತ್. "ಅಮ್ಮಾ! ನಾ ಹೀನ ಜಾತಿನಂವಂತ ಇಡೀ ಲೋಕವೇ ಹೇಳಿರೂ ಕೊಟ್ಟ ಮಾತಿಗೆ ತೊಪ್ಪದೆ, ಬೇಡ್‌ದೊಪ್ಪೆ ಇಲ್ಲೆಂತ ಹೇಳದೆ ಇಷ್ಟರವರೆಗೆ ನಡ್ದೊಳೆ. ಈಗಂತೂ ನೀವು ನನ್ನ ನಿಮ್ಮ ಮಜ್ಜಂತ ಕರ್ದದರ್‌ಂದ ಮೂರು ಲೋಕವೇ ನನ್ನ ಕೈಯೊಳಗೆ ಬಂದಾಂಗೆ ಆತ್. ಈಗ ನನ್ನ ಆದರ್ಶ ಗುಣಗಳ ಬುಟ್ಟ್‌ಕೊಡುವನೋ? ಅತ್ಯಂತ ಹೀನ ಸ್ಥಿತಿಲಿ ನಾ ಅಂದ್ ದಿಕ್ಕ್ ಕಾಣದೆ ಇರ್‌ಕನ, ನನ್ನ ಕೈ ಹಿಡ್ದೆತ್ತಿ, ಅಂಗರಾಜ್ಯದ ಪಟ್ಟಕಲಿಟ್ಟಿ ತನ್ನ ಸಲಿರಿ ಸಮಾನಂತ ಮಾಡ್ದವನೇ ದುರ್ಯೋಧನ. ಆಗ ನನ್ನ ಹುಟ್ಟುನ ಗುಟ್ಟು ಗೊತ್ತಿದ್ದೊವು ಯಾರೂ ನನ್ನ ಸಾಯಕೆ ಬಾತ್‌ಲೆ. ನೀವು ಕೂಡಾ ಅಂದ್ ನಡ್ದದ್ದೈಕೆ ಸಾಕ್ಷಿ ಆಗಿದ್ದಲಿರಿ. ಇಂದ್‌ಂದ ನನ್ನ ಪ್ರಾಣ, ಸಲಿರ್‌ರ ಎಲ್ಲ ನಿನ್ನ ಸೇವೆಗೇ ಮೀಸಲ್. ನಿನ್ನ ಹಗೆಗಲಿಳೇ ನಂಗೆ ಹಗೆಗ. ನಿನ್ನ ಮಿತ್ರರೇ ನಂಗೂ ಮಿತ್ರಲಿರ್. ನಿನ್ನ ಜೀವಕೆ ಬದ್‌ಲ್ ನನ್ನ ಜೀವನೇ ಕೊಡುವೆಂತ ಅವನೆದ್‌ರ್ ಸತ್ಯ ಮಾಡಿಯೊಳೆ. ನನ್ನ ಸತ್ಯನ ಯಾವ ಕಾಲಕೂ ಬುಡಿಕಿಲೆ. ಈಗ ಯುದ್ಧಕ್ಕೆ ತಯಾರಾದ ಈ ಆಪತ್ಕಾಲಲಿಲಿ ಅವನ ಪಕ್ಷನ ಬುಟ್ಟರೆ ಅಥವಾ ಯುದ್ಧ ಬೇಡಾಂತ ಹೇಳಿರೆ, ನಾ ರಣಹೇಡಿಂತೇಳುವ ಅಪಕೀರ್ತಿಗೆ ಒಳಗಾವೆ. ಅದರ ಬದ್‌ಲ್ ನನ್ನ ಜೀವನೇ ಬುಡುವೆ. ನಾ ಎಂದೂ ಹೇಡಿ ಆಕಿಲ್ಲೆ."

ಕುಂತಿ ನಿಸ್ಸಹಾಯಕತೆಯಿಂದ ತುಂಬ ಅತ್ತಲಿತ್. ಆಗ ಕರ್ಣ, ಇದ್ಕೆ ಏಕವ್ವ ಇಷ್ಟ್ ದುಃಖ?ಂತ ಕೇಳ್ತ್. ನೀ ಹೀಂಗೆ ಹಟ ಮಾಡಿರೆ ನಂಗೂ ನನ್ನ ಮಕ್ಕ ಐದ್ ಜೆನಕ್ಕೆ ಬೊದ್ಕಿಕೆ ಎಲ್ಲ್ಯಟು ದಾರಿ? ಅದಿಕೆ ಹೀಂಗೆ ದುಃಖ ಮಾಡಿರೆನೋ? ಯುದ್ಧಲಿಲಿ ಎದ್‌ರ್ ಕಡೆಂದ ನಿನ್ನ ಐದ್ ಜೆನ ಮಕ್ಕಳ ಎಲ್ಲ್ಯಾರ್ ಕೊಂದ್ ಬುಡುವೆಂತ ಹೆದ್‌ರಿಕೆನೋ? ಆ ಹೆದ್‌ರಿಕೆ ಬೇಡ. ಅರ್ಜುನಲಿನೂ ನಾನೂ ಸಮಬಲರ್. ಪೈಪೋಟಿ ನಮ್ಮ ಇಬ್ಬರೊಳಗೆ. ಅದರ್ಲಿ ಅರ್ಜುನ ಅಳ್ದರೆ ಕರ್ಣ ಒಳ್ದದೆ. ಕರ್ಣ ಅಳ್ದರೆ ಅರ್ಜುನ ಒಳ್ದದೆ. ಒಟ್ಟುಲಿ ನಿಂಗೆ ಐದ್ ಜೆನ ಮಕ್ಕ ಹೇಂಗೂ ಒಳ್ದೇ ಒಳ್ದವೆ. ಒಳ್ಳ ಹೇಳ್ದ ಮಜ್ಜ! ಆದರೂ ನಾ ನಿನ್ನ ಕೋರಿಕಲಿಂಬೊದ್ ಇಷ್ಟೆ. ನೀ ಒಮ್ಮೆ ತೊಟ್ಟ ಬಾಣನ ಇನ್ನೊಮ್ಮೆ ತೊಡಿಕೆ ಆಗಲಿದ್.

ಮರಿಗಣಂತೇಳ್ವ ಬಾಣನ ತೊಡಿಕೆ ಆಗಲೆದ್. ಇವರ್ಡ್ ವಚನ ನಂಗೆ ಕೊಡೊಕು. 'ಹಾಂಗೇ ಆಗಲಿ. ಇನ್ನ್ ನೀವು ಸಂತೋಸುಲಿ ಇಲ್ಲಿಂದ ಹೊರ್ಡಿಂತೇಳಿ' ಅದರ ಕಾಲಿಗೆ ನಮಸ್ಕಾರ ಮಾಡ್ತ್. "ನಿಂಗೆಲ್ಲ ಒಳ್ಳೆದಾಗಲೆಲಿ"ಂತ ಅವಂಗೆ ಆಶೀರ್ವಾದ ಮಾಡಿ ಕುಂತಿ ಅಲ್ಲಿಂದ ಹೊರ್ಟಳೆತ್.

## ಯುದ್ಧದ ಕಾರ್ಮೋಡ: ಸೇನಾ ಸಂಗ್ರಹ ಕಾರ್ಯ

ಶ್ರೀ ಕೃಷ್ಣ "ಹಸ್ತಿನಾವತಿನ ಸಂಧಾನ ಮುರ್ದ್ ಬೀತ್. ದುರ್ಯೋಧನನ ದುರಹಂಕಾರದ ಎಡೆಲಿ ಯಾವ ಮಾತಿಗೂ ಎಡೆ ಇಲ್ಲೆ. ಅವಿವೇಕಿಯಾದ ಅಂವ ನನ್ನನೇ ಕಟ್ಟಿ ಹಾಕುವ ಪ್ರಯತ್ನಕ್ಕಿಳ್ತ್. ನಾ ನನ್ನ ವಿಶ್ವರೂಪನ ತೋರ್ಸಿ ಆ ಮೂರ್ಖರ ಬೆಪ್ಪರಾಗಿ ಮಾಡಿ ಬಂದೆ. ಯುದ್ಧ ನಡಿದು ಖಂಡಿತ. ನೀ ಅದಿಕೆ ಬೇಗ ತಯಾರಾಗ್. ನಂಟರಿಷ್ಟರಿಗೆ, ಯುದ್ಧಕ್ಕೆ ಸಹಾಯ ಕೊಡೊಕುಂತ ಕೇಳಿ ಕೂಡಲೇ ಓಲೆ ಬರ್ದ್ ಕಳ್ಸ್"ಂತ ಯುಧಿಷ್ಠಿರಂಗೆ ಹೇಳ್ತ್. ಯುಧಿಷ್ಠಿರ ಆ ಕಾರ್ಯಲಿರ್‌ಕನ ದುರ್ಯೋಧನನ ಸಂದೇಶ ತಕಲೆಂಡ್ ಸಂಜಯಂತೇಳ್ವ ದೂತ ಬಾತ್. ಐದ್ ಜೆನ ಅಣ್ಣ ತಮ್ಮಂದಳೆರೂ, ಶ್ರೀಕೃಷ್ಣನೂ ಕುದ್ದಿರುವಲ್ಲಿ ಸಂಜಯ ಸಂದೇಶನ ಯುಧಿಷ್ಠಿರನ ಉದ್ದೇಶಿಸಿದಾಂಗೆ ಹೇಳ್ತ್: 'ನಿಮ್ಮ ರಾಯಭಾರಿ, ಸಂಧಿಮಾಡುವ ನೆವನಲೆಲಿ ಬಂದ್, ಏನೆಲ್ಲ ಹುಚ್ಚು ಮಾತಾಡಿ ನಮ್ಮ ಕೆರ್ಳಿಸಿತ್. ನಾವು ಅದಿಕೆ ಸರಿಯಾದ ಪಾಟ ಕಲಿಸಿಕೆ ನೋಡ್‌ಕನ ಏನೋ ಡೊಂಬರಾಟದ ಮಾಯಾಜಾಲನ ತೋರ್ಸಿ ಇಲ್ಲಿಂದ ತೊಪ್ಪುಸಿಕಲೆಂಡ್ ಹೋತುಂತ ಹೆಮ್ಮೆಪಡುದು ಬೇಡ. ಇನ್ನ್ ಮುಂದೆ ಇಂತ ಕೆಲ್ಸಕ್ಕಿಳ್ದ್ ಸಮಯ ಹಾಳ್ ಮಾಡುದು ಬೇಡ. ಯುದ್ಧ ಅಲ್ಲದೆ ನೀವ್ಗೆ ರಾಜ್ಯ ಸಂಪಾದನೆಗೆ ಬೇರೆ ಮಾರ್ಗ ಇಲ್ಲೆ. ಆನೆ, ಕುದುರೆ, ರಥ ಮತ್ತೆ ಆಯುಧಗಳಿಗೆ ಪೂಜೆ ಮಾಡಿಕೆ, ಕತ್ತಿಗಳ, ಬಾಣಗಳ ಮೊನ್ತ್ ಹರಿಮಾಡಿಕೆ ನೋಡಿ. ನನ್ನಳೆದಿದ್ ಕಡೇ ಮಾತ್! ಎಚ್ಚರಿಕೆ. ಕುರುಕ್ಷೇತ್ರ ಯುದ್ಧದ ಕಳ. ಅಲ್ಲಿಗೆ ಬಂದ್ ನಮ್ಮ ಭಯಂಕರ ಸೇನೆನ ಎದುರ್ಸುವ ಧೈರ್ಯ ಇಲ್ಲೆಂತಾದರೆ, ಈಗ ನೀವು ಇದ್ದಲ್ಲಿಂದಲೇ ಎದ್ದ್ ಕಾಡಿಗೆ ಹಿಂದೆನಾಂಗೆ ಹೊರ್ಟ್ ಹೋಗಿ. ಕಾಡ್‌ಲೇ ಹುಟ್ಟಿದ ನೀವ್ಗೆ ಅದೇ ಸರಿಯಾದ ಜಾಗೆ. ಅತಿಮೀರಿ ನಮ್ಮ ಎದುರ್ಸೊನೋಂತ ಮನ್ಸ್ ಮಾಡಿರೆ, ಕಿಚ್ಚಿಗೆ ಪತಂಗಗ ಬಂದ್ ಬಿದ್ದ್ ಸಾಯುವಾಂಗೆ ಕೌರವ ಸೇನೆಂತೇಳುವ ಕಿಚ್ಚಿಗೆ ಬಂದ್ ಬಿದ್ದ್ ಸಾಯಿನಿ' ಹೀಂಗೆ ನಮ್ಮ ಅರ್ಸು ನೀವ್ಗೆ ಹೇಳಿ ಕಳ್ಸಿಟ್ಟುಂತ ಹೇಳಿ ಸಂಜಯ ಮಾತ್ ಮುಗ್ಸಿತ್.

ಇದರ ಕೇಳ್ದ ಪಾಂಡವ ಸೋದರಳೆರ್ ಕೋಪೊಲಿ ಕಿಡಿಕಿಡಿಯಾದೊ. ಯುಧಿಷ್ಠಿರ ಸಂಯಮಂದಳೇ ಮಾತಾಡಿಕೆ ಸುರುಮಾಡ್ತ್. 'ದುರ್ಯೋಧನಂಗೆ ಯುದ್ಧನೇ ಬೇಕುಂತಾದರೆ ಅಗತ್ಯವಾಗಿ ಹಾಂಗೇ ಆಗಲೆಲಿ. ಎದ್‌ರದ್‌ರ್ ಆವೊನೊ. ಇನ್ನ್ ಕಲೂವೇ ದಿನಲೆಲಿ ನಮ್ಮ ಶಿಬಿರ ಅಲ್ಲಿರ್ದು. ಮತ್ತೆ ಆನೆ, ಕುದುರೆ ರಥಗಳ ಪೂಜೆಸಿಕೆ ಹೇಳಿಟು. ನಮ್ಮಲ್ಲಿ ಅಷ್ಟರ ಮಟ್ಟ್‌ನ ಆನೆ ಕುದುರೆಗ ಇಲ್ಲೆ ನಮ್ಮ ಹಕ್ಕಲೆ ಹಿಂದೆ ಇದ್ದವರ ಎಲ್ಲ

ಮೋಸಂದ ನೀವೇ ಎಳ್ಕಂಡರಿ ಅಲ್ಲ? ಈಗ ನಾವು ಕಾಡ್‌ಂದ ಬರ್‌ಗ್ಯೆಲಿ ಬಂದೊವಲ್ಲ? ಆದರೆ ನಂಗೆ ನಾಲ್ಕ್‌ಜನ ತಮ್ಮಂದರ್ ಒಳೊ. ನನ್ನ ಪಾಲಿಗೆ ಅವೇ ದೇವೇಂದ್ರನ ಆನೆಂದೊಳೂ ಹೆಚ್ಚಾದೊವು. ಅವು ರಣಾಂಗಣಲಿ ಮಾಡುವ ಮತ್ತೇಭ ವಿಕ್ರೀಡಿತನ ನೋಡ್‌ಕನ ನಿಮ್ಮ ಉಸುರು ಮೇಲೆ ಕೆಳಗೆ ಆದು. ಮತ್ತೆ ನಮ್ಮ ಕತ್ತಿಗಳ್ಳೂ ಬಾಣಗಳ್ಳೂ ನೀವು ನಮ್ಮ ಮೇಲೆ ಹಗೆ ಸಾರ್‌ಕನೇ ಮೊಸ್ತಾಗುಟು?

ಈಗ ಭೀಮ ಸುರುಮಾಡ್ತ್. 'ಸಂಜಯ! ನಿನ್ನ ಅರ್ಸುಗೆ ಯುದ್ಧ ಬೇಕಾಗುಟೊ? ಆಗಲಿ! ಅವನ ತಮ್ಮಂದರ್, ನಂಟ್ರ ಇಷ್ಟರ್, ಅವನ ಕಣ್ಣ್‌ಗೆ ಹಬ್ಬ ಆಗುವಷ್ಟ್, ರಣರಂಗಲಿ ನೆತ್ತರ್ ಕಾರಿಕಂಡ್ ಹೊಡ್ದಾಡುದರ ನೋಡಕ್. ನನ್ನ ಗದೆನ ಪೆಟ್ಟಿಗೆ, ಬೆಟ್ಟಗಳೇ ಜರ್ದ್ ಬೀಳುವಾಂಗೆ ನಿಮ್ಮ ಆನೆಗ, ತೇರ್‌ಗ ಬೀಳುವೊ. ಹೇಳ್ದಾಂಗೆ ನಿನ್ನ ರಾಜನ ತೊಡೆಗ ಸಲಿ ಒಳೊನೊ. ಅದರ್ಲಿ ಸುರಸುಂದರಿಯರ ಕುಪ್ಪ್ರಿಸಿಕಂಡ್ ಆನಂದ ಪಡಿಯಕೆ ಇನ್ನ್ ಹೆಚ್ಚಿ ಕಾಯೊಕುಂತಿಲ್ಲೆ. ನಾ ಬೇಗ ಅದಿಕೆ ದಾರಿ ಮಾಡಿನೆಂತ ಹೇಳ್ಟಂತ ಅವಂಗೆ ಹೇಳಿಕೆ ಮರಿಬೇಡ!'ಂತ ಹೇಳ್ತ್.

ಅರ್ಜುನ ಹೇಳಿಕೆ ಸುರುಮಾಡ್ತ್: 'ನನ್ನ ಅಣ್ಣಂದರ್ ಇಷ್ಟೊರೂ ಹೇಳ್ದರ ಕೇಳ್ಟಲೆ ಸಂಜಯ! ನನ್ನದೂ ಅಷ್ಟೇ. ನನ್ನ ಗಾಂಡೀವಕೆ ಬಿಡುವಿಲ್ಲದ ಕೆಲ್ಸ ಸಿಕ್ಕುವ ಅವಕಾಶ ಬಂದದೆಂತ ನಂಗೆ ಸಂತೋಸಾದೆ ನನ್ನ ಗಾಂಡೀವಂದ ಹೊರ್ಡುವ ಬಾಣಗ ಕೌರವ ಸೇನೆನ ಕುಮೇರಿ ಕಡ್ದಾಂಗೆ ಕೊಚ್ಚಿ ಹಾಕುವೊ. ಅವರ ಶಿಬಿರಲಿ ಒಂದು ನರಪಿಳ್ಳೆ ಇಲ್ಲದಾಂಗೆ ಆದು. ಎಚ್ಚರಿಕೆ! ಗೋಗ್ರಹಣಲಿ ಏನಾತ್? ಘೋಷಯಾತ್ರೆಲಿ ಏನಾತ್‌ಂತೇಳ್ದರ ನೆನ್ನಿಕಣಲಿ'.

ನಕುಲ ಸಹದೇವರೂ ವೀರಾವೇಶಲಿ ಹೇಳ್ರೊ. 'ಬೀಸುವ ನಮ್ಮ ಕತ್ತಿಗಳಿಗೆ ಸಿಕ್ಕಿದ ವೈರಿಗಳ ರುಂಡಗ ಆಕಾಶದೆತ್ತರಕೆ ಚಿಮ್ಮಿ ತಾಳಿಮರದ ಕಾಯಿಗಳ ಹಾಂಗೆ ನೆಲಕೆ ಕೆದರಿ ಬೀಳುದರ ನೋಡಿ ಕೌರವ ಕುಸಿ ಪಡಲಿ. ರಣರಂಗಲಿ ಕೋಣಿವ ಪಿಶಾಚಿಗಳೊಟ್ಟಿಗೆ ಸೇರಿಕಂಡ್ ಅವನೂ ಕೋಣಿಯಲಿ!.

ಶ್ರೀಕೃಷ್ಣ ಸಂಜಯಂಗೆ ಹೇಳ್ತ್. 'ಸಂಜಯ! ಪಾಂಡವರ ಧೃಡ ಸಂಕಲ್ಪನೆಲ್ಲ ನಿನ್ನ ರಾಜಂಗೆ ಒಂದೂ ಬುಡದೆ ಹೇಳ್. ಸೈನ್ಯ ತಕಂಡ್ ಯುಧಿಷ್ಠಿರ ಅವನ ತಮ್ಮಂದರೊಟ್ಟಿಗೆ ಬೇಗ ಕುರುಕ್ಷೇತ್ರಕೆ ಬಂದ್ ಸೇರುದು. ಕೌರವರೂ ಬಂದ್ ಎದ್‌ರ್ಸಿಕೆ ತಯಾರಾಗಲಿಂತ ಮಾತ್ ಮುಗ್ಸಿತ್. ಮತ್ತೆ ಯುಧಿಷ್ಠಿರ ಸಂಜಯಂಗೆ ತಕ್ಕ ರೀತಿಂದ ಮನ್ನಣೆ ಮಾಡ್ಸಿ, ಉಡಿಗಿರೆನೂ ಕೊಟ್ಟ್ ಅವಂಗೆ ಹಸ್ತಿನಾವತಿಗೆ ಹೋಕೆ ಅಪ್ಪಣೆ ಕೊಟ್ಟತ್.

# ಮಿತ್ರ ರಾಜೆರ್‌ಗೆಳಿಗೆ ಆಹ್ವಾನ

ತಾವ್ಗೆ ಅನುಕೂಲರಾಗಿದ್ದ ರಾಜೆರ್ಗೆ ಯುಧಿಷ್ಠಿರ ಯುದ್ಧಕ್ಕೆ ಸೈನ್ಯ ಸಹಾಯನ ಕೊಡೊಕು ನಮ್ಮ ರಾಜ್ಯ, ಕೋಶ, ಸಂಪೊತ್ತ್‌ಗಳ ಕೌರವೆಳ್ ನಮ್ಮಂದ ಮೋಸೆಲಿ ಎಳ್ಕೆಂಡೊ ಹನ್ನೆರ್ಡ್ ವೊರ್ಸದ ವನವಾಸನ ಕಷ್ಟಂದ ಮುಗ್ಸಿ ಒಂದು ವೊರ್ಸದ ಅಜ್ಞಾತ ವಾಸನೂ ಎಷ್ಟೇ ಕಷ್ಟಪಟ್ಟರೂ ಭಗವಂತನ ದಯಂದ ಏನೂ ಕುಂದುಂಟಾಗದೆ ಹೊರೆಗೆ ಬಂದೊ. ಕಪಟ ಜೂಜುಲಿ ನಮ್ಮ ಸೋಲ್ಸಿ ಅತ್ಯಾಚಾರ ಮಾಡುವ ಹಾಂಗೆ ಕೌರವೆಳ್ ಮಾಡ್ದ ಹೇಯ ಕೃತ್ಯಗ ಇಡೀ ಕ್ಷತ್ರೀಯ ಕುಲಕ್ಕೆ ಅವು ಮಾಡ್ದ ಅವಮಾನ. ಅವರಂತೆವು ಈ ಭೂಮಿಲಿ ಇರುವಷ್ಟ್ ಕಾಲ ಕ್ಷತ್ರಿಯರಿಗೆ ಅಂಟಿದ ಕಳಂಕ ತೊಡ್ದ್ ಹೋಕಿಲೆ. ಅದಿಕ್ಕಾಗಿ ಕುರುಕ್ಷೇತ್ರೆಲಿ ನಾವು ಅವರ ವಿರುದ್ಧ ಹೋರಾಡುವ ಈ ದೆರ್ಮ ಯುದ್ಧೆಲಿ ನಿಮ್ಮ ಅಖಂಡ ಸೇನಾ ಬಲನ ನಮ್ಮ ಬೆಂಬಲಕ್ಕೆ ಕೊಟ್ಟ್, ನಾವ್ಗೆ ಜಯ ಸಿಗುವ ಹಾಂಗೆ ಮಾಡೊಕುಂತ ವಿನಂತಿ. ನಾವ್ಗೆ ಜಯ ಸಿಕ್ಕಿಕೆ ಕಾರಣವಾಗುವ ನೀವು ಕೊಡುವ ಸೇನಾ ಸಹಾಯಕ್ಕೆ ನಾವು ಎಂದಿಗೂ ಕೃತಜ್ಞರಾಗಿರುವೊ.

ಹಿಂದೆ ಯುಧಿಷ್ಠಿರ ರಾಜಸೂಯ ಯಾಗ ಮಾಡ್ದ ಕಾರಣ ಎಲ್ಲ ರಾಜರಿಗೆ ಅಂವ ಅಧಿರಾಜನಾಗಿತ್ತ್. ಅವನ ರಾಜ್ಯ ಕೋಶಗಳ ಎಲ್ಲ ಕಳ್ಕಂಡ ಕಾರಣ ಆಗಣ ಹೆಚ್ಚಿನ ರಾಜೆರ್ಗ ಅವನ ಅಂಕಿತಂದ ಕಳಚಿಹೋಗಿದ್ದೊ. ದುರ್ಯೋಧನ ಯುದ್ಧದ ಬಗ್ಗೆ ಮುಂದೇ ಯೋಚನೆ ಮಾಡಿದ್ದ ಕಾರಣ ಅಂವ ಮುಂದಾಗಿಯೇ ಹೆಚ್ಚಿನವರ ತನ್ನೊಳೆಗೆನವಾಗಿ ಮಾಡಿಕೆಂಡಿತ್ತ್. ಅಂತೂ ಕೆಲೊವು ಸಜ್ಜನಂಗ ಇನ್ನೂ ಪಾಂಡವರ್ನೇ ನಂಬಿಕೆಂಡ್ ಇದ್ದೊ. ಅವೆಲ್ಲ ಯುಧಿಷ್ಠಿರನ ಓಲೆನ ಗೌರವಿಸಿ ತಮ್ಮ ಸೈನ್ಯಗಳ ತಕೆಂಡ್ ಪಾಂಡವರ ಕಡೆಗೆ ಬಂದ್ ಸೇರ್ದೊ.

ಪಾಂಡವ ಪಕ್ಷಕ್ಕೆ ಹೆಚ್ಚಿನ ಸಾಯ ಕೊಟ್ಟೆದ್ ಅವ್ಕೆ ಹೆಣ್ಣ್ ಕೊಟ್ಟ ನಂಟ್ರ್‌ಗಳೇ.

1: ದ್ರುಪದ: ಒಂದು ಅಕ್ಷೋಹಿಣಿ ಸೈನ್ಯ ಮತ್ತೆ ಅವನ ಮಕ್ಕ ಧೃಷ್ಟದ್ಯುಮ್ನ, ಶಿಖಂಡಿ, ಚೇಕಿತಾನ,

ಯುಧಾಮನ್ಯು ಉತ್ತಮೌಜಸ, ಪುರುಕುತ್ಸು, ವಿಚಿತ್ರ ಮುಂತಾಗಿ

2: ವಿರಾಟ: ಒಂದು ಅಕ್ಷೋಹಿಣಿ ಸೈನ್ಯ. ಶ್ವೇತ, ಉತ್ತರ. ಶಂಖ–ಮಕ್ಕ ಮತ್ತೆ ಹನ್ನೊಂದು ತಮ್ಮಂದೆರ್.

3: ಯಾದವೆರ್: (ಕೃಷ್ಣ) ಒಂದು ಅಕ್ಷೋಹಿಣಿ.

4: ಕೇಕಯರ್ ಐದ್ ಜೆನ ಸೇರಿ– ಒಂದು ಅಕ್ಷೋಹಿಣಿ

5: ಪಾಂಡ್ಯ: ಶ್ರೀ ವಿಜಯ ಸೋಮಕರೊಡನೆ ಒಂದು ಅಕ್ಷೋಹಿಣಿ.

6: ಕುಂತೀ ಭೋಜ–ಸೋಮಕ: 1 ಅಕ್ಷೋಹಿಣಿ ಸೇನೆ.

ಬೇರೆ ಪ್ರದೇಶಗಳ್ಲಿ ಇದ್ದ ಪಾಂಡವರ ಮಕ್ಕಳ ಸಾಯಃ

1. ಪಾತಾಳ ಲೋಕಲಿದ್ದ ಇರಾವಂತ: (ಉಲೂಪಿನ ಮಜ್ಜ) ದೊಡ್ಡ ಸೇನೆ.

2. ಹಿಡಿಂಬ ವನಲಿದ ಘಟೋತ್ಕಚ (ಹಿಡಿಂಬೆನ ಮಜ್ಜ) 68 ಕೋಟಿ ರಕ್ಕಸರ ಪಡೆ.

3. ಅಂಗದ ಪರ್ಣಂತೇಳುವ ಗಂಧರ್ವ (ಸ್ನೇಹಿತ) 60 ಸಾಪಿರ ಕುದುರೆಗ 4ಕೋಟಿ ಗಂಧರ್ವ ಪಡೆಗ.

ಪಾಂಡವ ಯುದ್ಧ ವೀರಲ್: ಪಂಚಪಾಂಡವಲ್ ಐದ್ ಜೆನ; ಪಾಂಡವರ ಮತ್ತೆ ದ್ರೌಪದಿನ ಮಕ್ಕ ಅಭಿಮನ್ಯು-ಅರ್ಜುನ ಸುಭದ್ರೆಯರ ಮಜ್ಜ.

ಇವು ಅಲ್ಲದೆ ದಕ್ಷಿಣ ದೇಶದ ರಾಜೆರ್ಗಳೂ ತಮ್ಮ ತಮ್ಮ ಸೇನೆಗಳ ತಕಂಡ್ ಪಾಂಡವರ ಕಡೆಗೆ ಹೋಗಿ ಸೇರ್‍ದೊ. ಹಾಂಗೆ ಎಲ್ಲ ಸೇರಿ ಒಂದು ಅಕ್ಷೋಹಿಣಿ ಆಗಿ, ಒಟ್ಟು ಏಳ್ ಅಕ್ಷೋಹಿಣಿ ಸೈನ್ಯ ಪಾಂಡವರ ಪಕ್ಷಕ್ಕೆ ಜಮೆ ಆತ್.

ಈ ಸೇನೆ ರಣರಂಗಕೆ ಹೊರ್ಡುದಕ್ಕೂ ಒಂದು ಕ್ರಮ ಇತ್ತ್. ವಿರಾಟನ ಸೇನೆ ರಾಜನ ಎದ್‌ರ್‌ಂದ. ದ್ರುಪದನ ಸೇನೆ ರಾಜನ ಬಲಪಕ್ಕಂದ: ಯಾದವರ್, ರಾಜನ ಎಡಪಕ್ಕಂದ; ಕೇಕಯರ ಸೇನೆ ರಾಜನ ಹಿಂದೆಂದ:

ಇನ್ನೊಳ್ಳವೆಲ್ಲ ಇವರ ಸುತ್ತು ಸುತ್ತಿಕಂಡ್ ನಡ್ದೊ. ಹೀಂಗೆ ಏಳ್ ಅಕ್ಷೋಹಿಣೀ ಸೇನೆ ಮೇರೆ ಮೀರಿ ಹರಿವ ಸಪ್ತ ಸಮುದ್ರಂಗಳ ಹಾಂಗೆ ಕುರುಕ್ಷೇತ್ರದತ್ತ ನಡ್ದೊ. ಈ ಸೇನೆಗ ಮಧ್ಯ ಮಧ್ಯ ನಿಲ್ಲುವಲ್ಲಿ ಅಡಿಗೆ ಬೇಸಿಕೆ ಒಲೆ ಹಾಕಿಕೆ ಕಲ್ಲ್‌ಗಳ ತಂದ್ ಬೆಟ್ಟಗಳೇ ಇಲ್ಲದಾದೊ. ಆನೆಗಳ ಕಟ್ಟಿ ಹಾಕುವ ಕಂಬಗಳಿಗಾಗಿ ಮರಗಳ ಕಡ್ಡ್, ಕಾಡ್‌ಗಳೇ ಇಲ್ಲದಾದೊ. ಹೀಂಗೆ ಬಂದ್ ವಿಸ್ತಾರವಾಗಿದ್ದ ಕುರುಕ್ಷೇತ್ರದ ಪೊಡ್ಡ ದಿಕ್ಕ್‌ಲಿ, ಪರಶುರಾಮ ಮಾಡ್ದ ಸ್ಯಮಂತ ಪಂಚಕಂತೇಳ್ವ ಸರೋವರಗ ಇದ್ದಲ್ಲಿ ಪಾಂಡವ ಸೇನೆ ಬೀಡ್ ಬುಟ್ಟತ್.

ಪಾಂಡವರ ಸೇನೆ ಕುರುಕ್ಷೇತ್ರಲಿ ಬೀಡು ಬುಟ್ಟುಟು ಎಂಬ ಸುದ್ದಿನ ಚಾರಕಲ್ ದುರ್ಯೋಧನಂಗೆ ತಿಳ್ಸಿದೊ. ಒಂದು ತರದ ವಿಸ್ಮಯ ಒಂದು ತರದ ಮತ್ಸರ, ಇನ್ನೊಂದು ತರದ ತಾತ್ಸಾರ ಈ ಎಲ್ಲ ಭಾವನೆಗಳೂ ದುರ್ಯೋಧನಂಗ ಒಟ್ಟಿಗೆ ಬಾತ್.

## ದುರ್ಯೋಧನನ ಸಮರ ಸಭೆ

ದುರ್ಯೋಧನ ಸಭೆನ ಉದ್ದೇಶಿಸಿ ಮಾತಾಡ್ತ್. ಪಾಂಡವ ಸೇನೆ ಕುರುಕ್ಷೇತ್ರಲಿ ಬೀಡ್ ಬುಟ್ಟ ಸುದ್ದಿನ ಕೇಳ್ಟರಿಯಾ? ಅದಿಕೆ ದಳಪತಿ ಶ್ವೇತಂತೇಳ್ವ ಒಳ್ಳ. ಮತ್ತೊಬ್ಬ ಪ್ರಮುಖ ದ್ರುಪದಂತೇಳ್ವ ಮೊಲಿ. ಇನ್ನೊಬ್ಬ ವಿರಾಟಂತೇಳ್ವ ಒಂಟೆ. ಇವ್ಕೆಲ್ಲ ರಾಜ ಆಗಿರೊಂವ ಧರ್ಮ ಶಾಸ್ತ್ರ ಪುರಾಣ ಪ್ರವಾಚಕನಾದ ಯುಧಿಷ್ಠಿರ ಗಡ! ಪಾಂಡವಲ್

ನಮ್ಮೊಟ್ಟಿಗೆ ತಮ್ಮ ದಾಯಿಗತನನ ತೋರ್ಸಿಕೆ ಎಂಥ ಸಾಹಸ ಮಾಡುವೆ ನೋಡಿ! ಇವ್ರು ನಮ್ಮೊಟ್ಟಿಗೆ ಹೋರಾಡೂವು ಗಡ!ಂತ ಸಸಾರಲಿ ಹೇಳ್ತ್.

ದ್ರೋಣಾಚಾರ್ರ್, "ಏನ್ ತೊಪ್ಪು? ಕುರುಕ್ಷೇತ್ರ ಯುದ್ಧಕಳಕ್ಕೆ ಬರೊಕುಂತ ಕರ್ದಂವ ನೀ ಅಲ್ಲೊ? ಇನ್ನ್ ನೀನೂ ತಯಾರಾಗ್. ಸುಮ್ಮನೆ ಅವರ ಹಿಂದೆಂದ ನಿಂದ್‌ಸಿ ಮಾತಾಡಿ ಏನ್ ಫಲ? ಮುಂದೆ ಪಿತಾಮಹರೊಟ್ಟಿಗೆ ಆಲೋಚನೆ ಕೇಳಿ ಅವ್ರು ಹೇಳ್ದಾಂಗೆ ನಡ್ಕಂತೇಳ್ದೊ. ಈ ಸೂಚನೆನ ಒಪ್ಪಿಕಣ್ತ್. ಸಭೆನ ಎಸರ್ಜಸಿತ್.

ಅಂದ್ ರಾತ್ರೆನ ಹೊತ್ತು ಕೆಲವೇ ಜನ ಬೆಂಗಾವಲಗರೊಟ್ಟಿಗೆ ಕೈದೀವಿಗೆಗಳ ಬೊಳ್ಚಿಲಿ ದುರ್ಯೋಧನ ಭೀಷ್ಮನ ಅರಮನೆಗೆ ಹೋತು. ದೂರಲೇ ವಾಹನಂದ ಇಳ್ದ್ ಹೋಗಿ ಒಳಗೆ ಬಾತ್. ಭೀಷ್ಮಂಗೆ ಆಶ್ಚರ್ಯ ಆತ್. ಬಾ! ಇಲ್ಲಿ ಕುದ್ದುರುಂತ ತಾನ್ ಕುದ್ದಲ್ಲಿಗೆ ಕರಿಯಕನ, ಬೇಡ, ನಾ ಇಲ್ಲಿ ಕುದ್ದ್‌ಕಣೆಂತ ಅಲ್ಲಿದ್ದ ಮಣಿಪೀಠಲಿ ಕುದ್ದಿತ್. ಕೆಲ್ಸ ಇದ್ದರೆ ಬಾಕೆ ಹೇಳದೆ, ನೀನೇ ಏಕೆ ಬಂದಂತ ಭೀಷ್ಮ ಕೇಳ್ತ್.

ದುರ್ಯೋಧನ. "ಅಜ್ಜಾ! ಪಾಂಡವರ್ ಸೈನ್ಯ ತಕಂಡ್ ಬಂದ್ ಕುರುಕ್ಷೇತ್ರಲಿ ಬೀಡ್ ಬುಟ್ಟೊಳೊಗಡ. ಅವು ಕೃಷ್ಣನ ನಂಬಿ ಈ ಸಾಹಸ ಕಾರ್ಯಕ್ಕೆ ಇಳ್ದಾಂಗೆ ಸುರುಂದಲೇ ನಿಮ್ಮನೇ ನಂಬಿ ಈ ಯುದ್ಧಕ್ಕೆ ಇಳ್ದೊಳೆ. ಕೃಷ್ಣನ ಅವನ ವೈರಿ ಒಮ್ಮೆ ಹೆಡೆಮುರಿ ಕಟ್ಟಿ ಸೆರೆಹಿಡಿಯಕನ ನೀವೇ ತಾನೆ ಅವನ ಬುಡ್ಸಿದ್? ಮಹಾ ಪರಾಕ್ರಮಿಯಾದ ಭಾರ್ಗವನೊಟ್ಟಿಗೆ ಯುದ್ಧಮಾಡಿ ಸೋಲ್ಸಿದೊವು ನೀವೇ ತಾನೆ? ಹೀಂಗಿರ್ಕನ ನಿಮ್ಮ ಮೀರ್ಸುವ ವೀರರ್ ಈ ಪ್ರಪಂಚಲಿ ಯಾರೂ ಇಲ್ಲೆ. ಪಾಂಡವರ ಹರಿಗೂ ನೀವ್ಗೂ ಆಡಿಗೂ ಆನೆಗೂ ಇರುವ ಅಂತರ. ಅದರ್‌ಂದಾಗಿ ಅಜ್ಜ! ನಿಮ್ಮ ನಂಬಿದ ನನ್ನ, ರಾಜ್ಯ ಲಕ್ಷ್ಮಿ ಬುಟ್ಟ್ ತೊಲಗದಾಂಗೆ ನೀವೇ ಕಾಪಾಡೊಕುಂತೇಳಿ ಅವರ ಕಾಲಿಗೆ ಬೀತ್. ಇವನ ನಯ ವಿನಯದ ಮಾತಿಗೆ ಭೀಷ್ಮ ಕರ್ಗಿತ್. ನೀ ಹೆದ್‌ರ್ಬಡ! ನಿನ್ನ ಕಡೆಂದಳೇ ನಾ ಹೋರಾಡುವೆಂತ ಭರವಸೆ ಕೊಟ್ಟಿತ್.

ದುರ್ಯೋಧನ ಕುಶೀಂದ ಹಿಂದೆ ಬಾತ್. ಭೀಷ್ಮರ್ ಯುದ್ಧಕ್ಕೆ ನಿತ್ತರೆ, ಅವರ ಮೀರ್ದೊಂವ ಇರಿಕಿಲೆ. ಹಾಂಗಾಗಿ ನಂಗೆ ಪಾಂಡವರ ಮೇಲೆ ಸುಲಭ ಜಯ ಕಂಡಿತ ಇದರ ನೆನ್ಸಿಕಂಡ್ ಹಿಗ್ಗಿತ್.

## ಸೇನಾಧಿಪತಿ ಪಟ್ಟ– ಗಾಂಗೇಯನ ಶಪಥ

ಮಾರ್ಣೇ ದಿನ ಬೊಳ್ಪಿಗೆ ಭೀಷ್ಮಂಗೆ ದುರ್ಯೋಧನ ಹೇಳಿಕಳ್ಸಿ ಅವರ ಬಾಕ ಮಾಡ್ತ್. ಪಂಚರತ್ನಂಗಳ ಹಾಕಿದ ಪುಣ್ಯತೀರ್ಥ ಜಲಂಗಳ್‌ಂದ ಅವರ ಮೀಸಿ, ಬಾರಿ ಸಂಭ್ರಮಂದ ಅಷ್ಟೆ ತನ್ನ ಓಲಗದ ಸಮಸ್ತ ಪ್ರಮುಖರೆದ್‌ರ್ ಸೇನಾಧಿಪತಿ ಪಟ್ಟ ಕಟ್ಟಿತ್. ದುರ್ಯೋಧನ ಭೀಷ್ಮರ ಸೇನಾಧಿಪತಿ ಮಾಡಿ, ತಾನ್ ಆಗಳೇ ಬಾರೀ ವಿಜಯ ಸಂಪಾದಿಸಿ ಬುಟ್ಟೆಂತ ಹೆಮ್ಮೆ ಪಟ್ಟ್‌ಕಂಡ್ ಇರುದರ ನೋಡಿ ಕರ್ಣಂಗೆ ತುಂಬ ಅಸಮಾಧಾನ

ಉಂಟಾತ್.

"ದುರ್ಯೋಧನ! ನೀ ಒಂದು ಅಸಂಬದ್ಧ ಕಾರ್ಯನ ಮಾಡಿ, ಬಾರಿ ಒಳ್ಳೆ ಕೆಲ್ಸನ ಮಾಡ್ದೆಂತೇಳಿಕಳೆಂಡ್ ಅಸಂಬದ್ಧ ಮಾತಾಡಿಕಳೆಂಡ್ ಒಳ! ಕೈಕಾಲ್ ನಡ್ಗಿಕೆ ಸುರಾದ ಈ ಅಜ್ಜಂಗೆ ಸೇನಾಧಿಪತಿನ ಪಟ್ಟಕಟ್ಟಿದ. ಜೋಲ್ಡ್ ಇಳ್ಕಂಡಿರುವ ಕಣ್ಣ್ನ ಹುಬ್ಬುಗ! ನೆರಿಗಟ್ಟಿ ಸಡ್ಲ್ ಆಗಿರುವ ಮೈ ಚರ್ಮ. ಇಂತ ಮುದಿಯ ಹೇಂಗೆ ಯುದ್ಧ ಮಾಡುದು? ಮಾಡಿರು ಬೇರೆ ಪಾಂಡವರ್ ಇವ್ರು ಸಾಂಕಿದ ಮಕ್ಕ ಆಗಿರ್ಕನ ಇವು ಅವರೊಟ್ಟಿಗೆ ಯುದ್ಧ ಮಾಡಿ ಅವರ ಕೊಲ್ಲಿಕೆ ಮನ್ಸ್ ಬಾದೊ. ಹಾಂಗೆ ಮಾಡಿರೆ ಹಾವ್ರು ತಾನ್ ಇಸಿದ ಮೊಟ್ಟೆನ ತಾನೇ ನುಂಗಿದ ಹಾಂಗಾದೆಂತ ಅವರ ಮನ್ಸ್ಗಾಗಿ. ಅವ್ರ ಹಿಂದೆಗಿಯಕಿಲೆನೋ? ಇದರ್ಂದ ನಿಂಗೇನ್ ಲಾಬ? ಹೀಂಗೆ ಅಣಕು ಯುದ್ಧ ಮಾಡುವ ಇಂತವರ್ಂದ ನಿಂಗೆ ಹಾನಿಯೇ ಅಲ್ಲದೇ ಲಾಬ ಇಲ್ಲೇಂತೇಳ್ದು ಕಂಡಿತ. ನಿಂಗೆ ಕಾರ್ಯ ಜಯ ಆಕುಂತೇಳಿರೆ ನನ್ನಂತವ್ರುಕೆ ನೀ ಪಟ್ಟ ಕಟ್ಟಿಕೆಂಡ್ತ್." ಹೀಂಗೆ ಕರ್ಣ ಕೋಪದೆಲಿ ಹೇಳ್ತ್.

ಕರ್ಣನ ಮಾತ್ ಕೇಳಿ ದ್ರೋಣಾಚಾರ್ಯರಿಗೆ ಬಾರಿ ಕೋಪಬಾತ್! ಏನ್ ಕರ್ಣ? ಭೀಷ್ಮರ ಹೀಂಗೆ ತೆಗ್ಳಿ ಮಾತಾಡ್ತಿಯ! ಅವ್ಕೆ ಮುಪ್ಪು ಬಂದಿದ್ದ. ಇದರೆ ಅವರ ಶೌರ್ಯಕೆ ಮುಪ್ಪುಂತೇಳಿ ಏನಾರ್ ಉಟ್ಟೊ? ಸಿಂಹಕೆ ಮುಪ್ಪು ಬಂದರೂ ಅದ್ ಮದ್ದಾನೆನ ಮೇಲೆ ಹಾರಿ ಅದರ ತಲೆನ ಸೀಳಿ ಹಾಕ್‌ದ್‌ಲೆನೋ? ನಿನ್ನ ನಾಲಿಕೆ ನಿನ್ನ ಕುಲನ ತೋರ್ಸಿ ಕೊಟ್ಟದೆಂತ ಹೇಳ್ದೊ. 'ಕುಲ ಕುಲ'ಂತ ಮಾತ್ ಮಾತಿಗೆ ಎತ್ತಿ ಹಂಗ್ಸಿರೆ. ಏನ್ ನಿಮ್ಮ ಕುಲ ವೈರಿಗಳ ಜೆರ್ಸಿ ನುಂಗಿದನೊ. ಶೌರ್ಯ, ಪರಾಕ್ರಮ, ಧೈರ್ಯ, ಸಾಹಸಗಳೇ ಕುಲ. ಅಲ್ಲದೇ ನಿಮ್ಮ ಕುಲಂದ ಏನ್ ಲಾಭ ಉಟ್ಟು? ಸುಮ್ಮನೆ ವಟವಟಂತ ಯಾಗೋಳು ಕುಲನ ಮಾತ್ ಎತ್ತ್‌ಬೇಡಿಂತ ಕರ್ಣ ಕಠೋರವಾಗಿ ಉತ್ತರ ಕೊಟ್ಟತ್.

ಭೀಷ್ಮರ್ ಈಗ ಮಾತಿಗೆ ಸುರು ಮಾಡ್ದೊ. "ಶೌರ್ಯದ ಕೆಚ್ಚ್, ಯೌವನದ ಸೊಕ್ಕು, ರಾಜನಾದವನ ಮೆಚ್ಚ್ ಇವೆಲ್ಲ ಕರ್ಣ, ನಿಂಗೆ ಇದುವರ್ಗೆ ನಂಗೆ ಉಟ್ಟೊ? ಇಲ್ಲೆ ನಿಜ ನನ್ನದೇನಿದ್ದರೂ ಬೂಸು! ನಿಷ್ಪ್ರಯೋಜನ ಅಲ್ಲವೆ ಮತ್ತೇನ್? ಏಕೆ ಅಷ್ಟು ಸುಮ್ಮನೆ ಚಡಪಡ್ಸಿಯ? ನಡಿದು ಏನ್?– ಮಹಾಭಾರತ ಯುದ್ಧ! ಹೆಸ್‌ರಿಗೆ ತಕ್ಕ ಹಾಂಗೆ ತುಂಬ ಕಠಿಣವಾದ್ದ್. ಎದುರ್ಸಂವ ಅರ್ಜುನ! ನಿಂಗೂ ಈ ದೊಡ್ಡ ಯುದ್ಧರಂಗದೆಲಿ ಸರದಿನ ಪಾಲ್ ಬಂದೇ ಬಂದದೆ. ಅಂಚೆರ್ಮ ಮಾಡ್ಬೇಡ ಸ್ವಲ್ಪ ಕಾಯಿ!".

"ನನ್ನ ಬಲ ಏನಿದ್ದರೂ, ಅಣ್ಣ ಹೇಳ್ದಾಂಗನೇ ಸರಿ! ಆದರೂ ಈ ಮುದಿಯ ಏನ್ ಮಾಡುದುಂತ ಹೇಳಿನೆ ಕೇಳಿ!

'ಚಕ್ರನ ಒಡಿಯಕಿಲೆ'ಂತ ಶಪಥ ಮಾಡ್ದ ಚಕ್ರಿನ ಕೈಲಿ, ಮೂರು ಲೋಕವೂ ಹೆದ್‌ರಿ ನಡ್ಗುವ ಹಾಂಗೆ ಚಕ್ರನ ಒಡ್ಸುವೆ! ಅಂವ ಕುದ್ದಿರುವ ರಥನ ಬಾಣ ಹೊಡ್ದ್ ಎಂಟ್ ಗಾವುದದಷ್ಟ್ ದೂರ ಹಿಂದಕ್ಕೋಡ್ಸುವೆ! ಒಂದುಲಕ್ಷ ಆನೆಗಳ ಕುದುರೆಗಳ ರಥಗಳ ದಿನ ಒಂದಕ್ಕೆ ಕೊಚ್ಚಿ ಹಾಕುವೆ! ಹಾಂಗೇ ಒಂದು ದಿನದೆಲಿ ಹತ್ತ್ ಸಾವಿರ ಕಿರೀಟಧಾರಿಗಳಾದ

ರಾಜರ್ಗ್ಳ ರುಂಡ ಹಾರ್ರಿ ನೆಲಕ್ಕೆ ಬೀಳ್ತುವೆ! ಹೀಂಗೆ ಭೀಷ್ಮರ್ ಭೀಷ್ಮ ಶಪಥ ಮಾಡ್ರೊ.

ಇಷ್ಟ್ ಕೇಳಿಯೂ ಕರ್ಣನ ಅಸಮಾಧಾನ ಚಿನ್ಲ್ಲ. ಅಂವ ಹೇಳ್ತ್: ಈ ಗಾಂಗೇಯ ಪಾಂಡವರ ಗೆದ್ದ್ ಬುಟ್ಟಲ್ಲಿಂತಾದರೆ ನಾ ತಪಸ್ಸಿಗೆ ಹೋವೆ. ಒಂದು ವೇಳೆ ಪಾಂಡವರ ಕೈಲಿ ಇವರ ಕತೆ ಮುಗ್ತ್‌ಂತಾದರೆ ನಾ ಹೋರಾಡಿ ಶತ್ರುಗಳ ನಾಶಮಾಡುವೆ. ಅಷ್ಟವರೆಗೆ ನಾ ಬಿಲ್ಲ್ ಹಿಡಿಯಕಿಲ್ಲಂತ ಶಪಥ ಮಾಡ್ತ್. 'ಸುರುನ ಮುತ್ತುಲೇ ಹಲ್ಲ್ ಮುರ್ತ್' ಗಡಂತೇಳುವ ಮಾತ್‌ನಾಂಗೆ ಆತ್. (ಪ್ರಥಮ ಚುಂಬನೇ ದಂತ ಭಗ್ನ). ಕರ್ಣ ಸೇನಾಪತಿ ಪಟ್ಟ ಕಟ್ಟ್‌ಸಿಕಂಬ ಕಾಲಲ್ಲಿ ಆ ಪದವಿ ತನಿಗೆ ಸಿಗ್ತ್‌ಲ್ಲಂತೇಳುವ ನಿರಾಸೆನ ಕೋಪಲ್ಲಿ ಯುದ್ಧಲ್ಲಿ ಈ ಮುಗ್ಯನ ಮಜ್ಜ ಸಾಯಕನ ಮುಟ್ಟ ನಾ ಬಿಲ್ಲ್ ಹಿಡಿಯಕಿಲ್ಲೇಂತ ಅಶ್ವತ್ಥಾಮನೂ ಶಪಥ ಮಾಡ್ದೆ ಹೀಂಗೆ ತಮ್ಮ ಸ್ವಪ್ರತಿಷ್ಠೆಂದಾಗಿ ಎಲ್ಲೊವು ಒಟ್ಟಾಗಿ ನಡ್ಲೊಕಾದ ಕಾಯರ್ಲಿ ಅಸಹಕಾರ ತೋರ್ಸುವ ಗುಣ ಮಹಾಭಾರತದ ಕಾಲಂದಲ್ಲೇ ನಮ್ಮ ದೇಸಲ್ಲಿ ನಡ್ದ್ ಬಂದ ದುರ್ಗುಣ. ಇದ್ ಚಾರಿತ್ರಿಕ ಕಾಲಲ್ಲಿಯೂ ಕಂಡ್ ಬಂದದೆ. ಹಾಂಗಾಗಿಯೇ ನಮ್ಮ ದೇಸಕ್ಕೆ ಪರಕೀಯರ ಆಕ್ರಮಣ ನಡ್ದ್ ನಾವು ಸ್ವಾತಂತ್ರ್ಯ ಕಳ್ಕಂಡೆ. ಅದ್ ಹೋಗಲ್ಲಿ ವಿಷಯಾಂತರ ಬೇಡ.

ಇಷ್ಟೆಲ್ಲ ಆದ ಮೇಲೆ ದುರ್ಯೋಧನ ಭೀಷ್ಮರ ಅವರ ಅರಮನೆಗೆ ಕಳ್ಸಿತ್. ಮತ್ತೆ ಒಳ್ಳೆ ಆಸ್ಥಾನಿಕರೊಟ್ಟಿಗೆ ಮಾತಾಡಿ ನಾಳೆನೇ ಕುರುಕ್ಷೇತ್ರಕ್ಕೆ ಸೈನ್ಯ ತಕಂಡ್ ಪೋಯಿಂತೇಳಿ ನಿಶ್ಚಯ ಮಾಡಿ, ಸೇನೆ ಎಲ್ಲ ಸಿದ್ಧ ಆಕೆ ಸೂಚನೆ ಕೊಡುದೈಕಾಗಿ ಸನ್ನಾಹ ಭೇರಿನ ಹೊಡ್ಸಿಕೆ ಹೇಳ್ತ್. ಆ ಭೇರಿನ ಧ್ವನಿ ಮೂರು ಲೋಕಕೂ ಹಬ್ಬಿತ್. ಆಕಾಶಂದ ನಕ್ಷತ್ರಗೆ ಈ ಸದ್ದ್‌ನ ಕಂಪನಕ್ಕೆ ಅದ್‌ರಿ ಕಳಚಿ ಬಿದ್ದೊ. ನೋಡ್ದ ಜೆನ ಇದ್ ಉಲ್ಕಾಪಾತ, ಇದ್ ಅಪಶಕುನಂತ ಹೇಳಿಕಂಡೊ. ಈ ಶಬ್ದ ಕೇಳ್ದ ಎಲ್ಲಾ ವರ್ಗದ ಸೈನಿಕರ್, ತರಾತುರಿಂದ ಅವ್ವವ್ಕೆ ಬೇಕಾದ ಜೋಡಣೆಗಳ ಮಾಡಿಕಂಡ್ ಪ್ರಯಾಣಕ್ಕೆ ಸಿದ್ಧರಾದೊ.

ಮಾರ್ನೆದಿನ ಭೀಷ್ಮರ ಸೇನಾಧಿಪತ್ಯಲ್ಲಿ ಕೌರವನ ಹನ್ನೊಂದು ಅಕ್ಷೋಹಿಣೀ ಸೇನೆ ಕುರುಕ್ಷೇತ್ರಕೆ ಮೇರೆ ತೊಪ್ಪಿದ ಸಾಗರದಾಂಗೆ ವಿಶಾಲವಾಗಿದ್ದಲ್ದ್ ರಣವಾದ್ಯಗಳ ಸದ್ದ್ ಮಾಡಿಕಂಡ್ ಉತ್ಸಾಹಂದ ಹೊರ್ಟತ್. ದುರ್ಯೋಧನ ಒಂದು ಸಿಂಗಾರ ಮಾಡ್ದ ದೊಡ್ಡ ಆನೆನ ಮೇಲೆ ಕುದ್ದ್‌ಕಂಡಿತ್ತ್. ಅವನ ಅಕ್ಕಪಕ್ಕಲಿ ಅವನ ತಮ್ಮಂದರೂ ಮಕ್ಕಳೂ ವೈಭವಂದ ಆನೆಗಳ ಮೇಲೆ, ಕುದುರೆಗಳ ಮೇಲೆ, ರಥಗಳ ಮೇಲೆ ಕುದ್ದ್‌ಕಂಡ್ ಬಾತಿದ್ದೊ. ಸೈನಿಕ ವೀರರ ಹೆಣ್ಣ್‌ಕ, ವೇಶ್ಯಾಸ್ತ್ರೀಯರ್, ಅಂತಃಪುರಕೆ ಸೇರ್ದ ತರತರದ ಉಡುಗೆ ತೊಡುಗೆಗಳ ತೊಟ್ಟ್‌ಕಂಡ್ ಇರುವ ಸೂಳೆಗ ಪಲ್ಲಕಿಗಳ್ಲಿ ಕುದ್ದ್‌ಕಂಡ್ ಹೊರ್ಟ ಪಲ್ಲಕಿಗಳ ಸಾಲ್ ಸಾಲೇ ಮುಂದೆ ಹೋತಿತ್ತ್. ಸೇನೆ ನಡಿಯಕನ ಧೂಳು ಮೇಲೆದ್ದ್ ಬಾನಕೇರಿ ಮುಗಲ್‌ನ ನೀರ್ ಪಸೆನೊಟ್ಟಿಗೆ ಬೆರ್ತ್, ಕೆಸ್‌ರಾಗಿ, ಸೂರ್ಯನ ಬಿಸ್‌ಲಿಗೆ ಕಾದ್, ಅಲ್ಲಿಯೇ ಇನ್ನೊಂದು ಭೂಭಾಗ ನಿರ್ಮಾಣ ಆದಾಂಗೆ ಕಂಡತ್. ಹೀಂಗೆ ಭೂಮಿಂದ ಮೇಲೆ ಅಷ್ಟ್ ಹೊತ್ತದ ಧೂಳು ಹಾರ್ರ್‌ಂದ, ಆದಿ ಶೇಷಂಗ ಇಷ್ಟ್ ದೊಡ್ಡ ಸೇನ್ಯದ ಭಾರನ ತಡ್ಕಂಬಕೆ ಸಾಧ್ಯ ಆತ್.

**ಮಕ್ಕ:**

ತಾತ! ಅಕ್ಷೋಹಿಣಿಂತೇಳುವ ಶಬ್ದನ ತುಂಬ ಸರ್ತಿ ಕೇಳುವೆ. ಅದರ ನಿಜವಾದ ಸಂಖ್ಯಾಪ್ರಮಾಣ ಎಷ್ಟಂತ ಒಮ್ಮೆ ಹೇಳಿದ್ದರೆ ಆಗಿತ್ತ್.

**ತಾತ:**

ಹೇಳಿನ ಸಂಪೂಳಿಯೊಕೂರ ನೀವಿದರ ಬರ್ಕಂಡರೆ ಒಳ್ಳೇದ್ ಹೇಂಗೆ ಬರ್ಕಂಡರೆಸೂ.

**ಮಕ್ಕ:**

ಸರಿ ತಾತ! ಬರ್ಕಂಡವೆ ಹೇಳಿ:

**ತಾತ:**

ಚತುರಂಗ ಸೇನೆಂತೇಳಿರೆ: ಗಜ, ರಥ, ತುರಗ, ಪದಾತಿಂತ ಅಕ್ಷೋಹಿಣಿ ಅಂದರೆ ಒಂಬತ್ತ್ ಸಾವಿರ (9,000) ಆನೆ.

ಆನೆ ಒಂದಕ್ಕೆ ಮೂರು ರಥ(=9000x3=27000 ರಥ)

ರಥ ಒಂದಕ್ಕೆ ನೂರು ಕುದುರೆ (27000x100=2700000 ಕುದುರ)

ಒಂದು ಕುದುರೆಗೆ ಮೂರು ಕಾಲಾಳ್ (2700000x3 ಕಾಲಾಳ್=8100000 ಕಾಲಾಳ್)

## ಯುದ್ಧಾರಂಭ

ಮಹಾಭಾರತದ ಯುದ್ಧಂತೇಳಿರೆ ನಿಜವಾಗಿ ಮಹಾ=ದೊಡ್ಡಭಾರ ಇದುವಂತದೇ. ಕೌರವರ ಹನ್ನೊಂದು ಅಕ್ಷೋಹಿಣಿ ಪಾಂಡವರ ಏಳಕ್ಷೋಹಿಣಿ ಸೇನೆ, ಕುರುಕ್ಷೇತ್ರಲಿ ಎದ್‌ರೆದ್‌ರಾಗಿ ಒಂದು ಕಡೆಂದ ದುರ್ಯೋಧನ ಇನ್ನೊಂದು ಕಡೆಂದ ಯುಧಿಷ್ಟಿರ ಕೈ ಬೀಸ್‌ಕನ ಎರ್ಡ್ ಸೊವ್ರುಂದ್ರಂಗ ಒಂದರ ಮೇಲೆ ಒಂದು ಬೀಳುವಾಂಗೆ ಯುದ್ಧಕ್ಕೆ ಸುರುಮಾಡ್ದೊ. ಅದಿಕೆ ಮುಂದೆ ಎರ್ಡ್ ಸೈನ್ಯಗಳೂ ಎದ್‌ರೆದ್‌ರ್ ನಿತ್ತ್‌ಕಂಡ್ ಇರ್‌ಕನ ಯುಧಿಷ್ಟಿರ ಕೃಷ್ಣನೊಟ್ಟಿಗೆ ಎದ್‌ರ್ ಸೈನ್ಯನ ಮುಖ್ಯಸ್ಥರ್ ಯಾರ್ಯಾರ್‌ಂತ ವಿವರ್ಸೆಂತ ಕೇಳ್ದೆ. ಕೃಷ್ಣ ಹೇಳ್ದ. ನಮ್ಮ ಕಡೆವು ಯಾರ್ಯಾರ್ ಅವರ ಎದ್‌ರ್ದುವಂತ ನಿರ್ಣಯ ಮಾಡಿ ಆದ ಮೇಲೆ ಯುಧಿಷ್ಟಿರ ಅವನ ರಥನ ಹತ್ತಿಕಂಡ್ ಎರ್ಡ್ ಕಡೆನ ಸೈನಿಕರೂ ಪಿಳಿಪಿಳಿ ಕಣ್ಣ್ ಬುಟ್ಟಿಕಂಡ್ ನೋಡಿಕಂಡ್ ಇರ್‌ಕನ ಒಬ್ಬನೇ ವೈರಿಸೇನೆನೊಳಗೆ ಹೋಗಿ ಭೀಷ್ಮರ ಕಾಲಿಗೆ ನಮಸ್ಕಾರ ಮಾಡ್ತ್. ಅಜ್ಜಂಗೆ ಇವನ ವಿನಯ ಬುದ್ಧಿ ಭಾರಿ ಕುಸಿಕೊಟ್ಟಿತ್. ಎದೆತುಂಬಿ ನೀ ವಿಜಯಿಯಾಗ್‌ಂತ ಆಶೀರ್ವಾದ ಮಾಡ್ದೊ. ಮುಂದೆ ಗುರು ದ್ರೋಣ, ಅಶ್ವತ್ಥಾಮ ಕೃಪಾಚಾರ್ಯರಲ್ಲಿ ಹೋಗಿ ಅವರ ಕಾಲಿಗೂ ನಮಸ್ಕಾರ ಮಾಡ್ತ್. ಅವು ನೀ ವಿಜಯಿಯಾಗ್‌ಂತ ಆಶೀರ್ವಾದ ಮಾಡ್ದೊ. ಮತ್ತೆ ಒಂದೆ ಬಾಕನ, ಭೀಮನ ಗದೆನ ಹೊಡ್ತಕ್ಕೆ ಕುರುಕುಲ ಸಂಪೂರ್ಣ ನಾಶ ಆದರೆ ಸಂತತಿನೇ ಮುತ್ತಿದೆ. ಅದಿಕ್ಕೆ ಯುಯುತ್ಸುಂತೇಳುವ ಧೃತರಾಷ್ಟ್ರನ ದಾಸಿನ ಮಜ್ಜನ ಇವನ ನಾ ಕಾಪಾಡಿನಂತೇಳಿ ತನ್ನೊಟ್ಟಿಗೆ ಕರ್ಕಂಡ್ ಬಾತ್.

# ಅರ್ಜುನನ ವ್ಯಾಮೋಹ ವೈರಾಗ್ಯ

ಅರ್ಜುನ ತಾನ್ ನಾಶ ಮಾಡಿಕಿರುವ ಶತ್ರು ಸೇನೆನ ನೋಡ್ಕನ ಅವಂಗೆ ಅಲ್ಲಿ ಶತ್ರುಗಂತ ಯಾರೂ ಕಂಡೆತ್ಲೆ ಹಿರಿಯೆರ್, ಗುರುಗ, ಅಣ್ಣ ತಮ್ಮಂದೆರ್, ನೆಂಟ್ರ್, ಇಷ್ಟರ್, ಒಡನಾಡಿಗ ಇವರ ನಾ ಹೇಂಗೆ ಕೊಲ್ಲುದು? ಕೊಂದರೆ ಆ ಪಾಪನ ಹೇಂಗೆ ಬೀಟುದು? ನಂಗೆ ಬಂಧುರಕ್ತಂದ ತೊಳ್ದ ರಾಜ್ಯ ಐಶ್ವರ್ಯ ಯಾದೂ ಬೇಡ. ಮುಂದೆನಾಂಗೆ ಕಾಡ್‌ಲಿರುದೇ ಒಳ್ಳೆದ್. ಯಾರಿಗೆ ಬೇಕು ಈ ಯುದ್ಧ ಪಂಥ ಪೌರುಷ ಎಲ್ಲ?ಂತೇಳಿ ಬಿಲ್ಲ್ ಬಾಣಗೆಳ ಹೆರ್ಕಿ ನೆಲಕ್ಕಿಟ್ಟ್ ಕೈ ಕೆಟ್ಟಿ ಕುದ್ದೆತ್.

ಕೃಷ್ಣಂಗೆ ಆಶ್ಚರ್ಯ ಆತ್. ನಾನ್ ನನ್ನೆದ್‌ಂತೇಳ್ದ ಅಹಂಕಾರ ಮಮಕಾರಗಳ ಬುಟ್ಟ್, ನಾ ಒಂದು ನೆಪಮಾತ್ರ. ಈ ಎಲ್ಲ ಕೆಲ್ಸಗಳ ಸೂತ್ರಧಾರ ಬೇರೆನೇ ಉಟ್ಟು. ಪ್ರತಿಫಲಾಪೇಕ್ಷ ಇಲ್ಲದೆ ಕೆಲ್ಸಮಾಡೊಕು. ಆತ್ಮ ಚಿರಂಜೀವಿ. ಅದ್ ಕಿಚ್ಚಿಂದ ಬೇಯುಕಿಲ್ಲೆ. ಕೆತ್ತಿಂದ ತುಂಡಾಕಿಲ್ಲೆ. ನೀರ್ಲಿ ಕರ್ಗಿ ಹೋಕಿಲೆ. ಸಾವುಂತೇಳ್ದು ಶರೀರಕ್ಕೆ ಮಾತ್ರ. ಒಂದು ವಸ್ತ್ರ ಹಾಳಾಕನ ಅದರ ಬುಟ್ಟ್ ನಾವು ಬೇರೆ ವಸ್ತ್ರನ ಧರಿಸುವ ಹಾಂಗೆ ಆತ್ಮನೂ ಒಂದು ಶರೀರನ ಬುಟ್ಟ್ ಇನ್ನೊಂದು ಶರೀರನ ಪ್ರವೇಶಿಸಿದೆ. ಭಾರತೆಲಿ ಧೆರ್ಮಂತೇಳ್ದು ಹಾಳಾಕನ, ದುಷ್ಟರ ಸಂಹಾರ ಮಾಡಿ. ಶಿಷ್ಟರ ರಕ್ಷಿಸಿಕೆ. ಧೆರ್ಮ ಸಂಸ್ಥಾಪನೆಗೆ ಪ್ರತಿಯುಗೆಲ್ಯೂ ನಾ ಮತ್ತೆ ಮತ್ತೆ ಅವತಾರ ತಾಳಿ ಬನ್ನೆಂತ, ವೇದ ವೇದಾಂಗ ವಿಚಾರಗಳ ಎಲ್ಲ ಸಂಗ್ರಹವಾಗಿ ಹೇಳಿ ಅರ್ಜುನಂಗೆ ಬೋಧಿಸಿ, ಕಡೆಗೆ ತನ್ನ ವಿಶ್ವರೂಪನೂ ಅವಂಗೆ ತೋರ್ಸಿತ್. ಅರ್ಜುನಂಗೆ ಆವರ್ಸಿದ ವ್ಯಾಮೋಹ, ಅಜ್ಞಾನ ಎಲ್ಲ ದೂರ ಆತ್. ಭಗವಂತ! ನಿನ್ನ ಆಜ್ಞೆನ ಪಾಲ್ಸಿ ನನ್ನ ಕರ್ತವ್ಯನ ಮಾಡಿನೆ. ನಂಗೆ ನೀನೇ ಗತಿ. ಕಾಪಾಡ್‌ಂತ ಹೇಳಿ ಅರ್ಜುನ ಬಿಲ್ಲ್ ಬಾಣನ ಹಿಡ್ಕೆಂಡ್ ಎದ್ದ್ ನಿತ್ತೆತ್.

ಭಾರತೆಲಿ ಈ ಭಾಗ ತುಂಬ ಪ್ರಸಿದ್ಧಿ ಪಡ್ದ ಭಾಗ. ಹದ್ನೆಂಟ್ ಅಧ್ಯಾಯಗಳ್‌ಂದ ಕೂಡ್ದ ಈ ಭಾಗ 'ಭಗವದ್ಗೀತೆ'ಂತ ಹೆಸ್ರ್ ಪಡ್ದುಟು. ನಿಜವಾಗಿ ಇದರ ಬರ್ದಂವ ವ್ಯಾಸ. ಅಂವ ಕೃಷ್ಣಂತೇಳುವ ಅದ್ಭುತ ಪಾತ್ರನ ಸೃಷ್ಟಿ ಮಾಡಿ ಅವನ ಬಾಯಿಂದ ಈ ತತ್ವಜಿಜ್ಞಾಸೆ ಮಾಡ್ಸಿ, ತಾನ್ ಹಿಂದೆ ಸರ್ದ್ ನಿತ್ತುಟು. ಇದರ ಕರ್ತೃ ಕೃಷ್ಣಂತೇ ಎಲ್ಲೊವು ನಂಬುವ ಹಾಂಗೆ ಆಗುಟು. ಎಂಥ ಅದ್ಭುತ ಅಲ್ಲಾ?

ಇನ್ನ್ ಯುದ್ಧ ವರ್ಣನೆನ ವಿಸ್ತಾರವಾಗಿ ವರ್ಣಿಸಿಕೆ ಬೇರೆ ಕವಿಗ ಮಾಡ್ದಾಂಗೆ ನಾ ಹೊರ್ಡುದುಲೆ. ಆ ಭೀಭತ್ಸನ ನಂಗೆ ಸೈಸಿಕೆ ಆದುಲೆ. ಆದಷ್ಟ್ ಸಂಕ್ಷೇಪವಾಗಿ ಹೇಳಿ ಮುಗ್ಸಿನೆ. ಉಭಯ ಸೇನೆಗಳೂ ವೀರಾವೇಶೆಲಿ ಹೋರಾಡ್ದೊ. ಭೀಷ್ಮರ್ ತಾನ್ ಶಪಥ ಮಾಡ್ದಾಂಗೆ ದಿನಾ ಹತ್ತ್ ಸಾವಿರ ಕಿರೀಟ ಧಾರಣೆ ಮಾಡ್ದ ರಾಜೆರ್ಗಳ ಕೊಂದ್ ಹಾಕಿದೊ. ಒಂಬತ್ತನೇ ದಿನದಂದ್ ಅವ್ಕೆ ಅರ್ಜುನ ಎದ್‌ರಾತ್. ತನ್ನ ಪಿಳ್ಳಿನ ಕೊಲ್ಲದೆ ಸುಮ್ಮನೆ ಅವನೊಟ್ಟಿಗೆ ತೋರಿಕೆನ ಯುದ್ಧ ಮಾಡಿಕೆಂಡ್. ಅವನೊಟ್ಟಿಗಿದ್ದ ಬೇರೆ ಸೈನಿಕರ ಎಲ್ಲ ಕೊಚ್ಚಿ ಹಾಕಿಕೆ ಸುರುಮಾಡ್ದೊ. ಹಜ್ಞ್ ಹೊತ್ತ್ಲಿ ತನ್ನ ಸೇನೆ ನಾಶ ಅವರ

ನೋಡಿ ಅವಂಗ ನಾಚಿಕೆನೊಟ್ಟಿಗೆ ತುಂಬ ಸಿಟ್ಟ್ ಬಾತ್. ಹೀಂಗೆ ಅವನೂ ಅಜ್ಞಂತ ಹಗ್'ರ ಯುದ್ಧ ಮಾಡದೆ ಮಹಾ ಅಸ್ತ್ರಗಳ ಪ್ರಯೋಗ ಮಾಡಿಕೆ ಸುರುಮಾಡ್ತ್ ಅವರ ಉರಿ ಮುಟ್ಟ್‌ಕನ ಭೀಷ್ಮರೂ ಕೆರ್'ಳಿ ಅವನಾಂಗೇ ಸುರುಮಾಡ್ದೊ. ಅರ್ಜುನ ಅವರ ಬಿಲ್ಲ್ ತುಂಡ್ ಮಾಡ್ತ್. ಸಾರಥಿನ, ಕುದುರೆಗಳ ಕೊಂದ್ ರಥನ ಹಾಳ್ ಮಾಡಿ ಹಾಕಿತ್. ಅವು ಇನ್ನೊಂದು ರಥಲಿ ಕುದ್ದ್ ಬೇರೊಂದು ಬಿಲ್ಲಿಗೆ ಬಾಣ ಹೂಡಿ ಎಳ್ದ್ ಬುಟ್ಟ್, ಅರ್ಜುನನ ರಥ ಎಂಟ್ ಗಾವುದದಷ್ಟ್ ಹಿಂದೆ ಹೋವಾಂಗೆ ಮಾಡ್ದೊ. ಮತ್ತೆ ಎದ್'ರಾಕನ ರಥನ ಅತ್ತಿತ್ತ ತಿರ್ಗ್'ಸಿಕಂಡ್ ಚಾತುರ್ಯ ತೋರ್‍ವ ಕೃಷ್ಣಂಗೆ ಬುದ್ಧಿಕೊಲ್ಲಿನಂತ ಒಂದು ಬಾಣನ ಎಳ್ದ್ ಅವನ ಎದೆಗೆ ತಾಂಗುವಾಂಗೆ ಮಾಡ್ದೊ. ಕೃಷ್ಣರಿಗೆ ಅದರ ಬೇನೆ ತಡಿಯಕಾತ್'ಲ. ಇಚ್ಛಾಮರಣಿಯಾದ ಇವನ ಬೇರೆ ಯಾರಿಗೂ ಕೊಲ್ಲಿಕೆ ಆಕಿಲೆಂತೇಳಿ ತನ್ನ ಚಕ್ರನ ಬುಟ್ಟಿತ್. ಅದ್'ಕಿಡಿ ಸೂಸಿಕಂಡ್ ಭಯಂಕರ ವೇಗಲಿ ಬಾದೊರ ನೋಡಿ ಒಳ್ಳ ಸೈನಿಕರೆಲ್ಲ ಹದ್'ರಿ ನಡ್ಗ್‌ತಿದ್ದೊ. ಆಗ ಭೀಷ್ಮರ್ ಹಿಂದೆ ಕೃಷ್ಣನೇ ತನಗೆ ಮೆಚ್ಚಿ ಕೊಟ್ಟಿದ್ದ ನಾರಾಯಣಾಸ್ತ್ರನ ಅದಿಕ್ಕೆದ್'ರಾಗಿ ಪ್ರಯೋಗ ಮಾಡ್ದೊ. ಅವೆರಡ್ಡು ಕಿಡಿಗುಟ್ಟಿಕಂಡ್ ಬಾನಲಿ ಮೇಲಾಟ ಆಡಿಕಂಡ್ ಇದ್ದೊ. ಅಷ್ಟರ್ಲಿ ಸೂರ್ಯ ಕಂತಿಕಾತ್. ಯುದ್ಧ ನಿಲ್ಲುವ ಸಂಕಧ್ವನಿ ಆತ್. ಎಲ್ಲೊವೂ ಅವರವರ ಬಿಡಾರಗಳಿಗೆ ಹೋದೊ. ಶಿಬಿರಲಿ ಯುಧಿಷ್ಠಿರ ಕೃಷ್ಣನ ಕೇಳ್ತ್. ನಿಮ್ಮ ಚಕ್ರನ್ನೂ ಭೀಷ್ಮ ಎದ್'ರ್ಲಿ ಬುಟ್ಟಿತ್'ಂತಾದರೆ ಅವನ ಗೆಲ್ಲುದು ಹೇಂಗೇಂತ ಕೇಳ್ತ್. ಅವನ ಭೇದೋಪಾಯಲೇ ಗೆಲ್ಲೊಕು. ನೀ ಇಂದ್ ರಾತ್ರೆ ಹೋಗಿ ಅವನ ಭೇದ್'ಸಿ ಬಾಂತ ಸೂಚನೆ ಕೊಟ್ಟಿತ್.

ಆ ಪ್ರಕಾರ ಯುಧಿಷ್ಠಿರ ಇರ್ಲ್ ಹೋಗಿ ಭೀಷ್ಮನ ನೋಡ್ತ್. ತಮ್ಮ ದುಃಸ್ಥಿತಿನೆಲ್ಲ ವಿವರ್ಸಿತ್. ಇಂದಿಗ ತೊಂಬತ್ತ್ ಸಾವಿರ ಜನ ಮಕುಟ ಪತಿಗ ನಿಮ್ಮ ಕೈಲಿ ಸತ್ತೊ ಒಂಬೊತ್ತ್ ಲಕ್ಷ ಆನೆಗ ಅಷ್ಟೇ ಸಂಖ್ಯೆನ ಕುದುರೆಗ ಮತ್ತೆ ಅಸಂಖ್ಯಾತ ಕಾಲಾಳ್'ಗ ಸತ್ತೊ. ಹಿಂಗಾದರೆ ನಾವ್ಗೆ ಉಳಿಗಾಲ ಇಲ್ಲೆ. ನಿಮ್ಮ ಕೈಲಿ ಸತ್ತರೆ ಪುಣ್ಯ ಸಿಕ್ಕುದುಂತ ಹೇಳಿ ಮಾತಾಡದೆ ನಿತ್ತಿತ್. ಭೀಷ್ಮಂಗೆ ಇವನ ಮಾತ್'ಕೇಳಿ ಕಣ್ಣೀರ್ ಬಾತ್. ಇಚ್ಛಾ ಮರಣಿಯಾದ ನನ್ನ ಕೊಲ್ಲಿಕೆ ಯಾರ್'ಂದೊಳು ಆಕಿಲೆ. ಆದರೂ ನಂಗೆ ಶಿಖಂಡಿನ ಕಾರಣಂದ ಮರಣ ಉಂಟಾದು. ನಾಳೆ ಮಧ್ಯಾಹ್ನದ ಯುದ್ಧಲಿ, ಶಿಖಂಡಿನ ಎದ್'ರ್ ನಿಲ್ಸಿ ಯುದ್ಧ ಮಾಡಿ; ಅರ್ಜುನಂಗೆ ಈ ಗುಟ್ಟು ಹೇಳ್ಬೇಡ. ಈಗ ಹೋಗು. ನಿಂಗೆ ಜಯ ಸಿಕ್ಕಲಿಂತ ಹೇಳಿ ಕಳ್ಸಿತ್. ಯುಧಿಷ್ಠಿರ ಗೆಲವುಲಿ ಹಿಂದೆ ಬಂದ್ ಕೃಷ್ಣಂಗೆ ಹೇಳಿ ಹೋಗಿ ನಿದ್ದೆ ಮಾಡ್ತ್.

ಯಥಾಪ್ರಕಾರ ಮಾರ್ನೇ ದಿನದ ಯುದ್ಧ ಸುರಾತ್. ಧರ್ಮರಾಯ ಎಲ್ಲ ಸೈನ್ಯ ಒಂದಾಗಿ ಭೀಷ್ಮನೊಟ್ಟಿಗೆ ಹೋರಾಡೊಕುಂತ ನಿಶ್ಚಯ ಮಾಡ್ತ್. ಇದರ ನೋಡಿ ಭೀಷ್ಮರ ಬೆಂಬಲಕ ತನ್ನ ಸೇನೆನೆಲ್ಲ ದುರ್ಯೋಧನ ನಿಯೋಜಿಸಿತ್. ಯುದ್ಧದ ತುಮುಲ ಜೋರಾತ್. ಮಧ್ಯಾನ ಆವಷ್ಟರ್ಲಿ ಭೀಷ್ಮರ್ ಹತ್ತ್ ಸಾವಿರ ಮಕುಟಧಾರಿಗಳ ಕೊಂದ್ ಅವರ ಶಪಥನ ಪೂರೈಸಿಬುಟ್ಟೊ. ಅಂದರೆ ಹತ್ತ್ ಸಾವಿರ ಮಕುಟಧಾರಿಗಳಾದ ರಾಜರ್'ಗಳ

ಕೊಂದ್ ಹಾಕಿದ್ರೊ. ಅದಿಕೆ ಸಲಿಯಾಗಿ ಬೇರೆ ಸೈನ್ಯನೂ ನಾಶ ಮಾಡ್ದ್ರೊ. ಅವರ ಸಂಹಾರ ಕಾರ್ಯ ತಡೆಯಿಲ್ಲದೆ ನಡಿಯತ್ತಿತ್ತ್. ಅಷ್ಟರ್ಲಿ ಯುಧಿಷ್ಠಿರನ ಅಪ್ಪಣೆ ಪ್ರಕಾರ ಶಿಖಂಡಿ ಭೀಷ್ಮರ ಎದ್‌ರಿಗೆ ನಿತ್ತತ್. ಅವಂಗೆ ಹಿಂದೆನ ಜೆನ್ಮದ ಅಂಬೆನ ಆವೇಶ ಬಂದಾಂಗೆ ಆಗಿ ಅಂವ ರೋಷಂದ ಭೀಷ್ಮನ ಮೇಲೆ ಅಂಬುಗಳ ಮಳೆ ಸುರಿವಾಂಗೆ ಬಾಣಗಳ ಹೊಡಿಯಕೆ ಸುರಮಾಡ್ತ್. ಭೀಷ್ಮರ್ ಅವನ ಮೋರೆ ನೋಡಿ, ಛೀ! ಹೇಡಿನೊಟ್ಟಿಗೆ ನಾ ಯುದ್ಧ ಮಾಡಿಕಿಲೆಂತೇಳಿ ಮೋರೆ ತಿರ್ಗ್‌ಸಿ ಸುಮ್ಮನೆ ನಿತ್ರೊ. ಹಿಂದೆ ಇದ್ದ ವೀರರ್ ಬಾಣ ಬುಟ್ಟ್ ಕಡೆಂಡೇ ಇದ್ದ್ರೊ. ಅವೆಲ್ಲ ಅವರ ಮೈ ತುಂಬ ನಾಟಿ, ಅವು ಬಲಕುಂದಿ ಕೆಳೆಗೆ ನೆಲಮುಟ್ಟದೆ ಬಾಣಗಳ ಮೇಲೇ ಮಲ್ಗಿದಾಂಗೇ ಇದ್ದ್ರೊ. ಪಾಂಡವ ಸೇನೆ ಕುರುಕುಲ ಸಿಂಹ ಬೀತ್ಂತ ಹರ್ಷೋದ್ಗಾರ ಮಾಡ್ದ್ರೊ. ಕೌರವ ಸೇನೆ ನಾಪ್ಗನ್ನ್ ರಕ್ಷಕರಿಲ್ಲೆಂತ ದುಃಖಲಿ ಕಂಡ ಕಡೆಗೆ ಓಡಿಕೆ ಸುರು ಮಾಡ್ದ್ರೊ. ಅಷ್ಟರ್ಲಿ ಸೂರ್ಯ ಕಂತಿಕಾತ್. ಯುದ್ಧ ನಿಲ್ಲುವ ಶಂಖಧ್ವನಿ ಆತ್. ಹಾಂಗೆ ಎಲ್ಲೊವು ಅವರ ಬಿಡಾರಗಳಿಗೆ ಹೋದೊ. ಸರ್ರಲಿ ಒಂದಿಷ್ಟೂ ಎಡೆಯಿಲ್ಲದಾಂಗೆ ಬಾಣಗ ತಾಂಗಿ ಅವರ ಜೀವ ಅಲ್ಲಿಂದ ಹೊರ್ಡಿಕೆ ತಯಾರಾತಿತ್ತ್. ಈಗ ದಕ್ಷಿಣಾಯನ ಕಾಲ. ಸ್ವರ್ಗದ ಬಾಗ್‌ಲ್ ಮುಚ್ಚಿದ್ದ್. ಹಾಂಗೆ ಉತ್ತರಾಯಣ ಬಾಕನ ಮುಟ್ಟ ಜೀವ ಹೋಕೆ ಬೊತ್ತ್ಂತತಡ್ಡ್ ನಿಲ್ಸಿದೊ. ಆಗ ಐದ್ ಜೆನ ಪಾಂಡವರ್ ಬಂದ್ ರೋದನ ಮಾಡ್ದ್ರೊ. ಕ್ಷತ್ರಿಯ ಧರ್ಮಂತೇಳ್ವು ಹೀಂಗೆ. ಅಳ್ಬೆಡಿ. ನಿಮ್ಮ ಬಿಡಾರಗಳಿಗೆ ಹೋಗಿ ನಿಮ್ಮ ಕೆಲ್ಸ ಕಾರ್ಯಗಳ ನೋಡಿಂತ ಹೇಳ್ದ್ರೊ. ಮತ್ತೆ ಅರ್ಜುನನೊಟ್ಟಿಗೆ ತಲೆ ಇಸಿಕಂಬಕೆ ಆಧಾರ ಮಾಡಿಕೊಡು. ಕುಡಿಯಕೆ ನೀರ್ ತರ್ಲೆಂತ ಹೇಳ್ದ್ರೊ. ಹಾಂಗೆ ಬಾಣಗಳ ಕತ್ತಿನಂಗೆ ಹೊಡ್ದ್ ತಲೆಗೆ ಆಧಾರ ಮಾಡ್ತ್. ಭೂಮಿಗೆ ಬಾಣ ಹೊಡ್ದ್. ಗಂಗೆ ಬಂದ್ ಅವರ ಬಾಯಿಗೆ ಬೀಳುವಾಂಗೆ ಮಾಡ್ತ್. ಮತ್ತೆ ಎಲ್ಲರೂ ಅವ್ಕೆ ನಮಸ್ಕಾರ ಮಾಡಿ ಅವರ ಶಿಬಿರಗಳಿಗೆ ಹೋದೊ.

ಭೀಷ್ಮರ್ ಬಿದ್ದೋಂತ ದುರ್ಯೋಧನ ಬೋದ ತೊಪ್ಪಿ ಬಿದ್ದವನ ಶಿಬಿರಕೆ ಕರ್ಣಂದ್ ಹೋಗಿ ಶೈತ್ಯೋಪಚಾರ ಮಾಡಿ ಎಚ್ಚರಿಕೆ ಮಾಡ್ದ್ರೊ. ಅಂವ ಮುಂದೆನ ಕಾರ್ಯ ಆಗಿ ಕರ್ಣಂಗೆ ಸೇನಾಪತಿ ಪಟ್ಟ ಕಟ್ಟೋನಂತ ಹೇಳ್‌ಕನ ಕರ್ಣನೇ ದ್ರೋಣರಿಗೆ ಪಟ್ಟ ಕಟ್ಟೊಕುಂತೇಳಿ, ಅಪ್ಪ ಪಟ್ಟ ಕಟ್ಟುವಾಂಗೆ ಮಾಡ್ತ್. ದ್ರೋಣರ್ ಐದ್ ದಿನ ಹೋರಾಡ್ದ್ರೊ. ಈ ಐದ್ ದಿನಗಳ್ಲಿ ಒಂದು ದಿನ ಚಕ್ರವ್ಯೂಹನರಚಿಸಿದೊ. ಅದರೊಳಗ ಹೋಗಿ ಹೊರೆಗ ಬಾಕೆ ಅರ್ಜುನ ಮಾತ್ರ ಸಮರ್ಥ. ಅಂದ್ ಅಂವನ ಸಮಸಪ್ತಕರ್ ಯುದ್ಧಕ್ಕೆ ಕರ್ದ ಕಾರಣ ಅವರೊಟ್ಟಿಗೆ ಯುದ್ಧಕ್ಕೆ ಹೋಗಿತ್ತ್. ಹಾಂಗೆ ಅಭಿಮನ್ಯು ಹೋಗಿ ವೀರಾವೇಶಲಿ ಹೋರಾಡಿ ತುಂಬ ಜೆನರ ಕೊಂದತ್. ಕಡೆಗೆ ಎಲ್ಲ ಪ್ರಮುಖರ್ ಒಟ್ಟು ಸೇರಿ, ಮೋಸಂದ ಅವನ ಕೊಂದ್ ಬುಟ್ರೊ. ಅಭಿಮನ್ಯುನ ಸಾವುಗೆ ಮುಖ್ಯ ಕಾರಣ ಸೈಂಧವಂತ ಗೊತ್ತಾಗಿ ನಾಳೆನ ಸೂರ್ಯಾಸ್ತಕ್ಕೆ ಮುಂದೆ ಅಂವನ ಕೊಲ್ಲದಿರಿಕಿಲೆಂತ ಅರ್ಜುನ ಪ್ರತಿಜ್ಞೆ ಮಾಡಿ. ಅಡಿಂಗ್ಂಡಿದ್ದ ಸೈಂಧವ ಹೊರೆಗ

ಬಾಪಾಂಗೆ ಮಾಡಿ ಅವನ ತಲೆನ ಹಾರ್ಸಿತ್. ಅದರ ಮಾರ್ನೇ ದಿನ ಹಗಲ್ ಮಾತ್ರ ಅಲ್ಲ ರಾತ್ರಿ ಯುದ್ಧನೂ ಮಾಡಿ ಪಾಂಡವರ ಹಣ್ಣ್ ಮಾಡಿನಂತ ದ್ರೋಣಏರ್ ಹೊರ್ಟೊ. ಕೃಷ್ಣನ ಸೂಚನೆನಾಂಗೆ ಘಟೋತ್ಕಚ ರಾತ್ರೆನ ಯುದ್ಧಕ್ಕೆ ಮುಂದಾತ್. ಕೌರವ ಸೇನೆಗೆ ತುಂಬ ಹಾನಿ ಮಾಡ್ತ್. ಕರ್ಣ ಇವನ ಎದ್ರ್‌ಸಿತ್. ಇವನ ಭೈರವಾಡಂಬರನ ತಡಿಯಕೆ ಸಾಧ್ಯ ಇಲ್ಲೆಂತಾಕನ. ದೇವೇಂದ್ರ ಕೊಟ್ಟಿದ್ದ ಶಕ್ತ್ಯಾಯುಧನ, ಇದ್ ಅರ್ಜುನಂಗೆಂತ ಕಾದಿರ್ಸಿದರ. ಇವನ ಎದೆಗೆ ಗುರಿ ಇಸಿ ಹೊಡ್ತ್. ವಜ್ರದ ಪೆಟ್ಟಿಗೆ ಜೆರ್ದ್ ಬೀಳುವ ಪರ್ವತದಾಂಗೆ ಒಂದು ಯೋಜನದ ಉದ್ದಗಲಕೆ ಆ ದೈತ್ಯನ ಸರ‍್ರ ಬೀಳ್‌ಕನ ಒಂದು ಅಕ್ಷೋಹಿಣಿ ಸೈನ್ಯ ಸತ್ತ್ ಬೀತ್ ಗಡ. ಅಷ್ಟ್ ದೊಡ್ಡ ಬೃಹದಾಕಾರನ ಅಂವ ತಾಳಿತ್ತ್.

ದ್ರೋಣರ ಅಂತ್ಯನ್ನೂ ಯುಧಿಷ್ಟಿರ ಕೃಷ್ಣನ ಸೂಚನೆ ನಾಂಗೇ ಸಾಧ್‌ಸಿತ್. ಮಧ್ಯ ರಾತ್ರೆಲಿ, ದ್ರೋಣರ ಶಿಬಿರಕ್ಕೆ ಒಬ್ಬನೇ ಹೋಗಿ ದ್ರೋಣಂದ ತನ್ನ ಸೇನೆ ಎಲ್ಲ ನಾಶ ಆದೆ. ನೀವೇ ನಮ್ಮ ಕಾಪಾಡೊಕುಂತ ಕಾಲ್ ಹಿಡ್ತ್. ಆಗ ದ್ರೋಣಏರ್ ಕೃಷ್ಣ ಹೇಳ್ದಾಂಗೆ ಮಾಡ್, ಹೋಗುಂತ ಹೇಳಿಕಳ್ಸಿತ್. ಮೊರ್ದಿನದ ಯುದ್ಧಲಿ ಆನೆಗಳ ಸೈನ್ಯನ ದ್ರೋಣನೆದ್ರ್ ನಿಲ್ಸಿದೊ. ಅದರ್ಲಿ ಒಂದು ಆನೆನ ಹೆಸರ್ ಅಶ್ವತ್ಥಾಮಂತ ಇತ್ತ್. ಅದ್ ದ್ರೋಣನ ಬಾಣಂದ ಸತ್ತ್ ಬೀತ್. ಆಗ ಕೃಷ್ಣನ ಮಾತ್‌ನ ಪ್ರಕಾರ ಯುಧಿಷ್ಟಿರ ಗಟ್ಟಿಯಾಗಿ 'ಅಶ್ವತ್ಥಾಮೋ ಹತಃ ಕುಂಜರಃ'ಂತ ಹೇಳ್ತ್. ಇಷ್ಟರ್ಲಿ ಕುಂಜರಃ ಶಬ್ದನ ಯುಧಿಷ್ಟಿರ ಉಚ್ಚರ್ಸಿಕಾಕನ ಕೃಷ್ಣ ಸಂಕ ಉರ್ಗಿ, ಅದರ ಕೇಳದಾಂಗೆ ಮಾಡ್ತ್. ದ್ರೋಣರಿಗೆ ಯುಧಿಷ್ಟಿರನ ಬಾಯೆಂದ ಸುಳ್ಳು ಮಾತ್ ಬಾಕೆಲ್ಲೆಂತ ಇರುವ ನಂಬಿಕೆಂದ ತನ್ನ ಮಙ್ಞನೇ ಸತ್ತಏತ್‌ಂತ ನೆನ್ಸಿ ಕಣ್ಣೀರ್ ಉಕ್ಕಿ ಹರ್ತ್. ಬಿಲ್ಲ್‌ನ ಕರೆಗೆ ಹರ್ಕಿ ಇಟ್ಟೊ. ಮತ್ತೆ ಸೂಂಸಯ ಪೊರಿಹರ್ಸಿಕೆ ಯುಧಿಷ್ಟಿರನಕ್ಕಲೆ ಹೋಗಿ ಪಿಚಾರ್ಸಿಕನ ಅಂವ ಸತ್ತಏದ್ ಆನೆಂತ ನಿಜ ಹೇಳಿರೂ, ಒಮ್ಮೆ ಇಟ್ಟ ಬಿಲ್ಲ್‌ನ ಹೇಂಗೆ ಮತ್ತೆ ಹಿಡಿದುಂತೇಳಿ ಯೋಗ ಮುದ್ರೆಲಿ ನಿತ್ತ್ ಶ್ವಾಸನ ಬ್ರಹ್ಮರಂಧ್ರಕ್ಕೇರ್ಸಿ, ಆತ್ಮನ ಪರಮಾತ್ಮನೊಟ್ಟಿಗೆ ಸೇರ್ಸಿದೊ. ಈಗ ಧೃಷ್ಟದ್ಯುಮ್ನ, 'ಹಣಕ್ಕೆ ಕಳಿಡ್ದ್ ಹಗೆಯಾದೊ' ಅಂತ ಹೇಳುವ ಮಾತ್‌ನ ನಿಜ ಮಾಡುವಾಂಗೆ ಯಾರ್ ತಡ್ದರೂ ಕೇಳದೆ ಗುರುನ ತಲೆ ಕೂದೊಲುನ ಹಿಡ್ದ್ ತಲೆನ ತುಂಡರ್ಸಿತ್.

ತನ್ನ ಅಪ್ಪನ ಮೋಸಂದ ಪಾಂಡವಏರ್ ಕೊಂದೊಂತೇಳಿ ಅಶ್ವತ್ಥಾಮಂಗೆ ಭಯಂಕರ ಕೋಪ. ಪಾಂಡವರ ಸರ್ವನಾಶ ಮಾಡಿನೆಂತೇಳಿ ನಾರಾಯಣಾಸ್ತ್ರನ ಬುಟ್ಟಏತ್. ಕೃಷ್ಣ ಅದಿಕೆ ವೈಷ್ಣವಾಸ್ತ್ರನ ಎದ್ರ್ ಹಾಕಿ ಅದರ ಬಲನ ಕುಂದ್‌ಸಿತ್. ಅದರೆ ಉತ್ತರೆನ ಗರ್ಭಲಿದ್ದ ಕೂಸುನ ಮೇಲೆ ಅದರ ಶಕ್ತಿನ ಹಾಯಿಸಿ ಆ ಕೂಸು ಗರ್ಭಲೇ ಸಾಯುವಾಂಗೆ ಆತ್ ಆದರೆ ಕೃಷ್ಣ ಅವನ ಶಕ್ತಿಂದ ಅದಿಕೆ ಜೀವ ಕೊಟ್ಟಏತ್.

ದ್ರೋಣನ ವಧೆಯಾದ ಮೇಲೆ ಅಶ್ವತ್ಥಾಮಂಗೆ ಸೇನಾಪತಿನ ಪಟ್ಟ ಕಟ್ಟುವಾಂಗೆ ಕೃಪ ಸೂಚನೆ ಕೊಟ್ಟಏತ್. ಅದಿಕೆ ದುರ್ಯೋಧನ ಒಪ್ಪದೆ ಕರ್ಣಂಗೆ ಪಟ್ಟಂತ ಹೇಳ್ತ್. ಅಶ್ವತ್ಥಾಮ ಕೋಪಏಲಿ ಕರ್ಣ ಮತ್ತೆ ದುರ್ಯೋಧನ ಇಬ್ಬರ್ನೂ ಹೀನೈಸಿ ಮಾತಾಡ್ತ್. ಪ್ರತಿಯಾಗಿ ಕರ್ಣನೂ ಕಠೋರವಾಗಿ ಉತ್ತರ ಕೊಟ್ಟಏತ್. ಆಗ ಅಶ್ವತ್ಥಾಮ ಈ

ದುರಹಂಕಾರಿನ ಈಗಳೇ ಕೊಂದನೆಂತ ಕಱ್ತಿ ಓರ್ಬ್ ಮೇಲೆ ಜೀಳಿಕೆ ಹೋತು. ಆಗ ಕೃಪ ಅಡ್ಡನಿತ್ತ್ ಅವನ ತಡ್ಡ್ ಸಮಾಧಾನ ಮಾಡ್ತ್. ಮತ್ತೆ ಅಶ್ವತ್ಥಾಮ ಈ ಮುಗ್ಯನ ಮಜ್ಜ ಅರ್ಜುನನ ಬಾಣಗಳ್‌ಂದ ಸಾಯುಕನ ಮುಟ್ಟ ನಾ ಬಿಲ್ಲ್ ಹಿಡಿಯಕಿಲೇಂತ ಶಪಥ ಮಾಡ್ತ್.

ಮಾರ್ಣೇ ದಿನ ಕರ್ಣನ ಕರ್ಸಿ, ಅವಂಗೆ ಪವಿತ್ರ ತೀರ್ಥ ಜಲಂಗಳ್‌ಂದ ಸ್ನಾನ ಮಾಡ್ಸಿ ಸೇನಾಪತಿ ಪಟ್ಟನ ದುರ್ಯೋಧನ ಕಟ್ಟಿತ್. ಮತ್ತೆ ಕರ್ಣ ಯುದ್ಧಕ್ಕೆ ಬೇಕಾದ ಉಡುಪು ಧರ್ಸಿ ಸೇನೆನ ಯಾವ್ಯಾವ ರೀತಿಲಿ ನಿಲ್ಲೊಕುಂತ ಪಡೆವಳರಿಗೆಲ್ಲ ಅಪ್ಪಣೆ ಮಾಡಿ, ತನ್ನ ರಥನ ಹತ್ತಿ ತಾನೇ ಕುದುರೆಗಳ ಓಡ್ಸಿ ಕಱಂಡ್ ಒಬ್ಬನೇ ರಣರಂಗಕ್ಕೆ, ಶರಶಯನಱಲ್ಲಿದ್ದ ಭೀಷ್ಮನಕ್ಕಲೆ ಹೋತು. ಭೀಷ್ಮಂಗೆ ಮೂರು ಸುತ್ತು ಬಂದ್ ಭೀಷ್ಮನ ಕಾಲ್‌ಗಳ ತನ್ನ ತಲೆ ಮೇಲೆ ಇಸಿಕಱಂಡ್ ಹೇಳ್ತ್. ಅಜ್ಜ! ನಾ ಮಾತ್ ಗೊತ್ತಿಲ್ಲದೆ ಏನೇನೋ ಮಾತಾಡಿ ನೀವ್ಗೆ ತುಂಬ ಬೇನೆ ಮಾಡಿ ಬುಟ್ಟೆ. ನೀವು ನನ್ನ ಕ್ಷಮಿಸೊಕುಂತ ಬೇಡಿಕಾಗಿಯೇ ನಾ ಬಂದೆ. ಪಾಂಡವರ ಗೆಲ್ಲಿಕೆ ನಿಮ್ಮಂಥವರ್‌ಂದಳೇ ಆತ್‌ಲೆಂತೇಳ್‌ಕನ ನಾ ಎಷ್ಟರಂವ. ನೀವು ಹೇಳ್ದಾಂಗೆ ಸರದಿನ ಸಾಲ್ ಎಲ್ಲೊವ್ವ ಬಂದೇ ಬಂದದೆ– ಮರಣಱಲಿ ಕೂಡಾ. ಕರ್ಣನ ಮಾತ್ ಕೇಳಿ ಭೀಷ್ಮಂಗೆ ಆಶ್ಚರ್ಯ ಆತ್. ಇಷ್ಟ್ ನಯ ವಿನಯ ಸಂಪನ್ನ, ಉಭಯ ಕುಲ ಶುದ್ಧನೇ ಆಗಿರೊಕೂ. ಕರ್ಣ ಅಂದ್ ನೀ ಏನ್ ಮಾತಾಡಿರೂ ರಾಜನ ಮೇಲ್ನ ಭಕ್ತಿಂದ ನೀ ಮಾತಾಡ್ದ. ಅದರ್ಲಿ ನಂಗೇನೂ ಬೇಜಾರ ಇಲ್ಲೆ. ಕೌರವರ ಪಾಂಡವರ ಲೆಕ್ಕಱಲಿ ನೋಡ್‌ಕನ ನೀನೂ ನಂಗೆ ಪಿಳ್ಳೆಯೇ. ಹೊರೆಗೆನಂವ ಅಲ್ಲ. ಅದೂ ಅಲ್ಲ ನಾಪ್ಗಿಬ್ರೊರಿಗೂ ಪರಶುರಾಮರೇ ಗುರುಗ ಆಗಿರ್ಕನ ನಾವು ನಂಟ್ರೊ ಆದವೆ ಕರ್ಣ! ಭೀಷ್ಮನ ಈ ಮಾತ್‌ಗಳ್‌ಂದ ಕರ್ಣನ ಮನ್ಸ್ ತೊಂಪಾತ್. ಮತ್ತೆ ಭೀಷ್ಮರ್ ಹೇಳ್ರೊ: ಶಲ್ಯನ ಸಾರಥಿ ಮಾಡಿ ಕಾದಾಡ್‌ಂತ. ಅದಿಕ್ಕೆ ಕರ್ಣ ಶಲ್ಯ ಕ್ಷತ್ರಿಯ ವಂಶದ ದೊಡ್ಡ ವ್ಯಕ್ತಿ. ಹೀನ ಕುಲದ ನಂಗೆ ಸಾರಥಿಯಾಗ್‌ಂತ ಕೇಳಿರೆ ಅಂವ ನನ್ನ ಇಸಿಕಿಲ್ಲೆ. "ಅದ್ ಹೇಂಗೋ" ಕೌರವ ಜಯಿಸೊಕುಂತ ನಿಂಗೆ ಅಪೇಕ್ಷೆ ಇದ್ದರೆ ನೀ ಹಾಂಗೇ ಮಾಡ್‌ಂತ ಭೀಷ್ಮ, ಇನ್ನ್ ನೀ ಹೋಗಿ ನಿನ್ನ ಕೆಲ್ಸ ನೋಡುಂತೇಳಿ ಅವನ ಕಳ್ಸಿತ್.

ಕರ್ಣ ಬಂದಂವ ನೇರ ಯುದ್ಧರಂಗಕ್ಕೆ ಹೋತು. ತನಿಗೆ ಎದ್‌ರಾದ ಪಾಂಡವ ಸೈನ್ಯಕ್ಕೆಲ್ಲ ಬಲವಾದ ಪೆಟ್ಟ್ ಕೊಟ್ಟಱತ್. ಭೀಮ ಅವಂಗೆದ್‌ರಾತ್. ಅವರಿಬ್ಬರೊಳಗೆ ಭಯಂಕರ ಯುದ್ಧ ನಡ್ತ್. ಕಡೆಗೆ ಕರ್ಣನ ಬಾಣದ ಪೆಟ್ಟಿಗೆ ಭೀಮ ಜೋದ ತೊಪ್ಪಿ ಬೀತ್. ಕರ್ಣ ಅವನ ಗಂಟ್ಲಿಗೆ ತನ್ನ ಬಿಲ್ಲ್‌ನ ಕೊಪ್ಪು ಸಿಕ್ಕ್‌ಸಿ ಮೇಲೆತ್ತಿ ಇಂವ ನನ್ನೊಟ್ಟಿಗೆ ಯುದ್ಧ ಮಾಡ್ದೆ ಗಡ! ಇಂವ ನನ್ನ ಒಡೆಯನ ತೊಡೆ ಮುರಿಯೊಂವ ಗಡ! ಹೀಂಗೆ ಸಸಾರದ ಮಾತಾಡಿ, ತಾನ್ ಕುಂತಿಗೆ ಕೊಟ್ಟ ಭರವಸೆ ನೆಂಪಾಗಿ ಕೊಲ್ಲದೆ ಬುಟ್ಟಱತ್. ಮತ್ತೆ ಪಾಂಡವ ಪಕ್ಷದೊವು ಭೀಮಂಗೆ ಉಪಚಾರ ಮಾಡಿಕೆ ಕರ್ಕಱಂಡ್ ಹೋದೊ. ಪಜ್ಜ ಹೊತ್ತುಲಿ ಭೀಮ ಚೇತರ್ಸಿಕಱಂಡ್ ಯುದ್ಧಕ್ಕೆ ತಯಾರಾಗಿ ಬಾಕನ ಆನೆಗಳ ದಱಂಡ್‌ನ ಅವನ ಎದ್‌ರಿಗೆ ಬುಟ್ರೊ. ಭೀಮ ಗದೆಲಿ ಆನೆಗಳ ತಲೆಗೆ ಹೊಡ್ತ್

ಒಂದೊಂದರ್ನೊ ಕೊಂದ್ ಹಾಕಿತ್. ಮತ್ತೆ ಒಂದಾನೆನ ಅದರ ಹಿಂದೆನ ಕಾಲ್‌ಲಿ ನೇಚಿ ಇನ್ನೊಂದು ಆನೆಗೆ ಬೀಸಿ ಇಡ್‌ತಿತ್ತ್. ಹಾಂಗೀಂಗೆ ಮಾಡಿ, ಐವತ್ತ್ ಸಾವಿರ ಇದ್ದ ಗಜಪಡೆನ ಒಂದೂ ಒಳಿಯದಾಂಗೆ ಮಾಡ್ತ್. ಭಗದತ್ತಂತೇಳವನ ಹಕ್ಕಲೆ ಸುಪ್ರತೀಕಂತೇಳ್ವ ಒಂದು ಭಯಂಕರ ಆನೆ ಇತ್ತ್. ಅಂವ ಅದರ ಭೀಮನ ಮೇಲೆ ಬುಟ್ಟೀತ್. ಭೀಮ ಅದರ ಪಾಡೆನ ಹಿಡ್ಕಣ್ಡ್, ಅದರ ಹಿಂದೆ ನೂಕಿತ್. ಆನೆನೂ ಬುಟ್ಟೀತ್‌ಲೆ. ಭೀಮನ ಹನ್ನೆರ್ಡ್‌ಗಾವುದ ದೂರಕೆ ನೂಕಿತ್. ಹೀಂಗೆ ಒಮ್ಮೆ ಭೀಮ, ಒಮ್ಮೆ ಆನೆ ತುಂಬ ಹೋರಾಡಿಕಣ್ಡ್ ಇರ್‌ಕನ ಕೃಷ್ಣ ಅರ್ಜುನಂಗೆ ತೋರ್ಸಿ, ಭೀಮ ತೊಂದರೆಗೆ ಸಿಕ್ಕಿಟುಂತ ಹೇಳ್ತ್. ಅರ್ಜುನ ಬಾಣ ಬುಟ್ಟ್ ಭಗದತ್ತನ ತಲೆನೂ, ಆನೆನೂ ಒಟ್ಟಿಗೆ ನೆಲಕ್ಕೆ ಬೀಳುವಾಂಗೆ ಮಾಡ್ತ್.

ಭೀಮ ಚೇತರ್ಸಿಕಂಡ ಮೇಲೆ ಜೇರೊಂದು ಯುದ್ಧ ಕಳಕ್ಕೆ ಹೋಕನ ಅಲ್ಲಿ ದುಶ್ಶಾಸನನೂ ಒಳ್ದ ಕೌರವನ ತಮ್ಮಂದಣಿರೂ ಅವಂಗೆ ಎದ್‌ರಾದೊ. ಅದರ ಪೈಕಿ ಅರ್ಧಾಂಶ ಜೆನರ ಭೀಮ ಮುಂದೆನೇ ಕೊಂದಿತ್ತ್. ಆ ಕೋಪಣಿಲಿ ಅವೆಲ್ಲೊವೂ ಗುಂಪಾಗಿ ಭೀಮನೊಟ್ಟಿಗೆ ಯುದ್ಧಕ್ಕೆ ಬಂದೊ. ಭೀಮ ಗದೆನ ಎತ್ತಿ ಕಂಡರೆ ಅವೆಲ್ಲ ಹೆದ್‌ರಿ ಓಡುವೊಂತೇಳಿ, ಬಿಲ್ಲ್ ಬಾಣಂದಣಿಳೇ ಯುದ್ಧ ಸುರುಮಾಡ್ತ್. ದುಶ್ಶಾಸನನ ಹೊರ್ತಾದವೆಲ್ಲೊವೂ ಸತ್ತೊ. ದುಃಶ್ಶಾಸನ ವೀರಾವೇಶಂದ ಹೋರಾಡ್ತ್. ಭೀಮನ ಬಾಣ ತಾಂಗಿ ಅವನ ಮೈಯೆಲ್ಲ ಗಾಯಗ ಆಗಿ, ನೆತ್ತ್‌ರ್ ಸುರಿಯಕೆ ಸುರಾತ್. ಹೀಂಗಾದರೆ, ನನ್ನ ಪ್ರತಿಜ್ಞೆನ ನೆರವೇರ್ಸಿಕೆ ಇವನ ಮೈಲಿ ರಕ್ತ ಒಳ್ತ್‌ಲರೆ ಮೋಸ ಆದೇಲೆಂತ ಯೋಚನೆ ಮಾಡಿ, ಅವನ ಸಾರಥಿನ, ಕುದುರೆಗಳ ಎಲ್ಲ ಕೊಂದ್ ರಥನ ಅಚ್ಚ್ ಮುರಿವಾಂಗೆ ಬಾಣ ಹೊಡ್ದ್ ಅದರ ಕೆಡ್ಗಿತ್. ದುಶ್ಶಾಸನ ಕಣ್ತಿ ಹಿಡ್ಕಣ್ಡ್ ಕೆಳಗೆ ಹಾರಿ ಭೀಮನ ಎದ್‌ರ್ಸಿಕೆ ಬಾತ್. ಇದೇ ಸಮಿಯಂತೇಳಿ ಭೀಮ ಗದೆ ಹಿಡ್ಕಂಡ್ ನೆಲಕ್ಕೆ ಹಾರಿ, ಅವನ ಉಪಾಯಣಿಲಿ ನೆಲಕೆ ಜೀಳ್ಸಿ ಅವನ ಗಂಟ್ಲಗೆ ಮೆಟ್ಟಿಕಣ್ಡ್ ನಿತ್ತ್, ದ್ರೌಪದಿಗ ಹೇಳಿಕಳ್ಸಿ ಬರ್ಸಿತ್. ದ್ರೌಪದಿ ಸಂತೋಸುಂದ ಬಂದ್ ಜೀವದ ಮೊಕರ್ಣಿಲಿ ಕೈಕಾಲ್ ಜೊಡ್ಕಣ್ಡ್, ಕಣ್ಣ್ ಹೊರ್ಸ್‌ಕಂಡ್, ಹೊಟ್ಟೆ ಬಾತ್‌ಕಣ್ಡ್, ಇರುವ ತನಿಗೆ ಅವಮಾನ ಮಾಡ್ದ ವೈರಿನ ಸ್ಥಿತಿನ ನೋಡಿ ಅದರ ಕಣ್ಣ್‌ಗಣಿಳಿಗೆ ತೊಂಪಾತ್. ಇನ್ನ್ ನಿನ್ನ ಪ್ರತಿಜ್ಞೆನ ತೀರ್ಸೊನೋಂತ ಹೇಳಿ, ಸುರಿಗೆಂದ ದುಶ್ಶಾಸನ ಎದೆಗೆ ಡೊಕ್ಕಂತ ಕಣ್ಟ್, ಬರಿಗಳ ಕಣಿಯಿಂದ ಆಚೀಚೆ ಎಳ್ದ್ ಅಗಲ ಮಾಡಿ, ಎದೆಲಿದ್ದ ನೆತ್ತ್‌ರ್‌ನ ಅಂಗೈಲಿ ಗೋಂಚಿ ದ್ರೌಪದಿನ ಕೂದೊಲು ನನೆವಾಂಗೆ ಹಾಕಿ, ಚಿಕ್ಕ್‌ಬುಡ್ಸಿ, ವೈರಿನ ಹಲ್ಲ್‌ಗಳ್‌ಂದ ಜಾಚಿ, ಮುಡಿಕಣ್ಟತ್. ಅವನ ಕಣರ್ಲ್‌ನ ಹೂಮಾಲೆನಾಂಗೆ. ಮಾಡಿ ತಲೆಗೆ ಮುಡ್ಸಿತ್. ಮತ್ತೆ ತನ್ನ ಎರ್ಡ್ ಕೈಗಳ್‌ಂದೊಳೂ ಅವನ ನೆತ್ತ್‌ರ್‌ನ ಗೋಂಚಿ ಗೋಂಚಿ ಕುಡ್ದ್ ತೇಗ್ ಬುಟ್ಟೀತ್. ನೀ ಇನ್ನ್ ಜೀಡಿಗೆ ಹೋಗುಂತ ಅದರ ಆನೆ ಮೇಲೆ ಕುದ್‌ರ್ಸಿ ಕಣಿಳ್ಸಿತ್. ಮತ್ತೆ ಹಿಡಿಂಬೆನ ನನ್ಸಿ ಬರ್ಸಿ ನಾನಾ ರೀತಿನ ರಕ್ಕಸ ಲೀಲೆನ ಆಡ್ತ್. ಎರ್ಡ್‌ಕಡೆನ ಸೇನೆಗಣಿಳೂ ಗಾಬ್ರಿಂದ ಕಣ್ಣ್ ಅರ್‌ಳ್ಸಿಕಣ್ಡ್ ಮೌನವಾಗಿ ನಿತ್ತೊ. ಮತ್ತೆ ಭೀಮ ದುರ್ಯೋಧನ

ಒಬ್ಬನ ಹೊತ್ರ್ ಒಳ್ಗ ಕೌರವರ ಪ್ರತಿಜ್ಞೆ ಮಾಡ್ದಂಗೆ ಎಲ್ಲವನ್ರೂ ಮುಗ್ಸಿದೆ. ದುಶ್ಶಾಸನನ ನಾ ಹೇಳ್ದಾಂಗೆ ಎಲ್ಲದನ್ರೂ ಮಾಡಿ ಮುಗ್ಸಿದೆ. ಎಲ್ಲೊವು ಕೇಳ್ಕಣೋಂತ ಗದೆನ ಹೆಗ್‌ಲಿಗೇರ್ಸಿಕಣಂಡ್ ದರ್ಪ್‌ಲಿ ಹೇಳ್ಕಣಂಡ್ ಅತ್ತಿತ್ತ ತಿರ್ಗಾಡಿಕಣಂಡ್ ಇರ್‌ಕನ ಕರ್ಣನ ಮಜ್ಞ ವೃಷಕೇತುಂತ ಹೇಳಂವ ಅವನ ಎದ್‌ರ್ಸಿ ಯುದ್ದ ಮಾಡ್ತ್. ಇದರ ನೋಡಿ ಕೃಷ್ಣ ಅರ್ಜುನಂಗೆ ಹೇಳ್ತ್. ಭೀಮುಂಗೆ ಇವನೊಟ್ಟಿಗೆ ಹೊರಾಡಿಕೆ ಆಕಿಲ್ಲೆ. ಆದ್ದರ್‌ಂದ ನೀನೆ ಅವನೊಟ್ಟಿಗೆ ಯುದ್ಧ ಮಾಡ್‌ಂತ. ಹಾಂಗೆ ಅರ್ಜುನ ಎದ್‌ರ್ ಬಾತ್. ವೃಷಕೇತು ಅರ್ಜುನನೊಟ್ಟಗೂ ಭಯಂಕರ ಯುದ್ಧ ಮಾಡ್ತ್. ಕಡೆಗೆ ಅರ್ಜುನ, ವಿನಾಯಕ ಅವಂಗೆ ಕೊಟ್ಟ ಜಯಾಸ್ತ್ರನ ಬಿಲ್ಲ್‌ಗೇರ್ಸಿ ಹೊಡ್ತ್. ವೃಷಕೇತುನ ತಲೆ ತುಂಡಾಗಿ ಬೀತ್.

ಕರ್ಣ ಹಿಂದೆನ ದಿನದ ಯುದ್ಧ ಮುಗ್ಸಿ ಶಿಬಿರಕ್ಕೆ ಹೋದ ಮೇಲೆ ದುರ್ಯೋಧನಂಗೆ ಭೀಷ್ಮ ಹೇಳ್ದ ವಿಚಾರನ ತಿಳ್ಸಿತ್. ದುರ್ಯೋಧನ ಕೂಡ್ಲೇ ಶಲ್ಯನ ಬಿಡಾರಕೆ ಹೋತು. ಇಂವ ಬಂದದರ ನೋಡಿ ಶಲ್ಯ ಬಾರಿ ಸಂಭ್ರಮಂದ ಉಪಚರ್ಸಿತ್. ಕೆಲ್ಸ ಇದ್ದರೆ ಹೇಳಿ ಕಳ್ಸದೆ ನೀನೇ ಬರೊಕೊಂತ ಹೇಳಿ ಏನ್ ಕಾರ್ಯ ಬಂದಂತ ಕೇಳ್ತ್. ಹೇಳಿಕೆ ನಂಗೆ ಸಂಕೋಚ ಆದೆ. ಮಾಂವಂತ ಉದ್ದ ಎಳ್ತ್. ಸಂಕೋಚ ಬೇಡ ಹೇಳ್‌ಂತ ಶಲ್ಯ ಒತ್ತಾಯ ಮಾಡ್ತ್. ಆಗ ಮಾಂವಾ, ನಿಮ್ಮ ದಯೆಂದ ಜಯಲಕ್ಷ್ಮಿ ನಂಗೆ ಮಾಲೆ ಹಾಕಿಕೆ ಕಾದ್‌ಕಣಂಡ್ ಉಟ್ಟು. ನೀವು ನಾಳೆನ ದಿನ ಕರ್ಣಂಗೆ ಸಾರಥಿ ಆಗಿ ಅಂವ ಗೆಲ್ಲಿಕೆ ಅನುಕೂಲ ಮಾಡೊಕು ಮಾಂವಾಂತ ಕೈ ಮುಗ್ತ್. ಶಲ್ಯಂಗೆ ಭೂಮಿ ಆಕಾಶ ಒಂದಾಗುವ ಹಾಂಗೆ ಕೋಪಬಾತ್. ಕ್ಷತ್ರಿಯ ಕುಲ ಸಂಪನ್ನನಾದ ನನ್ನ ಒಬ್ಬ ಮುಗ್ಗನ ಆಳಾಗುವ ಸೌಭಾಗ್ಯನ ನೀ ಅಲ್ಲದೆ ಬೇರೆ ಯಾರ್ ಕೊಡುವೊಂತ ಹೇಳ್ತ್. ದುರ್ಯೋಧನ ಕರ್ಣನ ಗುಣಗಳ ಎಲ್ಲ ಹೊಗ್‌ಳಿ ಹೇಳಿ ಹೀನ ಕುಲದೊವ್ವಾದರೆ ಇದೆಲ್ಲ ಹೇಂಗೆ ಬಾದುಂತ ಕೇಳ್ತ್. ಶಲ್ಯ ಸಮಾಧಾನ ತಾಳಿ, ಏನಿದ್ದರೂ ಆಳಾದಂವ ಅರ್ರು ಹೇಳುವ ಕೆಲ್ಸನ ಮಾಡುದೇ ಧರ್ಮ. ಆದರೆ ಒಂದು. ಹೇಂಗೆ ಕೃಷ್ಣ ಹೇಳ್ದರ ಅರ್ಜುನ ತೊಪ್ಪದೆ ಪಾಲ್ಸಿದೆನೋ....... ಹಾಂಗೇ ನಾ ಹೇಳ್ದರ ಇಂವ ಮೀರಿಕೆ ಬೊತ್ತ್. ಮೀರ್ತ್‌ಂತಾದರೆ ನಾ ತೇರೋಡ್ಸಿಕೆಲೆ ಇಳ್ದ್ ಹೋವೆಂತ ಶಲ್ಯ ಹೇಳ್ತ್. ದುರ್ಯೋಧನ ಕರ್ಣನ ಕರ್ಸಿ ಇಬ್ಬೊರಿಗೂ ಒಡಂಬಡಿಕೆ ಮಾಡ್ಸಿ ಮಾಂವ ಏನ್ ಹೇಳ್ದೆನೋ ಅದರ ಹಾಂಗೇ ನಡ್ಲೊಕುಂತ ಹೇಳಿ ಒಪ್ಪ್‌ಸಿತ್.

**ಮಕ್ಕ:**

ತಾತ! ಶಲ್ಯ ಮಾದ್ರಿನ ಮಕ್ಕಳಿಗೆ ಸೋದರ ಮಾಂವ ಆಗಿರ್ಕನ ಅಂವ ಪಾಂಡವರ ಕಡೆ ಇರಕಾದ್ದ್ ನ್ಯಾಯ. ಇಂವ ಕೌರವರ ಕಡೆಗೆ ಏಕೆ ಸೇರ್ತ್?

**ತಾತ:**

ಶಲ್ಯ ತನ್ನ ಸೈನ್ಯ ತಕಣಂಡ್ ಪಾಂಡವರಕಡೆ ಸೇರೋಕುಂತ ಹೊರ್ಟ್ ಬಾತ್. ಅದ್ ದುರ್ಯೋಧನಂಗೆ ಗೊತ್ತಾಗಿ ಅಂವ ಬಾವದಾರಿಲಿ ಅವರ ವಿಶ್ರಾಂತಿಗೆ, ಊಟೋಪಚಾರಕೆ ಎಲ್ಲ ಏರ್ಪಾಡ್ ಮಾಡಿತ್ತ್. ಆದರೆ ಅದ್ ಯಾರ್ ಏರ್ಪಾಡ್ ಮಾಡ್ದುಂತ ಹೇಳ್ದರ ಗುಟ್ಟುಲಿಸಿತ್. ಪ್ರಯಾಣ ಮುಗಿವ ಹಂತಲಿ ಶಲ್ಯ "ಯಾರಾದಂವ ನಂಗೂ ನನ್ನ

ಸೇನೆಗೂ ಇಷ್ಟ್ ಉಪಾಚಾರ ಮಾಡ್ತೊ ಅವಂಗೆ ನಾ ಹಂಗಿಗನಾಗಿ ಒಳೆ. ಅಂವ ಎವ್‌ರ್ ಬಲ್ಲಿಂತ" ಘೋಷಣೆ ಮಾಡ್ತ್. ಆಗ ದುರ್ಯೋಧನ ಎವ್‌ರ್ ಬಂದ್ ನಾನೇ ಮಾಂವ ಆ ಏರ್ಪಾಡ್ ಮಾಡ್‌ದ್‌ಂತ ಹೇಳ್ತ್. ಆಗ ಶಲ್ಯ ನಿಂಗೇನ್ ಬೇಕುಂತ ಕೇಳ್ತ್. ನಂಗೆ ನೀವೂ ನಿಮ್ಮ ಸೇನಾ ಸಹಾಯನೂ ಬೇಕು. ಮಾಂವಾಂತ ಹೇಳ್ತ್. ಸರಿ, ಕೊಟ್ಟೆ. ನೀ ಈಗ ನನ್ನ ಸೈನ್ಯನ ಹಸ್ತಿನಾವತಿಗೆ ತಕಂಡ್ ಹೋಗು. ನಾ ಒಂದು ಗಳಿಗೆ ನನ್ನ ಅಳಿಯಂದರ ಮೋರೆ ನೋಡಿ, ಮಾತಾಡಿ ಬನ್ನೆಂತ ಹೇಳಿ ಪಾಂಡವರಲ್ಲಿಗೆ ಹೋತು.

ಪಾಂಡವರಿಗೆ ಶಲ್ಯನ ನೋಡಿ ಸಂತೋಸಾತ್. ಶಲ್ಯ ಉಪಾಯಂದ ದುರ್ಯೋಧನ ತನ್ನನ್ನೂ ತನ್ನ ಸೇನೆನ್ನೂ ಅವನ ಪಕ್ಷಕ್ಕೆ ಸೇರುವಾಂಗೆ ಮಾಡ್ತ್ಯಕೆ ಅವ್ಕೆ ಬೇಸರ ಸೂಚಿಸಿತ್. ಅದಿಕೆ ಪಾಂಡವರ್ ನೀವು ಅವರ ಕಡೆ ಇದ್ದರೂ ನಮ್ಮ ಹಿತನ್ನೆ ಬಯ್ಸಿ ಕಾರ್ಯ ಮಾಡಿ ಮಾಂವಂತ ಹೇಳ್ತೊ. ಒಂದು ವೇಳೆ ನೀವು ಕರ್ಣಂಗೆ ಸಾರಥಿ ಆವಾಂಗೆ ಆದರೆ, ಸಂದರ್ಭ ಸಿಕ್ಕ್‌ಕನೆಲ್ಲ ಅವನ ಕುಲದ ಮಾತೆತ್ತಿ ಹಂಗ್‌ಸಿ ಅವನ ಉತ್ಸಾಹ ಭಂಗ ಮಾಡಿರೆ ಸಾಕ್‌ಂತ ಹೇಳ್ತೊ. ಮತ್ತೆ ಹಜ್ಜಾ ಹೊತ್ತ್‌ಲಿ ಅವ್ಕೆ ಆಶೀರ್ವಾದ ಮಾಡಿ ಶಲ್ಯ ಕೌರವನಲ್ಲಿ ಬಂದ್ ಸೇರ್ತ್.

**ಮಕ್ಕ:**

ತಾತ! ಕೌರವನ ಕುತಂತ್ರಕೆ ಈಡೇ ಇಲ್ಲಂತ ಕಂಡದೆ !

**ತಾತ:**

ಅವನ ಉದ್ದೇಸ ಪಾಂಡವರ ಮೇಲ್‌ನ ಹಗೆ ತೀರ್ಸೋಕುಂತ. ಅದ್ಕೆ ಬೇಕಾಗಿ ಏನ್ ಬೇಕರೂ ಮಾಡಿಕೆ ಅಂವ ತಯಾರ್. ಎಂತವರ್ನೂ ಮಾತ್‌ಲಿ ಮರುಳು ಮಾಡುದರ್ಲಿ ಅಂವ ಎತ್ತಿದ ಕೈ. ಹಾಂಗೆ ತನ್ನನ್ನೇ ಅವಿವೇಕಿಂತ ಕರ್ದರೂ ಗಣ್ಯ ಮಾಡದೆ ಶಲ್ಯನ ಕರ್ಣಂಗೆ ಸಾರಥಿ ಆಕೆ ಒಪ್ಪುಸಿಯೇ ಬುಟ್ಟಿತ್.

ಶಲ್ಯ ಸಾರಥಿಯಾದ ಕರ್ಣನ ಸೇನಾಧಿಪತ್ಯದ ಎರಡ್ನೇ ದಿನದ ಯುದ್ಧಲಿ ಸುರುಗೆ ಅಂವ ಭೀಮನ ಸೋಲ್ಸಿದರ ಮುಂದೇ ನೋಡ್ಯೊಳೆ. ಇನ್ನೊಂದು ಯುಧಿಷ್ಠಿರಂಗೆ ಬಾಣ ಹೊಡ್ದ್ ಅವನ ಮೂರ್ಛೆ ತಪ್ಪಿ ಬೀಳ್ಸಿದ್. ಹಾಂಗೆ ಮಾಡ್ತ್ಯಕೆ ಪಶ್ಚಾತ್ತಾಪ ಪಟ್ಟ್‌ಕಂಡತ್– ಕುಂತಿಗೆ ಕೊಟ್ಟ ಮಾತ್ ತಪ್ಪಿ ಹೋದನೋಂತ. ಯುಧಿಷ್ಠಿರನ ನಕುಲ ಸಹದೇವರ್ ಶಿಬಿರಕ್ಕೆ ಕರ್ಕಂಡ್ ಹೋಗಿ ಶುಶ್ರೂಷೆ ಮಾಡ್ತೊ. ಯುದ್ಧರಂಗಲಿದ್ದ ಅರ್ಜುನಂಗೂ ಕೃಷ್ಣಂಗೂ ಈ ವಿಚಾರ ತಿಳ್ತ್. ವಿಚಾರ್ಸಿ ಬಾವೋನೋಂತ ಶಿಬಿರಕೆ ಬಂದೊ. ಅವರ ನೋಡ್ತ ಯುಧಿಷ್ಠಿರ ಇವು ಕರ್ಣನ ಕೊಂದೇ ಬಂದಿರೊಕುಂತ ನೆನ್ಸಿ ಅರ್ಜುನನ ಹೊಗ್‌ಳಿಕೆ ಸುರು ಮಾಡ್ತ್. ಅವನ ಇನ್ನೂ ಕೊಂದಲ್ಲಂತ ಕೇಳಿ ಅರ್ಜುನನ ತೆಗ್‌ಳಿಕೆ ಸುರು ಮಾಡ್ತ್. ನಿನ್ನ ಗಾಂಡೀವನ ಕೃಷ್ಣನ ಕೈಯ್ಗೆ ಕೊಡುಂತ ಸಿಟ್ಟ್‌ಲಿ ಹೇಳ್ತ್. ಗಾಂಡೀವನ ದೂಷಿಸಿದವರ ಕೊಲ್ಲದಿರಿಕಿಲ್ಲೆಂತ ಅರ್ಜುನ ಹಿಂದೆನೇ ಪ್ರತಿಜ್ಞೆ ಮಾಡಿತ್ತ್‌ಗಡ. ಹಾಂಗೆ ಅಂವ ಕತ್ತಿ ಹಿಡ್ದ್ ಅವನ ಕೊಲ್ಲಿಕೆ ಬಾತ್. ಕೃಷ್ಣ ಅವನ ತಡ್ತ್, ಅರ್ಜುನ, ಅಣ್ಣನ ಕೊಲ್ಲಿಕೆ ಹೊರ್ಟ್ ಪಾಪ ಮಾಡ್ಬೇಡ. ಅದಿಕಾಗಿ

ಸಾ ಸತ್ತನೆಂತ ಹೇಳ್ತ್. ಆಗ ಕೃಷ್ಣ ಕೊಲ್ಲುವ ಮತ್ತೆ ತಾನ್ ಸಾಯುವ ಸುಲಭ ಉಪಾಯನ ಹೇಳ್ತ್. ಮಾನವಂತರೆರಿಗೆ ಅವನ ಮಾನ ಹೋಗುವ ಹಾಂಗೆ ಬೊಯ್ದರೆ ಅವನ ಕೊಂದಾಂಗೆ ಆತ್. ತನ್ನ ತಾನೇ ಹೊಗ್‌ಳಿಕಂಡರೆ ತಾನ್ ಸತ್ತಾಂಗೆ ಆತ್. ನೀ ಹಾಂಗೇ ಮಾಡ್‌ಂತ ಹೇಳ್ತ್. ಅರ್ಜುನ ಹಾಂಗೇ ಮಾಡ್ತ್. ಆಗ ಯುಧಿಷ್ಠಿರ ನಂಗೆ ರಾಜ್ಯ-ಕೋಶ ಒಂದೂ ಬೇಡ. ನಾ ಕಾಡಿಗೇ ಹೋನೆಂತ ಹೊರ್ಟಲೆತ್. ಮತ್ತೆ ಅರ್ಜುನನೂ ಕೃಷ್ಣನೂ ಅವನ ಕಾಲ್ ಓಡ್ಡ್ ಸಮಾಧಾನ ಮಾಡಿ ನಿಲ್ಸಿದೊ. ಇನ್ನ್ ಕರ್ಣನ ಕೊಂದ ಮೇಲೇ ನಿನ್ನ ಮೋರೆನ ನೋಡುವಂತೇಳಿ ಯುದ್ಧಕ್ಕೆ ಅರ್ಜುನ ಹೋತು.

ಇಂದ್‌ನ ಯುದ್ಧ ಕರ್ಣನ ಕಡೇ ಯುದ್ಧ. ಅವನ ಮನ್‌ಸ್‌ಗೆ ಆಘಾತ ಆಗುವ ಎರ್ಡ್ ಘಟನೆಗ ನಡ್ಡ್ ಹೋಗಿ ಅವನ ಮನ್ಸೆಲ್ಲ ಕದ್‌ಡಿ ಹೋಗಿತ್ತ್. ಒಂದು ಎಲ್ಲೊವು ನೋಡಿಕೆಲೆಂಡ್ ಇದ್ದಾಂಗೆ ಭೀಮ ದುಶ್ಯಾಸನನ ರಾಕ್ಷಸಲೀಲೆಲಿ ಕೊಂದ್ ಅವನ ಪ್ರತಿಜ್ಞೆನ ನೆರವೇರ್ಸಿಕೆಲೆಂಡದ್. ಅದರ್‌ಂದಾಗಿ ತನ್ನ ಒಡೆಯನ ಮೋರೆ ಕಂದಿ ಹೋದ್ದ್. ಎರ್ಡನೇದ್ ತನ್ನ ಕಣ್ಣೆದ್‌ರೇ ತನ್ನ ಮಜ್ಜ ವೃಷಕೇತುನ ಅರ್ಜುನ ಕೊಂದ್ ಹಾಕಿದ್. ಈಗ ಅರ್ಜುನ ಅವನ ಹಂಗ್‌ಸಿಕೆಲೆಡ್, ನನ್ನೊಟ್ಟಿಗೆ ಯುದ್ಧಕ್ಕೆ ಹದ್‌ರಿ ನಿತ್ತೊಳಂತ, ನಿನ್ನ ಪ್ರತಾಪನೆ ಬಡಾಯಿ ಕೊಚ್ಚಿಕಂಬತಿದ್ದ. ಈಗ 'ಸೆಟ್ಟಿಯ ಬಳ್ಳಂ ಕಿರಿದು'ಂತೇಳುವ ಮಾತ್‌ನ ನಿಜ ಮಾಡಿಯಂತ ಮಾತ್‌ಲಿ ಮರ್ಮಕೆ ಗಾಸಿ ಮಾಡ್‌ದೆ.

"ಅರ್ಜುನ! ನೀನೂ ದೊಡ್ಡ ವೀರಂತ ಜಂಬ ಪಡ್ಬೇಡ. ಲೋಕಲೆಲಿ ನೀನೇ ದೊಡ್ಡ ಜಿಲ್ಲ್‌ಗಾರಂತ ಹೆಸ್‌ರ್ ಪಡಿಯೊಕುಂತ ಗುರುಗಳ ಮುಖಾಂತರ ಕಾಡ್‌ಲಿದ್ದ ಬಡ ಬೇಡರ ಹೈದನ ಬಲ್ಲ ಹೆಬ್ಬೆರ್ಲ್‌ನ ತುಂಡ್ ಮಾಡ್ಸಿ ಅಂವನ ಜೀವನನೆ ಬೊಲಿ ತಕಂಡ ಕ್ರೂರಿ ನೀ. ವಿರಾಟನ ಅರಮನೆಲಿ ಬಳೆ ತೊಟ್ಟ್‌ಕಲೆಂಡ್, ಸೀರೆ ಉಟ್ಟ್‌ಕಲೆಡ್ ಒಂದು ವೊರ್ಸ ಕಾಲ ನಪುಂಸಕ ಆಗಿದ್ದಂವ. ಎಂದೋ ಒಮ್ಮೆ ಶಿಖಂಡಿಯಾಗಿದ್ದರೂ ಮತ್ತೆ ವೀರನಾಗಿದ್ದ ದ್ರುಪದನ ಮಜ್ಜನ ಶಿಖಂಡಿಂತೇಳಿ, ಪಿತಾಮಹರ್ ಅವನೊಟ್ಟಿಗೆ ಯುದ್ಧ ಮಾಡಿಕಿಲೆಂತ ಮೋರೆ ತಿರ್‌ಗ್‌ಸಿ ನಿತ್ತೊ. ನೀ ಆ ಶಿಖಂಡಿನ ಹಿಂದೆ ಮರೆಲಿ ನಿತ್ತ್ ಪಿತಾಮಹರ ಮೇಲೆ ಬಾಣ ಬುಟ್ಟ್ ಅವರ ಬೀಳ್ಸಿದ ಮೋಸಗಾರ. ನೀ ಆ ಶಿಖಂಡಿಂದೊಳೂ ದೊಡ್ಡ ಶಿಖಂಡಿ. ನಿಜವಾಗಿ ಒಂದು ವೊರ್ಸ ನಿಜವಾದ ಶಿಖಂಡಿಯೇ ಆಗಿದ್ದ ನಿನ್ನೊಟ್ಟಿಗೆ ಯುದ್ಧ ಮಾಡಿಕಿಲೆಂತ ಭೀಷ್ಮರ್ ನಿನ್ನ ಬಹಿಷ್ಕರಿಸಕಾಗಿತ್ತ್. ಅಂತಾ ಹೇಡಿಯಾದ ನಿನ್ನೊಟ್ಟಿಗೆ ಯುದ್ಧ ಮಾಡುದು ಸರಿಯೋಂತ ಯೋಚನೆ ಮಾಡ್‌ತಿದ್ದೆ ಹೊರ್ತು ಅಂಜಿಕೆಲೆಂಡ್ ನಿತ್ತೆದಲ್ಲ. ಈ ಕರ್ಣಂಗೆ ಅಂಜಿಕೆ ಉಟ್ಟುಂತಾದರೆ, ಈ ದಿಕ್ಕ್‌ಂದ ಹುಟ್ಟುವ ಸೂರ್ಯ ಆ ದಿಕ್ಕ್‌ಲಿ ಹುಟ್ಟುದು." ಅರ್ಜುನನೂ ಕೋಪಲಿ ಉತ್ತರ ಕೊಟ್ಟ್ ಬರಿಬಾಯಿ ಮಾತ್‌ಂದೇನ್? ತ್ರಾಣ ಇದ್ದರೆ ನನ್ನ ಬಾಣನ ತಡ್ಕಂತೇಳಿ ಎರ್ಡ್ ಬಾಣಗಳ ಅವನ ಮೇಲೆ ಬುಟ್ಟಲೆತ್. ಕರ್ಣ ಅದರ ನೊಡುಲೆ ತುಂಡು ಮಾಡಿ ಅರ್ಜುನನ ಮೇಲೆ ಮತ್ತೆ ಐದ್ ಬಾಣಗಳ ಬುಟ್ಟಲೆತ್. ಕೈ ಚಳಕಲೆಲಿ ಒಬ್ಬಂದ ಒಬ್ಬ ಮೇಲ್‌ಂತೇಳುವಾಂಗೆ ಇಬ್ಬೊರೂ ಸಮವಾಗಿ ಕಲೆಯಿ ಸೋಲದೆ ಸುಮಾರ್ ಹೊತ್ತು ಹೋರಾಡ್ದೊ. ಆಗ

ಶಲ್ಯ ಕರ್ಣಂಗೆ ಹೇಳ್ತ್: ಇದರ್‌ಂದೇನ್ ಲಾಭ? ಮಹಾಸ್ತ್ರನ ಪ್ರಯೋಗ ಮಾಡ್‌ಂತ. ಹಾಂಗೆ ಕರ್ಣ ಮಹಾಸ್ತ್ರಕೆ ಕೈ ನೀಂಡ್‌ಕನ ಅರ್ಜುನನ ಮೇಲೆ ಹಗೆಲಿಪ್ಪ ಅರ್ಧಾವಳಿಕಂತೇಳುವ ಬಾಣದ ರೂಪುಲಿ ಅಶ್ವಸೇನಂತೇಳ್ವ ಸರ್ಪ ಅಡ್‌ಂಗಿದ್ದಿತ್ ಅವನ ಕೈಗೆ ಬಾತ್. ಕರ್ಣ ಅದರ ಬಿಲ್ಲಿಗೆ ಜೋಡ್ಸ್‌ಕನ ಇಡೀ ಲೋಕಳೇ ನಡ್ಗಿತ್. ಆಗ ಶಲ್ಯ ನೋಡಿ, ಕರ್ಣ ನೀ ಗಂಟ್ಲಿಗೆ ಗುರಿ ಇಸಿದ ಇದ್ ತೊಪ್ಪು. ಎದೆಗೆ ಗುರಿ ಇಸಿರೆ ನಿಂಗ ಜಯ ನಿಶ್ಚಯಂತ ಹೇಳ್ತ್. ಕರ್ಣ ಪರೀಕ್ಷಿಸಿ ಶಲ್ಯ ಹೇಳ್ದ್ ಸತ್ಯಂತ ನೆನ್ಸಿತ್. ಆದರೆ ಅಯ್ಯಗೆ ಮಾತ್ ಕೊಟ್ಟಾಗುಟು. ಮತ್ತೆ ಒಮ್ಮೆ ಇಸಿದ ಗುರಿನ ಇಳ್ಸಿ ಬದ್‌ಲ್ಸಿರೆ ಕರ್ಣ ಹೆದ್‌ರಿಹಾಂಗೆ ಮಾಡ್ತ್‌ಂತ ಜೆನ ನೆನ್ಸುವೊಂತೇಳಿ ಹಾಂಗೆನೇ ಬಾಣ ಬುಟ್ಟಿತ್. ಕಿಡಿಕಾರಿಕಣ್ಡ್ ಲೋಕನೆಲ್ಲ ನಡ್‌ಗ್ಸಿಕಣ್ಡ್ ಬಾವ ಆ ಬಾಣನ ನೋಡಿ ರಥನ ಭೂಮಿಲಿ ಎಂಟ್ ಬೆರ್ಲ್ ತಗ್ಗುವಾಂಗೆ ಕೃಷ್ಣ ಕಾಲ್‌ಲಿ ಒತ್ತಿತ್. ಬಂದ ಬಾಣ ಅರ್ಜುನನ ಕಿರೀಟನ ಹಾರ್ಸಿ ಕುಲ ಪರ್ವತನ ಶಿಖರನ ಬೀಳ್ಸುವಾಂಗೆ ಬೀಳ್ಸಿತ್. ಏನಾತ್‌ಂತ ಗೊತ್ತಾಗದ ಪಾಂಡವ ಸೇನೆ 'ಅಯ್ಯೋ'ಂತ ಅತ್ತೊ. ಕೌರವ ಸೇನೆ "ಹೋ"ಂತ ಜಯಕಾರ ಮಾಡ್ತೊ. ಬಿದ್ದ ರಭಸಕ್ಕೆ ಕಿರೀಟದ ರತ್ನ ಮೊಣಿಗೆಲ್ಲ ದಿಕ್ಕ್ ದಿಕ್ಕ್‌ಗೆ ಹಾರ್‍ಯೊ. ತಲೆ ಕೂದೊಲ್ ಬಿಚ್ಚಿ ಹೆಗ್‌ಲ್ ತುಂಬೆಲ್ಲ ಹರ್‌ಂಡಿದರ ಒಟ್ಟು ಸೇರ್ಸಿ ಗಣ್ಟ್ ಕಟ್ಟಿ ಅರ್ಜುನ ಬಿಲ್ಲ್ ಹಿಡ್ಕಣ್ಡ್ ತಯಾರಾಗಿ ನಿತ್ತಿತ್.

ಇಷ್ಟರ್ಲಿ ಅಶ್ವಸೇನ ಕರ್ಣನಕ್ಕಲ ಬಂದ್, ತಡಮಾಡದೆ ಬೇಗ ನನ್ನ ತೊಡು. ಈಗ ತೊಪ್ಪಿ ಬುಟ್ಟೆ. ಇನ್ನೊಮ್ಮೆ ನನ್ನ ಪ್ರಯೋಗಿಸಿರೆ ವೈರಿ ಪಾತಾಳಕ್ಕೆ ಹೋದರೂ ಬುಡಿಕಿಲ್ಲಂತ ಹೇಳ್ತ್. ಕರ್ಣಂಗೆ ಆಶ್ಚರ್ಯ ಆಗಿ ನೀ ಯಾರ್‌ಂತ ಕೇಳ್ತ್. ಅಶ್ವಸೇನ ಅವನ ವೃತ್ತಾಂತನೆಲ್ಲ ಹೇಳ್ತ್. ಅದಿಕೆ ಕರ್ಣ ನೀ ಬಾಣ ರೂಪುಲಿ ಇದ್ದದರ್‌ಂದ ಗೊತ್ತಾಗದೆ ಪ್ರಯೋಗ ಮಾಡ್ದೆ. ಇಲ್ಲದಿದ್ದರೆ ವೈರಿನಾಶಕ್ಕೆ ಬೇರೊಬ್ಬನ ಸಾಯ (ಸಹಾಯ) ಈ ಕರ್ಣಂಗೆ ಬೇಕುಂತಿಲ್ಲೆ. ನಿಂಗೆ ಅವನ ಮೇಲೆ ದ್ವೇಷ ಇದ್ದರೆ ನೀನೇ ತೀರ್ಸಿಕ ಹೋಗುಂತೇಳ್ತ್. ಹಾಂಗೆ ಆ ಸರ್ಪ ವಿಷಜ್ವಾಲೆಗಳ ಸೂಸಿಕಣ್ಡ್ ಅರ್ಜುನನ ಕಡೆಗೆ ಹಾರಿ ಹೋತು. ಅರ್ಜುನ ಗರುಡಾಸ್ತ್ರ ಬುಟ್ಟ್ ಅದರ ತುಂಡು ತುಂಡು ಮಾಡಿ ಹಾಕಿತ್. ಇಷ್ಟಾಕನ ಶಲ್ಯ "ನನ್ನ ಮಾತಿಗೆ ಗೌರವ ಕೊಡದ ಒರ್‌ಟಂಗೆ ನಾ ಸಾರಥಿಯಾಗಿರಿಕಿಲ್ಲೆ"ಂತ ಹೇಳಿ ಇಳ್ದ್ ಹೋತು. ಕರ್ಣ ನೆಗಾಡಿಕಣ್ಡ್ "ಹೋಗಿ ಹೋಗಿ ಎಲ್ಯಾರ್ ಅರ್ಜುನ ಬುಡುವ ಬಾಣಂಗ ತಾಂಗಿ ಬುಡುವೊ!" ಹೀಂಗೆ ಶಲ್ಯನ ಹಂಗ್‌ಸಿ ತಾನೇ ಕುದುರೆಗಳ ನಿಯಂತ್ರಿಸಿಕಣ್ಡ್ ಯುದ್ಧ ಮಾಡಿಕಣ್ಡೂ ಇತ್ತ್. ಹೀಂಗೆ ಹಜ್ಜಾಹೊತ್ತು ಕಳಿಯಕನ ಅವನ ರಥದ ಚಕ್ರಗ ಹೂತ್ ಹೋಗಿ ಬಟ್ಟೊ. ಹಿಂದೆನ ಒಂದು ಜೆನ್ಮಲಿ ಅಂವ ಮನುವಾಗಿತ್ತ್ ಗಡ. ಆಗ ಭೂಮಿನ ಇಪ್ಪತ್ತೊಂದು ಸರ್ತಿ ಚಣ್ಡಿ ಉದ್ದಿಕಂಬ ಅರಿವೆನ ಹಿಂಡುವಾಂಗೆ ತಿರ್‌ಂಟಿ ಹಿಂಡಿತ್ತ್ ಗಡ! ಆ ಕೋಪಲಿ ಈಗ ಭೂಮಿ ಅವನ ರಥ ಚಕ್ರಗಳ ನುಂಗಿತ್‌ಂತ ಕತೆ ಕಟ್ಯೊಳೊ. ಆದರೆ ವೈಜ್ಞಾನಿಕವಾಗಿ ಆಲೋಚಿಸಿರೆ, ಯುದ್ಧ ಭೂಮಿಲಿ ಹರ್‍ದ ರಕ್ತಂದ ನೆಲ ಮೆತ್ತಂಗಾಗಿ ಕೆಸ್‌ರೆದ್, ಅಂತ ಜಾಗೆಲಿ ಚಕ್ರಗ

ಹುಗ್ಗ್ ಹೋಗಿರುವ್ರೋಂತ ಕಂಡದೆ. ಈಗ ಉಪಾಯ ಇಲ್ಲದೆ ಕರ್ಣ ಅರ್ಜುನಂಗೆ ನಾ ರಥದ ಚೆಕ್ರನ ಮೇಲೆ ಎತ್ತ್‌ಕನ ಮುಟ್ಟ ತಡ್ಕ. ಮತ್ತೆ ಯುದ್ಧ ಮಾಡ್ಂತ ಕೇಳಿಕಣಂಡ್ ರಥಂದ ಇಳ್ದ್ ಚೆಕ್ರನ ನೇಚಿಕೆ ಸುರು ಮಾಡ್ತ್. ಆಗ ಕೃಷ್ಣ ಅರ್ಜುನಂಗೆ ಈಗಳೆ ಬಾಣ ಬುಡುಂತ ಹೇಳ್‌ಕನ ಅದ್ ಅನ್ಯಾಯ. ಧರ್ಮ ಅಲ್ಲಂತ ಹೇಳ್ತ್. ಅಭಿಮನ್ಯುನ ಕೈಗಳ ಹಿಂದೆಂದ ಬಾಣ ಹೊಡ್ದ್ ತುಂಡು ಮಾಡಿ ಅಂವನ ವಧೆಗೆ ಕಾರಣ ಆಕನ ಕರ್ಣ ಅದ್ ಅನ್ಯಾಯಂತ ನೋಡ್‌ತೋಂತ ಕೃಷ್ಣ ಕೇಳ್‌ಕನ ಅರ್ಜುನ ಕೋಪ ಕೆರ್ಳಿ, ಕರ್ಣಂಗೆ ಬಾಣ ಹೊಡ್ತ್. ಕರ್ಣ ಆ ಬಾಣಗಳ ತನ್ನ ಕಠಾರಿಂದ ತೊಪ್ಪುಸಿಕಣಂಡ್ ಬೇಗ ರಥಕೆ ಹತ್ತಿ ಬಿಲ್ಲ್ ಹಿಡ್ದ್ ಯುದ್ಧ ಸುರು ಮಾಡ್ತ್. ಮತ್ತೆ ಇಬ್ರೊರಿಗೂ ಜೋರಾದ ಯುದ್ಧ ಸುರಾತ್. ಕರ್ಣ ಬುಟ್ಟ ಬಾಣದ ಪೆಟ್ಟಿಗೆ ಅರ್ಜುನನ ರಥ ರಣಾಂಗಣಲಿ ಬುಗುರಿನಾಂಗೆ ಮೂರು ಸುತ್ತು ತಿರ್ಗಿ ನಿತ್ತಲೆತ್. ಕೃಷ್ಣ ಅರ್ಜುನಂಗೆ ಮಹಾಸ್ತ್ರನ ಪ್ರಯೋಗ ಮಾಡಿಕೆ ಸೂಚನೆ ಕೊಟ್ಟಲೆತ್. ಅರ್ಜುನ ಗಿರಿಜೆ ಕೊಟ್ಟ ಅಂಜಲಿಕಾಸ್ತ್ರನ ತಕಣಂಡ್ ಮಂತ್ರ್‌ಸಿ ಬುಡ್‌ಕನ ಇಡೀ ಲೋಕ ತಲ್ಲಣಕ್ಕೊಳಗಾತ್. ಕರ್ಣನ ತಲೆ ಆಕಾಶಕ್ಕೆ ಹಾರಿ ಕೆಳೆಗೆ ಬೀತ್. ತಲೆ ಬಿದ್ದರೂ ಶರೀರ ಮಾತ್ರ ಯುದ್ಧ ಭಂಗಿಲೇ ಬಿಲ್ಲಿಗೆ ಬಾಣನ ಜೋಡ್ಸುವಾಂಗೇ ಇದ್ದ್. ಹಜ್ಜ ಹೊತ್ತುಲಿ ಕೆಳೆಗೆ ಬೀತ್. ಇನ್ನೂ ಹಜ್ಜ ಹೊತ್ತು ಕಳಿಯಕನ ಅವನ ದೇಹಂದ ಜ್ಯೋತಿಯೊಂದು ಹೊರ್ಟ್ ಸಿಡ್ಲ್‌ನಕಾಂತಿಂದ ಕೂಡಿ, ಬಾನಲಿ ಹಾರಿಕಣಂಡ್ ಹೋಗಿ ಸೂರ್ಯನ ಬಿಂಬದೊಳಗೆ ಸೇರಿಕಣಂಡದರ ನೋಡಿ ಎಲ್ಲ ಜೆನಂಗಳೂ ಕೈ ಮುಗ್‌ದ್ ಅವಂಗೆ ಅಂತಿಮ ನಮನನ ಸಲ್ಸಿದೊ.

ತನ್ನ ಅರ್ಸು ಚಾಳುಕ್ಯ ಎರ್ಡನೇ ಅರಿಕೇಸರಿನ ಕಥಾನಾಯಕನಾಗಿ ಮಾಡಿ ಅರ್ಜುನೊಟ್ಟಿಗೆ ಹೋಲ್ಸಿ ಪಂಪ ವಿಕ್ರಮಾರ್ಜುನ ವಿಜಯ ಬರ್ತ್. ತನ್ನ ರಾಜನ ಶಕ್ತಿ ಮೀರಿ ಹೊಗ್‌ಳಿರೂ ಅವನ ಮನ್‌ಸ್‌ನ ತುಂಬಿದ ಪಾತ್ರಂತೇಳಿರೆ ಕರ್ಣ. ಹಾಂಗೆ ಕರ್ಣಂಗೆ ಸ್ಮಾರಕ ಪದ್ಯ ಒಂದರ ಬರ್ದುಟು. ಅದರ ನೀವ್ಗೆ ಕೇಳೊಕುಂತಾದರೆ ಕೊಟ್ಟನೆ:

**ಮಕ್ಕ:**

ಕಂಡಿತ ಕೊಡಿ ತಾತ. ಅದರ ಬಾಯಿ ಪಾಟ ಮಾಡಿ, ಬೇರೆವ್ಕೂ ಹೇಳುವೆ.

**ತಾತ:**

ಒಳ್ಳೆದ್ ಕೇಳಿ:

ನೆನೆಯದಿರ್ಣ್ಣ ಭಾರತದೊಳಿಂ ಪೆರರಾರುಮನೊಂದೆ ಚಿತ್ತದಿಂ ನೆನೆವೊಡೆ ಕರ್ಣನಂ
ನೆನೆಯ ಕರ್ಣನೊಳಾರ್ ದೊರೆ ಕರ್ಣನೇರು ಕರ್ಣನ ಕಡುನನ್ನಿ ಕರ್ಣನಳವಂಕದ
ಕರ್ಣನ ಚಾಗಮೆಂದು ಕರ್ಣನ ಪಡೆ ಮಾತಿನೊಳ್‌ಪುದಿದು ಕರ್ಣರಸಾಯನ ಮಲ್ತೆ
ಭಾರತಂ?

ಪಂ.ಭಾ 12-217

ಕರ್ಣ ಸತ್ತಲೆತ್‌ಂತ ಕೇಳ್ದ ದುರ್ಯೋಧನ ಬೋದ ತೊಪ್ಪಿ ಡಬ್ಬನೆ ರಥದೊಳಗೆ ಬೀತ್. ಕೂಡ್ಲೆ ಅವನ ಶಿಬಿರಕ್ಕೆ ಕರ್ಕಣಂಡ್ ಹೋಗಿ ಉಪಚಾರ ಮಾಡಿ ಎಬ್ಸ್‌ಲ್ಲಿದೊ.

ಎಚ್ಚರಿಕೆ ಆದ ಕೂಡ್ಲೆ ಅಂವ ಕರ್ಣನ ನೆನ್ಸಿಕಣಂಡ್ ಗೋಳೋಂತ ಅಳಿಕೆ ಸುರು ಮಾಡ್ತ್. ಹಿಂದೆ ಕೃಷ್ಣ ಕರ್ಣನ ಜೆನ್ಮ ವೃತಾಂತನ ಹೇಳಿ ದುರ್ಯೋಧನಂಗೆ ಗೊತ್ತಿದ್ದೂ ನಿಂಗೆ ಹೇಳದೆ ತನ್ನ ಕಾರ್ಯ ಸಾಧ್ಸುವ ಉದ್ದೇಸಂದ ಸ್ನೇಹ ತೋರ್ಸಿತ್ಂತ ಹೇಳ್ದ ಇಂವನ ಬೇದ್ಸಿಕಾಗಿ ಕೃಷ್ಣ ಸುಳ್ಳು ಹೇಳ್ತೊಂತ ಭಾವನೆ ಒದೊಷ್ಟೆ ಬಂದದೆ. ಆದರೆ ದುರ್ಯೋಧನ ಅದರ ಒಪ್ಪಿಕಣಂಡ್ ಗೋಳಾಡ್ದೆ. ಕುರು ಸಾಮ್ರಾಜ್ಯನ ನಿಂಗೊಪ್ಪುಸಿ ನೀ ಮಾಡ್ದ ಅಪ್ಪಣೆಗಳ ಪಾಲ್ಸಿಕಣಂಡ್ ಸಂತೋಸುಲಿ ಇರಕಣಿಯ್ತ್. ಹೇಳೊಕು ಹೇಳೊಕುಂತ ನಾಲಿಕನ ಕೊಡಿವರೆಗೆ ಬಂದರೂ ಸಣ್ಣೆ ತರ್ಂದಣಳೇ ಬಂದ ಭೀಮನ ಮೇಲೆನ ಹಗೆ ನನ್ನ ತಪ್ಪ್. ನಿನ್ನ ಕೊಂದೊವು ಬೇರೆಯಾರೂ ಅಲ್ಲ. ನಾನೇ ನಿನ್ನ ಕೊಂದೆ. ನಾವ್ಗ ಒಡಲ್ಗ ಎರ್ಡ್. ಆದರೆ ಜೀವ ಒಂದೇಂತ ಎಲ್ಲೊವೂ ಹೇಳ್ತಿದ್ದೊ. ಆದರೆ ನಿನ್ನ ಜೀವ ಹೋತು. ಆದರೆ ನನ್ನ ಪಾಪಿ ಜೀವ ಇನ್ನೂ ಉಟ್ಟು. ನಂಗೆ ಇನ್ನ್ ಈ ಬೂಮಿ ಮೇಲೆ ಇರಿಕೆ ಆಸೆ ಇಲ್ಲೆ. ನಾನೂ ನಿನ್ನ ಹಿಂದೆಕಣಂಡ್ ಬನ್ನೆ.

ಹೀಂಗೆ ಹೇಳಿ ಮತ್ತೆ ಮೂರ್ಛೆ ತೂಪ್ಪಿತ್. ಅಷ್ಟರ್ಲಿ ಧೃತರಾಷ್ಟ್ರನೂ ಗಾಂಧಾರಿನೂ, ಮಜ್ಜನ ಸಮಾಧಾನ ಮಾಡಿಕಂತ ಬಂದೊವು ನಿಶ್ಚೇತನ ಆಗಿರೊಂವನ ಮುಟ್ಟಿ ನೋಡಿ ಇಂವನೂ ಸತ್ತಣತಂತ ಗಾಜ್ರಿಂದ ಅಳಿಕೆ ಸುರುವಾಡ್ದೊ. ದುರ್ಯೋಧನ ಮೂರ್ಛೆ ತಿಳಿವಾಂಗೆ ಉಪಚಾರ ಮಾಡ್ತಿದ್ದೊವು ಅವರ ಸಮಾಧಾನ ಮಾಡ್ಕನ ದುರ್ಯೋಧನಂಗೆ ಎಚ್ಚರಿಕೆ ಆತ್. ಅವು ಅವನ ಮೈ ಮೇಲೆಲ್ಲ ಕೈಯಾಡ್ಸಿಕಣಂಡ್, ತೊಬ್ಬಿಕಣಂಡ್, ಮಜ್ಜ, ಯುದ್ಧಣಲಿ ಪಾಂಡವರ ಗೆಲ್ಲಿಕೆ ಆಕಿಲೆ ನಾವೀಗ ಸಂಧಿಮಾಡೋನೊ. ನಿಂಗೆ ಹೇಂಗೆ ಬೇಕೋ ಹಾಂಗೆ ನಾವು ಯುಧಿಷ್ಠರಂಗೆ ಹೇಳಿ ಒಪ್ಪುಸುವೆ. ನಮ್ಮ ಪುಣ್ಯಾಂದ ನೀ ಒಬ್ಬ ಒಳ್ದೊಳ ಸಾಕ್. ಒಳ್ದ ಮಕ್ಕ ಸತ್ತರೆ ಹೋಗಣಲಿ. ಲೋಕಕ್ಕೆ ಬೊಳ್ಪು ಕೊಡಿಕೆ ಸೂರ್ಯ ಒಬ್ಬ ಸಾಲದೋ? ನಕ್ಷತ್ರ ರಾಸಿಗಣಳೇ ಇದ್ದರೂ ಫಲ ಉಟ್ಟೊಂತ ಕೇಳ್ದೊ. ಸಂಧಿನ ಮಾತ್ ಹೇಳ್ಚೇಡಿ. ದುಶ್ಶಾಸನನ ಕೊಂದ ಭೀಮ, ಮತ್ತೆ ಕರ್ಣನ ಕೊಂದ ಅರ್ಜುನ ಇವರಿಬ್ಬರ ಕೊಂದ ಮೇಲೆ ಒಳ್ದವರೊಟ್ಟಿಗೆ ಸಂಧಿ ಮಾಡಿ ಸುಖಣಲಿ ಬಾಳುವೆ. ಅಲ್ಲಿವರೆಗೆ ಸಂಧಿನ ಮಾತೆತ್ತದೆ. ನೀವು ಅರಮನೆಗೆ ಹೋಗಿಂತ ಹೇಳಿ ದುರ್ಯೋಧನ ಅವರ ಹಿಂದೆ ಕಣಳ್ಸಿತ್.

ಮತ್ತೆ ನಡ್ದ ಮುಖ್ಯಸ್ಥರ ಸಭೆಲಿ ಮುಂದೆನ ಸೇನಾಪತಿಯಾಗಿ ಶಲ್ಯಂಗೆ ಪಟ್ಟ ಕಟ್ಟಿದೊ. ಕೃಷ್ಣ ಯುಧಿಷ್ಠಿರನೊಟ್ಟಿಗೆ ಶಲ್ಯನ ಗೆಲ್ಲಿಕೆ ಬೇರೆವರ್ಂದ ಆಕಿಲೆ. ಅವನೊಟ್ಟಿಗೆ ನಾಳೆ ನೀನೇ ಯುದ್ಧ ಮಾಡ್ಂತ ಹೇಳ್ತ್.

ಎರ್ಡ್ ಕಡೆಂದೊಳೂ ಸೇರಿ ಹದ್ನೆಂಟ್ ಅಕ್ಷೋಹಿಣಿ ಸೈನ್ಯ ಇದ್ದಣದ್ರ್ಲಿ ಈಗ ಒಳ್ದೊದ್ ಬರೇ ಒಂದಕ್ಷೋಹಿಣಿ ಮತ್ತೊಂದಿಷ್ಟ್. ಹದ್ನೆಂಟನೇ ದಿನದ ಯುದ್ಧ ಸುರಾತ್. ಕೌರವರ ಪೈಕಿ ಶಲ್ಯನೇ ದೊಡ್ಡ ವೀರ. ಹಾಂಗೆ ಅಂವ ಭಯಂಕರ ಯುದ್ಧ ಮಾಡ್ತ್. ಪಾಂಡವ ಪಕ್ಷಣಲಿದ್ದ ಅತಿರಥ, ಮಹಾರಥರೆಲ್ಲ ಹೇಳ ಹೆಸರಿಲ್ಲದಾಂಗೆ ಮಾಡ್ತ್. ನಕುಲ ಸಹದೇವರ್ ಬಂದ್ ಎದ್ರ್ಲಿದೊ. ಅವರ ಹುಲ್ಲುನ ಸೂಡಿಗಳ ಹರ್ಕಿ ಇಟ್ಟಾಂಗೆ

ಇಟ್ಟೇತ್. ಭೀಮ ಬಂದ್ ಹೋರಾಡ್ತ್. ಅಂವ ಮೂರ್ಚ್ಛೆತೊಪ್ಪಿ ನೆಲಕ್ಕೆ ಬೀಳುವಾಂಗೆ ಮಾಡ್ತ್. ಆದರೆ ಕೊಲ್ಲಿಕೆ ಮನ್ಸ್ ಬಾರದೆ ಬುಟ್ಟೇತ್. ಅಷ್ಟರ್ಲಿ ಯುಧಿಷ್ಠಿರ ಬಂದ್ ಹೋರಾಡ್ತ್. ಬಾಣ ಬುಟ್ಟ್ ಶಲ್ಯಂಗೆ ತುಂಬ ಬೇನೆ ಮಾಡ್ತ್. ಶಲ್ಯ ಅವನ ಬಿಲ್ಲ್‌ನ ತುಂಡು ಮಾಡ್ತ್, ಸಾರಥಿನ ಕೊಂದಇತ್. ಯುಧಿಷ್ಠಿರ ಕತ್ತಿ ಹಿಡ್ಕಂಡ್ ನೆಲ್ಕಕಿಳ್ದ್ ಬಾತ್. ಶಲ್ಯನೂ ಇಳ್ದ್ ಬಂದ್ ಅವನ ಮರ್ಮಕೆ ತಾಂಗುವಾಂಗೆ ಬಲವಾದ ಪೆಟ್ಟ್ ಕೊಟ್ಟೇತ್. ಯುಧಿಷ್ಠಿರ ಸ್ಮೃತಿ ತೊಪ್ಪಿ ನೆಲಕ್ಕೆ ಬೀತ್. ಆಗ ಶಲ್ಯ ಇವಂಗೆ ನಾ ತುಂಬ ಅವಮಾನ ಮಾಡಿರೆ ಅಂವ ಕೋಪಇಲಿ ಕಣ್ಣ್ ಬುಟ್ಟ್ ನೋಡಿರೆ ಅದರ್‌ಂದ ಬಾವ ಕಿಚ್ಚಿನ ಜ್ವಾಲೆ ನನ್ನ ಬೂದಿ ಮಾಡ್ತುಂತೇಳಿ ಬಿದ್ದವನ ಎದೆಗೆ ಒದ್ದಇತ್. ಆಗ ಯುಧಿಷ್ಠಿರ ಕಣ್ಣ್ ಬುಟ್ಟ್ ಕೋಪಇಲಿ ಶಲ್ಯನ ನೋಡ್ತ್. ಅವನ ಕಣ್ಣ್‌ಂದೆದ್ದ ಕಿಚ್ಚಿನ ಜ್ವಾಲೆಲಿ ಶಲ್ಯ ಸುಟ್ಟ್ ಬೂದಿ ಆತ್.

ಹೆಚ್ಚ್ ಕಇಮ್ಮ ಇತ್ತಂಡದ ಸೈನ್ಯಗ ಎಲ್ಲೊವೂ ನಿರ್ನಾಮ ಆದೊ. ಸಇರಿಯಾಗಿ ಒಳ್ದ ವೈರಿಪಕ್ಷದಂವ ದುರ್ಯೋಧನ ಒಬ್ಬನೇ ಇನ್ನೂ ಅವನ ಚಲ ಕಇಮ್ಮ ಆತ್‌ಲೆ. ಹಾಂಗೆ ಅಂವ ಗದೆನ ಹೆಗ್‌ಲ್ ಮೇಲೆ ಏರ್ಸಿ ನಾ ಒಬ್ಬನೇ. ಶತ್ರು ಸಂಹಾರಕೆ ಹೋನೆಂತ ಹೋಕನ ಸಂಜಯ ಅವನ ತಡ್ದ್ ದಮ್ಮಯ ಹಾಕಿ, ಏನ್ ಮಾಡಿರೂ ಭೀಷ್ಮರೊಟ್ಟಿಗೆ ಕೇಳಿ, ಅವ್ರು ಹೇಳ್ವಾಂಗೆ ಮಾಡ್‌ಂತ ಅವರ್ಲಲಿಗೆ ಕಇಳ್ಸಿತ್. ದುರ್ಯೋಧನನ ಅವಸ್ಥೆನ ನೋಡಿ ಭೀಷ್ಮರಿಗೆ ತುಂಬ ದುಃಖ ಆತ್. ಸಂಧಿ ಮಾಡೊನೋಂತೇಳಿರೆ ಒಪ್ಪದೆ, ನಾ ಹೊರಾಡುದು ಕಂಡಿತಂತ ಹೇಳ್ತ್. ಹಂಗರೆ ಕೃಪ, ಅಶ್ವತ್ಥಾಮ ಎಲ್ಲ ಬಂದ್ ಸೇರ್‌ಕನ ಮುಟ್ಟಿ, ವೈಶಂಪಾಯನ ಸರೋವರಇಲಿ ಅಡ್‌ಂಗಿ ಕಾಲಹರಣ ಮಾಡ್‌ಂತ ಅಂವಂಗೆ ಜಲಮಂತ್ರೋಪದೇಶನ ಮಾಡಿ ಕಇಳ್ಸಿದೊ. ತಾನ್ ಅಲ್ಲಿರುದು ಯಾರಿಗೇನೂ ಗೊತ್ತಾಕೆ ಆಗಇದ್‌ಂತ ಒಬ್ಬನೇ ಬೇಗ ಹೋಗಿ ಸರೋವರಕೆ ಹೋದ ಹೆಜ್ಜೆ ಗೊತ್ತಾಕೆ ಆಗಇದ್‌ಂತ ಹಿಂದೆ ಹಿಂದೆ ಆಗಿ ನಡ್ಕಂಡ್ ಹೋಗಿ ಸರೋವರಕ್ಕಿಳ್ದ್. ಕೈ ಕಾಲ್ ಮೋರೆ ತೊಳ್ದ್ ಆಚಮನ ಕ್ರಿಯೆನ ಮಾಡಿ ಜಲಮಂತ್ರಗಳ ಜಪ್‌ಸಿ ತುಂಬ ಹೊಂಡ ಇರುವ ಕಡೆ ಇಳ್ದ್ ಮುಳ್ಗಿ ಕುದ್ದಇತ್.

ದುರ್ಯೋಧನ ಕಾಂಬೊದುಇಂತೇಳಿ ಪಾಂಡವ ಶಿಬಿರಇಲಿ ಆತಂಕ ಸುರಾತ್. ಇಂದ್ ಸೂರ್ಯ ಕಇಂತಿಕೆ ಮುಂದೆ ಅವನ ಕೊಲ್ಲದಿದ್ದರೆ ಮತ್ತೆ ಅವನ ಗೆಲ್ಲಿಕೆ ಬೊತ್ತ್‌ಂತ ಕೃಷ್ಣ ಹೇಳ್ತ್. ಅಷ್ಟಾಕನ ಭೀಮನ ಸೇವಕಇರ್ ಬೇಟೆಗೆ ಹೋದೊವು ಮಧ್ಯಾನ್ನ ನೀರ್ ಕುಡಿಯಕೆಂತ ವೈಶಂಪಾಯನ ಕೊಳಕ್ಕೆ ಹೋದೊವ್ಕೆ ರಾಜ ಲಕ್ಷಣ ಇರುವ ಪಜ್ಜೆ ಗುರ್ತುಗ ಕೊಳಂದ ಹೊರ್ತ್ ಹೋದಾಂಗೆ ಕಂಡವೆಂತ ಹೇಳ್ದೊ. ಕೃಷ್ಣ ದುರ್ಯೋಧನ ಆ ಕೊಳಇಲಿ ಭೀಷ್ಮನ ಉಪದೇಸಂದ ಅಡ್‌ಂಗಿರ್ದು. ನಾವೀಗಇಳೇ ಅಲ್ಲಿಗೆ ಹೋಯಿಂತೇಳಿ ಎಲ್ಲೊವೂ ಅಲ್ಲಿಗೆ ಬಂದ್ ಸೇರ್ದೊ. ಭೇರಿ, ನಗಾರಿಗಳ ಬಾರ್ಸಿದೊ. ಅದರ ಸದ್ದಿಗೆ ಆ ಸರೋವರದ ಎದೆ ಹಾರ್‍ವಾಂಗೆ ಅಲ್ಲಿದ್ದ ಹಕ್ಕಿಗ ಎಲ್ಲ ಭರ್ರನೆ ಹಾರ್ದೊ. ಯುಧಿಷ್ಠಿರ, ಅರ್ಜುನ ನಕುಲ, ಸಹದೇವ ಎಲ್ಲ ಅವನ ಹೀನೈಸಿ ಮಾತಾಡ್ದೊ. ಕಡೆಗೆ ಭೀಮ ಗರ್ಜನೆ ಮಾಡಿಕೆ ಸುರು ಮಾಡ್ತ್. ಅಂವ ಮಾಡ್ದ ಅನ್ಯಾಯಗಳ ಎಲ್ಲ ಬಂದಾಂವಾಗ

ಹೇಳಿ ನೀ ಎಲ್ಲಿ ಅಡ್ಗಿಂಗಿರೂ ಬುಡಿಕಲ್ಲಂತ ಗಟ್ಟಿಯಾಗಿ ಒದಾರ್ತ್. ಭೀಮನ ಮಾತ್ ಏರಿಕಲೆಂಡ್ ಹೋದಾಂಗೆ ದುರ್ಯೋಧನನ ಕೋಪ ಏರಿಕಲೆಂಡೇ ಹೋತು. ಜಲಸ್ತಂಭ ಮಂತ್ರ ಮರ್ತ್ ಹೋತು. ನೀರ್‌ಲಿರ್‌ಕನೇ ಅಂವ ಬೆಗರ್ತ್ನ. ಗದೆನ ಎತ್ತ್ ಕೈಗಳ್ಳಿ ತಲೆಂದ ಮೇಲೆ ನೇಚಿ. ತೋರಣದಾಂಗೆ ಒಡ್ಡಂಡ್. ಭೂಮಿಂದ ಸಿಡಿವ ಜ್ವಾಲಾಮುಖಿನಾಂಗೆ ಸಳಕ್ಕನೆ ಎದ್ದ್ ಬಾತ್. ಹಾಂಗೆ ಬಾವ ರಭಸಕ್ಕೆ, ಅವನ ತಲೆಂದ ಮೇಲೆ ಎದ್ದ್‌ರ್‌ತಿದ್ದ ನೀರ್‌ನ ಮುಗುಳಿಗ ಅವನ ಕಿರೀಟದ ರತ್ನಮೋಣೆಗಳ ಬಣ್ಣಗಳ್‌ಂದಾಗಿ, ಕಾಮನ ಬಿಲ್ಲ್‌ನ ಕಾಂತಿ ಮಿಂಚ್‌ತಿದ್ದೊ. ರಭಸಲಿ ಎದ್ದ್ ತೊಡೆ ಮುಟ್ಟ ನೀರ್‌ಲಿ ನಿತ್ತಾಕನ ಕಲೆಲ್‌ಂಕಿದ ನೀರ್‌ನ ಅಲೆಗ ಅವನ ತೊಡೆಗೆ ಬೊಡಿಯುತಿದ್ದದ್ ಅವನ ಅವಸಾನದ ಮುನ್ಸೂಚನೆ ಕೊಡುವಾಂಗಿತ್ತ್. ಕೋಪಂದ ಕೆಂಡದಂತಾದ ಕಣ್ಣ್‌ಗಳ್‌ಂದ ದಿಕ್ಕು ದಿಕ್ಕುಗಳ ನೋಡಿಕಲೆಂಡ್, ಎಲ್ಲುಟ್ಟು ಭೀಮಂತ ಕಣ್ಣ್ ಕೆಕ್ಕರಿಸಿ ನೋಡ್ತ್. ಆಗ ಭೀಮ ಇಲ್ಲಿ ಎದುರಿಗೇ ಒಳೆ ಅಲ್ಲ? ಏನ್? ನಿನ್ನ ಅಪ್ಪ ಕುರುಡ ಆದ ಹಾಂಗೆ ನೀನೂ ಕುರಡ ಆಗಿ ಬುಟ್ಟೋಂತ ಅಪಹಾಸ್ಯದ ಮಾತಾಡ್ತ್. ಇಷ್ಟ್ ದಾತಾಕನ ತೀರ್ಥಯಾತ್ರೆಗೆ ಹೋಗಿದ್ದ ಬಲರಾಮ ಬಂದೆತ್ತಿತ್. ನಮಸ್ಕಾರ ಮಾಡ್ದ ಪಾಂಡವರಿಗೂ ಕೃಷ್ಣಂಗೂ ಆಶೀರ್ವಾದ ಮಾಡದೆ ದುರ್ಯೋಧನಂಗೆ ಮಾತ್ರ ಆಶೀರ್ವಾದ ಮಾಡ್ತ್.

**ಮಕ್ಕ:**

ತಾತಾ! ಇಷ್ಟ್ ದೊಡ್ಡ ಯುದ್ಧ ನಡಿಯಕನ ಬಲರಾಮ ತೀರ್ಥಯಾತ್ರೆಗೆ ಯಾಕೆ ಹೋತು?

**ತಾತ:**

ಅಂವ ಕೌರವ ಪಕ್ಷಪಾತಿ. ಹಾಂಗೆ ಅವನ ದೂರ ಇಸುದು ಆಗತ್ತ್‌ಂತ ಕೃಷ್ಣ ಒಂದು ಉಪಾಯ ಮಾಡ್ತ್. ಒಂದು ಮುದಿ ಕಪಿಲೆ ಹಸು ಬಲರಾಮನ ದಾರಿಗೆ ಅಡ್ಡ ನಿಲ್ಲುವಾಂಗೆ ಕೃಷ್ಣ ಒಂದು ಮಾಯಾ ಸೃಷ್ಟಿ ಮಾಡ್ತ್. ದಾರಿ ಬುಡುಂತೇಳಿ ಬಲರಾಮ ಅದರ ಹಲ್ಲ ದೂಡ್‌ಕನ ಅದ್ ಬಿದ್ದ್ ಸತ್ತ್ ಹೋತು. ಗೋಹತ್ಯಾ ದೋಷ ಪರಿಹಾರಕ್ಕೆ ತೀರ್ಥ ಯಾತ್ರೆ ಮಾಡೂಕುಂತೇಳಿ ಅಂವ ಹೋತು. ಬಲರಾಮ ಕೃಷ್ಣನ ನೋಡಿ ಇದೇನ ಇವನ ಈ ಸ್ಥಿತಿಗೆ ತಂದಂಥ ಕೇಳ್ತ್. ನಾ ಪಾಂಡವರ ಪಾಲ್‌ನ ಅರ್ಧ ರಾಜ್ಯ ಕೊಡುವಾಂಗೆ ಸಂಧಾನಕ್ಕೆ ಹೋದರೆ ನನ್ನ ಮಾತ್‌ನ ತಿರಸ್ಕರಿಸ್ತ್. ಹೋಗಲಿ ಐದ್ ಗ್ರಾಮಗಳಾದ್ ಅವರ ಜೀವನಾಂಶವಾಗಿ ಕೊಡುಂತ ಕೇಳ್‌ಕನ ಸೂಜಿನ ಮೊನೆ ಊರ್ವಷ್ಟ್ ಜಾಗನೂ ಕೊಡಿಕಿಲೆ. ಸಾಮರ್ಥ್ಯ ಇದ್ದರೆ ಯುದ್ಧ ಮಾಡಿತಕಣಲೆಂತ ಹಟ ಮಾಡ್ತ್. ಬೇಕರೆ ಅವನ್ನೇ ಕೇಳ್. ಅಂವ ಸುಳ್ಳು ಹೇಳಿಕಲೇಂತ ಕೃಷ್ಣ ಸುಮ್ಮನಾತ್. ದುರ್ಯೋಧನ ನಿಜ! ಇದರ್ಲಿ ಪಾಂಡವರ ತಪ್ಪಿಲ್ಲೆ. ಯುದ್ಧಕ್ಕೆ ನಾನೇ ಹಟಹಿಡ್ದದ್. ನನ್ನ ದುರದೃಷ್ಟ! ಹೀಂಗಾತ್. ಈಗಲೂ ಅಷ್ಟೆ. ನನ್ನ ಹಗ ತೀರ್ಸಿಕೆ ನಾ ಹೋರಾಡಿನೆ. ಅವರ್ಲಿ ಒಬ್ಬನೋ, ಅಥವಾ ಎಲ್ಲ ಐದ್ ಜೆನ ಒಟ್ಟಾಗಿ ಬೇಕರೂ ಬರ್ಲಿ. ನಾ ಹೋರಾಡಿನೆಂತ ಹೇಳ್ತ್. ಇವನ ಶೌರ್ಯನೂ, ಛಲನೂ ನೋಡಿ ಬಲರಾಮಂಗೆ ಆಶ್ಚರ್ಯ ಆತ್. ಅಂವ ಹೇಳ್ತ್: ಪಾಂಡವರ ಪೈಕಿ ಒಬ್ಬ ಇವನೊಟ್ಟಿಗೆ ಧರ್ಮ ಯುದ್ಧ ಮಾಡೊಕು. ಅಂವ ಸೋತ್

ಸತ್ತ ಮೇಲೆ ಒಳ್ಳ ನಾಲ್ಕ್ ಜೆನ ಇವನ ಆಳ್ವಿಕೆಲಿ ಇವಂಗೆ ಆಳ್‌ಗ ಆಗಿ ಇರೊಕು. ಯಾರ್ ಇವನೊಟ್ಟಿಗೆ ಹೋರಾಡಿಕೆ ಬಂದರೇಂತ ಬಲರಾಮ. ಕೇಳ್ತ್ರಕೆ ಭೀಮ ಹೇಳ್ತ್. ನಂಗೂ ದುರ್ಯೋಧನನಂಗೂ ಸಣ್ಣದಲೀರ್‌ಂದಲೇ ತೀರದ ಹಗೆ. ಹಾಂಗೆ ನನ್ನ ಅವನೊಟ್ಟಿಗೆ ಕಳಕ್ಕೆ ಬುಡೀಂತ ಹೇಳ್ತ್. ಅದಿಕ್ಕೆ ಬಲರಾಮ ಒಪ್ಪಿತ್. ಇಬ್ಬರೂ ಅವರವರ ಗದೆಗಳ ಹಿಡ್ಕಂಡ್ ಕಳಕ್ಕಿಳ್ದೊ. ಧರ್ಮ ಯುದ್ಧ ಮಾಡೊಕು. ಯಾರೂ ತೊಪ್ಪು ಯುದ್ಧ ಮಾಡಿಕೆ ಆಗಲೀದ್‌ಂತ ಎಚ್ಚರಿಕೆ ಕೊಟ್ಟ್ ಅಪ್ಪಣೆ ಕೊಟ್ಟತ್– ಬಲರಾಮ. ಇಬ್ರೊರೂ ಮೊಣ್ಣ್‌ಲಿ ಕೈನ ಉದ್ದಿಕಲೀಂಡ್ ಯುದ್ಧ ಸುರುಮಾಡ್ದೊ. ಇದ್ ವಿಷ ಬೆರ್ಸ್ಲಿದ ಅನ್ನ ತಿನ್ಸಿದಕೆ. ಇದ್ ಅರ್‌ಕನ ಮನೆಗೆ ಕಿಚ್ಚಿ ಕೊಟ್ಟ್ ಕೊಲ್ಲಿಕೆ ನೋಡ್ದಕೆ. ಇದ್ ಕಪಟ ಜೂಜಿಗೆ, ಇದ್ ದ್ರೌಪದಿಗೆ ಅವಮಾನ ಮಾಡ್‌ದ್ದೈಕೆಂತ ಹಂಗ್‌ಸಿಕಂಡ್ ಒಂದೊಂದು ಪೆಟ್ಟ್ ಭೀಮ ಹೊಡ್ತ್. ಅದಿಕೆ ಪ್ರತಿಯಾಗಿ ಕೌರವನೂ. ಇದ್ ಭೀಷ್ಮರ ಮೋಸಲೀಲಿ ಬೀಳ್ಸಿದಕೆ. ಇದ್ ಸುಳ್ಳ್ ಹೇಳಿ ಗುರುಗಳ ಕೊಂದಲೀದಿಕೆ. ಇದ್ ದುಶ್ಯಾಸನ ನೆತ್ತ್‌ರ್‌ನ ಕುಡ್ದ ರಾಕ್ಷಸೀ ಕೃತ್ಯಕ್ಕೆ; ಇದ್ ನನ್ನ ಪ್ರಿಯಮಿತ್ರ ಕರ್ಣನ ಕೊಂದಲೀದಿಕೆಂತ–ಹೊಡ್ತ್. ಗದೆಗೆ ಗದೆನ ಪೆಟ್ಟ್ ತಾಂಗ್‌ಕನ ಡಣಲ್, ಡಣಾಲ್‌ಂತ ಸದ್ದಾಗಿ ಸುತ್ತ ಮುತ್ತ ಕಿಡಿ ಹಾರ್‌ತಿದ್ದೊ. ಹೀಂಗೆ ಸುಮಾರ್ ಹೋರಾಡಿ, ದುರ್ಯೋಧನ ವಿದ್ಯಾಧರ ಕರಣ ಅಂದರೆ ಆಕಾಶಕ್ಕೆ ಹಾರುವ ವಿದ್ಯೆಂದ ಮೇಲೆ ಹಾರಿ ಕೆಳೆಗೆ ಇಳಿಯಕನ ಸರಿಯಾದ ಎಡೆನೋಡಿ ಭೀಮನ ತಲೆಗೆ ಒಂದು ಹೊಡ್ತ ಹಾಕ್‌ಕನ ಭೀಮಂಗೆ ಏನ್‌ಂತ ಗೊತ್ತಾಗದೆ ಮೂರ್ಛೆ ತೊಪ್ಪಿ ಧಡ್ಡಂತ ನೆಲಕೆ ಬೀತ್. ಬಿದ್ದವಂಗ ಹೊಡಿಯಕಿಲ್ಲಂತ ದರ್ಪಲೀಲಿ ಧುರ್ಯೋದನ ಗದೆನ ಬೀಸಿಕಲೀಂಡೇ ನಿತ್ತಲೀತ್. ಪಾಂಡವಲೀರ್ ಮೋರೆ ಕೆಳೆಗೆ ಹಾಕಿದೊ. ಅರ್ಜುನ ಗಾಂಡೀವನ ನೇವರ್ಸಿತ್. ಯಮಳಲೀರ್ ಅವರ ಕತ್ತಿಗಳ ಹಿಡಿಗೆ ಕೈ ಹಾಕಿದೊ. ಯುಧಿಷ್ಠಿರ ಸತ್ಯಕ್ಕೆ ಬಂಗ ಬಾತಲೇಂತ ಎತೆ ಮಾಡ್ತ್. ಕೌರವ ರಭಸಂದ ಗದೆನ ಬೀಸ್‌ಕನ ಬಂದಗಾಳಿ ಭೀಮ ಎಚ್ಚರ ತಿಳಿವಾಂಗೆ ಮಾಡಿ ಅಂವ ಕಣ್ಣ್ ಬುಟ್ಟಲೀತ್. ಇದರ ನೋಡ್ದ ಕೃಷ್ಣ ಸಂತೋಸು ಆದವರಾಂಗೆ ತನ್ನ ತೊಡೆಗೆ ಜೋರಾಗಿ ಕೈ ತಟ್ಟಿಕಲೀಂಡ್ ನಗಾಡ್ತ್. ಇದರ ನೋಡ್ದ ಭೀಮಂಗ ಗುಟ್ಟ್ ಗೊತ್ತಾತ್. ನಲಕ್ಕೆ ಕೈ ಉದ್ದಿ ಜಾರಿ ಪಕ್ಕಕ್ಕೆ ಬಿದ್ದಿದ್ದ ಗದೆನ ಹಿಡ್ಕಂಡ್ ಎದ್ದ್ ನಿತ್ತಲೀತ್. ಇನ್ನೊಮ್ಮೆ ಕೌರವ ಮುಂದೆನಾಂಗೆ ಮೇಲೆ ಹಾರುದರ ಕಾದ್‌ಕಲೀಂಡ್, ಎಡೆನೋಡಿ ಕೌರವನ ತೊಡೆಗೆ ಬಲವಾಗಿ ಹೊಡ್ತ್ ಎರ್ಡ್ ತೊಡೆಗಲೀಳೂ ಮುರ್ದ್ ದುರ್ಯೋಧನ ಪರ್ವತ ಬಿದ್ದಾಂಗೆ ಬೀತ್. ತಾನ್ ಪ್ರತಿಜ್ಞೆ ಮಾಡಿದ್ದಾಂಗೆ, ಅವನ ಕಿರೀಟನ ಒದಿಯಕೆ ಬಲರಾಮ ಬೇಡಂತೇಳಿರೂ, ಎಡ್ದಕಾಲ್‌ಂದ ಕಿರೀಟನ ಒದ್ದಲೀತ್. ಅದರ್ಲಿದ್ದ ರತ್ನ ಮೊಣಿಗೆಲ್ಲ ನಾನಾ ದಿಕ್ಕ್‌ಗಳಿಗೆ ಹಾರ್ದೊ.

# ಯುದ್ಧ ಸಮಾಪ್ತಿಯ ನಂತರದ ವಿಕಿರಣ ಶೇಷಗಳು

ದುರ್ಯೋಧನ ತೊಡೆ ಮುರ್ದ್ ಬಿದ್ದ ಮೇಲೆ ತನ್ನ ಗಾಯಕ್ಕಾಗಿ ಅಷ್ಟು ವೇದನೆ ಪಟ್ಟಿತ್‌ಲೆ. ಆದರೆ ವೈರಿ ಮಾಡ್ದ ಮಾನ ಹಾನಿಗಾಗಿ ಮರುಗುತ್ತ ನರಳ್‌ತ್ತಿತ್ತ್. ಆ ಸಮಯಟಲಿ ಕುರುಕ್ಷೇತ್ರದ ಇನ್ನೊಂದು ಮೂಲೆಲಿ ಅಶ್ವತ್ಥಾಮ, ಕೃಪ, ಕೃತವರ್ಮ, ದುರ್ಯೋಧನನ ಕಾಣದೆ ಅಂವನ ಹುಡ್ಕ್ಯಂಡ್, ಪೇಚಾಡಿಕಟೆಂಡ್ ಇದ್ದೊ. ಸಂಜಯ ಸಿಕ್ಕಿ ಅವಂದ ವಿಷಯ ತಿಳ್ದ್ ವೈಶಂಪಾಯನ ಸರೋವರದ ಕಡೆಗೆ ಹೊರ್‍ಟೊ. ಅಗ ದಾರಿಲಿ ಮಸುಕಾದ ಸೀರೆ ಉಟ್ಟ್‌ಕಟೆಂಡ್ ಬಾಡ್‌ದ ಮೋರೆಂದ ಕೂಡ್ದ ಹೆಂಗ್‌ಸ್‌ನ ನೋಡಿ 'ನೀ ಯಾರ್?'ಂತ ಅಶ್ವತ್ಥಾಮ ಕೇಳ್ತ್. ಅದಿಕೆ 'ನಾ ರಾಜ್ಯಲಕ್ಷ್ಮಿ, ಇಷ್ಟರವರೆಗೆ ಕೌರವೇಂದ್ರನ ಹೃದಯವಾಸಿ ಯಾಗಿದ್ದೆ. ಈಗ ಪುರುಷೋತ್ತಮನ ಅಪ್ಪಣೆ ಪ್ರಕಾರ ಪಾಂಡವರ ಸೇರಿಕೆ ಹೋನೆ'. ಇಷ್ಟ್ ಅದ್ ಹೇಳ್‌ಕನ ಅಶ್ವತ್ಥಾಮ ಕೋಪಟಲಿ, 'ನಾ ಇರ್‌ಕನ ನಿಂಗೆ ಅಪ್ಪಣೆ ಮಾಡಿಕೆ ಆ ಪುರುಷೋತ್ತಮ ಯಾರ್?' ಹೀಂಗೆ ಹೇಳಿ ಅದರ ತಲೆಕೂದ್‌ಲ್‌ಲಿ ಹಿಡ್ಕಂಡ್. ಬಾನಮ್ಮೊಟ್ಟಿಗೆಂತ ಹೇಳಿ ಅದರ ಎಳ್ಕಂಡ್, ದುರ್ಯೋದನ ಬಿದ್ದಟಲ್ಲಿಗೆ ಬಾತ್. 'ನೀ ನಮ್ಮ ರಾಜರಾಜಂಗೆ ಕೊಡೆ ಹಿಡ್ಕಟೆಂಡ್ ನೆಳಟಲ್ ಕೊಡೊಕು. ಚಾಮರ ಬೀಸಿ ಗಾಳಿ ಹಾಕೊಕು'ಂತ ಕಟ್ಟಳೆ ಮಾಡ್ತ್. ಆಗ ಕಣ್ಣ್ ಬುಟ್ಟ ದುರ್ಯೋಧನನ ನೋಡಿ, ಅತ್ತ್‌ಕಟೆಂಡ್, 'ಅಯ್ಯೋ ಕುರುಸಾಮ್ರಾಟ! ನಿಂಗೆ ಈ ಗೆತಿ ಆತೋ! ನೀ ಏಕೆ ನಮ್ಮ ತೊಪ್ಪ್‌ಸಿ ಬಂದ್ ವೈರಿಗಳ ಕೈಗೆ ಸಿಕ್ಕಿಕಂಡ? ಅಯ್ಯೋ ವಿಧಿಯೇ ನಾವ್ಗ ಇನ್ನ್ ಗೆತಿ ಯಾರ್?ಂತ ಹೇಳಿಕಟೆಂಡ್ ಸುಮಾರ್ ಅತ್ತಟತ್. ದುರ್ಯೋಧನ ಅವನ ಸಮಾಧಾನ ಮಾಡ್ತ್. ಈಗ ಹೊತ್ತು ಹಿಂಬೊತ್ತ್ ಆಕಟೆಂಡ್ ಬಾತ್. ಹಜ್ಜ ಹೊತ್ತಿಗೆ ಮುಂದೆ ಕೃಷ್ಣ ಸೈನ್ಯಲಿ ಒಳ್ದವರೆಲ್ಲ ನೀವು ಶಿಬಿರಕ್ಕೆ ಹೋಗಿ ವಿಶ್ರಾಂತಿ ತಕಟಣಿ. ನಾನೂ ಐದ್‌ಜೆನ ಪಾಂಡವಟರೂ ನೀಲಗಿರಿಗೆ ಹೋಗಿ ಯುದ್ಧ ಪರಿಶ್ರಮನ ಕಟಳ್ದ್ ನಾಳೆ ಬೊಳಿಗೆ ಬಂದವೆಂತ ಹೇಳಿ ಅವರ ಕರ್ಕಟೆಂಡ್ ಹೋಗಿತ್ತ್. ಒಳ್ದಟವು ಎಲ್ಲ ಅವರ ಶಿಬಿರಕ್ಕೆ ಹೋಗಿದ್ದೊ.

ಅಳ್‌ತಿದ್ದ ಅಶ್ವತ್ಥಾಮ ಕೋಪೋದ್ರೇಕಕ್ಕೆ ಜಾರ್ತ್. ಹಿಂದೆನ ಘಟನೆಗಳ ಎಲ್ಲ ನೆನ್ಸಿ ನೋಡ್ತ್. ಆಗ ತಾನ್ ಏನ್ ಮಾಡಿರೂ ದುರ್ಯೋಧನ ಮೆಚ್ಚ್‌ಸಿದ್ದಟದ್ ಕರ್ಣನ್ನೇ. ಈ ಕಡೇ ಸಟರ್ತಿಲಾರ್, ಅರ್ರು ಮೆಚ್ಚುವಂತ ಕಾರ್ಯನ ಮಾಡಿ ಬುಟ್ಟನೆಂತ ನೆನ್ಸಿತ್. 'ಮಹಾರಾಜ! ನಿನ್ನ ಆಸೆನ ನಾ ಪೂರೈಸಿನೆ. ನಿನ್ನವರೆಲ್ಲ ಕೊಂದ ಪಾಂಡವರ ಸಮೇತ ಅವರೊಟ್ಟಿಗೆ ಒಳ್ದ ಶೇಷ. ಸೈನ್ಯನೂ ಇಂದ್‌ನ ಇರ್‍ಳ್ ಬೊಳ್ಪಾವರೊಳಗೆ ನಿಶ್ಶೇಷವಾಗುವ ಹಾಂಗೆ ಮಾಡಿ, ಆ ಐದ್ ಜೆನ ಪಾಂಡವರ ತಲೆಗಳ್ನೂ ತಂದ್ ನಿಂಗೆ ತೋರ್ಸಿನೆ'ಂತ ಹೇಳ್ತ್. ಅದಿಕೆ ದುರ್ಯೋಧನ, ಆ ತಂತ್ರಗಾರ ಕೃಷ್ಣ ಅವರ ಪಕ್ಕಟಲಿ ಇರುವಷ್ಟ್ ಕಾಲ ನಿಂಗೆ ಕಾರ್ಯಸಿದ್ಧಿ ಆದೋಂತ ನಂಗೆ ಸೊಂಸಯ! ಆದರೂ, ನಿನ್ನಂದ ಆ ಕಾರ್ಯ ತೀರ್ದಂತಾದರೆ ಯಾಕೆ ಆಗಟದ್? ಹಾಂಗೇ ಆಗಟಲಿ. ನನ್ನ ಉಸುರು ಹೋಕೆ ಮುಂದೆ ಆ ಸಂತೃಪ್ತಿ ನಂಗೆ ಸಿಕ್ಕಿದಂತಾದರೆ ಸಿಕ್ಕಟಲಿ ಹೋಗು ಹಾಂಗೆ ಮಾಡ್‌ಂತ ಹೇಳ್ತ್.

ಅಶ್ವತ್ಥಾಮ, ಕೃಪಾಚಾರ್ಯರ್, ಮತ್ತೆ ಕೃತವರ್ಮರ ಕೂಡಿಕಣ್‌ಡ್ ಅಲ್ಲಿಂದ ಹೊರ್ಟತ್. ದಾರಿಲಿ ಒಂದು ದೊಡ್ಡ ಮರದಡಿಲಿ ಒಳ್ಳ ಕತ್ತಲೆ ಆಕನ ಮುಟ್ಟ ಕಾಯನೋಂತ ಕುದ್ದೊ. ಆ ಮರದ ತುಂಬ ಹಕ್ಕಿಗ ಕುದ್ದಿದ್ದೊ. ಕತ್ತಲೆ ಆತ್. ಅಪ್ಪಡ್ಲ್ ಎಲ್ಲಿಂದೊಳೋ ಹಾರಿ ಬಂದ ಒಂದು ಗುಮ್ಮ ಆ ಹಕ್ಕಿಗಳ ಎಲ್ಲ ಮೆಟ್ಟಿ ಮೆಟ್ಟಿ ಕೊಕ್ಕುಲಿ ಕೊಡ್ಡಿ ಕೊಡ್ಡಿ ಕೊಂದ್ ಹಾಕಿತ್. ಇದ್ ಅಶ್ವತ್ಥಾಮಂಗೆ ಸಂಕೇತದಾಂಗೆ ಕಂಡತ್. ಯಾರಿಗೂ ಗೊತ್ತಾಗದ ಹಾಂಗೆ ಮೂರು ಜನನೂ ಪಾಂಡವಟರ ಶಿಬಿರದಕ್ಕಲ ಹೋದೊ. ಅಶ್ವತ್ಥಾಮ ಖಡ್ಗ ಒಡ್ಡಕಣ್‌ಡ್ ಮುಂದೆ ಹೋತು. ಹಿಂದೆ ಇದ್ದವರ ನಾ ಒಳೆಗೆ ಹೋದ ಮೇಲೆ ಬಾಗ್‌ಲ್‌ಲಿ ನಿತ್ತ್‌ಕಣ್‌ಡ್, ಯಾರಾರ್ ಇತ್ತ ಬಂದರೆ ಅವರ ಕಡ್ಡ್ ಕೊಲ್ಲಿಂತ ಹೇಳ್ತ್. ಅವಂಗೆ ಎದ್‌ರ್ ಸಿಕ್ಕಿದ ಬಾಗ್ಲ್ ಕಾಯವರ ತಲೆನ ತುಂಡು ಮಾಡಿ, ಒಳೆಗೆ ಹೋತು. ಎಲ್ಲೊವು ಇತ್ತನ ಗೋಚರ ಇಲ್ಲದೆ ನಿದ್ದೆ ಮಾಡಿಕಣ್‌ಡ್ ಇದ್ದೊ. ಇಂವ ಒಬ್ಬೊಬ್ಬರ್ನ ಕೊಚ್ಚಿ ಹಾಕಿತ್. ಅದೇಕೊ ಧೃಷ್ಟದ್ಯುಮ್ನ ಆಚೀಚೆ ಹೊಣ್ಕಿತ್. ಇಂವ ಅಂವನ ಹಕ್ಕಲೆ ಹಾರಿ ನನ್ನ ಅಪ್ಪನ ಗಂಟ್ಲ್‌ನ ಕಡ್ಡ ನೀಚ ನೀ ಅಲ್ಲೋಂತ ಹೇಳಿಕಣ್‌ಡ್ ಅವನ ಗಂಟ್ಲಿಗೆ ಮೆಟ್ಟಿ ಉಸುರು ಕಟ್ಟ್‌ಸಿ ಕೊಂದತ್. ಪಾಂಡವಟರ್ ಎಲ್ಲಿ ಒಳೊಂತ ನೋಡ್‌ಕನ ಅಗಲವಾದ ಒಂದು ಮಂಚಲಿ ಐದ್ ಜೆನ ರತ್ನಾಭರಣ ಭೂಷಿತರ್ ಮಲ್ಗಿದ್ದದ್ ದೀಪದ ಮಂದ ಬೊಳ್ಪುಲಿ ಕಂಡತ್. ಇಂವ ಆತುರಲಿ ಹೋಗಿ ಅವರೆಲ್ಲರ ತಲೆ ಕಡ್ಡ್ ತಲೆಜುಟ್ಟುಲಿ ಆ ತಲೆಗಳ ನೇಲ್‌ಸಿಕಣ್‌ಡ್ ಕೃತ ಕೃತ್ಯನಾದೆಂತ ಸಂತೃಪ್ತಿಲಿ ಹೊರೆಗೆ ಬಂದ್, ತನ್ನ ಜೊತೆಗಾರರ ಬನ್ನಿ ಪೋಯಿಂತ ಕರ್ದ್ ಅವಸರ ಅವಸರವಾಗಿ ದುರ್ಯೋಧನ ಬಿದ್ದಲ್ಲಿಗೆ ಹೊಟರ್ತ್. ಈಗ ಬೊಳ್ಪಾಗಿತ್ತ್. ರಕ್ತವರ್ಣದ ಸೂರ್ಯನ ಬೊಳ್ಪು ತಳ ತಳ ಹೊಳಿಯಕನ ನೆತ್ತರ್ ಅರ್ಕಣ್‌ಡ್ ಇರುವ ತಲೆಗಳ ದುರ್ಯೋಧನನ ಎದ್‌ರಿಗಿಸಿ. "ತಕ ನೀ ಬಯಿಸಿದ ಪಾಂಡವರ ತಲೆಗಳ!"ಂತ ಹೆಮ್ಮಲಿ ಹೇಳ್ತ್.

ದುರ್ಯೋಧನ ಮೆಲ್ಲ ಕಣ್ಣ್ ಬುಟ್ಟ್‌ನೋಡ್ತ್. ಆ ತಲೆಗಳ್ನ ನಿಟ್ಟ್‌ಸಿ ನೋಡ್ತ್. ಮತ್ತೆ ಸಂಕಟದ ದನಿಲಿ ಹೇಳ್ತ್ : "ಗುರುಪುತ್ರ! ಇವು ಪಾಂಡವರ ತಲೆಗ ಅಲ್ಲ. ಉಪ ಪಾಂಡವರ ಅಂದರೆ ಪಾಂಡವರ ಮಕ್ಕಳ ತಲೆಗ! ನೀ ಅವಸರಲಿ ತೊಪ್ಪು ಮಾಡ್ಡ. ನಿಂಗೆ ಬಾಲಹತ್ಯಾ ದೋಷ ಬಾತ್. ಇದರ ನೀ ತಪಸ್ಸ್ ಮಾಡಿಯೇ ಕಳ್ಕಣೊಕು. ಹಾಂಗೆ ಹಿಮಾಲಯಕ್ಕೆ ಹೋಗು. ನನ್ನ ಜೀವನೂ ಇನ್ನ್ ಬೇಗ ಹೊರ್ಟದೆ. ನಂಗಾಗಿ ನೀ ಮಾಡ್ದ ಎಲ್ಲ ಪ್ರಯತ್ನಕ್ಕೂ ನಿಂಗೆ ಧನ್ಯವಾದ ಮತ್ತೆ ನನ್ನ ಕಡೇ ನಮಸ್ಕಾ.......!" ಇಷ್ಟ್ ಹೇಳಿ ಮುಗ್ಸಿಕೆ ಮುಂದೆ ಅವನ ಜೀವ ಹೋತು. ಅಶ್ವತ್ಥಾಮನೂ ಅವನ ಕೂಟಾಳಿಗಳೂ ತುಂಬ ಗೋಳಾಡ್ದೊ. ಅಪ್ಪಡ್ಲ್ ಅಲ್ಲಿಗೆ ಶಿಬಿರಲಿ ನಡ್ದ ಅನಾಹುತನ ಕೇಳಿ ಕೃಷ್ಣ ಮತ್ತೆ ಪಾಂಡವಟರ್ ಹಾಂಗೂ ಮಕ್ಕ ಸತ್ತೊಂತ ಗೋಳಾಡಿಕಣ್‌ಡ್ ಬಾವ ದ್ರೌಪದಿನೂ ಕಂಡೊ. ಅಶ್ವತ್ಥಾಮ ಕೃಪ ಮತ್ತೆ ಕೃತವರ್ಮರ ನೀವು ಇಲ್ಲಿಂದ ಬೇಗ

ತೊಪ್ಪ್‌ಸಿಕಣ್ಂಡ್ ಹೋಗಿ ಅಡ್‌ಂಗ್ಯಣೆಂತ' ಹೇಳ್ತ್. ಇಂವ ಅಲ್ಲಿಯೇ ನಿತ್ತಣ್. ಎಲ್ಲವರ್‌ಂದ ಮುಂದೆ ಇದ್ದ ಭೀಮ ಬಂದ್ ಅವನ ಜುಟ್ಟಿಗೆ ಕೈ ಹಾಕಿ ಕಣ್ತಿನ ಬೇರ್‌ಕನ ದ್ರೌಪದಿ, "ಭೀಮ ತಡಿ! ಗುರು ಪುತ್ರನ, ಬ್ರಾಹ್ಮಣನ, ಕೊಂದರೆ ದೋಸ, ಬುಟ್ಟ್ ಬುಡು"ಂತ ಹೇಳ್ತ್. "ನಿದ್ದೆಲಿದ್ದ ಬಾಲಕರ ತಲೆ ತುಂಡರ್ಸ್‌ಕನ ಈ ಹಾರಂವಂಗೆ ಅದ್ ದೋಸಂತ ಕಂಡಣ್‌ಲೆ ಈ ನೀಚಂಗೆ? ಅಂಥ ಪಾಪಕಾರ್ಯನ ಮಾಡ್ದ ಇಂವ ಬ್ರಾಹ್ಮಣ ಹೇಂಗಾದು? ಇಂವಂಗೆ ಶಿಕ್ಷೆ ಆಗಿಯೇ ತೀರೊಕು." ಈಗ ಕೃಷ್ಣ ಮಾತಾಡ್ತ್. "ಇಂವನ ನೀ ಕೋಪಲಿ ಕೊಂದರೆ ಅಂವಂಗೆ ಅವನ ಪಾಪದ ಅರಿವೇ ಇಲ್ಲದಾದೆ. ಅವನ ತೊಪ್ಪು ಅವಂಗೆ ನಿತ್ಯವೂ ಅನುಭವಕ್ಕೆ ಬರುವಾಂಗೆ ಆಕು. ಅದಿಕೆ ನೋಡು, ಅಂವನ ತಲೆಲಿ ಒಂದು ರತ್ನ ಉಟ್ಟು. ಅದರ ನಿನ್ನ ಖಡ್ಗದ ಮೊನೆಂದ ಮೀಟಿ ತೆಗಿ. ಅದರ ಯುಧಿಷ್ಠಿರ ಅವನ ರಾಜ ಕಿರೀಟಣಲಿ ಧರಿಸಣಲಿ–ವಿಜಯದ ಕುರುಹಾಗಿ. ಅಶ್ವತ್ಥಾಮ ಗುಣ ಆಗದ ಆ ಗಾಯದ ಬೇನೆನ ಅನುಭವಿಸಿಕಣ್ಂಡ್ ಚಿರಾಯುವಾದ ಅಂವ ಸದಾ ನಿಲ್ಲಿಕೆ ನೆಲೆಯಿಲ್ಲದೆ ತಿರ್ಗಾಡಿಕಣ್ಂಡ್ ಇರ್ಲಿ"ಂತ ಹೇಳ್ದಾಂಗೆ ಭೀಮ ಅವನ ತಲೆನ ರತ್ನನ ಎಳ್ಕ್‌ಸಿ ಯುಧಿಷ್ಠಿರಂಗೆ ಒಪ್ಪುಸಿ ಬುಟ್ಟಣ್. ಅಶ್ವತ್ಥಾಮ ನಾಚಿಕಣ್ಂಡ್ ಅಲ್ಲಿಂದ ಹೊರ್ಟ್ ಹೋತು.

ಇನ್ನ್ ಧೃತರಾಷ್ಟ್ರ ಗಾಂಧಾರಿಯರ ನೋಡಿಕೆಂತೇಳಿ ಅವಿದ್ದಲ್ಲಿಗೆ ಪೋಯಿಂತ ಹೊರ್ಟ್ರೊ. ಯುಧಿಷ್ಠಿರಂಗೆ ಗಾಂಧಾರಿನ ನೋಡಿಕೆ ಧೈರ್ಯ ಇಲ್ಲದೆ ಕೃಷ್ಣನ್ನೆ ಮುಂದೆ ಮಾಡ್ತ್. ಗಾಂಧಾರಿ ಕೃಷ್ಣಂಗೆ, ಕೃಷ್ಣ, ನಮ್ಮ ವಂಸನೇ ನಿರ್ನಾಮ ಮಾಡ್ದೆ. ಇಂದ್‌ಂದ ಇಪ್ಪತ್ತಾರ್ ವೊರ್ಸಲಿ ನಿನ್ನ ಯಾದವ ಕುಲನೂ ಸರ್ವನಾಶ ಆಗಿ ಹೋಗಣಲಿ'ಂತ ಸಾಪಕೊಟ್ಟತ್, ಧೃತರಾಷ್ಟ್ರ ಅಂತ ಕೋಪಣಲಿ ಏನೂ ಮಾತಾಡ್ತ್‌ಲೆ. "ಭೀಮ ಎಲ್ಲಿ ಉಟ್ಟು"ಂತ ಕೇಳ್ತ್. ಮುಂದೆ ಬಂದ ಭೀಮನ ತಡ್ಡ್ ಕೃಷ್ಣ ಮುಂದೇ ಮಾಡ್ಸಿ ಇಸಿದ್ದ ಕಣ್ಬ್ಬಿಣದ ಪ್ರತಿಮೆನ ಅವನೆದ್‌ರ್ ನಿಲ್ಸಿತ್. ಧೃತರಾಷ್ಟ್ರ ಅದರ ತೊಬ್ಬಿ ಹಿಡಿಯಕನ ಅದ್ ಪೊಡಿ ಪೊಡಿ ಆತ್ ಗಡ!

**ಮಕ್ಕ :**

ತಾತ! ಏನ್ ಆಶ್ಚರ್ಯ! ಕುರುಡನೂ ಮುದಿಯನೂ ಆದ ಧೃತರಾಷ್ಟ್ರಂಗೆ ಅಷ್ಟ್ ಬಲ ಹೇಂಗೆ ಬಾತ್‌ಂತ!

**ತಾತ :**

ಅವಂಗೆ ನೂರು ಮಕ್ಕ ಸತ್ತ ದುಃಖ ಅಷ್ಟರ ಮಟ್ಟಿಗಿತ್ತ್. ಅದರ್‌ಂದಳೂ ಆಶ್ಚರ್ಯ ಕೃಷ್ಣನ ಮುಂದಾಲೋಚನೆ. ಅಶ್ವತ್ಥಾಮಂದ ತೊಂದರೆ ಬಾದೂಂತ ಪಾಂಡವರ ಕರ್ಕಂಡ್ ನೀಲಗಿರಿಗೆ ಹೋತು. ಧೃತರಾಷ್ಟ್ರಂದ ಭೀಮಂಗೆ ಅಪಾಯ ಉಂಟಾದುಂತ ಮುಂದೆನೇ ಕಣ್ಬ್ಬಿಣದ ವಿಗ್ರಹ ಮಾಡ್ಸಿ ಇಸಿತ್. ಧೃತರಾಷ್ಟ್ರ ಮಾಡ್ದ ಕೃತ್ಯಂದ ಅವಂಗೇ ನಾಚಿಕೆ ಆತ್. ಕೃಷ್ಣನೂ ಅವನ ಓಣ್ನೈಸಿತ್. ಹಾಂಗೆ ಅಂವ ತುಂಬ ಪಶ್ಚಾತ್ತಾಪ ಪಟ್ಟ್ ಕಣ್ಂಡ್ ಅತ್ತಣ್. ಮತ್ತೆ ಭೀಮನ ನೋಡಿಕೆ ಬಯ್ಸಿತ್. ಈಗ ಕೃಷ್ಣ ಭೀಮನ ಮುಂದೆ ಪೋಕೆ ಹೇಳ್ತ್. ಹಾಂಗೆ ಭೀಮ ಹೋಗಿ ಧೃತರಾಷ್ಟ್ರನ ಕಾಲಿಗೆ ನಮಸ್ಕಾರ ಮಾಡ್ತ್. ಧೃತರಾಷ್ಟ್ರ ಅವನ

ಈಗ ಪ್ರೀತಿಂದ ತೊಬ್ಬಿಕೆಂಡ್ ಆಶೀರ್ವಾದ ಮಾಡ್ತ್.

ಇಷ್ಟಾಕನ ಯುದ್ಧಲಿ ಸತ್ತವರ ಹೆಣ್ಮಕ ಅತ್ತ್‌ಕೆಂಡ್, ಎದೆಗೆ ಹೊಡ್ಕಂಡ್ ಬಂದೊ. ಧೃತರಾಷ್ಟ್ರ, ಯುಧಿಷ್ಠಿರಂಗೆ, ಈ ಹೆಣ್ಮಕ್ಕಳಿಗೆ ಅವರವರ ಗಂಡಂದರ ಸರ್ರನ ಸಂಸ್ಕಾರ ಮಾಡಿಕೆ ಒಮ್ಮೆ ತೋರ್ಸಿ ಕೊಡಿಂತ ಹೇಳ್ತ್. ಅದಿಕೆ ಯುಧಿಷ್ಠಿರ, ಅಷ್ಟ್ ಮಾತ್ರ ಅಲ್ಲ ಅವ್ಕೆಲ್ಲ ವಿಧಿಪ್ರಕಾರ ಸಾವೇ ಸಂಸ್ಕಾರ ಕ್ರಿಯೆನ ಮಾಡುವಂತ ಹೇಳಿ ಅದಿಕೆ ಬೇಕಾದ ಏರ್ಪಾಡ್ ಮಾಡ್ಸಿತ್.

ಮತ್ತೆ ಯುದ್ಧರಂಗಲಿ ನೋಡ್‌ಕನ ಕುಂತಿ ಕರ್ಣನ ಸತ್ತ ಸರ್ರನ ತೊಬ್ಬಿ ಹಿಡ್ಕಂಡ್ ಅಳುದರ ನೋಡ್ಡೊ. ಏಕಂತ ವಿಚಾರ್ಸ್‌ಕನ ಅದ್ ಐದ್ ಜೆನ ಮಕಳ್ನೂ ಅಲ್ಲಿಗೆ ಬರ್ಸಿತ್. ಮತ್ತೆ ಅವ್ಕೆ ಹೇಳ್ತ್. "ಇಂವ ನನ್ನ ಚೊಚ್ಚಲ ಮಜ್ಜ ನೀವ್ಗೆಲ್ಲ ಹಿರಿಯಣ್ಣ. ನಿಮ್ಮ ಮೇಲ್ನ ಮೋಹಂದ ನಾ ಇಂವ ಯಾರ್‌ಂತ ಹೇಳದೆ, ಇವಂಗೆ ಈ ಗತಿ ಆತ್. ನನ್ನಂಥ ಪಾಪಿ ಅಯ್ಯೆ ಈ ಲೋಕಲಿ ಇರಿಕೆ ಆಗದ್". ನೀವು ಇವಂಗೆ ಪ್ರತ್ಯೇಕವಾಗಿ ಸಂಸ್ಕಾರ ಮಾಡೊಕು. ಕರ್ಣ ತಾವ್ಗೆ ಹಿರಿಯಣ್ಣ ಆಕುಂತ ಕೇಳಿ ಪಾಂಡವೆರ್ ಐದು ಜನನೂ ಗಳಗಳಂತ ಅತ್ತೊ. ಯಾರೊಬ್ಬೊನೂ ನಾವ್ಗೆ ಹೇಳ್ತ್‌ಲೆ. ನಮ್ಮ ಅವ್ವನೂ ಈ ವಿಚಾರನ ಗುಟ್ಟುಲಿಸಿತ್. ಇಂದ್‌ಂದ ಮುಂದೆ ಹೆಣ್ಮಕ್ಕಳ ಬಾಯಲಿ ಗುಟ್ಟು ನಿಲ್ಲದೇ ಹೋಗಲಿ!'– ಹೀಂಗೆ ಯುಧಿಷ್ಠಿರ ಸಾಪ ಹಾಕಿತ್. ಮತ್ತೆ, ಮುಂದೇ ನೀ ಯಾರ್‌ಂತ ಗೊತ್ತಾಗಿದ್ದರೆ, ಈ ರಾಜ್ಯಕೋಶನ ಎಲ್ಲ ನಿಂಗೆ ಒಪ್ಸಿ, ನೀ ಹೇಳ್ದಾಂಗೆ ಕೇಳಿಕೆಂಡ್ ನಿನ್ನ ಊಳಿಗ ಮಾಡಿಕೆಂಡ್ ಇರ್‌ತಿದ್ದೆ. ಹೀಂಗೆಲ್ಲ ಹೇಳಿಕೆಂಡ್ ಗೋಳಾಡಿಕೆಂಡ್ ಇದ್ದೊ. ಕೃಷ್ಣ ಅವರ ಸಮಾಧಾನ ಮಾಡ್ತ್. ಪುರೋಹಿತರ ಮೂಲಕ ಕ್ರಮಲೋಪವಿಲ್ಲದೆ ಗಂಧದ ಮರಗಳ ಅಗರು, ಚಂದನ ಮುಂತಾದವುಗಳ ಹಾಕಿ ಅವನ ಶರೀರಕ್ಕೆ ಅಗ್ನಿ ಸಂಸ್ಕಾರ ಕ್ರಿಯೆ ನಡ್ಸಿದೊ. ಬೇರೆವ್ಕೆಲ್ಲ ಸಾಮೂಹಿಕ ಅಗ್ನಿ ಕ್ರಿಯೆಗಳ ಮಾಡಿ ಗಂಗೆಲಿ ಜಲದಾನ ಕ್ರಿಯೆಗಳ ಎಲ್ಲ ಮುಗ್ಸಿದೊ.

ಕುರುಕುಲ ಪಿತಾಮಹರಾದ ಭೀಷ್ಮರ್ ಉತ್ತರಾಯಣ ಸಂಕ್ರಾಂತಿ ಬಾಕನ ದೇಹತ್ಯಾಗ ಮಾಡ್ಡೊ. ಅವರ ಸರೀರಕ್ಕೂ ವೈಭವದ ಹಾಂಗೇ ಗೌರವಂದ ಅಪರ ಕ್ರಿಯೆಗಳ ಮಾಡಿ ಮುಗ್ಸಿದೊ.

ಧೃತರಾಷ್ಟ್ರನೂ ಗಾಂಧಾರಿನೂ ನಾವು ಕಾಡಿಗೆ ತಪಸ್ಸ್ ಮಾಡಿಕೆ ಹೋಗಿ ನಮ್ಮ ಒಳ್ಳೆ ಆಯುಸ್ಸನ ಅಲ್ಲಿ ಕಳ್ವವಂತ ಯುಧಿಷ್ಠಿರಂಗೆ ಹೇಳ್ದೊ. ನಾ ನಿಮ್ಮ ಮಜ್ಜಂದ ಹೆಚ್ಚಾಗಿ ನೋಡಿಕಂಬೆಂತ ಹೇಳಿರೂ ಕೇಳ್ತ್‌ಲೆ. ಇವ್ಕೆ ಕಣ್ಣಿಲ್ಲದ ಕಾರ್ಣ ಸಾಯ ಮಾಡಿಕೆಂತ ಕುಂತಿನೂ ಅವರೊಟ್ಟಿಗೆ ಕಾಡಿಗೆ ಹೋತು. ಕರ್ಣ ಸತ್ತದರ್‌ಂದ ಅದಿಕೂ ಸಂಸಾರ ವೈರಾಗ್ಯ ಬಂದಿತ್ತ್. ಹಾಂಗೆ ಹೋದೊವು ಒಂದ್ ಹಿಂಬೊತ್ ಗಂಗೆಲಿ ಮಿಯ್ದ್, ಸತ್ತೋವ್ಕೆ ತರ್ಪಣ ಕೊಟ್ಟ್ ಹಿಂದೆ ಬಾಕನ ಕತ್ತಲೆ ಆತ್. ಆಗ ಒಂದು ಕಾಡ್‌ಕಿಚ್ಚಿ ಸುತ್ತೋಳೂ ಹಬ್ಬಿಕೆಂಡ್, ಇವ್ಕೆ ತಪ್ಪಿಕೆ ದಾರಿ ಸಿಕ್ಕದೆ ಅದರ್ಲಿ ಸಿಕ್ಕಿ ಬೂದಿ ಆದೊ.

ಇಡೀ ಕುರು ಸಾಮ್ರಾಜ್ಯಕ್ಕೆ ಈಗ ಯುಧಿಷ್ಠಿರ ಅಧಿರಾಜ ಆತ್. ಸ್ಥಾನಕ್ಕೆ ತಕ್ಕ ವೈಭವ

ಆಡಂಬರಗ ಇದ್ದರೂ ಅವನ ಮನ್ಸಿಗೆ ಶಾಂತಿ ಸಮಾಧಾನಂತ ಹೇಳುದು ಇತ್ತ್‌ಲೆ. ಕಾರಣ ತಮ್ಮ ತರುಣ ಮಕ್ಕಳ ಎಲ್ಲ ಕಳ್ಕಂಡತ್‌ಟ್. ನಂಟ್ರ್ ಇಷ್ಟರ್ ಹಿಂಗೆ ತಾವ್ಗೆ ಪ್ರಿಯೆರ್ ಆದೊವೆಲ್ಲ ಸತ್ತ್ ಹೋಗಿದ್ದೊ. ಕೋಟಿ ಕೋಟಿ ಪ್ರಜಾ ಸಮೂಹದೊವೆಲ್ಲ ಯುದ್ಧಲಿ ಸತ್ತ್ ಹೋಗಿದ್ದೊ. ಪ್ರತಿಯೊಂದು ಮನೇಲೂ ದುಃಖಂದ ಕಣ್ಣೀರ್ ಹಾಕದೊವೇ ಇರಿಕಿಲ್ಲೆ. ಹಾಂಗೆ ಹೋರಾಡಿ ಅವೆಲ್ಲ ಸತ್ತ್. ಅವ್ಕೆ ಆದ ಪ್ರಯೋಜನ ಏನ್? ಸಾವಿರ ಸಾವಿರ ಸಂಖ್ಯೆಲಿ ಆನೆಗ ಕುದುರೆಗ ಎಲ್ಲ ತೀವ್ರ ಹಿಂಸೆನ ಅನುಭವಿಸಿ ಸತ್ತೊ. ಅವ್ಕೇನ್ ಲಾಭ ಆತ್. ಇದರೆಲ್ಲ ವಿಚಾರ್ಸಿ ನೋಡ್‌ಕನ ಯುಧಿಷ್ಠಿರನ ಮನ್ಸ್‌ನ ಖಿನ್ನತೆ ತುಂಬುತಿತ್ತ್. ಹಿಂಗೆ ಕೆಲೊವು ವೊರ್ಸ ಕಳ್ದ್. ಬಂಧು ಹತ್ಯೆ ಮಾಡ್ದ ದೋಷ ಹೋಗಿ ಪುಣ್ಯ ಸಿಕ್ಕೊಕುಂತಾದರೆ ಅಶ್ವಮೇಧ ಯಾಗ ಮಾಡೊಕುಂತ ದೊಡ್ಡ ಜ್ಞಾನಿಯಾದ, ಉದ್ದ ಗಡ್ಡ ಮೀಸೆ ಬೆಳ್ಸಿದ ಪುರೋಹಿತ ಸಲಹೆ ಕೊಟ್ಟತ್‌ತ್. ಈ ಕಾರ್ಯಲಿಯೂ ಅನೇಕ ಯುದ್ಧಗಳ ನಡ್ಯೊಕಾದೆ. ಹಾಂಗಿರ್ಕನ ಇಲ್ಲಿಯೂ ಕೊಲೆ, ರಕ್ತ ಪಾತಂಗ ನಡಿಯೊಕಾದೆ. ಹಿಂದೆನ ರಕ್ತ ಪಾತತ್‌ಲಿ ಸಿಕ್ಕಿದ ಪಾಪ ಈ ರಕ್ತ ಪಾತತ್‌ಲಿ ಹೇಂಗೆ ತೊಳ್ದು ಹೋದುಂತ ಇಂತ ರಾಜರ್ಗ್ಳಿ ಒಬ್ಬೊನೂ ಕೇಳ್ತ್‌ಲೆ. ಹಾಂಗೆ ಕೇಳಿರೆ ಸಾಪ ಕೊಟ್ಟು ಬುಡುವೊಂತ ಹೆದ್‌ರಿಕೆ. ಇದ್‌ಕೆ ಸಮಾಧಾನದ ಉತ್ತರಂತೇಳಿರೆ ಈಗ ಯುದ್ಧಲಿಯೋ ಸಂಧಾನಲಿಯೋ ಸಂಪಾದ್‌ಸಿದ ಸಂಪೊತ್ತ್‌ನ ಎಲ್ಲ ಭೂಸುರರಿಗೆ (ಅಂದರೆ ಹಾರ್‍ರಿಗೆ) ದಾನ ಮಾಡಿರೆ ಅವು ತೃಪ್ತಿಲಿ ಆಶೀರ್ವಾದ ಮಾಡುವೊ. ಅದ್ ತಾನೆ ರಾಜ ಆದವಂಗೆ ದಕ್ಕುವ ಪುಣ್ಯ? ಎಲ್ಲದರ್‌ಂದೊಳೂ ಬೆಲೆ ಇರುದು ಇಂತವರ ಆಶೀರ್ವಾದಕ್ಕೆ ಅಲ್ಲೊ? ಪುರೋಹಿತನ ಮಾತ್‌ನ ಪ್ರಕಾರ ಪಾಂಡವತ್‌ರೂ ಒಂದು ಅಶ್ವಮೇಧ ಯಾಗನೂ ಮಾಡ್ದೊ.

ಮಹಾಭಾರತ ಯುದ್ಧ ನಡ್ದ್ ಸುಮಾರ್ ಇಪ್ಪತ್ತಾರ್ ವೊರ್ಸ ಆಕತ್‌ಂಡ್ ಬಾತ್. ದ್ವಾಪರ ಯುಗದ ಅಂತ್ಯ ಆವ ಕಾಲನೂ ಹಕ್ಕಲೆ ಆದ ಲಕ್ಷಣಗತ್‌ಳೂ ಕಾಂಬಕೆ ಸುರಾತ್. ದ್ವಾರಕೆಲಿ ಒಂದು ದಿನ ಕೃಷ್ಣ ಎಲ್ಲಿಯೋ ಹೋಗಿದ್ದಂದ್ ಯಾದವರೆಲ್ಲ ಸೊವುಂದ್ರದ ಕರೆಗೆ ಹೋಗಿ ತುಂಬ ಕತ್‌ಳ್ ಕುಡ್ಕತ್‌ಂಡ್ ಒಬ್ಬಂದೊಬ್ಬ ಜಗಳಾಡಿಕತ್‌ಂಡ್ ಜೊಂದು ಹುಲ್ಲುನ ಕಿತ್ತ್ ಅದರ್ಲಿ ಒಬ್ಬಂದೊಬ್ಬ ಹೊಡ್ಕತ್‌ಂಡ್ ಸತ್ತೊ. ಕೃಷ್ಣ ಬಂದಂವ ಈ ಅನಾಹುತನ ನೋಡಿ ನಗರದ ಒಳಗಿದ್ದೊವೆಲ್ಲ ಹೊರೆಗೆ ಸುರಕ್ಷಿತವಾಗಿದ್ದ ಜಾಗೆಗೆ ಹೋಗಿ. ಇಲ್ಲದಿದ್ದರೆ ದ್ವಾರಕೆ ಸಮುದ್ರದಡಿಲಿ ಕತ್‌ಂತಿ ಹೋದಂತ ಹೇಳ್ದ್. ಹೆಣ್ಣುಕ, ಮಕ್ಕ ಕೆಲೊವು ಜೆನ ಹಾಂಗೆ ಮಾಡ್ದೊ. ಬಲರಾಮ ಅವನ ಹಿಂದೆನ ಅವತಾರವಾದ ಸರ್ಪದ ರೂಪು ತಾಳಿ ಸಮುದ್ರಕೆ ಹೋತು. ಕೃಷ್ಣ ಕಾಡ್‌ಲಿ ಪಣ್ಣು ದೂರ ಹೋಗಿ ಬೊಚ್ಚಿದಂತೇಳಿ ಒಂದು ಮರದಡಿ ನೆಳತ್‌ಲ್‌ಲಿ ಮಲ್ಗಿತ್. ಅಷ್ಟೊತ್ತಿಗೆ ಒಬ್ಬ ಬೇಡ ಎಲ್ಲಿಂದೊಳೂ ಬೇಟೆಗೆ ಬಂದಂವ ದೂರಂದ ನೋಡಿ, ಇದೊಂದು ಮುರ್ಗಂತ ಗ್ರೈಸಿ ಬಾಣ ಬುಟ್ಟತ್‌ತ್. ಅದ್ ಕೃಷ್ಣನ ಅಂಗಾಲಿಗೆ ತಾಂಗಿ ಅಂವ ಅಯ್ಯೋಂತ ವೇದನೆಲಿ ಹೇಳ್‌ಕನ ಬೇಡ ಓಡಿ ಬಂದ್ ತುಂಬ ಅತ್ತ್‌ಕತ್‌ಂಡ್ ಕ್ಷಮೆ ಕೇಳ್ದ್. ಆದಿಕೆ ಕೃಷ್ಣ ಬೇಡಂಗೆ ನೀ ಎತೆ ಪಷ್ಟದ.

ನಾ ಹಿಂದೆ ಮಾಡ್ದ ಕರ್ಮಫಲನ ಅನುಭವಿಸಿನೆ, ಅಷ್ಟೆ. ಹಿಂದೆನ ಯುಗಲಿ ನಾ ರಾಮ ಆಗಿದ್ದೆ. ನೀ ವಾಲಿ ಆಗಿದ್ದ. ನಾ ಮರೆಲಿ ನಿತ್ತ್ ಬಾಣ ಹೊಡ್ದ್ ನಿನ್ನ ಕೊಂದಿದ್ದೆ. ಅದರ ಪ್ರತಿಫಲ ಹೀಂಗಾತ್. ನೀ ದುಃಖ ಪಡದೆ ಹೋಗುಂತ ಬೇಡನ ಕೃಷ್ಣ ಹೇಳಿ ಕಳ್ಸಿತ್. ಅಂವನ ಆತ್ಮ ಅವನ ಸರೀರ್ರಂದ ಹೊರ್ಟ್, ವೈಕುಂಠಲಿದ್ದ ಅವನ ಮೂಲ ರೂಪುನೊಟ್ಟಿಗೆ ಸೇರಿಕಣಂಡಳಿತ್.

ಕೃಷ್ಣ ಇನ್ನ್ ಇಲ್ಲದಾಂಗಾತ್. ದ್ವಾರಕೆ ಸೊಂವುದ್ರದೊಳಗೆ ಸೇರಿ ಹೋದೆಗಡಂತ ಸುದ್ದಿಕೇಳಿ ಅರ್ಜುನ ದ್ವಾರಕೆನತ್ತ ಧಾವಿಸಿ ಬಾತ್. ಕಾಡ್‌ಲಿ ಬಿದ್ದಿದ್ದ ಕೃಷ್ಣನ ಸರ್ರಕ್ಕೆ ಅಗ್ನಿ ಸಂಸ್ಕಾರ ಮಾಡಿ ಮುಗ್ಸಿ ದ್ವಾರಕೆಗೆ ಹೋತು. ಆಗಳೇ ಅದರ ಒಂದು ಭಾಗ ನೀರ್‌ನಡಿಗೆ ಹೋಗಿತ್ತ್. ವಸುದೇವದೇವಕಿಯಳಿರ್ ಮತ್ತೆ ಕೃಷ್ಣನ ಎಂಟ್ ರಾಣಿಗ ಅಲ್ಲಿದ್ದೊ. ಬಲರಾಮ ಹೊರ್ಟ್ ಹೋದ ಕೂಡ್ಲೆ ಅವನ ಹೆಣ್ಣ್ ಸೊಮುದ್ರಕೆ ಹಾರಿ ಸತ್ತಳಿತ್. ಈಗ ಕೃಷ್ಣನ ಸುದ್ದಿ ಕೇಳಿ ಅವನ ಎಂಟ್ ರಾಣಿಯಳಿರೂ ಕಿಚ್ಚಿಗೆ ಬೀಳಿಕೆ ತಯಾರಾದೊ. ವಸುದೇವ ದೇವಕಿಯರ್ ಅರ್ಜುನಂಗೆ ಹೇಳ್ದೊ. "ನಮ್ಮ ಮಜ್ಜ ಸತ್ತ ಮೇಲೆ ನಾವೂ ಒಳಿಯಕಿಲ್ಲೆ. ನಮ್ಮ ಅಗ್ನಿ ಸಂಸ್ಕಾರ ಕ್ರಿಯೆನ ನೀನೇ ಮಾಡಿ ಮುಗ್ಸೊಕು. ಮತ್ತೆ ಕೃಷ್ಣನ ಒಳ್ದ ಅಂತಃಪುರದ ಸ್ತ್ರೀಯರ ನೀ ಹಸ್ತಿನಾವತಿಗೆ ಕರ್ಕಂಡ್ ಹೋಗಿ ಅಲ್ಲಿ ಅವ್ಕ ನೆಲೆಗೊಳ್ಸೊಕುಂತ." ಅರ್ಜುನ ಒಪ್ಪಿಕಂಡಳಿತ್. ಅವರ ಇಚ್ಛೆನಾಂಗೆ ಎಲ್ಲ ನೆರವೇರ್ಸಿದ ಮೇಲೆ ಅರ್ಜುನ ಕೃಷ್ಣನ ಹೆಣ್ಮಕ್ಕಳ ಕರ್ಕಂಡ್ ಹಸ್ತಿನಾವತಿಗೆ ಹೊರ್ಟಳಿತ್. ದಾರಿಲಿ ಮ್ಲೇಚ್ಛವರ್ಗದ ಜೆನಂಗ ಬಂದ್ ಈ ಹೆಣ್ಮಕಳ ಎಲ್ಲ ಸೆರೆ ಹಿಡ್ದ್ ಎಳ್ಕಣಿಂಡ್ ಹೋದೊ. ಕೃಷ್ಣ ಈಗ ಇಲ್ಲೆಂತಾದ ಕಾರಣಂದ ಅರ್ಜುನಂಗೆ ಅವನ ಗಾಂಡೀವನ ನೇಟಿಕೂ ಆಗದಾಂಗಾತ್. ಆ ಹೆಣ್ಮಕ ಅತ್ತ್‌ಕಣಿಂಡ್ ರೋದನ ಮಾಡಿರೂ ಇವಂಗೆ ಏನೂ ಮಾಡಿಕೆ ಅತ್‌ಲೆ. ಅಂವ ದುಗುಡ ತುಂಬಿಕಣಿಂಡ್ ಹಸ್ತಿನಾವತಿಗೆ ಹೋತು. ಹೋಗಿ ಯುಧಿಷ್ಠಿರಂಗೂ ಭೀಮ, ನಕುಲ ಸಹದೇವ ಮತ್ತೆ ದ್ರೌಪದಿಗೂ ದ್ವಾರಕೆನ ದುರಂತ ವಾರ್ತೆನ ತಿಳ್ಸಿತ್. ತಲೆಮೇಲೆ ಸಿಡ್ಲ್ ಹೊಡ್ದಾಂಗಾಗಿ ಒಮ್ಮೆ ಎಲ್ಲೊವು ಮೂಕರಾದೊ. ಮತ್ತೆ ಗೋಳೋಂತ ಅತ್ತೊ. ಕೃಷ್ಣ ಇಲ್ಲದ ಮೇಲೆ ನಾವ್ಗೆ ಈ ಲೋಕವೇ ಇಲ್ಲವಾತ್. ನಾವು ಇಲ್ಲಿರುದು ಬೇಡ. ಕೈಲಾಸನತ್ತ ಹೋಯಿ. ಹೀಂಗೆ ನಿಶ್ಚಯ ಮಾಡಿ, ಯುಯುತ್ಸುಗೆ ಅಧಿರಾಜ ಪಟ್ಟ ಕಟ್ಟಿ, ಪರೀಕ್ಷಿತ್ತುಗೆ ಆಧೀನ ರಾಜ ಪಟ್ಟ ಕಟ್ಟಿ ಪಾಂಡವರ್ ಎಲ್ಲ ಬುಟ್ಟ್ ಉಟ್ಟ ವಸ್ತ್ರಲೇ ಕೈಲಾಸಕ್ಕೆ ಹೊರ್ಟೊ.

## ಮಹಾ ಪ್ರಸ್ಥಾನ

ಇದ್ ಪಾಂಡವರ ಅಂತಿಮ ಪ್ರಯಾಣ. ಇದರ ಮಹಾಪ್ರಸ್ಥಾನಂತ ಕರ್ದವೆ. ಮುಂದೆ ಯುಧಿಷ್ಠಿರ, ಮತ್ತೆ ಭೀಮ ಮತ್ತೆ ಅರ್ಜುನ, ಅವಂದ ಹಿಂದೆ ನಕುಲ, ಆ ಮೇಲೆ ಸಹದೇವ, ಹೀಂಗೆ ಇವರೆಲ್ಲರ ಹಿಂದೆ ದ್ರೌಪದಿ, ಹೀಂಗೆ ಇವರ ಯಾತ್ರೆ ಹೊರ್ಟತ್. ಕೈಲಾಸ ಪರ್ವತದ ಬುಡಕ ತಲ್ಪಿಕಾಕನ ದ್ರೌಪದಿ ಸತ್ತ್ ಬೀತ್. ಭೀಮ ಯುಧಿಷ್ಠಿರಂಗೆ "ಅಣ್ಣ

ದ್ರೌಪದಿ ಬೀತ್ಂತ" ಹೇಳ್ತ್. "ಬಿದ್ದರೆ ಬೀಳಕೆಲಿ. ನೀ ತಿರ್ಗಿ ನೋಡದೆ ಬಾ! ಅದ್ ಎಲ್ಲೋವ್ಕ ಹೆಣ್ಣಾಗಿದ್ದರೂ, ಅದಿಕೆ ಅರ್ಜುನನ ಮೇಲೆ ಹೆಚ್ಚಿಗೆ ಮೋಹ ಇತ್ತ್ಂತ" ಯುಧಿಷ್ಠಿರ ಹೇಳಿ ಸೀದಾ ಮುಂದೆ ನಡ್ತ್. ಮುಂದೆ ಒಬ್ಬಾದ ಮೇಲೆ ಒಬ್ಬ ಸತ್ತ್ ಬಿದ್ದ್‌ಕಲೆಂಡೇ ಹೋದೊ. ಆದರೆ ಯುಧಿಷ್ಠಿರ ಗಣ್ಯ ಮಾಡದೆ ಮುಂದೆ ನಡ್ಕಂಡೇ ಇತ್ತ್. ಒಬ್ಬೊಬ್ಬನ ದೋಸಗಳ್ನೂ ಅಂವ ಭೀಮಂಗೆ ಎತ್ತಿ ಹೇಳ್‌ತಿತ್ತ್. ಸಹದೇವಂಗೆ ತಾನ್ ದಿವ್ಯಜ್ಞಾನಿಂತ ಜಂಬ; ನಕುಲಂಗೆ ತಾನ್ ಬಾರಿ ಸುಂದರಂತೇಳುವ ಜಂಬ; ಅರ್ಜುನಂಗೆ ತಾನ್ ಮಹಾವೀರಂತ ಜಂಬ. ಹೀಂಗೆ ಎಲ್ಲೋವ್ಕೂ ಒಂದೊಂದು ಕೊರತೆನ ಹೇಳ್ತ್. ಮತ್ತೆ ಹಜ್ಜಿ ದೂರ ಹೋಕನ ಭೀಮಟೆನೂ ಸತ್ತ್ ಬೀತ್. ಈಗ ಮಾತ್ರ ಯುಧಿಷ್ಠಿರಂಗೆ ತಡ್ತ್‌ಲೆ. ಭೀಮನ ಸರ್ರನ ನೇಚಿ ತೊಬ್ಬಿಕಲೆಂಡ್ ಮುಂದೆ ನಡ್ತ್. ಹೀಂಗೆ ಸುಮಾರ್ ದೂರ ಹೋಕನ ಇಂದ್ರ ಇದರ ನೋಡಿ, ಇಂವಂಗೆ ಬುದ್ಧಿ ಕೆಟ್ಲೊಕುಂತೇಳಿ, ಒಂದು ಮುದಿ ಹಾರಂವನ ವೇಸಲಿ ಒಡ್ಕಲ್ ಕಂದಲ್‌ಲಿ ನೀರ್ ತಂದ್ ಒಣ್ಗಿಲ್ ಮರದ ಬುಡಕ್ಕೆ ಹೊಯ್ಯತ್ತಿತ್ತ್. ಇದರ ನೋಡಿ ಯುಧಿಷ್ಠಿರ ಇದೇನ್ ನಿನ್ನ ಹುಚ್ಚು ಕೆಲ್ಸಂತ ಕೇಳ್ತ್. ನೀ ಮಾತ್ರ ಸತ್ತ ಸರ್ರನ ಬುಡದೆ ಹೊತ್ತ್‌ಕಲೆಂಡ್ ಹೋಕ? ಹಾಂಗೇ ಇದೊಂತ ಹೇಳ್ತ್. ಹಾಂಗೆ ಯುಧಿಷ್ಠಿರ ಅವನ ಹೊರೆನ ಕೆಳಗೆ ಹಾಕಿ ಮುಂದೆ ಹೋತು. ಅವನ ಹಿಂದೆಂದ ಒಂದು ಕಲಿ ನಾಯಿನೂ ಬಾತಿತ್ತ್. ಅವ್ರು ಸುಮಾರ್ ದೂರ ನಡ್ದಾಕನ ದೇವೇಂದ್ರ ಅವನ ರಥನ ತಂದ್ ನಿನ್ನ ಸ್ವರ್ಗಕ್ಕೆ ಶರೀರ ಸಮೇತ ಕರ್ಕಲೆಂಡ್ ಹೋನೆ ನೀ ರಥಕ್ಕೆ ಹತ್ತ್ಂತ ಹೇಳ್ತ್. ಅದಿಕೆ ಯುಧಿಷ್ಠಿರ ನನ್ನೊಟ್ಟಿಗೆ ಈ ನಾಯಿನೂ ಹತ್ತ್‌ಸಿ ಕಣೊಕುಂತೇಳ್ತ್. ಇಂದ್ರ ಒಪ್ಪಿತ್‌ಲೆ. ಹಂಗರೆ ನಂಗೆ ನಿನ್ನ ರಥ ಬೇಡ. ನಾ ನಡ್ಕಂಡೇ ಬನ್ನೆಂತ ಹೇಳ್ತ್. ಆಗ ನಾಯಿನ ಯೇಸಲಿದ್ದ ಯಮ ಪ್ರತ್ಯಕ್ಷ ಆಗಿ ಯುಧಿಷ್ಠಿರನ ತುಂಬ ಹೊಗ್‌ಳ್ತ್. ಮತ್ತೆ ಅವ್ರು ಮೂರು ಜನನೂ ಸ್ವರ್ಗಕ್ಕೆ ಹೋದೊ. ಅಲ್ಲಿ ದುರ್ಯೋಧನಾದಿಗ ಇದ್ದೊ. ಅವನ ತಮ್ಮಂದಲ ಕಂಡಲ್‌ತ್‌ಲೆ ಅವೆಲ್ಲ್ಯೊಳೊ? ಅವಿದ್ದಲ್ಲಿಗೆ ನನ್ನ ಕರ್ಕಂಡ್ ಹೋಗಿಂತ ಹೇಳ್ತ್. ಹಾಂಗೆ ಯುಧಿಷ್ಠಿರನ ಅವನ ತಮ್ಮಂದಲಿದ್ದ ನರ್ಕಕೆ ಕರ್ಕಲೆಂಡ್ ಹೋದೊ. ವಾಪಾಸ್ ಪೋಯಿ ಹೊರ್ಡ್ಂತೇಳ್‌ಕನ ನನ್ನ ತಮ್ಮಂದಲೂ ನನ್ನೊಟ್ಟಿಗೆ ಬಂದರೆ ಮಾತ್ರ ನಾ ಅಲ್ಲಿಗೆ ಬನ್ನೆ. ಇಲ್ಲರೆ ನನ್ನ ಇಲ್ಲಿಯೇ ಬುಟ್ಟ್ ಹೋಗಿಂತ ಹೇಳ್ತ್. ಹಾಂಗೆ ಅವರೆಲ್ಲರ್ನೂ ಸ್ವರ್ಗಕ್ಕೆ ಕರ್ಕಲೆಂಡ್ ಬಂದ್ ಅಲ್ಲಿದ್ದ ಒಂದು ಕೊಳಲಿ ಮೀಯಕೆ ಹೇಳ್ದೊ. ಆಗ ಮಿಯ್ದು ಅವು ದಿವ್ಯ ದೇಹಧಾರಿಗ ಆಗಿ ಮಾನವ ಸಹಜವಾದ ರಾಗ ದ್ವೇಷಗ ಇಲ್ಲದೆ, ಪರಮಾನಂದಲಿ, ತೇಲಾಡಿಕಲೆಂಡ್ ಇದ್ದೊ.

ಇತಿ,

ಕೋಡಿ ಕುಶಾಲಪ್ಪ ಗೌಡ ಪ್ರಣೀತ

ಮಾನಸ ಮಹಾಭಾರತಂ

ಸಂಪೂರ್ಣಂ

ಭದ್ರಂ ಶುಭಂ ಮಂಗಳಂ!

# ಅನುಬಂಧ–1

## ಧೃತರಾಷ್ಟ್ರನ –ಗಾಂಧಾರಿಯ ಮಕ್ಕಳು

(ಭಾರತದರ್ಶನ ಪ್ರಕಾಶನ ಬೆಂಗಳೂರು– ಸಂಪುಟ 2, ಪುಟ 770–71)

1. ದುರ್ಯೋಧನ, 2. ಯುಯುತ್ಸು, 3. ದುಶ್ಶಾಸನ, 4. ದುಸ್ಸಹ, 5. ದುಶ್ಶಲ, 6. ಜಲಸಂಧ, 7. ಸಮ, 8. ಸಹ, 9. ವಿಂದ, 10. ಅನುವಿಂದ, 11. ದುರ್ಧರ್ಷ 12. ಸುಬಾಹು, 13. ದುಷ್ಪ್ರಧರ್ಷಣ, 14. ದುರ್ಮರ್ಷಣ, 15. ದುರ್ಮುಖ, 16. ದುಷ್ಕರ್ಣ, 17. ಕರ್ಣ, 18. ವಿವಿಂಶತಿ, 19. ವಿಕರ್ಣ, 20. ಶಲ, 21. ಸತ್ವ, 22. ಸುಲೋಚನ್, 23. ಚಿತ್ರ, 24. ಉಪಚಿತ್ರ, 25. ಚಿತ್ರಾಕ್ಷ, 26. ಚಾರು, 27. ಚಿತ್ರಶರಾಸನ, 28. ದುರ್ಮದ, 29. ದುರ್ವಿಗಾಹ, 30. ವಿವಿತ್ಸು, 31. ವಿಕಟಾನನ, 32. ಊರ್ಣನಾಭ, 33. ಸುನಾಭ, 34. ನಂದ, 35. ಉಪನಂದ, 36. ಚಿತ್ರಬಾಣ, 37. ಚಿತ್ರವರ್ಮಾ, 38. ಸುವರ್ಮಾ, 39. ದುರ್ವಿರೋಚನ, 40. ಅಯೋ ಬಾಹ, 41. ಮಹಾಬಾಹುವಾದ, 42. ಚಿತ್ರಾಂಗ, 43. ಚಿತ್ರಕುಂಡಲ, 44. ಭೀಮವೇಗ, 45. ಭೀಮಬಲ, 46. ಬಲಾಕೀ, 47. ಬಲವರ್ಧನ, 48. ಉಗ್ರಾಯುಧ, 49. ಸುಷೇಣ, 50. ಕುಂಡೋದರ, 51. ಮಹೋದರ, 52. ಚಿತ್ರಾಯುಧ, 53. ನಿಸಂಗೀ, 54. ಪಾಶೀ, 55. ವೃಂದಾರಕ, 56. ದೃಢವರ್ಮಾ, 57. ದೃಢಕ್ಷತ್ರ, 58. ಸೋಮಕೀರ್ತಿ, 59. ಅನೂದರ, 60. ದೃಢಸಂಧ, 61. ಜರಾಸಂಧ, 62. ಸತ್ಯಸಂಧ, 63. ಸದಃಸುವಾಕ್, 64. ಉಗ್ರಸುವಸ, 65. ಉಗ್ರಸೇನ, 66. ಸೇನಾನೀ, 67. ದುಷ್ಪರಾಜಯ, 68. ಅಪರಾಜಿತ, 69. ಪಂಡಿತಕ, 70. ವಿಶಾಲಾಕ್ಷ, 71. ದುರಾದರ, 72. ದೃಢಹಸ್ತ, 73. ಸುಹಸ್ತ, 74. ವಾತವೇಗ, 75. ಸುವರ್ಚಸ, 76. ಆದಿತ್ಯಕೇತು, 77. ಬಹ್ವಾಶೀ, 78. ನಾಗದತ್ತ, 79. ಅಗ್ರಯಾಯೀ, 80. ಕವಚೀ, 81. ಕ್ರಥನ, 82. ದಂಡೀ, 83. ದಂಡಧಾರ, 84. ಧನುರ್ಗ್ರಹ, 85. ಉಗ್ರ, 86. ಭೀಮರಥ, 87. ವೀರಬಾಹು, 88. ಅಲೋಲುಪ, 89. ಅಭಯ, 90. ರೌದ್ರಕರ್ಮ, 91. ದೃಢರಥಾಶ್ರಯ, 92. ಅನಾಧೃಷ್ಯ, 93. ಕುಂಡಭೇದಿ, 94. ಚಿತ್ರಕುಂಡಲನಾದ ವಿರಾವೀ, 95. ಪ್ರಮಥ, 96. ಪ್ರಮಾಥೀ, 97. ವೀರ್ಯವಂತನಾದ ದೀರ್ಘ ರೋಮ, 98. ದೀರ್ಘ ಬಾಹು, 99. ಮಹಾಬಾಹುವಾದ ವ್ಯೂಢೋರು, 100. ಕನಕಧ್ವಜ [101 ಕುಂಡಾಶೀ, 102 ವಿರಜಸ– ಹೆಚ್ಚಿನ ಹೆಸರುಗಳು] (ದುಶ್ಶಲಾ ಎಂಬ ಮಗಳು. ಒಬ್ಬ ದಾಸೀ ಪುತ್ರ ಯುಯುತ್ಸು)

## ಅನುಬಂಧ-2

### ಧೃತರಾಷ್ಟ್ರನ ಹೆಂಡತಿಯರು

ಗಾಂಧಾರೀ, ಸತ್ಯವ್ರತಾ, ಸತ್ಯಸೇನಾ, ಸುದೇಷ್ಣಾ, ಸಂಹಿತಾ, ತೇಜಶ್ರ್ಶವಾ, ಸುಶ್ರವಾ, ನಿಕೃತಿ ಶುಭಾ, ಶಂಭರಾ, ದಶಾರ್ಣಾ= 11 ಮಂದಿ.

ಯುಧಿಷ್ಠಿರನ ಹೆಂಡತಿಯರು: ದ್ರೌಪದಿ 1/5
ಶಿಭಿರಾಜನ ಮಗಳು ದೇವಕಿ- ಯೌಧೇಯ ಮಗ
ಉಪ ಪಾಂಡವರು.




| | | |
|---|---|---|
| ಭೀಮ | : ಹಿಡಿಂಬೆ | ಘಟೋತ್ಕಚ –ಮಗ |
| | ದ್ರೌಪದಿ 1/5 | ಕಾಶೀ ರಾಜಪುತ್ರಿ ಚಿಲಂಧರಾ- ಸರ್ವಗ-ಮಗ |
| ಅರ್ಜುನ | ದ್ರೌಪದಿ 1/5 | ಉಲೂಪಿ-ಪಾತಾಳದ ಸರ್ಪರಾಜನ ಮಗಳು<br>ಇರಾವಂತ-ಮಗ<br>ಚಿತ್ರಾಂಗದೆ-ಮಣಿಪುರದ ರಾಜಕುಮಾರಿ-ಭಭ್ರುವಾಹನ ಮಗ<br>ಸುಭದ್ರೆ (ಕೃಷ್ಣನ ತಂಗಿ) ಮಗ- ಅಭಿಮನ್ಯು |
| ನಕುಲ | : ದ್ರೌಪದಿ 1/5 | ಚೇದಿರಾಜ್ಯದ ರಾಜಕುಮಾರಿ;<br>ಕರೇಣುಮತಿ-ನಿರಮಿತ್ರ ಮಗ |
| ಸಹದೇವ | : ದ್ರೌಪದಿ 1/5 | ಮದ್ರಾಧಿಪತಿಯ ದ್ಯುತಿಮಂತನ ಮಗಳು ವಿಜಯಾ<br>ಸುಹೋತ್ರ- ಮಗ |

ಶ್ರೀಕೃಷ್ಣನ ಅಷ್ಟ ಮಹಿಷಿಯರು:

1. ಭೀಷ್ಮಕ ರಾಜನ ಮಗಳು ರುಕ್ಮಿಣಿ, 2. ಸತ್ರಾಜಿತನ ಮಗಳು ಸತ್ಯಭಾಮೆ, 3. ಕೋಸಲ ರಾಜ ನಗ್ನಜಿತನ ಮಗಳು ನೀಲೆ ಅಥವಾ ಸತ್ಯೆ, 4. ಕೇಕಯ ದೇಶದ ರಾಜ ಧೃಷ್ಟಕೇತುವಿನ ಹೆಂಡತಿ (ವಸುದೇವನ ತಂಗಿ ಕೃಷ್ಣನ ಸೋದರತ್ತೆ) ಶ್ರುತಕೀರ್ತಿಯ ಮಗಳು ಭದ್ರೆ 5. ಅವಂತಿ ದೇಶದ ಜಯತ್ಸೇನನ ಹೆಂಡತಿಯಾದ ಇನ್ನೊಬ್ಬಳು ಸೋದರತ್ತೆ, ರಾಜಾಧಿದೇವಿಯ ಮಗಳಾದ ಮಿತ್ರವಿಂದೆ 6. ಸೂರ್ಯನ ಮಗಳು ಕಾಳಿಂದಿ 7. ಮದ್ರ ರಾಜನ ಮಗಳು ಲಕ್ಷಣೆ (ಲಕ್ಷ್ಮಣೆ) 8. ಜಾಂಬವಂತನ ಮಗಳು ಜಾಂಬವತಿ.



ಕುಶಾಲಪ್ಪ ಗೌಡರು ತಮ್ಮ ಎಂಬತ್ತೂರನೆಯ ವಯಸ್ಸಿನಲ್ಲಿ, ಸಾಹಸಪಟ್ಟು 'ಮಾನಸ ಮಹಾಭಾರತ'ವೆಂಬ ಹೆಸರಿನಲ್ಲಿ ಮಹಾಭಾರತದ ಕತೆಯನ್ನು ತಮ್ಮ ಮಾತೃಭಾಷೆಯಾದ 'ಅರೆಬಾಸೆ' ಎಂಬ ಕನ್ನಡದ ಉಪಭಾಷೆಯಲ್ಲಿ ಗದ್ಯರೂಪದಲ್ಲಿ ಬರೆದಿದ್ದಾರೆ. ಕುರುಕುಲದ ಮೂಲಪುರುಷರಿಂದಾರಂಭಿಸಿ, ಪಾಂಡವರು ದ್ರೌಪದೀ ಸಮೇತರಾಗಿ ಮಹಾಪ್ರಸ್ಥಾನಕ್ಕೆ ಹೊರಟು ಸ್ವರ್ಗಾರೋಹಣ ಮಾಡುವತನಕ ಕತೆಯ ಹರವಿದೆ. ನನಗೆ ಈ ಉಪಭಾಷೆಯ ಪರಿಚಯವಿಲ್ಲದಿದ್ದರೂ ಕುತೂಹಲದಿಂದ ಪ್ರಯತ್ನಪಟ್ಟು ಇವರ ಈ ಕಾವ್ಯದ ಹಸ್ತಪ್ರತಿಯನ್ನು ಓದಿದೆ. ಕತೆಯ ಸನ್ನಿವೇಶ, ಪ್ರಕೃತಿವರ್ಣನೆ, ಪಾತ್ರರಚನೆ ಹಾಗೂ ಅವರ ಸ್ವಾಭಾವಿಕ ಲಲಿತ ಸುಂದರಶೈಲಿ ಎಲ್ಲವೂ ಮೋಹಕವಾಗಿದೆ. ಪ್ರತಿ ಮಾತುಗಳಲ್ಲಿಯೂ ಅವರ ಕವಿಹೃದಯ ಪುಟಿಯುತ್ತದೆ. ಅವರ ಕೈಯಲ್ಲಿ ಸಿಕ್ಕಿದರೆ ಶಾಸ್ತ್ರ ವಿಷಯವೂ ನೀರಸವಾಗದೆ ರಂಜಿಸುತ್ತದೆ. ಕೇಶಿರಾಜನ ಶಬ್ದಮಣಿ ದರ್ಪಣದ ಸೂತ್ರಗಳನ್ನು ಬೋಧಿಸುವಾಗ, ಕಾಳಿದಾಸನ ಕಾವ್ಯವನ್ನು ಪಾಠ ಮಾಡುತ್ತಿದ್ದಾರೋ ಎಂಬಂತೆ ಸ್ವಾರಸ್ಯವಾಗಿ ಬೋಧಿಸುತ್ತಿದ್ದರು ಎಂದು ಅವರ ವಿದ್ಯಾರ್ಥಿಗಳೇ ಅವರ ಗೌರವ ಗ್ರಂಥ (ನುಡಿ ಒಸಗೆ)ಯಲ್ಲಿ ಬರೆದಿದ್ದಾರೆ.

ನನ್ನ ಮಿತ್ರರು ಬರೆದ ಈ 'ಮಾನಸ ಮಹಾಭಾರತ' ಯಾವ ಭಾಷೆಗಾದರೂ ಒಂದು ಭೂಷಣವೇ. ಪೂರ್ವಗ್ರಹವಿಲ್ಲದ ಯಾವ ಓದುಗನೂ ಇದನ್ನು ಮೆಚ್ಚದಿರಲು ಸಾಧ್ಯವಿಲ್ಲ. ಓದು ಬಲ್ಲ ಸಹೃದಯರು ಇದನ್ನು ಓದಿ ಆನಂದಿಸಲಿ. **ನಾಡಿನ ಪುಣ್ಯದಿಂದ ಕವಿಯೊಬ್ಬನುದಿಸುತ್ತಾನೆ. ಅರೆಭಾಷಿಕರು ಇಂತಹ ಕವಿಯೊಬ್ಬನನ್ನು ಪಡೆದರೆಂದು ಅವರು ಹೆಮ್ಮೆಪಡಲಿ.** ಪ್ರಿಯ ಕುಶಾಲಪ್ಪ ಗೌಡರು ಬರೆದಿರುವ ಈ ಕೃತಿ ಪ್ರಖ್ಯಾತವಾಗಲಿ.

– 'ವೈನತೇಯ'